# ಕರ್ನಾಟಕದ ಬಯಲುಸೀಮೆಯ ಮ್ಯಾಸನಾಯಕರ ಹಟ್ಟಿಗಳು : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
ಜಿ.ಎಂ.ಲೋಕೇಶ

ಮಾರ್ಗದರ್ಶಕರು
ಡಾ.ವಿರೂಪಾಕ್ಷಿ ಪೂಜಾರಹಳ್ಳಿ
ಸಹ ಪ್ರಾಧ್ಯಾಪಕರು




ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೩

# ಕರ್ನಾಟಕದ ಬಯಲುಸೀಮೆಯ ಮ್ಯಾಸನಾಯಕರ ಹಟ್ಟಿಗಳು : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ.
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು
**ಜಿ.ಎಂ.ಲೋಕೇಶ**

ಮಾರ್ಗದರ್ಶಕರು
**ಡಾ.ವಿರೂಪಾಕ್ಷಿ ಪೂಜಾರಹಳ್ಳಿ**
ಸಹ ಪ್ರಾಧ್ಯಾಪಕರು



**ಚರಿತ್ರೆ ವಿಭಾಗ**
**ಸಮಾಜವಿಜ್ಞಾನಗಳ ನಿಕಾಯ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬
೨೦೧೩

# ಘೋಷಣಾ ಪತ್ರ

**ಡಾ.ವಿರೂಪಾಕ್ಷಿ ಪೂಜಾರಹಳ್ಳಿ** ಅವರ ಮಾರ್ಗದರ್ಶನದಲ್ಲಿ **ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು: ಚಾರಿತ್ರಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ, ಪಿಎಚ್.ಡಿ.ಪದವಿಗಾಗಿ **ಚರಿತ್ರೆ ವಿಭಾಗಕ್ಕೆ** ಸಾದರಪಡಿಸುತ್ತಿದ್ದೇನೆ. ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ. ಇದರ ಯಾವುದೇ ಭಾಗ ಎಲ್ಲಿಯೂ ಪ್ರಕಟಗೊಳಿಸಿಲ್ಲ. ಇದು ನನ್ನ ಸ್ವತಂತ್ರವಾದ ಸಂಶೋಧನಾ ಅಧ್ಯಯನವಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: 021-02-12.

G.M. Lokesh
**ಜಿ.ಎಂ.ಲೋಕೇಶ**
ಸಂಶೋಧಕರು
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಮಾರ್ಗದರ್ಶಕರ ಪ್ರಮಾಣ ಪತ್ರ

**ಶ್ರೀ ಜಿ.ಎಂ.ಲೋಕೇಶ** ಅವರು ನನ್ನ ಮಾರ್ಗದರ್ಶನದಲ್ಲಿ **ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು: ಚಾರಿತ್ರಿಕ ಅಧ್ಯಯನ** ಎಂಬ ಸಂಶೋಧನಾ ಮಹಾಪ್ರಬಂಧ ವನ್ನು ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗಕ್ಕೆ ಪಿಎಚ್.ಡಿ.ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಇಲ್ಲವೆ ಪ್ರಕಟಣೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ:
ದಿನಾಂಕ:

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
ಸಹ ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ , ವಿಧಾನ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ಸ್ವರೂಪ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಬುಡಕಟ್ಟು ಅಧ್ಯಯನವೆಂದರೆ ಅದು ಮಾನವ ನಿರ್ಮಿತಿಯ ಸಂಸ್ಕೃತಿ ಅಧ್ಯಯನ. ಸಂಸ್ಕೃತಿ ಮಾನವ ಸಮಾಜದ ಉಸಿರು. ಮಾನವನು ಸಮಾಜ ಮತ್ತು ಕುಟುಂಬದ ಸಾಂಸ್ಕೃತಿಕ ಅಭಿವ್ಯಕ್ತಿ. ಸಂಘಜೀವಿಯಾದ ಮನುಷ್ಯನ ವ್ಯಕ್ತಿತ್ವ ಬೆಳವಣಿಗೆ ಹೊಂದುವುದು ಒಂದು ಸಾಂಸ್ಕೃತಿಕ ಪರಿಸರದಲ್ಲಿ. ಒಂದು ಸಮುದಾಯದ ಆಂತರಿಕ ಶಕ್ತಿ, ಸಾಮರ್ಥ್ಯಗಳು ಬಹಿರಂಗವಾಗಿ ಪ್ರಕಟಗೊಳಿಸುವ ವೇದಿಕೆಯೇ ಸಂಸ್ಕೃತಿ. ಸಂಸ್ಕೃತಿಯು ಜನ ಸಮುದಾಯದ ವಿವಿಧ ಬಗೆಯ ರೂಢಿ, ಆಚರಣೆ, ಸಂಪ್ರದಾಯಗಳನ್ನು ಒಳಗೊಂಡಿರುವಂತದ್ದು. ಇದು ಮಾನವ ಜೀವನ ವಿಧಾನದ ಪ್ರತೀಕ. ವೃತ್ತಿ ಜೀವನದಲ್ಲಿ ಮನುಷ್ಯ ತಾನು ರೂಢಿಸಿ ಕೊಂಡಿರುವ ಆಹಾರ ಸಂಗ್ರಹಣೆ, ಬೇಟೆ, ಪಶುಪಾಲನೆಗಳ ಮೂಲಕ ನಾನಾ ಬಗೆಯ ಆವಿಷ್ಕಾರಗಳನ್ನು ಜೀವನ ವಿಧಾನದಲ್ಲಿ ಕಂಡುಕೊಂಡಿದ್ದಾನೆ. ಕೃಷಿಯ ಮೂಲಕ ಭೂಮಿಯನ್ನು ಉಳುವಾಗ ತನ್ನ ಒಡೆತನದ ಮೂಲಕ ಪರಿವರ್ತನೆಗೊಳ್ಳುತ್ತಾನೆ. ಅಂತಹ ಪರಿವರ್ತನೆಗಳಲ್ಲಿ ಅನೇಕ ವಿಧಗಳುಂಟು. ರಾಜಕೀಯ, ಆರ್ಥಿಕ ಚಟುವಟಿಕೆಗಳು, ನೈತಿಕ ಮೌಲ್ಯಾದರ್ಶಗಳು, ಸಾಮಾಜಿಕ ಸ್ಥಿತಿಗತಿ, ರೂಢಿ ಸಂಪ್ರದಾಯ ಮೊದಲಾದ ಅಂಶಗಳನ್ನು ಮಾನವ ಸಂಸ್ಕೃತಿ ಒಳಗೊಂಡಿರುವುದು.

ಆದಿಮ ಮಾನವನ ತಾಣಗಳು ಸಮುದಾಯ ಮತ್ತು ಸಂಸ್ಕೃತಿಯ ಕುರುಹುಗಳಾಗಿವೆ. ಇವು ಪರಿಸರ, ಕಲಿಕೆ, ವಂಶಪರಂಪರೆ ಮತ್ತು ಅಭಿಜಾತವಾಗಿ ಬರುವಂಥವು. ಸಂಸ್ಕೃತಿ ಸಮುದಾಯದ ಅಮೂಲ್ಯ ಸಂಪತ್ತು. ಅದು ಸಮುದಾಯದವರಿಗೆ ಸೇರಿದೆ. ಅದರ ಹಂಚಿಕೆಯು ಭಾಷೆಯ ಮೂಲಕ ಸಂವಹನಗೊಳ್ಳುತ್ತದೆ. ಅನುಕರಣೆ, ಅಧ್ಯಯನ ಮತ್ತು ಕಲಿಯುವಿಕೆಯಿಂದ ಹಿಂದಿನ ತಲೆಮಾರಿನ ಜನರ ಸಾಧನೆ ಮತ್ತು ಸಂಸ್ಕೃತಿ ಸಂಪತ್ತನ್ನು ತಮ್ಮದಾಗಿಸಿಕೊಳ್ಳುವ

ಹಾಗೂ ತಮ್ಮ ಮುಂದಿನ ತಲೆಮಾರಿಗೆ ವರ್ಗಾಯಿಸುವ ಪ್ರಕ್ರಿಯೆ ನಿರಂತರವಾದದು. ಸಮುದಾಯವು ಜೀವಂತವಾಗಿರುವವರೆಗೂ ಈ ಪ್ರಕ್ರಿಯೆ ಮುಂದುವರೆಯುತ್ತದೆ. ಸಂಸ್ಕೃತಿಯ ಬೆಳವಣಿಗೆ ನಿಂತ ನೀರಲ್ಲ. ಅದು ಸದಾ ಚಲನಾಶೀಲವಾದುದು. ಸಾಂಸ್ಕೃತಿಕ ಅಂಶಗಳಾಗಿರುವ ಮೌಲ್ಯಾದರ್ಶ, ರೂಢಿ, ಲೋಕಾಚಾರ, ನೈತಿಕ ನಿಯಮ, ಕ್ರಿಯಾವಿಧಿ, ನಂಬಿಕೆ ಮತ್ತು ಸಂಸ್ಕಾರಗಳು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದುಂಟು. ಭೌತ ಸಂಸ್ಕೃತಿಯು ಸಮುದಾಯದ ಭೌತಿಕ ಸಂಪತ್ತನ್ನು ಪ್ರತಿನಿಧಿಸಿದರೆ, ಅಭೌತಿಕ ಸಂಸ್ಕೃತಿಯು ಸಮುದಾಯದ ಅಭೌತಿಕ ಸಂಪತ್ತನ್ನು ಪ್ರತಿನಿಧಿಸುತ್ತದೆ. ಬುಡಕಟ್ಟು ಸಮುದಾಯ ಹಾಗೂ ಆಧುನಿಕ ಜೀವನ ಶೈಲಿಗೆ ಮಾರು ಹೋಗಿರುವ ಜನರಿಗೆ ಸಂಘರ್ಷಗಳು ನಿರಂತರವಾಗಿ ಮುಖಾಮುಖಿಯಾಗುತ್ತದೆ. ಅಂದರೆ ಸಂಸ್ಕೃತಿಯು ಸ್ಥಿರಗೊಂಡ ಸ್ಥಿತಿಯಲ್ಲಿರುವಾಗಲೇ ಅದರ ಸನಿಹವೇ ಚಲನಶೀಲ ಸಂದರ್ಭವೊಂದು ಸೃಷ್ಟಿಯಾಗುತ್ತಿರುತ್ತದೆ. ಇಲ್ಲಿ ಮನುಷ್ಯನ ಸಾಂಸ್ಕೃತಿಕ ಲಕ್ಷಣ ಮತ್ತು ಜೀವನ ಕ್ರಿಯೆಯ ವೈಧಾನಿಕತೆಯ ಪಾತ್ರ ಮಹತ್ವದ್ದಾಗಿದೆ.

ಪ್ರಸ್ತುತ ಕೈಗೊಂಡಿರುವ 'ಕರ್ನಾಟಕದ ಬಯಲುಸೀಮೆಯ ಮ್ಯಾಸನಾಯಕರ ಹಟ್ಟಿಗಳು: ಚಾರಿತ್ರಿಕ ಅಧ್ಯಯನ' ಎಂಬ ಪಿಎಚ್.ಡಿ.ಮಹಾಪ್ರಬಂಧದ ಶೀರ್ಷಿಕೆಯಾಗಿದೆ. ಪ್ರಪಂಚದ ಯಾವುದೇ ಪ್ರದೇಶವಾದರೂ ಅದಕ್ಕೊಂದು ವಿಶೇಷವಾದ ಭೌಗೋಳಿಕತೆ ಮತ್ತು ಇತಿಹಾಸ ಇರುತ್ತದೆ. ಹಾಗೆಯೇ ಭಾರತ ಅದರಲ್ಲೂ ದಕ್ಷಿಣ ಭಾರತ ಮಹತ್ವದ ಸ್ಥಾನವನ್ನು ಪಡೆದಿದೆ. ಕರ್ನಾಟಕದ ಮಧ್ಯಭಾಗದಲ್ಲಿರುವ ಕೋಲಾರ, ತುಮಕೂರು, ಮೈಸೂರು, ಮಂಡ್ಯ, ಬೆಂಗಳೂರು, ಚಿತ್ರದುರ್ಗ ಪರಿಸರವನ್ನು ಒಳಗೊಂಡ ಪ್ರದೇಶವನ್ನು ಸಾಮಾನ್ಯವಾಗಿ 'ಬಯಲುಸೀಮೆ' ಎಂದು ಗುರುತಿಸಲಾಗಿದೆ. ಸರ್ಕಾರ ಆಡಳಿತ ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ ಈ ರೀತಿ ವಿಂಗಡಿಸಿದೆ. ಸೀಮೆ ಎಂದರೆ ಗಡಿ, ಎಲ್ಲೆ, ದೇಶ, ವಿದೇಶ ಎಂಬ ಅರ್ಥಗಳಿವೆ. ಸೀಮೆ ಎಂಬ ಪದ ಬಯಲು ಹಾಗೂ ಸುತ್ತಮುತ್ತ ಎಂಬ ಅರ್ಥ ಕೊಡುವುದು. ಸೀಮೆ ನಾಮವು ಹೆಚ್ಚಾಗಿ ವಿಜಯನಗರ ಅರಸರ ಕಾಲದಲ್ಲಿ ಕಂಡುಬರುತ್ತದೆ. ಹಲವು ಸ್ಥಳಗಳನ್ನು ಒಟ್ಟುಗೂಡಿಸಿ ಸೀಮೆ ಎಂದು ಕರೆಯಲಾಗುತ್ತಿತ್ತು. ಸೀಮೆ ಎಂಬ ಪ್ರದೇಶವಾಚಕ ಪದವನ್ನು ನಾಡಿಗೆ ಪರ್ಯಾಯವಾಗಿ ಬಳಸಿರುವುದುಂಟು. ಆದುದರಿಂದ ಇದನ್ನು ನಾಡು ಎಂಬುದಕ್ಕೆ ಪರ್ಯಾಯ ಪದವಾಗಿ ಬಳಸಲಾಗಿದೆ. ಅಲ್ಲದೆ ಆಡಳಿತದ ಅನುಕೂಲಕ್ಕಾಗಿ ರಚಿಸಿಕೊಂಡ ಕೃತಕ ಗ್ರಾಮಗಳ ಒಂದು ಗುಂಪನ್ನು ಸೂಚಿಸುವಂತದ್ದು ಸೀಮೆ. ಸೀಮೆಯನ್ನು ತೆಲುಗಿನಲ್ಲಿ ಗಡಿ, ಜಮ್ಮಾ, ಎಲ್ಲೆ, ಸೀಮಾ ಎಂದೂ ಕರೆಯುವರು. ಬುಡಕಟ್ಟು ಸಮುದಾಯ ತಲತಲಾಂತರಗಳಿಂದ ಜೀವಿಸುತ್ತಿರುವ ಪರಿಚಿತ ಪರಿಸರದಲ್ಲಿ ತಮ್ಮ ಬುಡಕಟ್ಟು ಸಂಸ್ಕೃತಿ ನೆಮ್ಮದಿಯ ಬದುಕಿಗಾಗಿ, ಚಟುವಟಿಕೆಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಟ್ಟಿಯ ಸುತ್ತಲೂ ಸಾಂಪ್ರದಾಯಿಕವಾಗಿ ಗುರುತಿಸಿಕೊಂಡು, ಅದನ್ನು ಸಾಂಸ್ಕೃತಿಕ ಗಡಿರೇಖೆ ಎಂದವರು ಕರೆಯುತ್ತಾರೆ. ಬಯಲುಸೀಮೆಯಲ್ಲಿ

ಸರಾಸರಿ ಮಳೆಯ ಪ್ರಮಾಣ ಕಡಿಮೆ. ಆದರೆ ಈ ಪ್ರದೇಶದಲ್ಲಿ ಜನಪದ ಚಿಲುಮೆ ಇರುವುದನ್ನು ಕಾಣಬಹುದು. ಬಯಲುಸೀಮೆಯ ಮಧ್ಯಭಾಗದಲ್ಲಿ ಬಹುಸಂಖ್ಯಾತ ಸಮುದಾಯ ಬೇಡರದು. ಅದರಲ್ಲೂ ಚಿತ್ರದುರ್ಗ, ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿ ಹೆಚ್ಚಾಗಿ ಬೇಡ ಸಮುದಾಯ ಕಂಡುಬರುತ್ತದೆ.

ಕರ್ನಾಟಕದ ಬೇಡರನ್ನು ಹದಿನೆಂಟು ಪರ್ಯಾಯ ಹೆಸರುಗಳಿಂದ ಕರೆಯುತ್ತಾರೆ. ಪ್ರಧಾನವಾಗಿ ವಾಲ್ಮೀಕಿ, ತಳವಾರ, ನಾಯಕ ಮೊದಲಾಗಿ ಗುರುತಿಸಲಾಗಿದೆ. ಆದರೆ ಮಧ್ಯ ಕರ್ನಾಟಕದಲ್ಲಿ ಬುಡಕಟ್ಟು ಹಿನ್ನೆಲೆಗಳಿರುವ ಸಮುದಾಯಗಳಿವೆ. ಅವುಗಳಲ್ಲಿ ಬೇಡರದು ಬಹುದೊಡ್ಡ ಬುಡಕಟ್ಟು ಆಗಿದೆ. ಇವರಲ್ಲಿ ಹಲವು ಬಗೆಗಳಿವೆ. ಅವುಗಳೆಂದರೆ ಊರುಬೇಡರು, ಮ್ಯಾಸಬೇಡರು, ಅಡ್ಲಟ್ಟಿ ಮ್ಯಾಸಬೇಡರು, ಪಾಳೆಯಗಾರರೆಂದು ಪ್ರಧಾನವಾಗಿ ಗುರುತಿಸಬಹುದು.

ಇದು ಪ್ರಧಾನವಾಗಿ ಮ್ಯಾಸನಾಯಕ ಬುಡಕಟ್ಟು ಕುರಿತ ಅಧ್ಯಯನವಾಗಿದೆ. ಇವರು ಬೆಟ್ಟ-ಗುಡ್ಡ, ಕಾಡುಗಳಲ್ಲಿ ಜೀವನ ನಡೆಸುತ್ತಿದ್ದು, ನಿರ್ದಿಷ್ಟ ಪ್ರದೇಶದಲ್ಲಿ ನೆಲೆ ನಿಲ್ಲುವುದಿಲ್ಲ. ಹಾಗಾಗಿ ತಾವು ಕಟ್ಟಿಕೊಳ್ಳುವ ಕೊಟ್ಟಿಗೆ ಗುಡಿಸಲುಗಳು ಸರಳವಾಗಿರುತ್ತವೆ. ಇಂಥ ನೂರಾರು ಗುಡಿಸಲುಗಳ ಸಮೂಹಕ್ಕೆ ಹಟ್ಟಿ ಎನ್ನುತ್ತಾರೆ. ಹಟ್ಟಿ ಎಂದರೆ ವಾಸದ ನೆಲೆ, ದನಕುರಿ ಮೊದಲಾದವುಗಳನ್ನು ಕೂಡಿಹಾಕುವ ಸ್ಥಳ ಎನ್ನುವರು. ಕರ್ನಾಟಕದಲ್ಲಿ ಹಟ್ಟಿಗೆ ಸಮನಾದ ಪದಗಳಿವೆ. ಅವು ಸಹ ಹಟ್ಟಿಗಳ ಲಕ್ಷಣಗಳನ್ನು ಹೋಲುತ್ತವೆ. ಅವುಗಳೆಂದರೆ: ರೊಪ್ಪ, ಬಾಡ, ಗುಡಿಸಲು, ಮನೆ, ಖರ್ವಡ, ವಠಾರ, ಪೊಡು, ದೊಡ್ಡಿ, ಹಳ್ಳಿ, ಪಲ್ಲಿ, ಕುಂಭ, ಗುಂಪು, ಸಮೂಹ, ಗ್ರಾಮ, ಉಕ್ಕು, ಖೇಡ್, ಪಾಗಾ, ಗಾಂವ, ಗುಡಾ, ವಾಡ, ವಾಡಿ, ಹಾಡಿ, ಪಿರ್ರೆ, ಕುಳ್ಳು, ಕೊಪ್ಪಲು, ಕುಪ್ಪೆ, ಕೊಪ್ಪ, ಕೇರಿ, ಜೋಪಡಿ, ಪಾಳ್ಯ, ಪಟ್ಟಿ, ಜೋಪಡಿಪಟ್ಟಿ ಮುಂತಾದ ಪರ್ಯಾಯ ಪದಗಳಿಂದ ಕರೆಯಲಾಗುತ್ತದೆ. ತೆಲುಗಿನಲ್ಲಿ ಹಟ್ಟಿಗೆ ದೊಡ್ಡಿ(ದಡ್ಡಿ) ಎಂದು ವಿದ್ವಾಂಸರು ಕರೆಯುತ್ತಾರೆ. ಬಯಲುಸೀಮೆ ಪ್ರದೇಶದಲ್ಲಿ ನೂರಾರು ಹಟ್ಟಿಗಳು ಕಂಡುಬರುತ್ತವೆ. ಇದಕ್ಕೆ ಪೂರಕವಾಗಿ ಬೇಡರನಾಡಿನಲ್ಲಿ ೭೭ ಹಟ್ಟಿಗಳಿದ್ದವೆಂದು ಶಾಸನ, ಸಾಹಿತ್ಯ, ಮೌಖಿಕ ಆಧಾರಗಳಿಂದ ಗುರುತಿಸಲಾಗಿದೆ. ೭, ೭೦, ೭೭, ೭೦೦, ೭ ಸಾವಿರ ೭೭ ಸಾವಿರ, ೭೦ ಕೋಟಿ, ೭೭ ಕೋಟಿ ಎಂದು ಉತ್ಪ್ರೇಕ್ಷೆಗೆ ಕರೆಯುವುದುಂಟು. ಅಧ್ಯಯನಕ್ಕಿಳಿದು ನಿಖರವಾಗಿ ಶೋಧಿಸಿದಾಗ ಸಿಗುವುದು ಅತೀ ವಿರಳ. ಉದಾತ್ತೀಕರಿಸುವ ನಿಟ್ಟಿನಲ್ಲಿ ೭೭ ಸಂಖ್ಯೆಯನ್ನು ಹೇಳಿರಬಹುದು.

ಕಾಲಾಂತರದಲ್ಲಿ ಇವರು ಭೌಗೋಳಿಕ ಪರಿಸರಕ್ಕೆ ಹೊಂದಿಕೊಂಡು ನಿಸರ್ಗದಲ್ಲಿ ಸಿಗುವ ಸಂಪನ್ಮೂಲಗಳಾದ ಮಣ್ಣು, ಕಲ್ಲು, ಬಿದಿರು, ತುಗ್ಲಿ, ವೂಲಿಕಟ್ಟಿಗೆಗಳನ್ನಲ್ಲದೆ ಬೇವು, ಜಾಲಿ, ಹುಣಸೆಮರಗಳನ್ನು ಮನೆ ಕಟ್ಟಲು ಬಳಸುತ್ತಾರೆ. ನೆಲೆನಿಂತ ಸ್ಥಳಗಳಲ್ಲಿ ತಮ್ಮ ಬುಡಕಟ್ಟಿನ ಸಾಂಸ್ಕೃತಿಕವೀರ ನಾಯಕ, ಮುಖಂಡ, ಅಥವಾ ಆ ಹಟ್ಟಿಯ ಹಿರಿಯ ಯಜಮಾನನ

ಹೆಸರನ್ನು ಇಡುತ್ತಾರೆ. ಅಂಥ ಹಟ್ಟಿಗಳ ಹೆಸರುಗಳು ಕರ್ನಾಟಕದಲ್ಲಿ ನೂರಾರು ಕಾಣಸಿಗುತ್ತವೆ. ಚಿನ್ನಹಗರಿನದಿ ಪರಿಸರವನ್ನು ಹಾಗೂ ತುಂಗಭದ್ರಾ ಮತ್ತು ವೇದಾವತಿ ನದಿ ಮಧ್ಯೆ ಇರುವ ಭಾಗವನ್ನು 'ಬೇಡರನಾಡು' ಎಂದು ಕರೆಯಲಾಗುತ್ತದೆ. ಈ ಪ್ರದೇಶದಲ್ಲಿ ಸುಮಾರು ೭೭ ಚಾರಿತ್ರಿಕ ಹಿನ್ನೆಲೆಯ ಹಟ್ಟಿಗಳಿದ್ದು, ಕೆಲವು ಹಾಳಾಗಿ, ಹೆಸರುಗಳು ಬದಲಾಗಿವೆ. ಮರುನಾಮಗಳನ್ನು ಕೆಲವು ಸ್ಥಳಗಳು ಪಡೆದುಕೊಂಡಿರುವುದರಿಂದ ನಿಖರವಾಗಿ ೭೭ ಹಟ್ಟಿಗಳನ್ನು ಪಟ್ಟಿ ಮಾಡುವುದು ಕಷ್ಟ. ಕ್ಷೇತ್ರಕಾರ್ಯ ಮುಖೇನ ಸಂಗ್ರಹಿಸಿದ ಮಾಹಿತಿಯ ಪ್ರಕಾರ ಮ್ಯಾಸರಹಟ್ಟಿ, ಹಳೆಹಟ್ಟಿ, ಹೊಸಹಟ್ಟಿ, ಎದ್ದಲುಬೊಮ್ಮಯ್ಯನಹಟ್ಟಿ, ಸಾಸಲಹಟ್ಟಿ, ಮುತ್ತೈಯ್ಯನಹಟ್ಟಿ, ನಲಜಾಮನಹಟ್ಟಿ, ಬಂಗಾರದೇವರಹಟ್ಟಿ, ತೊಡಲಾರಹಟ್ಟಿ, ಪೆತ್ತಮಾರಹಟ್ಟಿ, ಬೋರಪ್ಪನಹಟ್ಟಿ, ನಕ್ಕಲಾರಹಟ್ಟಿ, ಕೆರೆಕಾಟ್ಲಟ್ಟಿ, ದೊರೆಗಳಟ್ಟಿ, ಸುಳ್ಳಹಟ್ಟಿ, ನಿಂಗಾವರಹಟ್ಟಿ, ಚಿತ್ರೈಯ್ಯನಹಟ್ಟಿ, ಓಬಯ್ಯನಹಟ್ಟಿ, ನಾಯಕನಹಟ್ಟಿ, ಬೋಸೆದೇವರಹಟ್ಟಿ, ನಲಗೇತನಹಟ್ಟಿ, ಕಳಚೂರಿಪಾಪಯ್ಯನಹಟ್ಟಿ, ದೊಣಮಂಡ್ಲರಹಟ್ಟಿ, ಚನ್ನಬಸಯ್ಯನಹಟ್ಟಿ, ಮಾದಯ್ಯನಹಟ್ಟಿ, ಜಾಗನೂರಹಟ್ಟಿ, ಎತ್ತಿನಹಟ್ಟಿ, ಗಂಗಯ್ಯನಹಟ್ಟಿ, ಭೈಯನಾಯಕನಹಟ್ಟಿ, ಕಾತ್ರಿಕೇನಹಟ್ಟಿ, ಮಲ್ಲೂರಹಳ್ಳಿಮ್ಯಾಸರಹಟ್ಟಿ, ಮಲೆಬೋರಯ್ಯನಹಟ್ಟಿ, ಸುಟ್ಟಕರ್ನಾರಹಟ್ಟಿ, ಮೇಗಳಕರ್ನಾರಹಟ್ಟಿ(ಹೂಡೇಂ ಹತ್ತಿರ), ಕನ್ನಿಬೋರಯ್ಯನಹಟ್ಟಿ, ಬುಡ್ನಹಟ್ಟಿ, ಕಾಟಪ್ಪನಹಟ್ಟಿ, ಗಡ್ಡದವರಹಟ್ಟಿ, ಭತ್ತಯ್ಯನಹಟ್ಟಿ, ಚಿನ್ನನಾಯಕನಹಟ್ಟಿ, ಕಡಬನಕಟ್ಟೆಮ್ಯಾಸರಹಟ್ಟಿ, ಕಪ್ಪಡಬಂಡೆಹಟ್ಟಿ, ಕುಂಟೋಬಯ್ಯನಹಟ್ಟಿ, ಕೋಟೆಹಟ್ಟಿ, ಕರಿನಾರಹಟ್ಟಿ, ಪದಿನಾರ್‌ದೇವರಹಟ್ಟಿ, ಕುರಿಹಟ್ಟಿ, ಹುರುಳಿಹಾಳುಹೊಸಹಟ್ಟಿ, ಕಂಪಳದೇವರಹಟ್ಟಿ, ಸಕಲಾಪುರದಹಟ್ಟಿ, ಗುಡ್ಡದಹಟ್ಟಿ, ಜುಮ್ಮೋಬನಹಳ್ಳಿಮ್ಯಾಸರಹಟ್ಟಿ, ನಾಯಕರಹಟ್ಟಿ ಇನ್ನು ಮುಂತಾದ ಸುಮಾರು ೧೫೦ಕ್ಕಿಂತಲೂ ಹೆಚ್ಚು ಹಟ್ಟಿಗಳು ಕ್ಷೇತ್ರ ವ್ಯಾಪ್ತಿಯಲ್ಲಿ ಕಂಡುಬರುತ್ತವೆ. ಈ ಹಟ್ಟಿಗಳನ್ನು ಗಮನಿಸಿದರೆ ಒಂದಲ್ಲ ಒಂದು ಬಗೆಯ ವಿಶಿಷ್ಟತೆ ತಳಕು ಹಾಕಿಕೊಂಡಿರುವಂತೆ ಕಾಣುತ್ತದೆ. ಒಂದೊಂದು ಹಟ್ಟಿಗೆ ಒಂದೊಂದು ವಿಧವಾದ ಸಾಂಸ್ಕೃತಿಕ ಚರಿತ್ರೆ ಇರುವುದನ್ನು ಮರೆಯುವಂತಿಲ್ಲ. ಇವು ವ್ಯಕ್ತಿ, ದೇವರು, ಪ್ರಾಣಿ, ಪ್ರಾಕೃತಿಕ ಗಿಡಮರ, ಬಳ್ಳಿ, ಕಾಡು, ಮೇಡು, ನದಿ ವಸ್ತುಗಳ ಹಿನ್ನೆಲೆಯಿಂದ ಕೂಡಿವೆ. ಇಲ್ಲಿ ಸ್ಥಳನಾಮಗಳ ಶೋಧನೆಗೆ ದೀರ್ಘವಾದ ಮಾಹಿತಿ ಲಭಿಸುತ್ತದೆ.

ಎಡೆಗಳು ಹೇಳುವ 'ಕಂನಾಡ ಕತೆ' ಶಂಬಾ ಅವರ ಮಹತ್ವದ ಕೃತಿ. ಇದು ಸ್ಥಳನಾಮಗಳನ್ನೇ ಪ್ರಧಾನವಾಗಿ ಅಭ್ಯಸಿಸಿ ಅವುಗಳಲ್ಲಿ ಅಂತರ್ಗತವಾಗಿರುವ ಅಮೂಲ್ಯವಾದ ಸಾಂಸ್ಕೃತಿಕ ಸಂಗತಿಗಳನ್ನು ತಿಳಿಯಪಡಿಸುವುದಾಗಿದೆ. ಎಡೆಗಳು ಹೆಸರಿನ ಹಿನ್ನೆಲೆಯಲ್ಲಿ ನಮ್ಮ ನಾಡಿನ ರೂಢಿಸಂಪ್ರದಾಯ ಮತ್ತು ಪೂರ್ವ ಪರಂಪರೆಗಳನ್ನು ಮಾನವ ಸಮಾಜ ವಿಕಾಸಶಾಸ್ತ್ರದ ಬೆಂಬಲದಿಂದ ಹೊಂದಿಸಿ ಹೇಳುವುದಾಗಿದೆ.

ಊರು, ಗ್ರಾಮ, ಪುರ ಎಂಬುದು ಅಷ್ಟು ಪುರಾತನವಲ್ಲ ಎಂದು ಹೇಳುವ ಶಂಬಾ ಅವರು ಮಾನವನು ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಚಯನಕ್ಕಾಗಿ ಅಲೆಮಾರಿಯಾಗಿದ್ದ.

ಅವನ ವಸತಿ ಸೂಚಕವಾದ ಹೆಸರು ಹಟ್ಟಿ ಎಂದು ಊಹಿಸುವರು. ಈ ಶಬ್ದವು ದನಗಾರಿಕೆಯ ಬಾಳಿನ ದ್ಯೋತಕ. ಹಟ್ಟಿಗಳೇ ನಮ್ಮ ನಾಡಿನ ಆರಂಭದ ವಸತಿಗಳೆಂದು ಊಹಿಸಿರುವರು. ಹಟ್ಟಿಯ ಮೂಲರೂಪ ಪಟ್ಟಿ ಎಂದು. ಇದಕ್ಕೆ ತಮಿಳಿನಲ್ಲಿ ಮನೆ, ಹಳ್ಳಿ, ತೋಟ ಎಂಬ ಅರ್ಥವಿದೆ ಎಂದು ಅವರು ವಾದಿಸುತ್ತಾರೆ. ಸ್ಥಳನಾಮಗಳು ಸಾಮಾಜಿಕ ಇತಿಹಾಸದಲ್ಲಿ ಮನುಷ್ಯನನ್ನು ತಿಳಿಯಲು ಹೇಗೆ ಸಹಕಾರಿಯಾಗಿವೆ ಎಂಬುದನ್ನು ವಿವರಿಸುತ್ತಾರೆ. ಪಟ್ಟಿ, ಪಾಡಿ, ವಾಡ, ಹಟ್ಟಿ ಮೊದಲಾದವು ಗ್ರಾಮನಾಮದ ರೂಪಗಳು, ಜನಾಂಗದ ವಾಸಸ್ಥಾನ ಸೂಚಕಗಳು ಎಂದು ಶಂಬಾ ತರ್ಕಿಸುತ್ತಾರೆ.[೧]

**ಈವರೆಗೆ ನಡೆದಿರುವ ಅಧ್ಯಯನಗಳ ಸಮೀಕ್ಷೆ**

ಸಮುದಾಯಗಳ ಅಧ್ಯಯನ ಬಹಳ ತಡವಾಗಿಯಾದರೂ, ಕಳೆದ ಶತಮಾನದ ಆರಂಭದಿಂದ ಬುಡಕಟ್ಟುಗಳ ಅಧ್ಯಯನ ಆರಂಭವಾಯಿತು. ಹಾಗೆ ನೋಡಿದರೆ ಅರಣ್ಯ(ಕಾಡು) ಜನಾಂಗಗಳ ಅಧ್ಯಯನ ತುಂಬಾ ಪ್ರಯಾಸದ ಕೆಲಸ. ಅವರು ಗ್ರಾಮ, ಪಟ್ಟಣ ಜೀವನದಿಂದಲೇ ದೂರವಾಗಿರುವಾಗ ವಿದ್ವಾಂಸರು, ಮಾನವಶಾಸ್ತ್ರಜ್ಞರು ಆ ಗುಂಪನ್ನು ಹೊಕ್ಕು ಅವರ ಆಚಾರ ವಿಚಾರಗಳನ್ನು ಕುರಿತು ವಿಷಯ ಸಂಗ್ರಹಿಸುವುದು, ಅಧ್ಯಯನ ಮಾಡುವುದು ಅತ್ಯಂತ ಕಠಿಣವಾದುದು. ಹೊರಗಿನದೆಲ್ಲವನ್ನೂ ಅವರು ಸಂಶಯದಿಂದಲೇ ಕಾಣುತ್ತಾರೆ. ಇಂಥ ವಾತಾವರಣದಲ್ಲಿಯೂ ಭಾರತದ ಬುಡಕಟ್ಟುಗಳ ಬಗ್ಗೆ ಭಾರತೀಯ ವಿದ್ವಾಂಸರು ಅಧ್ಯಯನ ಮಾಡಿದ್ದಕ್ಕಿಂತ, ಪಾಶ್ಚಾತ್ಯರು ಅಧ್ಯಯನ ಮಾಡಿದ್ದೇ ಹೆಚ್ಚು. ವೆರಿಯರ್ ಎಲ್ವಿನ್‌ರ ಆದಿಯಾಗಿ ಜಿ.ಹೆಚ್.ಹಟ್ಟನ್, ಜೆ.ಪಿ.ಮಿಲ್ಸ್, ಸ್ಮಿತ್, ಡಾರ್ಫ್‌ಹೈಮನ್, ಗುಂಥರ್ ಸೊಂತೈಮರ್, ರಾಂ.ಚಿ.ಡೇರೆ ಇಂಥವರೆಲ್ಲ ಉತ್ತರಭಾರತದ ಬುಡಕಟ್ಟುಗಳಾದ ಅಂಗಾಮಿ, ನಾಗಾ, ಸೆಮಾ ಇವರನ್ನು ಕುರಿತು ಅಧ್ಯಯನ ನಡೆಸಿ ಗ್ರಂಥಗಳನ್ನು ಹೊರತಂದ ಮೇಲೆ ಅದರ ಮಹತ್ವ ಅರಿವಾಯಿತು. ಬುಡಕಟ್ಟಿನವರ ಭಾಷೆ, ಅವರ ಜೀವನ ಕ್ರಮ, ದೇವರ ಕಲ್ಪನೆ, ನ್ಯಾಯಪದ್ಧತಿ, ಜೀವನಾವರ್ತನದ ವಿವಿಧ ಸಂದರ್ಭದಲ್ಲಿ ಅವರು ಕೈಗೊಳ್ಳುವ ಕೆಲವು ಆಚರಣೆಗಳು, ಹುಟ್ಟು ಸಾವಿನ ಸಂದರ್ಭದ ವಿಧಿ ಕ್ರಿಯೆಗಳು, ಪ್ರಕೃತಿಯೊಂದಿಗೆ ತಾದಾತ್ಮ್ಯ ಸಂಬಂಧ ಇರುತ್ತದೆ. ಇದನ್ನೆಲ್ಲ ಅಭ್ಯಾಸ ಮಾಡಿದ ನಂತರ ಅರೆಬೆತ್ತಲೆಯಾಗಿ ಗುಡ್ಡಗಾಡು ಅರಣ್ಯಗಳಲ್ಲಿ ಅಲೆದಾಡಿಕೊಂಡು ಜೀವಿಸುವ ಆದಿವಾಸಿಗಳ ಜೀವನದಲ್ಲಿಯೂ ನಾಗರಿಕವಾದ ಉತ್ಕೃಷ್ಟ ಮೌಲ್ಯಗಳು ಪ್ರಚಲಿತದಲ್ಲಿವೆ ಎಂಬುದು ಗೊತ್ತಾಯಿತು. ತಂದೆ ಮಕ್ಕಳ ಸಂಬಂಧದಲ್ಲಿ, ಪತಿಪತ್ನಿಯರ ವಿಚಾರದಲ್ಲಿ ಇರಬೇಕಾದ ಪ್ರೇಮ, ಪ್ರಕೃತಿಯ ಮೇಲಿನ ವಿಶ್ವಾಸ, ಅದನ್ನು ಪ್ರೀತಿಸುವುದು, ಬುಡಕಟ್ಟಿನ ಹಿರಿಯರಲ್ಲಿ ಗೌರವ, ಸಾಹಸಪ್ರವೃತ್ತಿ, ದೈವದ ಮೇಲಿನ ಭಕ್ತಿಯಿಂದಾಗಿ ತಪ್ಪು ಮಾಡಲು ಹೆದರುವುದು ಇವೆಲ್ಲ ಇಂದಿಗೂ ಬುಡಕಟ್ಟಿನ ಪ್ರಮುಖ ಲಕ್ಷಣಗಳಾಗಿವೆ.

ಕ್ರಿ.ಶ.೧೯೦೦ರಲ್ಲಿ ಎಡ್ಗರ್ ಥರ್‌ಸ್ಟನ್ ಮತ್ತು ಕೆ.ರಂಗಾಚಾರಿ ಅವರ "ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ" ಕೃತಿಯು ದಕ್ಷಿಣ ಭಾರತದ ಹಲವು ಜಾತಿ, ಬುಡಕಟ್ಟುಗಳ ಸ್ಥೂಲ ವಿವರಣೆಯನ್ನು ಒಳಗೊಂಡಿದೆ. ಎಡ್ಗರ್ ಥರ್‌ಸ್ಟನ್ ಅವರು ಒಟ್ಟು ಏಳು ಸಂಪುಟಗಳಲ್ಲಿ ಬುಡಕಟ್ಟುಗಳ ಜನರನ್ನು ಪರಿಚಯ ಮಾಡಿಕೊಟ್ಟಿದ್ದಾರೆ. ಥರ್‌ಸ್ಟನ್ ಒಬ್ಬ ಆಂಗ್ಲ ಅಧಿಕಾರಿ ಕಾರಣ ತಮ್ಮ ಕ್ಷೇತ್ರಕಾರ್ಯದಲ್ಲಿ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಜತೆಗೆ ಇಲ್ಲಿನ ಹವಾಮಾನವು ಇವರಿಗೆ ತೊಂದರೆಯನ್ನುಂಟು ಮಾಡಿತ್ತು. ಭಾರತದಲ್ಲಿ ಇತರ ಶಾಸ್ತ್ರಗಳ ಅಂದರೆ ಇತಿಹಾಸ, ಜಾನಪದಗಳಂತೆ ಬುಡಕಟ್ಟು ಅಧ್ಯಯನ ಆರಂಭದಲ್ಲಿ ಕೇವಲ ದಾಖಲೆಗಳ ಸಂಗ್ರಹಣೆಗೆ ಮತ್ತು ಸೂಕ್ಷ್ಮ ಅಧ್ಯಯನಕ್ಕಿಂತ ಸಮಗ್ರ ಅಧ್ಯಯನಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿತ್ತು. ಥರ್‌ಸ್ಟನ್ ಕೃತಿಯು ಇದರಿಂದ ಹೊರತಾಗಿಲ್ಲ.

ಥರ್‌ಸ್ಟನ್ ಕೃತಿಯಲ್ಲಿ ಏಳು ಸಂಪುಟಗಳಿವೆ. ಮೊದಲ ಸಂಪುಟದಲ್ಲಿ ಕರ್ನಾಟಕ ಮತ್ತು ಆಂಧ್ರದಲ್ಲಿನ ಬೇಡ ಅಥವಾ ಬೋಯಿಗಳ ವಿವರಣೆ ದೊರೆಯುತ್ತದೆ. ಬಳ್ಳಾರಿ ಜಿಲ್ಲೆಯ ಇತರ ಹಿಂದೂ ಜಾತಿಗಳಲ್ಲಿ ಬೇಡರೂ ಒಬ್ಬರು. ಇವರು ಹೈದರ್‌ನ ಸೈನ್ಯದಲ್ಲಿ ಇದ್ದರೆಂದು ಹಾಗೂ ೧೮ನೆಯ ಶತಮಾನದ ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಪಾಳೆಯಗಾರರು ಬೇಡರ ಸಮುದಾಯಕ್ಕೆ ಸೇರಿದವರು ಎಂದಿದ್ದಾರೆ.[೨] ಇಂದು ಬೇಡರು ಕೃಷಿಕರಾಗಿ ಜೀವಿಸುತ್ತಿದ್ದಾರೆ. ತೆಲುಗು ಮತ್ತು ಕನ್ನಡ ಮಾತನಾಡುವ ಬೇಡರ ಉಪವಿಭಾಗಗಳಾದ ಊರಬೇಡ ಮತ್ತು ಮ್ಯಾಸಬೇಡರನ್ನು ಹಾಗೂ ಅವರ ಬೆಡಗುಗಳನ್ನು ಥರ್‌ಸ್ಟನ್ ವಿವರಿಸಿದ್ದಾರೆ. ಬೆಡಗುಗಳಲ್ಲಿ ಎನುಮಲರು, ಮಂದಲವಾರು, ಪೂವಲರು ಮತ್ತು ಮೀಸಲವಾರು ಎಂದು ಕ್ರಮವಾಗಿ ಎಮ್ಮೆಯವರು, ದನಕಾಯುವವರು ಹೂವಿನವರು, ಮೀನಿನವರು ಎಂದು ತಿಳಿಸಿದ್ದಾರೆ.

ಈ ಕೃತಿಯಲ್ಲಿ ಹೆಚ್ಚಾಗಿ ಸರ್ಕಾರಿ ದಾಖಲೆಗಳನ್ನೇ ಆಕರವಾಗಿ ಬಳಸಿಕೊಳ್ಳಲಾಗಿದೆ. ಸರ್ಕಾರಿ ನೌಕರರೆ ಆಕರಗಳ ಸಂಗ್ರಹಕರು, ೧೮೯೮, ೧೯೧೧ರ ಮೈಸೂರು ಜನಸಂಖ್ಯಾ ವರದಿಯನ್ನು ಅವಲಂಬಿಸಿದೆ. ಇದರಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿನ ಬೇಡರ ಆಚಾರ ವಿಚಾರಗಳನ್ನು ಕೊಟ್ಟಿದ್ದಾರೆ. ಇದರಿಂದ ೧೦೦ ವರ್ಷ(೧೮೯೪-೧೯೯೪)ದಲ್ಲಿ ನಾಯಕರಲ್ಲಿ ಉಂಟಾದ ಮಾರ್ಪಾಡುಗಳನ್ನು ಗುರುತಿಸಬಹುದು. ಮ್ಯಾಸಬೇಡರು ಕೋಳಿಯನ್ನು ತಿನ್ನುವಂತಿಲ್ಲ. ಹೆಂಡ, ಈಚಲನ್ನು ಬಳಸುವಂತಿಲ್ಲ. ಹಾಗೂ ಊರಬೇಡರ ಮನೆಗಳಲ್ಲಿ ಊಟ ಮಾಡುವಂತೆ ಇರಲಿಲ್ಲ. ಆದರೆ ಇಂದು ಕೆಲವರು ಈ ಆಚರಣೆಗಳನ್ನು ಕೈಬಿಟ್ಟಿದ್ದಾರೆ. ಇಂದು ಉಪಪಂಗಡಗಳಲ್ಲಿ ವೈವಾಹಿಕ ಸಂಬಂಧವು ಏರ್ಪಟ್ಟಿದೆ. ಇಂಥ ನಿದರ್ಶನಗಳಿಂದ ಉಪಪಂಗಡಗಳು ತಮ್ಮ ಸಮುದಾಯದ ಕಟ್ಟುನಿಟ್ಟಾದ ನೀತಿ ನಿಯಮಗಳನ್ನು ಸಡಿಲಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

ಎಡ್ಗರ್ ಥರ್‌ಸ್ಟನ್ ಅವರ ಕೃತಿಗಿಂತ ಬೇಡ ಜನಾಂಗದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಅನಂತಕೃಷ್ಣ ಅಯ್ಯರ್ ಎಲ್.ಕೆ. ಅವರ "ಮೈಸೂರು ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್" ಪುಸ್ತಕವು

ಒದಗಿಸುತ್ತದೆ. ಈ ಕೃತಿಯಲ್ಲಿ ಇವರು ಆರ್ಯೇತರರು, ದಕ್ಷಿಣ ದ್ರಾವಿಡ ಜನಾಂಗದ ಪೂರ್ವಜರು ಎಂದು ಅಭಿಪ್ರಾಯಪಡುತ್ತಾರೆ. ಅಲ್ಲದೆ ಸಂಸ್ಕೃತದ ವ್ಯಾಸ ಪದದಿಂದ ಬೇಡ ಎಂಬ ಪದ ನಿಷ್ಪನ್ನವಾಗಿದೆ ಎಂದು ಹೇಳುತ್ತಾರೆ. ಇದರೊಂದಿಗೆ ಬೇಡರ ಪ್ರಮುಖ ಉಪ ಪಂಗಡಗಳಾದ ಊರಬೇಡ, ಮ್ಯಾಸಬೇಡ, ಗುಡಿಸಲಬೇಡ ಅಲ್ಲದೆ, ಬೆಡಗುಗಳ ವಿವರಣೆ ದೊರೆಯುತ್ತದೆ. ಇಲ್ಲಿ ೪೨ ಬೆಡಗುಗಳನ್ನು ಹೆಸರಿಸಿದ್ದಾರೆ.[೩]

ಸ್ವಾತಂತ್ರ್ಯದ ನಂತರದಲ್ಲಿ ಬುಡಕಟ್ಟುಗಳ ಅಧ್ಯಯನ ಮಾದರಿಯಲ್ಲಿ ಬದಲಾವಣೆ ಉಂಟಾಯಿತು. ಬುಡಕಟ್ಟುಗಳ ಸಮಗ್ರ ಅಧ್ಯಯನಕ್ಕಿಂತ, ಪ್ರತ್ಯೇಕ ಅಧ್ಯಯನಗಳಿಗೆ ಮಾನ್ಯತೆ ದೊರೆಯಿತು. ಲಂಬಾಣಿಗಳ, ಕುರುಬರ, ಗೊಲ್ಲರ, ಬೇಡರ ಕುರಿತು ಅನೇಕ ಅಧ್ಯಯನಗಳು ನಡೆದಿವೆ. ಬೇಡರ ಕುರಿತು ನಡೆದ ಅಧ್ಯಯನಗಳಲ್ಲಿ ೧೯೫೮ರ ಹೆಚ್.ವಿ.ವೀರನಾಯಕರ ಕೃತಿ 'ಕ್ಷಾತ್ರಾಂಶ ಪ್ರಬೋಧ'ವು ಬೇಡ ಜನಾಂಗದ ಪೌರಾಣಿಕ, ಐತಿಹಾಸಿಕ ಮೂಲದ ಬಗ್ಗೆ ಮಾಹಿತಿ ನೀಡುತ್ತದೆ. ಆರ್.ರಾಜಣ್ಣನವರ 'ನಾಯಕ ಜನಾಂಗದ ಇತಿಹಾಸ' (೧೯೮೨)ವು ಬೇಡರ ಕುರಿತು ಉಪಯಕ್ತ ಮಾಹಿತಿಯನ್ನು ಒದಗಿಸುತ್ತದೆ. ಬೇಡರ ಮೂಲವನ್ನು ಹಾಗೂ ಮೂಲ ಪುರುಷರ, ಐತಿಹಾಸಿಕ ಪುರುಷರ ಕತೆಗಳನ್ನು ಹೇಳುತ್ತದೆ. ಇಲ್ಲಿ ಸಮಾಜ, ಸಂಸ್ಕೃತಿ, ಆಚಾರ, ವಿಚಾರಗಳನ್ನು ತಿಳಿಸಿಕೊಡುವುದಿಲ್ಲ. ಆದರೆ ಕೃತಿಯ ಆರಂಭದಲ್ಲಿ ನಾಯಕರನ್ನು ಯಾವ ರೀತಿ ಗುರುತಿಸಬೇಕು ಎಂದು ವಿವರಿಸುವಾಗ ಬೇಡರ ದೈಹಿಕ ಲಕ್ಷಣ, ಅವರ ಉಡುಗೆ-ತೊಡುಗೆ, ಆಚಾರ-ವಿಚಾರ, ಧಾರ್ಮಿಕತೆ ಇತ್ಯಾದಿಗಳನ್ನು ಸ್ಥೂಲವಾಗಿ ಪರಿಚಯಿಸುತ್ತಾರೆ. ನಾಯಕರು ಸಾಲಿಗ್ರಾಮ ಮತ್ತು ಲಿಂಗವನ್ನು ಪ್ರತ್ಯೇಕ ಬಟ್ಟೆಯಲ್ಲಿ ಕಟ್ಟಿ ಬುಟ್ಟಿಗಳಲ್ಲಿಟ್ಟು, ಬುಟ್ಟಿಗಳನ್ನು ಪೂಜೆ ಮಾಡುತ್ತಾರೆ. ಈ ಬುಟ್ಟಿಗಳಲ್ಲಿರುವ ಸಾಲಿಗ್ರಾಮ ಮತ್ತು ಲಿಂಗವು ಕ್ರಮವಾಗಿ ವೈಷ್ಣವ ಮತ್ತು ಶೈವಪಂಥದವರ ದೈವಗಳು. ವೈಷ್ಣವ ಹಾಗೂ ಶೈವ ಪಂಥದವರು ವಿಭೂತಿ ಧರಿಸುತ್ತಾರೆ. ಶೈವಪಂಥದವರು ನಾಮವನ್ನು ಮಾತ್ರ ಧರಿಸುವುದಿಲ್ಲ"[೪] ಇಂಥ ಅನೇಕ ಸ್ವ ಅನುಭವಗಳನ್ನು ಲೇಖಕರು ಕೃತಿಯಲ್ಲಿ ಪರಿಚಯಿಸಿ ಕೊಟ್ಟಿದ್ದಾರೆ. ಈ ವಿವರಣೆಯು ಮ್ಯಾಸಬೇಡರಿಗೆ ಮಾತ್ರ ಸಂಬಂಧಿಸಿದ್ದಾಗಿದೆ. ಇದು ಸಹ "ಕ್ಷಾತ್ರಾಂಶ ಪ್ರಬೋಧ"ದಂತೆ ಜನಾಂಗದ ಶ್ರೇಷ್ಟತೆಯನ್ನು ಎತ್ತಿ ಹಿಡಿಯುವಂಥ ಕೃತಿ. ಎಂ.ಎನ್.ಪ್ರಭಾಕರ್ ರವರು ೧೯೭೮ರಲ್ಲಿ ಚಂದ್ರವಳ್ಳಿ ಕೃತಿಯಲ್ಲಿ ನಾಯಕನಹಟ್ಟಿ ಬಖೈರನ್ನು ವಿವರಿಸಿ, ಮ್ಯಾಸಗಂಪಳವು ಶ್ರೀಶೈಲ ಮೂಲದಿಂದ ಕಾಟಮಲ್ಲನಾಯಕನ ನೇತೃತ್ವದಲ್ಲಿ ಹೊರಟು ಪಶುಸಂಪತ್ತಿನೊಂದಿಗೆ ಸಮುದಾಯವು ಈ ಭಾಗವನ್ನು ಪ್ರವೇಶಿಸಿತು ಎಂಬ ವಿವರ ಕೊಡುತ್ತಾರೆ.

ಢಂಗ ಡಿ.ಬಿ. ಅವರ 'ಜನಾಂಗ ಪರಿಚಯ'(೧೯೮೮)ದಲ್ಲಿ ಒಟ್ಟು ಎಂಟು ಜನಾಂಗಗಳ ಪರಿಚಯವನ್ನು ಮಾಡಿಕೊಡಲಾಗಿದೆ. ಮೊದಲ ಲೇಖನವೇ ನಾಯಕ ಜನಾಂಗಕ್ಕೆ ಸಂಬಂಧಪಟ್ಟಿದೆ. ನಾಯಕ ಜನಾಂಗವು ವೇದಗಳ ಕಾಲದಿಂದ ಅಸ್ತಿತ್ವದಲ್ಲಿದೆ ಎಂಬ ಅಭಿಪ್ರಾಯವನ್ನು

ವ್ಯಕ್ತಪಡಿಸಿದ್ದಾರೆ. ಥಂಗ ಅವರು ಬೇಡ, ನಾಯಕ, ತಳವಾರ, ವಾಲ್ಮೀಕಿ, ವಾಲ್ಮೀಕಿಮಕ್ಕಳು, ಕನ್ನಯ್ಯನ ಮಕ್ಕಳು ಇತ್ಯಾದಿ ಹೆಸರುಗಳ ಜನಪದ ಕಥೆಗಳನ್ನು ಕೊಟ್ಟಿದ್ದಾರೆ. ಇಂಥ ಕಾರಣಕ್ಕಾಗಿ ಈ ಹೆಸರು ಬಂದಿತು ಎಂದು ವಿವರಿಸುತ್ತಾರೆ. ಆದರೆ ಬೇಡರ ಸಮಾಜ ಸಂಸ್ಕೃತಿಯ ಪ್ರಸ್ತಾಪವನ್ನೇ ಮಾಡಿಲ್ಲ. ಹೆಸರೇ ಹೇಳುವಂತೆ ಇದು ಕೇವಲ ಜನಾಂಗದ ಪರಿಚಯವನ್ನು ಮಾತ್ರ ಮಾಡಿಕೊಡುತ್ತದೆ.[೫] ವಿದ್ವಾಂಸರು ಕರ್ನಾಟಕದ ಬೇಡರು ಪಶುಪಾಲನೆ ಮಾಡುತ್ತಾ ವಲಸೆ ಬಂದವರು ಮತ್ತು ದ್ರಾವಿಡ ಮೂಲದವರು ಎನ್ನಲಾಗಿದೆ.[೬] ಚಿತ್ರಲಿಂಗಯ್ಯ ಎಂ.ವಿ. ಅವರು ತಮ್ಮ 'ನಾಯಕ ಜನಾಂಗದ ನಿಜ ನಿಷ್ಪತ್ತಿ'(ಇತಿಹಾಸ ಚಂದ್ರಿಕೆ)ಯ ಕುರಿತು ಚರ್ಚೆ ಮಾಡುತ್ತಾ ನಾಯಕ ಎಂಬ ಪದ ೯ನೆಯ ಶತಮಾನದಿಂದ ಕಂಡುಬರುತ್ತದೆ ಎಂದು ಹೇಳಿರುವರು. ಮಹಾಕಾವ್ಯಗಳಲ್ಲಿ, ಪುರಾಣಗಳಲ್ಲಿ ಬೇಡರ ಕತೆಗಳು ಬರುವುದರಿಂದ ಥಂಗ ಅವರು ನಾಯಕರು ವೇದಗಳ ಕಾಲದಲ್ಲಿ ಇದ್ದಂಥ ಜನ ಎಂದು ನಂಬಿರಬೇಕು.

ಇವುಗಳಲ್ಲದೆ ಬೇಡರ ಪ್ರಮುಖ ಉಪಪಂಗಡವಾದ ಮ್ಯಾಸಬೇಡರಿಗೆ ಸಂಬಂಧಿಸಿದಂತೆ ಪ್ರತ್ಯೇಕ ಅಧ್ಯಯನಗಳೂ ನಡೆದಿವೆ. ಅವುಗಳಲ್ಲಿ ಎಂ.ಜಿ.ಈಶ್ವರಪ್ಪ ಅವರ ಮ್ಯಾಸಬೇಡರು (೧೯೮೨) ಎಂಬ ಕಿರುಪುಸ್ತಕವನ್ನು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಸಂಕ್ಷಿಪ್ತವಾಗಿ ಮ್ಯಾಸಬೇಡರ ಪದ ನಿಷ್ಪತ್ತಿ ಅವರ ದೈವರಾಧನೆ, ವೇಷಭೂಷಣ, ವಾಸದ ನೆಲೆ, ಕುಟುಂಬಪದ್ಧತಿ ಸಾಂಪ್ರದಾಯಿಕ ನಂಬಿಕೆಗಳು, ಹುಟ್ಟು ಸಾವಿನ ವಿವರ, ಹಬ್ಬ ಹರಿದಿನ, ನ್ಯಾಯತೀರ್ಮಾನ ಇವುಗಳ ಬಗ್ಗೆ ವಿವರಗಳನ್ನು ಕೊಟ್ಟಿದ್ದಾರೆ. ಮ್ಯಾಸಬೇಡರ ಮೂಲವೃತ್ತಿ ಪಶುಪಾಲನೆಯಾಗಿತ್ತು ಎಂಬುದು ಇವರ ಅಭಿಪ್ರಾಯ. ನಾಯಕರಲ್ಲಿ ತಳವಾರ, ಊರನಾಯಕ, ಮ್ಯಾಸನಾಯಕ ಎಂಬ ಉಪಪಂಗಡಗಳಿರುವಂತೆ ಮ್ಯಾಸಬೇಡರಲ್ಲಿಯೂ ಊರುಮ್ಯಾಸ, ಅಡವಿಮ್ಯಾಸ, ಕಳ್ಳೆಮ್ಯಾಸ ಮತ್ತು ಮ್ಯಾಸ ಎಂಬ ನಾಲ್ಕು ಪ್ರಭೇದಗಳನ್ನು ಗುರುತಿಸಿದ್ದಾರೆ. ಆದರೆ ಇವುಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನೀಡಿಲ್ಲ.

ಡಾ.ಕೃಷ್ಣಮೂರ್ತಿ ಹನೂರರು 'ಬೇಡನಾಯಕರು' ಎಂಬ ತಮ್ಮ ಸಂಶೋಧನ ಕೃತಿಯಲ್ಲಿ ಚಿತ್ರದುರ್ಗ ಜಿಲ್ಲೆಯ ಬೇಡರನ್ನು ಕುರಿತು ಬಹಳ ಮಹತ್ವದ ಅಧ್ಯಯನ ಮಾಡಿದ್ದಾರೆ. ಬೇಡರ ಸಂಸ್ಕೃತಿಯ ಬಗ್ಗೆ ಉಪಯುಕ್ತ ವಿವರಗಳನ್ನು ಕೊಟ್ಟು ಬೇಡರ ಪುರಾಣ ಮತ್ತು ಬೇಡರ ಶರಣರನ್ನು ಕುರಿತು ಮಾಹಿತಿಗಳನ್ನು ಕೊಟ್ಟಿದ್ದಾರೆ.

ಇಷ್ಟುಬಿಟ್ಟರೆ ವಿವಿಧ ಬುಡಕಟ್ಟು ಸಮುದಾಯಗಳ ಬಗ್ಗೆ ೧೯೯೩ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಉಪಸಂಸ್ಕೃತಿಮಾಲೆಯ ಅಡಿಯಲ್ಲಿ ವಿವಿಧ ಲೇಖಕರು ಸುಮಾರು ೪೨ ಗ್ರಂಥಗಳನ್ನು ಪ್ರೊ.ಬರಗೂರು ರಾಮಚಂದ್ರಪ್ಪನವರ ನೇತೃತ್ವದಲ್ಲಿ ಪ್ರಕಟಿಸಲಾಗಿದೆ. ಅವುಗಳಲ್ಲಿ ಬುಡಕಟ್ಟು ಸಮುದಾಯಗಳ ಬಗ್ಗೆ ವಿಸ್ತೃತ ಅಧ್ಯಯನಕ್ಕೆ ವಿಪುಲ ಮಾಹಿತಿಯನ್ನು ಒದಗಿಸಲಾಯಿತು. ಈ ಮಾಲೆಯಲ್ಲಿ ಡಾ.ಕೃಷ್ಣಮೂರ್ತಿ ಹನೂರರವರು 'ಮ್ಯಾಸಬೇಡರ ಸಂಸ್ಕೃತಿ' ಎಂಬ

ಕೃತಿಯನ್ನು ರಚಿಸಿದ್ದಾರೆ. ಬೇಡ ಸಮುದಾಯ ಕುರಿತ ಕೃಷ್ಣಮೂರ್ತಿ ಹನೂರರವರ ಈ ಅಧ್ಯಯನ ಹೆಚ್ಚು ಸೂಕ್ಷ್ಮವು, ಮಹತ್ವದ ಸಮಗ್ರ ವಿವರಗಳ ಮೂಲಕ ಬೇಡ ಸಮುದಾಯದ ವಿವಿಧ ಆಯಾಮಗಳನ್ನು ಬೆಳಕಿಗೆ ತರಲು ಪ್ರಯತ್ನಿಸಿದ್ದಾರೆ. ಹನೂರು ಸ್ವತಃ ಸೃಜನಶೀಲ ಲೇಖಕರೂ ಆಗಿದ್ದರಿಂದ ಅವರು ಸಮುದಾಯ ಅಧ್ಯಯನಕ್ಕೆ ಸೃಜನಶೀಲ ಆಯಾಮವೊಂದು ಒದಗಿದೆ. ಹಾಗಾಗಿ ಈಗ ಬೇಡ ಸಮುದಾಯವನ್ನು ಯಾರೇ ಅಧ್ಯಯನ ಮಾಡಲಿ ಅಂಥವರಿಗೆ ಹನೂರು ಅವರ ಕೃತಿ ಮಾರ್ಗದರ್ಶಕ ಕೃತಿಯಾಗಿ ನಿಲ್ಲುತ್ತದೆ. ಇಲ್ಲಿ ವೈಚಾರಿಕ ಮನಸ್ಸೊಂದು ಸೃಜನಶೀಲವಾಗಿ, ಕಟ್ಟಿದ ಸಮುದಾಯದ ಕಥನವಾದ ಕಾರಣಕ್ಕೆ ಈ ಅಧ್ಯಯನಕ್ಕೆ ಹೆಚ್ಚಿನ ಮಹತ್ವವಿದೆ. ಈ ಅಧ್ಯಯನವು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕು, ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ಮತ್ತು ಚಳ್ಳಕೆರೆ ತಾಲ್ಲೂಕುಗಳಲ್ಲಿ ವಾಸವಾಗಿರುವ ಮ್ಯಾಸರ ಬುಡಕಟ್ಟು ಸಂಸ್ಕೃತಿಯ ಅಧ್ಯಯನವಾಗಿದೆ.

ಇಷ್ಟೇ ಅಲ್ಲದೆ ಅನೇಕ ಪುಸ್ತಕಗಳಲ್ಲಿ ಹಾಗೂ ಲೇಖನಗಳಲ್ಲಿ ಬೇಡರ ಕುರಿತು ಪರೋಕ್ಷ ಮಾಹಿತಿ ದೊರೆಯುತ್ತದೆ. ಶೆಕ್ಕಿರಳ್‌ನ 'ಪೆರಿಯಪುರಾಣ'ದಲ್ಲಿ ಕಾಳಹಸ್ತಿಯ ಕಾಡಿನಲ್ಲಿ ವಾಸವಾಗಿದ್ದ ಬೇಡರ ವಿವರಣೆ ಇದೆ. ಬೇಟೆಗಾರನಾದ ಬೇಡರ ಕಣ್ಣಪ್ಪನು ಶಿವಭಕ್ತನಾದ ಕಥೆ ಇಲ್ಲಿ ದೊರೆಯುತ್ತದೆ. ೧೯೨೪ರಲ್ಲಿ ಎಂ.ಎಸ್.ಪುಟ್ಟಣ್ಣನವರ ಪಾಳೆಯಗಾರರ ಚರಿತ್ರೆಯಲ್ಲಿ ಬೇಡರ ಆಳ್ವಿಕೆಯ ವಿವರಣೆಯಿದೆ. ಇವರ 'ಗುಮ್ಮನಾಯಕನಹಳ್ಳಿ ಪಾಳೆಯಗಾರರು' ಎಂಬ ಕೃತಿಯಿಂದ ವಿಜಯನಗರ ಸೈನ್ಯಕ್ಕೆ ಬೇಡ ಸೈನಿಕರು ಬಂದ ಉಲ್ಲೇಖ ದೊರೆಯುತ್ತದೆ. 'ಚಿತ್ರದುರ್ಗ ಪಾಳೆಯಗಾರರು' ಎಂಬ ಗ್ರಂಥದಲ್ಲಿ ಬೇಡರು ಹಂಪೆಯ ಮೂಲಕ ಚಿತ್ರದುರ್ಗಕ್ಕೆ ಬಂದ ಕಥೆ ದೊರೆಯುತ್ತದೆ. ಕಪಟರಾಳ ಕೃಷ್ಣರಾವ್ ಅವರ 'ಸುರಪುರ ಸಂಸ್ಥಾನದ ಇತಿಹಾಸ'ದಲ್ಲಿ ಅರಸರು ದಕ್ಷಿಣದಿಂದ ಬಂದ ಕತೆಯನ್ನು ಕೊಟ್ಟಿದ್ದಾರೆ.

ವೆಂಕಟರತ್ನಂ ಎ.ವಿ. ಅವರ ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ ಎಂಬ ಗ್ರಂಥದಲ್ಲಿ ವಿಜಯನಗರದ ಆಳ್ವಿಕೆಯ ಸಮಯದಲ್ಲಿ ಬೇಡರ ಸ್ಥಳೀಯ ಆಡಳಿತದ ದಾಖಲೆ ದೊರೆಯುತ್ತದೆ. ಹಾಗೂ ಕ್ಯಾತನಹಳ್ಳಿ ರಾಮಣ್ಣ ಅವರ ಫ್ಲೀಟರು ಸಂಗ್ರಹಿಸಿದ 'ಐದು ಲಾವಣಿಗಳು' ಕೃತಿಯಲ್ಲಿ ಹಲಗಲಿಬೇಡರ ಲಾವಣಿಯು ಇವರ ಸಾಹಸ, ಧೈರ್ಯ ಮುಂತಾದವುಗಳನ್ನು ಪರಿಚಯಿಸುತ್ತದೆ. ಚಿತ್ರಲಿಂಗಯ್ಯ ಎಂ.ವಿ. ಅವರ ಲೇಖನಗಳು ನಾಯಕ ಜನಾಂಗದ, ಅವರ ಬೆಡಗಿನ, ಅವರ ಸಪ್ತಮಾತೃಕೆ ಮತ್ತು ಪೋತರಾಜನ ಆರಾಧನೆ ಇತ್ಯಾದಿಗಳ ಮೇಲೆ ಬೆಳಕು ಚೆಲ್ಲುತ್ತವೆ. ಇವರ ವಾಲ್ಮೀಕಿ ಸಂದೇಶ ಎಂಬ ಮಾಸಪತ್ರಿಕೆಯಲ್ಲಿ ಪ್ರಕಟಿತವಾದ 'ನಾಯಕನಹಟ್ಟಿ ಬಖೈರು ಕೆಲವು ಟಿಪ್ಪಣಿಗಳು' ಬಹುಮುಖ್ಯವಾದ ಆಧಾರ ಗ್ರಂಥವಾಗಿದೆ. ಹಾಗೆಯೇ ಲಕ್ಷ್ಮಣ್ ತೆಲಗಾವಿಯವರ ಚಂದ್ರವಳ್ಳಿ ಮತ್ತು ಇತಿಹಾಸ ದರ್ಶನಗಳಲ್ಲಿ ಪ್ರಕಟಿತವಾದ ಚಿತ್ರದುರ್ಗದ ಪಾಳೆಯಗಾರರಿಗೆ ಸಂಬಂಧಿಸಿದ ಲೇಖನಗಳು, ಎಪ್ಪತ್ತೇಳು

ಪಾಳೆಯಗಾರರು, ಚಿತ್ರದುರ್ಗ ನಾಯಕ ಅರಸರ ರಾಜಕೀಯ ಚಿತ್ರ ಮುಂತಾದ ಹಲವು ಕೃತಿಗಳು ನಾಯಕ ಬುಡಕಟ್ಟಿನ ಮೇಲೆ ಬೆಳಕು ಚೆಲ್ಲುತ್ತವೆ. ಜತೆಗೆ ಸರ್ಕಾರ ಮೀಸಲಾತಿ ಸೌಲಭ್ಯಕ್ಕೆ ಹೊರತಂದ ಹಾವನೂರು, ವೆಂಕಟಸ್ವಾಮಿ ವರದಿ ಮತ್ತು ಚಿನ್ನಪ್ಪರೆಡ್ಡಿ ಆಯೋಗದ ವರದಿಗಳು, ಗ್ಯಾಝೆಟಿಯರ್‌ಗಳು, ಜನಸಂಖ್ಯಾ ವರದಿಗಳೂ ಹಾಗೂ ಅಖಿಲ ಕರ್ನಾಟಕ ನಾಯಕ ಸಂಘವು ಹೊರತಂದ ಹೊತ್ತಿಗೆಗಳು ಬೇಡರ ಜನಸಂಖ್ಯೆ ಅವರ ಸಾಮಾಜಿಕ, ಆರ್ಥಿಕ ಸ್ಥಿತಿಗತಿ, ಸ್ಥಾನಮಾನ, ಅವರು ಪಡೆಯುತ್ತಿರುವ ಸೌಲಭ್ಯ ಇತ್ಯಾದಿಗಳ ವಿವರಣೆಗಳನ್ನು ಒಳಗೊಂಡಿವೆ.

ನಂತರದಲ್ಲಿ ಈ ಸಮುದಾಯದ ಬಗ್ಗೆ ಚಾರಿತ್ರಿಕ ದೃಷ್ಟಿಕೋನದಿಂದ ಅಧ್ಯಯನ ಮಾಡಿ ನೋಡಿದವರಲ್ಲಿ ವಿರೂಪಾಕ್ಷಿ ಪೂಜಾರಹಳ್ಳಿಯವರು ಪ್ರಮುಖರು. ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ಸಮುದಾಯಗಳಲ್ಲಿ ಪ್ರಮುಖ ಬುಡಕಟ್ಟು ಸಮುದಾಯವಾದ ಮ್ಯಾಸಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಾಂಸ್ಕೃತಿಕ ವಿವರಗಳನ್ನು ದಾಖಲಿಸಿದ್ದಾರೆ. ಈ ಸಮುದಾಯದ ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಈಗಾಗಲೇ ಕೆಲವು ಕೃತಿಗಳು ಪ್ರಕಟವಾಗಿದ್ದರೂ ಬುಡಕಟ್ಟಿನ ವೀರರನ್ನು ಮತ್ತು ಜಿಲ್ಲೆಯಲ್ಲಿರುವ ಆರಾಧನಾ ನೆಲೆಗಳು ಮತ್ತು ಆ ಕಾರಣದಿಂದಾಗಿ ಹುಟ್ಟಿಕೊಂಡ ಸಾಂಸ್ಕೃತಿಕ ನಡವಳಿಕೆಗಳ ವಿವರಗಳನ್ನು ದಾಖಲಿಸಿದ್ದಾರೆ. ಜಿಲ್ಲೆಯ ಪ್ರಮುಖ ಐತಿಹಾಸಿಕ ಸ್ಥಳಗಳನ್ನು ಮತ್ತು ಆ ಸ್ಥಳಗಳ ಕಥೆಗಳನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ.

ನಂತರ ಕರಿಶೆಟ್ಟಿ ರುದ್ರಪ್ಪನವರು ಈ ಸಮುದಾಯದ ಸಾಂಸ್ಕೃತಿಕ ವಿವರಗಳಿಗೆ ಸಂಬಂಧಿಸಿದಂತೆ ಸಂಶೋಧನೆ ಮಾಡಿ ಮೇಲ್ಪದರದ ವಿವರಗಳನ್ನು ತಮ್ಮ ಕೃತಿಯಾದ 'ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ'ದಲ್ಲಿ ತಿಳಿಸಿದ್ದಾರೆ. ಊರನಾಯಕರ ಮತ್ತು ಮ್ಯಾಸನಾಯಕರ ನಡುವಿನ ವೈವಿಧ್ಯತೆ, ವೈಶಿಷ್ಟ್ಯತೆ, ಸೌಮ್ಯತೆಗಳನ್ನು ತೌಲನಿಕವಾಗಿ ಅಧ್ಯಯನ ವಿಷಯ ಕುರಿತು ಎಂ.ಪಿ.ವೀಣಾ ಅವರು ಎಂ.ಫಿಲ್.ಮಾಡಿದ್ದಾರೆ. ಡಾ.ವಿರೂಪಾಕ್ಷಿ ಪೂಜಾರಹಳ್ಳಿಯವರು ೨೦೦೭ರಲ್ಲಿ ಬೇಟೆ ಮತ್ತು ಬೇಡರು ಎಂಬ ಕೃತಿಯಲ್ಲಿ ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ 'ಬೇಟೆ ಮತ್ತು ಬೇಡ' ಸಮೂಹದ ಐತಿಹಾಸಿಕ ವಿವರಗಳ ಅಮೂಲಾಗ್ರ ಮಾಹಿತಿಯನ್ನು ಕಟ್ಟಿಕೊಟ್ಟಿರುವರು. ಇದರಲ್ಲಿ ಬೇಟೆಯ ಚಾರಿತ್ರಿಕ ಪರಿಕಲ್ಪನೆ, ಬೇಡ ಬುಡಕಟ್ಟಿನ ಚಾರಿತ್ರಿಕ ಹಿನ್ನೆಲೆ, ಕನ್ನಡ ಕಾವ್ಯ ಮತ್ತು ಸಮಕಾಲೀನ ಗ್ರಂಥಗಳಲ್ಲಿ ಬೇಟೆಯ ಪ್ರಸ್ತಾಪ ಮುಂತಾದ ವಿವರಗಳ ಬಗ್ಗೆ ಹೆಚ್ಚು ಮಾಹಿತಿಯನ್ನು ಒದಗಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿಯವರು ಕನ್ನಡ ವಿಶ್ವವಿದ್ಯಾಲಯದ ವಾಲ್ಮೀಕಿ ಅಧ್ಯಯನ ಪೀಠದ ಸಂಚಾಲಕರಾಗಿದ್ದಾಗ ಕೈಗೊಂಡ ಯೋಜನೆಗಳು ಬೇಡ ಸಮುದಾಯದ ಅಧ್ಯಯನಕ್ಕೆ ಮಹತ್ವದ ಕೊಡುಗೆಗಳಾಗಿವೆ. ಕಾಮಗೇತಿ ವಂಶಜರ ಚರಿತ್ರೆ, ಕರ್ನಾಟಕದಲ್ಲಿ ತಳವಾರಿಕೆ, ವಾಲ್ಮೀಕಿ ಸಮುದಾಯದ ಪ್ರಾತಃಸ್ಮರಣೀಯರು, ತರೀಕೆರೆ ಪಾಳೆಯಗಾರ ಸರ್ಜಪ್ಪನಾಯಕನ

ಕಥನ ಕಾವ್ಯ ಮುಂತಾದ ಕೃತಿಗಳು ಬೇಡ ಸಮುದಾಯದ ಭಿನ್ನ ಗುರುತುಗಳನ್ನು ಹುಡುಕಲು ಯತ್ನಿಸಿವೆ. ಹಾಗಾಗಿ ವಿರೂಪಾಕ್ಷಿ ಪೂಜಾರಹಳ್ಳಿಯವರನ್ನು ಬೇಡ ಸಮುದಾಯದ ಅಧ್ಯಯನ ಮಾಡುವ ಸಂದರ್ಭದಲ್ಲಿ ಪರಿಗಣಿಸದೆ ಮುನ್ನಡೆಯುವಂತಿಲ್ಲ.

ಸಿ.ಬಿ.ಅನ್ನಪೂರ್ಣಮ್ಮನವರು ಮ್ಯಾಸನಾಯಕರ ಸಾಂಸ್ಕೃತಿಕ ನಾಯಕಿಯರು ಸಂಶೋಧನಾ ಪ್ರಬಂಧದಲ್ಲಿ ಸಾಂಸ್ಕೃತಿಕ ನಾಯಕಿಯರ ಬಗ್ಗೆ ವಿವರಿಸಿದ್ದಾರೆ. ದೇವರಕುರಿ ಓಬಯ್ಯನವರ ಸಂಶೋಧನಾ ಪ್ರಬಂಧವಾದ ಮ್ಯಾಸಬೇಡರ ಆತ್ಮಕಥನದಲ್ಲಿ ಭಾಷಿಕ ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ.

ಬೇಡ ಬುಡಕಟ್ಟಿನ ಬಗ್ಗೆ ಕಳೆದ ಎರಡು ಶತಮಾನಗಳಿಂದ ಅಧ್ಯಯನಗಳಾಗಿವೆ. ಅದರಲ್ಲಿ ಪ್ರಮುಖರನ್ನು ಇಲ್ಲಿ ಸ್ಮರಿಸಬಹುದು. ಸೈಯದ್ ಸಿರಾಜ್ ಉಲ್‌ಹಸನ್, ಹುಲ್ಲೂರು ಶ್ರೀನಿವಾಸ ಜೋಯಿಸ, ಅಬ್ದುಲ್ ಸತ್ತಾರ್, ಮೀರಾಸಾಬಿಹಳ್ಳಿ ಶಿವಣ್ಣ, ಬಿ. ರಾಜಶೇಖರಪ್ಪ, ಜಿ. ವರದರಾಜ ರಾವ್, ಕುಂ.ಬಾ. ಸದಾಶಿವಪ್ಪ, ಸಂತೆಬೆನ್ನೂರು ಸುಮತೀಂದ್ರನಾಡಿಗ್, ಬಿ.ಆರ್.ತುಬಾಕಿ, ಎಚ್.ಜೆ.ಲಕ್ಕಪ್ಪಗೌಡ, ಬಾಗೂರು ಆರ್.ನಾಗರಾಜಪ್ಪ, ರಂಗರಾಜ ವನದುರ್ಗ, ದಿ.ಆರ್.ವೈ.ನಾಯಕ, ಎಸ್.ಬಿ.ತಿಪ್ಪನಾಯಕ, ಎನ್.ಪಿ.ತಿಪ್ಪೇಸ್ವಾಮಿ, ಎನ್.ಟಿ.ಎರ್ರಿಸ್ವಾಮಿ ಮುಂತಾದವರು ಬೇಡರನ್ನು ಕುರಿತು ಲೇಖನಗಳನ್ನು, ಕೃತಿಗಳನ್ನು, ಸಂಶೋಧನೆ ಪ್ರಬಂಧಗಳನ್ನು ಬರೆದಿರುವರು. ಇವುಗಳ ಸಹಾಯದಿಂದ ಸಮಕಾಲೀನ ಇತಿಹಾಸವನ್ನು ಅಧ್ಯಯನ ಮಾಡಬಹುದಾಗಿದೆ. ಇಷ್ಟೆಲ್ಲ ಅಧ್ಯಯನಗಳು ನಡೆದಿದ್ದರೂ ಅವು ಮಾನವಶಾಸ್ತ್ರ, ಸಾಹಿತ್ಯ, ಜನಪದ ನೆಲೆಯಲ್ಲಿ ನಡೆದಿವೆ. ಆದರೂ ಆಳವಾದ ಅಧ್ಯಯನದ ಅವಶ್ಯಕತೆ ಇದೆ. ಮನೆಯಲ್ಲಿರುವ ಕುರಿ, ದನ ಇತರ ಸಮಸ್ತ ಸಂಪತ್ತನ್ನು ಹಟ್ಟಿ ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ. ಹಟ್ಟಿಗಳ ಮೂಲಕ ಅವರ ವಾಸದ ನೆಲೆ ಸಮಾಜ ಸಂಸ್ಕೃತಿಯನ್ನು ಕುರಿತು ಚಾರಿತ್ರಿಕವಾಗಿ ಅರ್ಥಮಾಡಿಕೊಳ್ಳುವ ಪ್ರಯತ್ನವಾಗಿದೆ.

## ೧.೧. ಅಧ್ಯಯನದ ಉದ್ದೇಶ

'ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು : ಚಾರಿತ್ರಿಕ ಅಧ್ಯಯನ' ಈ ಪ್ರಬಂಧದ ಶೀರ್ಷಿಕೆ. ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನ ಹದಿನೆಂಟನೆಯ ಶತಮಾನದಿಂದ ಆರಂಭವಾಗಿ ಈವರೆಗೂ ನಡೆಯುತ್ತಿವೆ. ಈಗೀಗ ನಮ್ಮಲ್ಲಿಯೂ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಆರಂಭವಾಗಿದ್ದು, ಅದರ ಮುಖೇನ ಸಾಕಷ್ಟು ಅಧ್ಯಯನಗಳು ನಡೆದಿವೆ. ಕರ್ನಾಟಕದಲ್ಲಿ ಹೆಚ್ಚು ಜನಸಂಖ್ಯೆ ಹೊಂದಿರುವ ಬುಡಕಟ್ಟು ಸಮುದಾಯದ ಮ್ಯಾಸಬೇಡರ ಕುರಿತಾಗಿಯೂ ಅನೇಕ ಅಧ್ಯಯನಗಳಾಗಿವೆ. ಪ್ರಸ್ತುತ ಅಧ್ಯಯನದಲ್ಲಿ ಗ್ರಾಮ ಮತ್ತು ನಗರ ಸಂಸ್ಕೃತಿಯಿಂದ ದೂರವಾಗಿ ಅಡವಿ ಹಂಚಿನಲ್ಲಿ ಹಟ್ಟಿ ಕಟ್ಟಿಕೊಂಡು ತನ್ನದೇ ಆದ ಜೀವನಕ್ರಮ, ರೂಢಿ, ಸಂಪ್ರದಾಯ, ಆಚಾರ, ವಿಚಾರ, ಆರ್ಥಿಕ ಸ್ಥಿತಿಗತಿ ಮುಂತಾದ ವಿಷಯಗಳ ಕುರಿತು ಅಧ್ಯಯನ ಮಾಡಲಾಗಿದೆ.

ಮ್ಯಾಸಬೇಡರು ವಾಸಿಸುವ ಪ್ರದೇಶವನ್ನು ‘ಮ್ಯಾಸಮಂಡಲ’ ಎಂದು ಕರೆಯುತ್ತಾರೆ. ಮ್ಯಾಸಮಂಡಲ ಎಂಬ ಭೌಗೋಳಿಕ ಪ್ರದೇಶವು ಈಗಿನ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ, ಮೊಳಕಾಲ್ಮೂರು, ದಾವಣಗೆರೆ ಜಿಲ್ಲೆಯ ಜಗಳೂರು, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ, ತುಮಕೂರು ಜಿಲ್ಲೆಯ ಪಾವಗಡ, ಆಂಧ್ರಪ್ರದೇಶದ ರಾಯದುರ್ಗ ತಾಲ್ಲೂಕುಗಳ ವ್ಯಾಪ್ತಿಯನ್ನು ಒಳಗೊಂಡಿದೆ. ಆದರೆ ಅಧ್ಯಯನದ ಹಿನ್ನೆಲೆಯಲ್ಲಿ ಹೇಳುವುದಾದರೆ ಇದರ ಕೇಂದ್ರ ಬಿಂದು ಚಳ್ಳಕೆರೆ ತಾಲ್ಲೂಕು ಆಗಿದೆ. ಏಕೆಂದರೆ ನನ್ನಿವಾಳದ ಸುತ್ತಮುತ್ತ ಅನೇಕ ಹಟ್ಟಿಗಳು ಕಾಣಸಿಗುತ್ತವೆ. ಬಹುಮುಖ್ಯವಾದ ದೈವಸ್ಥಾನದ ಮೂಲ ನೆಲೆಗಳು ಹಾಗೂ ಮೂರು ಕಟ್ಟೆಮನೆಗಳಲ್ಲಿ ಎರಡು ಕಟ್ಟೆಮನೆಗಳು(ನಾಯಕನಹಟ್ಟಿ ಮತ್ತು ನನ್ನಿವಾಳ) ಚಳ್ಳಕೆರೆ ತಾಲ್ಲೂಕಿನಲ್ಲಿವೆ. ಉಳಿದ ಇನ್ನೊಂದು ಕಟ್ಟೆಮನೆ ಗೋನೂರು ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಆದರೆ ಈ ಬುಡಕಟ್ಟಿನ ಅತಿ ದಟ್ಟ ಜನಸಾಂದ್ರತೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿದ್ದೂ, ಮ್ಯಾಸನಾಯಕರ ಪ್ರಧಾನ ಕಟ್ಟೆಮನೆ ಕಂಪಳದೇವರಹಟ್ಟಿಯಲ್ಲಿದೆ. ಮ್ಯಾಸಮಂಡಲವನ್ನು ಆಡಳಿತಾತ್ಮಕ ಭೌತಿಕ ಗಡಿಗಳನ್ನು ಮೀರಿದ ಒಂದು ಸಾಂಸ್ಕೃತಿಕ ಗಡಿ ಎಂದು ಪರಿಭಾವಿಸಲಾಗುವುದು.[೭] ಮ್ಯಾಸಮಂಡಲ ಶಬ್ದ ವನ್ನು ಕೆಲವೊಮ್ಮೆ ಮ್ಯಾಸನಾಯಕರಲ್ಲಿರುವ ಒಳಪಂಗಡಗಳಿಗೆ ಮಾತ್ರ ಅನ್ವಯಿಸಿಯೂ ಬಳಸುತ್ತಾರೆ.

ಚಿನ್ನಹಗರಿ, ತುಂಗಭದ್ರಾ ಹಾಗೂ ವೇದಾವತಿ ನದಿಗಳ ನಡುವಿನ ಪ್ರದೇಶವನ್ನು ‘ಮ್ಯಾಸಮಂಡಲ’ ಎಂದು ಕೆಲವು ವಿದ್ವಾಂಸರು ಗುರುತಿಸುತ್ತಾರೆ. ಅಲ್ಲಿ ನೆಲಸಿರುವ ಮ್ಯಾಸನಾಯಕರನ್ನು ‘ನಡುಗಡ್ಡೆ ನಾಯಕ’ರೆಂದು ಕರೆಯುತ್ತಾರೆ. ಈ ನಡುಗಡ್ಡೆನಾಯಕ ಪದ ಬಂದ ಬಗೆಗೆ ಉತ್ತರಕ್ಕೆ ವಿಜಯನಗರ, ಜರಿಮಲೆ ಮತ್ತು ಗುಡೇಕೋಟೆ, ಪೂರ್ವಕ್ಕೆ ರಾಯದುರ್ಗ, ಮೊಳಕಾಲ್ಮೂರು ಪಾಳೆಯಗಾರರು, ಪಶ್ಚಿಮಕ್ಕೆ ಮತ್ತು ದಕ್ಷಿಣಕ್ಕೆ ನಾಯಕನಹಟ್ಟಿ, ಹರ್ತಿಕೋಟೆ ಮತ್ತು ಚಿತ್ರದುರ್ಗ ಪಾಳೆಯಗಾರರ ಆಳ್ವಿಕೆಯಿತ್ತು. ಈ ಮಧ್ಯೆ ಇರುವ ಚಿನ್ನಹಗರಿ ಮತ್ತು ವೇದಾವತಿ ನದಿಗೂ ಮಧ್ಯದ ಭೂಭಾಗವನ್ನು ನಡುಗಡ್ಡೆ ಎನ್ನುತ್ತಿದ್ದರು. ಇದರ ಉಸ್ತುವಾರಿಯನ್ನು ನೋಡಿಕೊಳ್ಳುವವರಿಗೆ ನಡುಗಡ್ಡೆನಾಯಕ ಎಂದು ಕರೆದಿರಬೇಕು. ನಡುಗಡ್ಡೆ ಒಂದು ಭೌಗೋಳಿಕ ಪ್ರದೇಶವಾದರೆ ನಾಯಕ ಎಂಬುದು ಅಧಿಕಾರಯುಕ್ತ ಪದವಿ ಇರಬೇಕು.[೮]

ಮ್ಯಾಸಮಂಡಲವೆಂದು ಗುರುತಿಸುವ ಈ ಪ್ರದೇಶ ಭೌಗೋಳಿಕವಾಗಿ ಕುರುಚಲು ಗಿಡಗಳು, ಕಿರು ಅರಣ್ಯ ಪ್ರದೇಶ, ಸಣ್ಣಪುಟ್ಟ ಬೆಟ್ಟಗುಡ್ಡ, ಮೊರಡಿಗಳಿಂದ ಕೂಡಿದೆ. ಇಲ್ಲಿಯ ಸಮಶೀತೋಷ್ಣ ವಾತಾವರಣ ಪಶುಪಾಲನೆಗೆ ಹೇಳಿ ಮಾಡಿದ ಪರಿಸರ. ಇಲ್ಲಿ ಮ್ಯಾಸಬೇಡರಂಥ ಪಶುಪಾಲಕ ಬುಡಕಟ್ಟಿನ ಸಂಸ್ಕೃತಿ ನೆಲೆನಿಲ್ಲಲು ಕಾರಣವಾಗಿರಬೇಕು. ಇದನ್ನು ಮತ್ತಷ್ಟು ಸಮರ್ಥಿಸುವಂತೆ ಚಳ್ಳಕೆರೆ ತಾಲ್ಲೂಕೊಂದರಲ್ಲೇ ಸುಮಾರು ೨೧ ಕಾವಲುಗಳಿವೆ. ಅದರಲ್ಲೂ ಹಿರೇಕಾವಲು ಎಂದೇ ಕರೆಯಲ್ಪಡುವ ಕುದಾಪುರ ಕಾವಲನ್ನು ಇಂದು ಕೇಂದ್ರ ಸರ್ಕಾರ ವಶಪಡಿಸಿಕೊಂಡು ‘ಯುದ್ಧ ವಿಮಾನ ತರಬೇತಿ ಕೇಂದ್ರ’ವನ್ನಾಗಿ ಮಾಡಿದೆ. ಇದರಿಂದ ಈ ಭಾಗದಲ್ಲಿ ಹೆಚ್ಚಾಗಿರುವ

ದೇವರ ಎತ್ತುಗಳ ಮೇವು-ನೀರಿಗೂ ತೊಂದರೆಯಾಗಿದೆ. ಹೊಸದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಕ್ರಮವಾಗಿ ೬ ಮತ್ತು ೧೩ ಕಾವಲುಗಳಿವೆ. ಮೊಳಕಾಲ್ಮೂರು ತಾಲ್ಲೂಕಿನಲ್ಲಿ ೮ ಕಾವಲು ಹಾಗೂ ಕೂಡ್ಲಿಗಿ ತಾಲೂಕಿನಲ್ಲಿ ಸುಮಾರು ೧೦ ಕಾವಲುಗಳಿವೆ. ಈ ಭಾಗದ ಅನೇಕ ಹಟ್ಟಿಯ ಹೆಸರುಗಳೂ ಪಶುಪಾಲನೆಯ ಮೂಲದಿಂದಲೇ ಹುಟ್ಟಿವೆ. ಉದಾಹರಣೆ ಎತ್ತಿನಹಟ್ಟಿ, ಪೇಲಾರಹಟ್ಟಿ, ಎದ್ದುಲ ಬೊಮ್ಮಯ್ಯನಹಟ್ಟಿ, ಕುರಿಹಟ್ಟಿ, ಕಂಪಳ ದೇವರಹಟ್ಟಿ ಮುಂತಾದವು.

ಮ್ಯಾಸಬೇಡ ಸಮುದಾಯವು ಕರ್ನಾಟಕದ ಪಶುಪಾಲಕ ಸಮುದಾಯವಾಗಿದ್ದು, ಇವರ ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಬೆಳಕಿಗೆ ತರುವ ಉದ್ದೇಶ ಪ್ರಸ್ತುತ ಅಧ್ಯಯನದ್ದು. ಇವರಿಗೆ ಒಂದು ಅಸ್ಮಿತೆಯಿದೆ. ಈ ಅಸ್ಮಿತೆಯಲ್ಲಿ ದೈವಗಳಿದ್ದು ಸಾಂಸ್ಕೃತಿಕ ನಾಯಕ, ತ್ಯಾಗಿ, ಮಹಾತ್ಮ ಯೋಗಿಗಳಿದ್ದಾರೆ. ಇವರ ಬಗ್ಗೆ ಪುರಾಣಗಳಿವೆ. ಪ್ರತ್ಯೇಕ ಭಾಷೆಯಿದೆ. ಹಲವು ಬೆಡಗುಗಳುಳ್ಳ ಉಪ ಸಮುದಾಯಗಳಿವೆ. ಒಂದು ಕಾಲಕ್ಕೆ ಬೇಟೆಯನ್ನೇ ನಂಬಿ ಕಾಡಿನಲ್ಲಿದ್ದ ಬೇಡರ ಜನಜೀವನ ಇಂದು ಸಂಸ್ಕೃತೀಕರಣ, ನಗರೀಕರಣ, ಜಾಗತೀಕರಣ ಹಾಗೂ ಪಾಶ್ಚಾತ್ಯೀಕರಣಗಳ ಪ್ರಭಾವದಿಂದ ಬದಲಾಗುತ್ತಿದೆ. ಹೀಗೆ ಬೇಡರ ಬದುಕು ಸ್ಥಿತ್ಯಂತರಗಳಿಂದ ವಿವಿಧ ರೀತಿಯಲ್ಲಿ ವಿಸ್ತರಣೆಗೊಂಡಿರುವುದು ಗಮನಾರ್ಹ. ಈಗಲೂ ಬೇಡರ ಒಂದು ಪಂಗಡ ಕಾಡಿನ ಪರಿಸರದಲ್ಲಿ ವಾಸಿಸುತ್ತಿದ್ದು, ಮೊದಲಿನ ಸ್ಥಿತಿಯಲ್ಲಿರುವುದು ಕೆಲವು ಭಾಗಗಳಲ್ಲಿ ಕಾಣಬಹುದು. ಅವರು ಆಧುನಿಕತೆಯ ಮುಖ್ಯವಾಹಿನಿಗೆ ಬಾರದೆ ಅತಂತ್ರ ಸ್ಥಿತಿಯನ್ನು ಎದುರಿಸುತ್ತಿದ್ದಾರೆ. ಇತರ ಮೂಲನಿವಾಸಿಗಳೂ ತಮ್ಮ ಸಂಸ್ಕೃತಿಯಲ್ಲಿ ಇಂದು ಪ್ರತ್ಯೇಕತೆಯನ್ನು ಕಾಪಾಡಿಕೊಂಡಿಲ್ಲ. ಏಕೆಂದರೆ ಮಾನವ ದೈಹಿಕ ಮತ್ತು ಬೌದ್ಧಿಕವಾಗಿ ಸಮಾಜವನ್ನು ಸೃಷ್ಟಿಸಿಕೊಂಡಾಗ ವಿಕಸಿಸುತ್ತಾ ಕಾಡುನಾಡಾಗಿ ಕಾಡಿನ ಸಂಸ್ಕೃತಿ ಬದಲಾಗುವ ಲಕ್ಷಣಗಳು ಕಂಡುಬಂದಿವೆ. ಅಧ್ಯಯನದ ಉದ್ದೇಶಗಳನ್ನು ಈ ಕೆಳಗಿನಂತೆ ವಿವರಿಸಬಹುದು.

೧. ಬುಡಕಟ್ಟು ಜನರ ಉಗಮ, ವಿಕಾಸ, ಜೀವನಕ್ರಮವನ್ನು ಮತ್ತು ಭೌಗೋಳಿಕ ಪರಿಸರವನ್ನು ತಿಳಿಸುವುದು.

೨. ಹಟ್ಟಿಯ ಹುಟ್ಟು, ಕಾರಣ, ನಡೆದ ಘಟನೆ, ವೀರರ ಆರಾಧನೆ ಮೊದಲಾದ ಚಾರಿತ್ರಿಕ ಮಹತ್ವ ವಿಶ್ಲೇಷಿಸಬಹುದು.

೩. ಮ್ಯಾಸಬೇಡರ ಹಟ್ಟಿಯ ಸ್ವರೂಪ, ಲಕ್ಷಣ ಮತ್ತು ಸ್ಥಳನಾಮಗಳನ್ನು ಚರ್ಚಿಸಲಾಗುವುದು.

೪. ಹಟ್ಟಿಯಲ್ಲಿರುವ ಭಾಷೆ, ಆಹಾರ, ಉಡುಗೆ-ತೊಡುಗೆ, ರೂಢಿ, ಸಂಪ್ರದಾಯ, ಸಾಂಸ್ಕೃತಿಕ ಆಚರಣೆ, ಧಾರ್ಮಿಕ ಪದ್ಧತಿ ಹಾಗೂ ಕಟ್ಟುಪಾಡುಗಳನ್ನು ತಿಳಿಸುವ ಪ್ರಯತ್ನವಿದೆ.

೫. ಹಟ್ಟಿಯಲ್ಲಿ ವಾಸಿಸುವ ಜನರ ಮೇಲು-ಕೀಳು ಭಾವನೆ, ಅಧಿಕಾರ ಚಲಾವಣೆ, ಪ್ರಭುತ್ವ ಮತ್ತು ಪ್ರಜೆಗಳ ಹಾಗೂ ಬುಡಕಟ್ಟು ಜನರ ಸಾಂಪ್ರದಾಯಿಕ ವೃತ್ತಿ ಮತ್ತು ಪ್ರವೃತ್ತಿಯ ಜೀವನ ವಿಧಾನವನ್ನು ಪರಿಚಯಿಸಲಾಗಿದೆ.

೬. ಬುಡಕಟ್ಟು ಸಂಸ್ಕೃತಿಯ ಚಾರಿತ್ರಿಕ ಮಹತ್ವ ಹಾಗೂ ಮೌಖಿಕ ಸಾಹಿತ್ಯವನ್ನು ಬೆಳಕಿಗೆ ತರುವ ಉದ್ದೇಶವಿದೆ.

೭. ಮ್ಯಾಸಬೇಡರ ಕಲೆ ಮತ್ತು ವಾಸ್ತುಶಿಲ್ಪ ಕುರಿತು ಹಟ್ಟಿ ಮೂಲಕ ಸಾಂಸ್ಕೃತಿಕ ಮಹತ್ವವನ್ನು ಕಟ್ಟಿಕೊಡಲಾಗಿದೆ.

೮. ನಿವೇಶನ, ನೆಲೆ, ವಾಸದ ಮಹತ್ವ ಹಾಗೂ ರಕ್ಷಣಾ ವಾಸ್ತುಶಿಲ್ಪ ಕುರಿತು ಚರ್ಚಿಸಲಾಗಿದೆ.

೯. ಮ್ಯಾಸನಾಯಕರ ಹಟ್ಟಿಗಳಲ್ಲಿರುವ ವಾರ್ಷಿಕಾಚರಣೆ ಹಾಗೂ ಉತ್ಸವಗಳನ್ನು ಪರಿಚಯಿಸುವ ಉದ್ದೇಶವಿದೆ.

೧೦. ಈ ಬುಡಕಟ್ಟಿನ ಸಾಂಸ್ಕೃತಿಕ ಅನನ್ಯತೆಯನ್ನು ಮತ್ತು ಸರ್ವತೋಮುಖ ಅಭಿವೃದ್ಧಿಯನ್ನು ತೌಲನಿಕವಾಗಿ ವಿಶ್ಲೇಷಿಸುವುದು.

೧೧. ಮ್ಯಾಸನಾಯಕರ ಪ್ರಸ್ತುತ ಶಿಕ್ಷಣ ಮತ್ತು ಆರ್ಥಿಕ ಸಂಗತಿಗಳನ್ನು ಗುರುತಿಸುವುದು.

೧೨. ಆಧುನೀಕತೆಗೆ ಮ್ಯಾಸನಾಯಕರ ಹಟ್ಟಿಗಳು ಹೇಗೆ ಮುಖಾಮುಖಿಯಾಗಿವೆ ಎಂಬುದನ್ನು ಹೊಸಸಂಗತಿಗಳ ಮೂಲಕ ಬೆಳಕಿಗೆ ತರುವುದು.

೧೩. ಕರ್ನಾಟಕದ ಬುಡಕಟ್ಟುಗಳ ಮತ್ತು ಪ್ರಾದೇಶಿಕ ಜನಾಂಗೀಯ ಅಧ್ಯಯನ ಕ್ರಮಗಳಲ್ಲಿ ಆದ ಪ್ರಗತಿ ಅಭಿವೃದ್ಧಿ ಹಾಗೂ ಸರ್ಕಾರದ ಪಾತ್ರವನ್ನು ನಿರೂಪಿಸಲಾಗುವುದು.

೧೪. ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಅವಧೂತರ ಕುರಿತು ಮಾಹಿತಿಯ ವಿಶ್ಲೇಷಣೆ ಮಾಡಲಾಗುವುದು.

ಮ್ಯಾಸನಾಯಕರು ಗುಡಿಸಲುಗಳ ಸಮೂಹವನ್ನು ಹಟ್ಟಿ ಎಂದು ಕರೆದುಕೊಳ್ಳುತ್ತ ತಮ್ಮದೇ ಆದ ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುವಂಥವರು. ಗುಡ್ಡದತಪ್ಪಲು, ವಿರಳಕಾಡಿನ ಅಂಚು, ಬಂಜರು ಭೂಮಿ, ಊರಾಚೆ ಪ್ರತ್ಯೇಕ ಹಟ್ಟಿ, ಸಂಚಾರ ಸಂಪರ್ಕಕ್ಕೂ ನಿಲುಕಲಾಗದ ನಿರ್ಜನವಾದ ಪ್ರದೇಶ. ಹಿಂದುಳಿದ ಪಂಗಡದವರಾದ ಹರಿಜನ, ಗಿರಿಜನರ ಸಂಪರ್ಕದಲ್ಲಿ ನೆಲೆನಿಂತಿರುತ್ತಾರೆ. ನೂರಕ್ಕೆ ತೊಂಬತ್ತರಷ್ಟು ಕುಟುಂಬಗಳು ಬರಿ ಹುಲ್ಲು ಜೋಪಡಿಗಳಲ್ಲಿ ವಾಸ ಮಾಡುತ್ತಿದ್ದಾರೆ. ಉಳಿದವುಗಳ ಪೈಕಿ ಕೆಲವರು ಕಲ್ಲು ಮಣ್ಣಿನ ಮನೆಗಳಲ್ಲಿಯೂ ಕೆಲವರು ನಾಡಂಚಿನ ಮನೆಗಳಲ್ಲಿಯೂ ವಾಸಮಾಡುತ್ತಿರುವರು. ಇವು ಗಾಳಿ, ಬೆಳಕು, ಬಾರದ ಅನಾಗರೀಕತೆಯ ಹಳೆಯ ಸಂಪ್ರದಾಯದ ಮನೆಗಳಾಗಿವೆ. ವಾಸಕ್ಕೆ ಅನುಕೂಲಕರವಾದ ಅಚ್ಚುಕಟ್ಟಾದ ಮತ್ತು ನವೀನವಾದ ಮನೆಗಳನ್ನು ನಿರ್ಮಿಸಿಕೊಳ್ಳಲು ಆರ್ಥಿಕವಾಗಿ ಸದೃಢರಾಗಿರದೇ ನಿಕೃಷ್ಟಜೀವನ ನಡೆಸುತ್ತಿದ್ದಾರೆ.

ಅನೇಕ ಹಟ್ಟಿಗಳಲ್ಲಿ ಮನೆಗಳ ಒಳಗಡೆ ತೆವಳಿಕೊಂಡು ಹೋಗುವ ರೀತಿಯಲ್ಲಿ ನೆಲ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಮಾಡುತ್ತಾರೆ. ಬಹುಶಃ ಕಾಡುಪ್ರಾಣಿಗಳಿಂದ ರಕ್ಷಣೆ ಪಡೆಯಲು ಈ ರೀತಿಯ ಗುಡಿಸಲುಗಳನ್ನು ಹಿಂದೆ ಕಟ್ಟಿಕೊಳ್ಳುತ್ತಿದ್ದಿರಬಹುದು. ಇನ್ನು ಕೆಲವು ಕಡೆ, ಕಾಡುಜನರಂತೆ ಬೇರಾವ ಸಂಪರ್ಕವೂ ಇಲ್ಲದಂತೆ ಹಟ್ಟಿಗಳನ್ನು ಕಟ್ಟಿಕೊಂಡು ಸುತ್ತಲೂ ಮುಳ್ಳುಬೇಲಿಯನ್ನು ಹಾಕಿಕೊಂಡು ವಾಸಮಾಡುತ್ತಾರೆ. ಇದು ಒಂದು ರೀತಿಯಲ್ಲಿ ನಿಷೇಧಿತ ಪ್ರದೇಶ. ಹಟ್ಟಿಯ ಯಜಮಾನನ ಅಪ್ಪಣೆ ಇಲ್ಲದೆ ಯಾರೂ ಪ್ರವೇಶ ಮಾಡದಂಥ ಸ್ಥಿತಿಯೂ ಒಂದು ಕಾಲಕ್ಕಿತ್ತು. ಹಟ್ಟಿ ಎಂದು ಕರೆದುಕೊಳ್ಳುವ ಆ ಗುಡಿಸಲುಗಳ ಸಮೂಹದ ನಡುವೆ ದೇವರ ಗುಡಿಗಳಿರುತ್ತವೆ. ಗುಡಿ ಎಂದರೆ ಚಕ್ರಾಕಾರದ ಮೋಟುಗೋಡೆಯ ಮೇಲೆ ಮೇಲ್ಮುಖವಾಗಿ ಕಟ್ಟಿದ ಎತ್ತರವಾದ ಸೂರು. ಇಂಥ ಒಂದು ಪುಟ್ಟ ಗುಡಿಸಲಿನ ಒಳಗೆ ದೇವರವಾಸ. ನಿರ್ದಿಷ್ಟ ಪಡಿಸಿದ ಪೂಜಾರಿಯಷ್ಟೇ ಒಳಗಡೆ ಪ್ರವೇಶ ಮಾಡಬಹುದು. ಆ ಗುಡಿಯ ಸುತ್ತ ತೀವ್ರತರವಾದ ಮುಳ್ಳಿನ ಹೆಬ್ಬೇಲಿ ಆ ಬೇಲಿಯನ್ನು ಭೇದಿಸಿ ಯಾರೂ ಒಳಗೆ ಹೋಗುವಂತಿಲ್ಲ. ಅಂದರೆ ದೇವರು ಪವಿತ್ರವಾದುದು ಎಂದಿವರ ಗ್ರಹಿಕೆ.

ನಾಗರೀಕತೆಯ ಸೋಂಕಿಲ್ಲದೆ, ಮೂಲಪರಂಪರೆಯನ್ನು ಅಚ್ಚುಕಟ್ಟಾಗಿ ಕಾಪಾಡಿಕೊಂಡು ಬದುಕುತ್ತಿರುವ ಜನಾಂಗಗಳಿಗೆ ಬುಡಕಟ್ಟುಗಳೆಂದು ಕರೆಯುತ್ತಾರೆ. ಇಂದಿನ ಆಧುನಿಕ ಯುಗದಲ್ಲಿ ಮೂಲ ಸಂಸ್ಕೃತಿಯ ಅಂಶಗಳು ಪ್ರತ್ಯಕ್ಷ, ಅಪ್ರತ್ಯಕ್ಷವಾಗಿ ಬೆರೆತುಕೊಂಡಿವೆ. ಈ ದೃಷ್ಟಿಯಿಂದ ಮನುಷ್ಯನ ಸಾಂಸ್ಕೃತಿಕ ಬದುಕಿನ ಅಧ್ಯಯನದಲ್ಲಿ ಅವನ ಪೂರ್ವಜರ ಸಂಗತಿಗಳು ಅನಿವಾರ್ಯವಾಗಿ ಸೇರಿಕೊಳ್ಳುತ್ತವೆ. ಈ ಪೂರ್ವಜರು ಬುಡಕಟ್ಟುಗಳ ಹೆಸರಿನಿಂದ ಮೂಲ ಮಾನವನ ಸಂಸ್ಕೃತಿಯನ್ನು ಕಾಪಾಡಿಕೊಂಡು ಬಂದಿದ್ದಾರೆ. ನಾಗರೀಕತೆಯ ಪ್ರಭಾವದಿಂದಾಗಿ ಅವರಲ್ಲಿರುವ ಮೂಲದ ಎಷ್ಟೋ ಅಂಶಗಳು ಮರೆಯಾಗುವ ಸ್ಥಿತಿಯಲ್ಲಿವೆ. ಅವು ಹಾಗೆ ಮರೆಯಾಗುವುದಕ್ಕಿಂತ ಮೊದಲೇ ಅವುಗಳನ್ನು ಗುರುತಿಸುವ, ದಾಖಲಿಸುವ, ವಿಶ್ಲೇಷಿಸುವ ಕಾರ್ಯ ನಡೆಯಬೇಕಾಗಿದೆ. ಅಂದಾಗ ಮಾತ್ರ ಮಾನವಸಂಸ್ಕೃತಿಯ ಪೂರ್ಣಚಿತ್ರ ಲಭ್ಯವಾಗುತ್ತದೆ. ಈ ದೃಷ್ಟಿಯಿಂದ ಕರ್ನಾಟಕದ ಒಂದು ಬುಡಕಟ್ಟಾದ ಮ್ಯಾಸಬೇಡ ಸಮುದಾಯವನ್ನು ಕುರಿತು ಅಧ್ಯಯನ ನಡೆಸುವುದು ಈ ಸಂಶೋಧನೆಯ ಉದ್ದೇಶವಾಗಿದೆ. ಒಂದು ಹಟ್ಟಿಯನ್ನು ಅಧ್ಯಯನ ಮಾಡುವಲ್ಲಿ ಕೆಲವು ಲಕ್ಷಣಗಳು ಪ್ರಮುಖವಾಗಿರುತ್ತವೆ. ಭೌಗೋಳಿಕ ವಿವರ, ಸ್ಥಳನಾಮ, ಕೋಟೆ, ಶಾಸನ, ವೀರಗಲ್ಲು, ದೇವಾಲಯಗಳು ನೇರವಾಗುತ್ತವೆ. ಈ ಹಿನ್ನೆಲೆಯಲ್ಲಿ ಜಾತ್ರೆ, ಉತ್ಸವ, ಯಾತ್ರಾಸ್ಥಳಗಳು, ಕೆರೆಕಾಲುವೆಗಳು, ಐತಿಹಾಸಿಕ ಕಟ್ಟಡ, ಶಿಲ್ಪ, ನಿವೇಶನ, ಆಯುಧ, ಸ್ಮಾರಕಗಳು, ಸ್ಥಳೀಯ ಚರಿತ್ರೆಯ ಆಕರಗಳಾಗುತ್ತವೆ. ಗ್ರಾಮದ ಗೌಡ, ಪಟೇಲ, ನಾಯಕ, ಬೇಟೆಗಾರ, ಸಾಂಸ್ಕೃತಿಕ ವೀರ, ಕೃಷಿಕ ಮೊದಲಾದವನ್ನು ಹೇಳಲಾಗುವುದು. ರಸ್ತೆ, ಬಾವಿ, ಕೆರೆಕಟ್ಟೆ, ಚಾವಡಿ, ದೇವಾಲಯಗಳ ನಿರ್ಮಾಣದಲ್ಲಿ ಜನರ ಹಿತಾಸಕ್ತಿಯನ್ನು

ಮರೆಯುವಂತಿಲ್ಲ. ನಾಡಿನ ಒಂದು ಹಟ್ಟಿಯ ಚರಿತ್ರೆಯು ದೇಶದ ಚರಿತ್ರೆಯ ಒಂದು ಭಾಗವೇ ಆಗಿದೆ. ಹಟ್ಟಿಯಲ್ಲಿ ಬಿಸಲಿನ ತಾಪಮಾನ ಹೆಚ್ಚಾಗಿದ್ದರೂ ಇಲ್ಲಿನ ಜನರು ಸದೃಢರಾಗಿರುತ್ತಾರೆ. ಅವರೇ ಕಾಯಿಲೆಗಳಿಗೆ ಗಿಡಮೂಲಿಕೆಗಳ ಮೂಲಕ ಔಷಧಿಯನ್ನು ಸಿದ್ಧಪಡಿಸುತ್ತಾರೆ. ಸಾಮೂಹಿಕವಾಗಿ ಹಟ್ಟಿಯ ಜನರೆಲ್ಲ ಕೂಡಿ ಹಬ್ಬ, ಉತ್ಸವಗಳಲ್ಲಿ ಬೇಲಿ, ಸರಗ ಹಾಗೂ ಸ್ವಚ್ಚತೆ ಮಾಡುತ್ತಾರೆ. ಇಂದು ನಾಗರೀಕತೆ, ಸಂಸ್ಕೃತಿಯ ಪ್ರಭಾವದಿಂದ ಹಟ್ಟಿಗಳು ಮರೆಯಾಗುತ್ತಲಿವೆ. ಕಾಲೋನಿ, ನಗರ, ಪಟ್ಟಣಗಳು ಬೆಳೆದಿವೆ. ಬುಡಕಟ್ಟು ವೀರನ ಹೆಸರಿನಲ್ಲಿರುವ ಹಟ್ಟಿ ಈಗ ವಾಲ್ಮೀಕಿನಗರ, ಮದಕರಿನಗರ, ಗಾಂಧಿನಗರ ಮುಂತಾದ ರೂಪಾಂತರ ಪಡೆಯುತ್ತಿವೆ. ಜಾಗತೀಕರಣದ ಪ್ರಭಾವದಿಂದ ಹಟ್ಟಿಯಲ್ಲಾಗುವ ಪಲ್ಲಟಗಳನ್ನು ಅಧ್ಯಯನದ ಮೂಲಕ ಗುರುತಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದ್ದು.

### ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಸುಮಾರು ೧೦೦ಕ್ಕೂ ಹೆಚ್ಚು ಮ್ಯಾಸನಾಯಕರ ಹಟ್ಟಿಗಳಲ್ಲಿರುವ ಸಾಂಸ್ಕೃತಿಕ ಚರಿತ್ರೆಯನ್ನು ಒಳಗೊಂಡಿದೆ. ಇದು ತಳ ಸಮುದಾಯದ ಚರಿತ್ರೆಯ ಅಧ್ಯಯನ. ಇಂದು ಬಹುತೇಕ ಮ್ಯಾಸನಾಯಕರ ಹಟ್ಟಿಗಳು ಕರ್ನಾಟಕದ ಬಹುಭಾಗದಲ್ಲಿ ಕಂಡುಬರುತ್ತವೆ. ಇಲ್ಲಿ ಮುಖ್ಯವಾಗಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ. ಮೊಳಕಾಲ್ಮೂರು ಮತ್ತು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಹೊಸಪೇಟೆ ಮತ್ತು ಸಂಡೂರು ತಾಲ್ಲೂಕಗಳು ಹಾಗೂ ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನಲ್ಲಿ ಬರುವ ಹಟ್ಟಿಗಳನ್ನು ಮಾತ್ರ ಅಧ್ಯಯನ ವ್ಯಾಪ್ತಿಗೆ ಒಳಪಡಿಸಲಾಗಿದೆ. ಚಿತ್ರದುರ್ಗ ಹಾಗೂ ಬಳ್ಳಾರಿ ಜಿಲ್ಲೆಗಳನ್ನು ಇಡೀ ಮ್ಯಾಸಮಂಡಲದ ಮೂಲ ಪ್ರದೇಶವೆಂದೂ ಗುರುತಿಸಲಾಗಿದೆ. ವಿಜಯನಗರೋತ್ತರ ಕಾಲದಿಂದ ಪ್ರಸ್ತುತದವರೆಗಿನ ಕಾಲಮಾನವನ್ನು ಅಧ್ಯಯನ ವ್ಯಾಪಿಯೆಂದು ಒಳಪಡಿಸಲಾಗಿದೆ. ಅದಕ್ಕೆ ಪೂರಕವಾಗಿ ಶಿಲಾಯುಗ, ಮೌರ್ಯ, ಶಾತವಾಹನ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಕುಮ್ಮಟದುರ್ಗ, ವಿಜಯನಗರ ಮನೆತನಗಳವರು ಮತ್ತು ಸ್ಥಳೀಯ ಪಾಳೆಯಗಾರರು ವ್ಯಾಪ್ತಿಗೆ ಸಹಜವಾಗಿಯೇ ಒಳಪಡುತ್ತಾರೆ. ಇಲ್ಲಿ ಹಟ್ಟಿಯ ಲಕ್ಷಣ, ಸ್ವರೂಪ, ಬೇಟೆ, ಪಶುಪಾಲನೆ, ಸಾಂಸ್ಕೃತಿಕವೀರ ಮುಂತಾದ ವಿಷಯಗಳನ್ನು ಪ್ರಸ್ತುತ ಅಧ್ಯಯನ ವ್ಯಾಪ್ತಿಗೊಳಪಟ್ಟಿದೆ. ಇಲ್ಲಿ ಗೊಲ್ಲರಹಟ್ಟಿ, ಬೇಡರಹಟ್ಟಿ, ಮಾದಾರಹಟ್ಟಿ, ಮ್ಯಾಸರಹಟ್ಟಿ, ಕುರುಬರಹಟ್ಟಿಗಳು ಕಂಡುಬರುತ್ತವೆ. ಇವುಗಳಿಂದ ಮ್ಯಾಸರಹಟ್ಟಿ ಹೇಗೆ ಭಿನ್ನವಾಗಿದೆ ಎಂಬುದನ್ನು ಸಮಕಾಲೀನ ಜನಜೀವನದೊಂದಿಗೆ ವಿಶ್ಲೇಷಿಸಲಾಗಿದೆ.

### ೧.೩. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವು ಚರಿತ್ರೆ ಸಂಶೋಧನೆಯ ವಿಧಿ-ವಿಧಾನಗಳನ್ನು ಒಳಗೊಂಡಿದೆ. ಇದಕ್ಕೆ ಪ್ರಾಥಮಿಕ ಹಾಗೂ ಪೂರಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಮ್ಯಾಸನಾಯಕರ

ಹಟ್ಟಿಗಳ ಅಧ್ಯಯನದ ಬಗ್ಗೆ ವಿವರಗಳಿರುವ ಚಾರಿತ್ರಿಕ ದಾಖಲೆ ಮತ್ತು ವರದಿಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಸರ್ಕಾರದ ಗೆಜೆಟಿಯರ್, ಸಂಶೋಧನಾ ಪ್ರಬಂಧಗಳು, ಕರ್ನಾಟಕ ಚರಿತ್ರೆ ಸಂಪುಟಗಳು, ಚರಿತ್ರೆ ವಿಶ್ವಕೋಶ, ನಿಯತಕಾಲಿಕೆಗಳು, ಪತ್ರಿಕೆಗಳು ಮತ್ತು ಲೇಖನಗಳು ಮುಂತಾದ ವಿಷಯಗಳಿಂದ ಮಾಹಿತಿ ಸಂಗ್ರಹಿಸಿ, ಕ್ಷೇತ್ರಕಾರ್ಯದ ಅಂಶಗಳನ್ನು ಚರಿತ್ರೆಯ ಶಿಸ್ತಿಗೊಳಪಡಿಸಿ ವಿಶ್ಲೇಷಣೆ ಮಾಡಲಾಗಿದೆ. ಪೂರಕವಾಗಿ ಇತರೆ ಶಿಸ್ತುಗಳ ಮಾಹಿತಿಯನ್ನು ಪಡೆದು ಚರ್ಚಿಸಲಾಗಿದೆ. ಸಬಾಲ್ಟರ್ನ್, ಆಧುನಿಕೋತ್ತರ ಚಿಂತನಾಕ್ರಮಗಳ ಮೂಲಕ ಮ್ಯಾಸರಹಟ್ಟಿಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಚರಿತ್ರೆ ಶಿಸ್ತಿನೊಳಗೆ ಅಧ್ಯಯನ ಮಾಡಿದರೂ ಅನ್ಯಶಿಸ್ತಿನ ಅವಶ್ಯಕತೆ ಇರುತ್ತದೆ. ಈ ಕಾರಣವಾಗಿ ಸಮಾಜಶಾಸ್ತ್ರ, ರಾಜ್ಯಶಾಸ್ತ್ರ, ಜನಪದ, ಬುಡಕಟ್ಟು, ಸಾಹಿತ್ಯ ಮೊದಲಾದ ಕ್ಷೇತ್ರಗಳ ಮಾಹಿತಿ ಹಾಗೂ ಸಂಗತಿಗಳನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ. ಮೌಖಿಕವಾಗಿ ಲಭ್ಯವಿರುವ ಲಾವಣಿ, ಕಥನ, ಜನಪದಗೀತೆ, ಒಗಟು, ಐತಿಹ್ಯ, ಪುರಾಣ, ದಂತಕತೆಗಳನ್ನು ಪರಿಶೀಲಿಸಿ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಪ್ರಾಚ್ಯಾವಶೇಷಗಳು, ಶಾಸನಗಳು, ದೇವಾಲಯಗಳು, ವೀರಗಲ್ಲುಗಳು ಅಪ್ರಕಟಿತ ಹಸ್ತಪ್ರತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಕೊನೆಟಿಪ್ಪಣಿಗಳು ಪರಾಮರ್ಶನ ಗ್ರಂಥಸೂಚಿಯನ್ನು ಕೊಡಲಾಗಿದೆ. ಅಗತ್ಯ ಇರುವ ಛಾಯಾಚಿತ್ರಗಳು, ಮಾಹಿತಿದಾರರ ವಿವರ, ನಕ್ಷೆಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

### ೧.೪. ಅಧ್ಯಯನದ ಸ್ವರೂಪ

ಕರ್ನಾಟಕದ ಬಯಲು ಸೀಮೆಯ ಮ್ಯಾಸನಾಯಕರ ಹಟ್ಟಿಗಳು ಚಾರಿತ್ರಿಕ ಅಧ್ಯಯನ ಎನ್ನುವ ಪರಿವಿಡಿಗೆ ಸಂಬಂಧಿಸಿದಂತೆ ಒಂಭತ್ತು ಅಧ್ಯಾಯಗಳಲ್ಲಿ ವಿಷಯವನ್ನು ವರ್ಗೀಕರಿಸಲಾಗಿದೆ. ಇದರಲ್ಲಿ ಮೊದಲನೆಯ ಅಧ್ಯಾಯವು ವಿಷಯಕ್ಕೆ ಹೇಗೆ ಪ್ರವೇಶಿಸಬೇಕು. ಈ ತರಹದ ಅಧ್ಯಯನಗಳ ಸ್ವರೂಪ ಎಂಥಹದು ಎಂಬುದನ್ನು ಹೇಳುವುದರ ಜೊತೆಗೆ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನಗಳನ್ನು ಸೋದಾಹರಣವಾಗಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕರ್ನಾಟಕದ ಮ್ಯಾಸಬೇಡ ಸಮುದಾಯದ ಚಾರಿತ್ರಿಕ ಹಿನ್ನೆಲೆಯನ್ನು ಹೇಳುವುದರ ಜೊತೆಗೆ, ಬಯಲುಸೀಮೆಯ ಭಾಗದಲ್ಲಿ ನೆಲಸಿರುವ ಅವರ ಭೌಗೋಳಿಕ ನೆಲೆ, ಜನಸಂಖ್ಯೆ, ಸಮುದಾಯದ ಪ್ರಸರಣ ಮತ್ತು ಸಾಂದ್ರತೆಯನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹಟ್ಟಿಯ ಪರಿಕಲ್ಪನೆ, ಹುಟ್ಟು ಮತ್ತು ಬೆಳವಣಿಗೆಯನ್ನು ವಿವರಿಸುವ ಜೊತೆಗೆ ಮ್ಯಾಸಪದದ ನಿಷ್ಪತ್ತಿ ಮ್ಯಾಸನಾಯಕರ ಹಟ್ಟಿಗಳ ಪರಿಚಯ, ಸ್ವರೂಪ ಮತ್ತು ಲಕ್ಷಣಗಳನ್ನು ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಮ್ಯಾಸನಾಯಕರು ಸಾಮಾಜಿಕ ನೆಲೆಯಲ್ಲಿ ಉಳಿಸಿಕೊಂಡು

ಬಂದಿರುವ ವೈಶಿಷ್ಟತೆಗಳಾದ ಹುಟ್ಟು, ನಾಮಕರಣ, ಋತುಮತಿ, ವಿವಾಹ, ಸಾವು, ಕುಟುಂಬ ವ್ಯವಸ್ಥೆ, ವಸತಿ ವ್ಯವಸ್ಥೆ, ಆಡಳಿತಪದ್ಧತಿ(ನ್ಯಾಯಾಂಗ) ಉಡುಗೆ-ತೊಡುಗೆ, ಬಾಲ್ಯವಿವಾಹ, ಮೂಢನಂಬಿಕೆ ಮುಂತಾದ ವಿಷಯಗಳನ್ನು ಕುರಿತು ವಿವರಿಸಲಾಗಿದೆ.

ಅಧ್ಯಾಯ ಐದರಲ್ಲಿ ದೈವಾರಾಧನೆ ಸಾಂಸ್ಕೃತಿಕ ವಿಶೇಷತೆಗಳಾದ ದೇವರಸ್ವರೂಪ, ಸೂರ್ಯನಮಸ್ಕಾರ, ಮೀಸಲುಕಾಸು, ಧಗಮು, ಗಣೆ, ಎತ್ತಿನಗೂಡುಗಳು, ಕಿಲಾರಿಗಳು, ದಾಸಯ್ಯಗಳು ಹಾಕುವುದು, ಅಂಬುವಾಸೆ ಕೊಯ್ಯುವುದು, ಡಿಕ್ಕಿಹಬ್ಬ, ಕಲೆ, ಸಂಗೀತ, ಸಾಹಿತ್ಯ, ಕೋಲಾಟ, ಬಯಲಾಟ, ವೈದ್ಯಪದ್ಧತಿ, ಜಾತ್ರೆ ಉತ್ಸವ, ವಿಧಿ-ನಿಷೇಧ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಮ್ಯಾಸನಾಯಕರು ಶೈಕ್ಷಣಿಕ ಹಾಗೂ ಆರ್ಥಿಕವಾಗಿ ಯಾವ ಸ್ಥಿತಿಯಲ್ಲಿದ್ದಾರೆ. ಅವರ ಅಭಿವೃದ್ಧಿಗೆ ಅಡ್ಡಿಯಾಗಿರುವ ಶಿಕ್ಷಣ ಮತ್ತು ಆರ್ಥಿಕ ಸಂಗತಿಗಳ ಬಗ್ಗೆ ವಿಶ್ಲೇಷಿಸಲಾಗಿದೆ.

ಅಧ್ಯಾಯ ಏಳರಲ್ಲಿ ಮ್ಯಾಸನಾಯಕರ ಹಟ್ಟಿಗಳ ಕಲೆ ಮತ್ತು ವಾಸ್ತುಶಿಲ್ಪವನ್ನು ಕುರಿತದ್ದು. ಈ ಪರಿಸರದಲ್ಲಿ ಸರಳ ರೀತಿಯಲ್ಲಿ ನಿರ್ಮಾಣವಾದ ಕಲೆ ಮತ್ತು ವಾಸ್ತುಶಿಲ್ಪವನ್ನು ಕಾಣಬಹುದು. ಕೆಲವು ಗ್ರಾಮದೇವತೆಗಳಿಗೆ ಗುಡಿಗಳೇ ಇಲ್ಲ. ಕೆಲವಕ್ಕೆ ಮರದ ಬುಡವೇ ಗುಡಿ. ಅದೇ ಹೆಸರಿನಿಂದ ಅವುಗಳ ನಿರ್ದೇಶನ. ಗೌರಸಂದ್ರ ಮಾರಮ್ಮ, ಶೂನ್ಯದ ಮಾರಮ್ಮ, ದುರುಗಮ್ಮ, ಚೌಡಮ್ಮ ಎಂದೇ ಅಂಥ ದೇವತೆಗೆ ಹೆಸರು. ಮಣ್ಣಿನಿಂದ ಕಟ್ಟಿದ ತುಂಡುಗೋಡೆಯ ಮೇಲೆ ಕಲ್ಲು ಚಪ್ಪಡಿ ಮುಗುಚಿರುವುದು. ಬೇಯಿಸಿದ ದೊಡ್ಡ ಬೋಗುಣಿ ಮುಗುಚಿರುವುದು, ಯಾವ ರಕ್ಷಣೆಯೂ ಇಲ್ಲದೆ ಬಯಲಿನಲ್ಲಿರುವುದು, ಮರದ ತಾಳಿನಲ್ಲಿರುವುದು ಕೆಲವು ದೇವತೆಗಳ ಸ್ಥಿತಿ. ಕೆಲವು ದೇವಾಲಯಗಳು ಸಾಧಾರಣವಾಗಿವೆ. ನಾಯಕನಹಟ್ಟಿ, ಕಾಟಪ್ಪನಹಟ್ಟಿ, ನಲಗೇತನಹಟ್ಟಿ, ಬೋರೆದೇವರಹಟ್ಟಿ, ದಿದ್ದಲುಪಲ್ಲಿ, ರಾಯಾಪುರದಮ್ಯಾಸರಹಟ್ಟಿ, ಕೊಮ್ಮನಪಟ್ಟಿ, ಮೇಗಳಹಟ್ಟಿಗಳಲ್ಲಿ ಕೆಲವು ವಿಶಿಷ್ಟ ರಚನೆಯ ದೇವಾಲಯಗಳನ್ನು ಕಾಣಬಹುದು.

ಅಧ್ಯಾಯ ಎಂಟರಲ್ಲಿ ಮ್ಯಾಸನಾಯಕರ ಹಟ್ಟಿಗಳು ಆಧುನಿಕ ಜಗತ್ತಿನೊಂದಿಗೆ ಹೇಗೆ ಮುಖಾಮುಖಿಯಾಗುತ್ತಲಿವೆ ಎಂಬುದನ್ನು ಚರ್ಚಿಸಲಾಗಿದೆ.

ಅಧ್ಯಾಯ ಒಂಬತ್ತರಲ್ಲಿ ತಳೆದ ನಿಲುವುಗಳನ್ನು ಹೇಳುತ್ತಾ ಒಟ್ಟಾರೆಯಾಗಿ ಕಂಡುಕೊಂಡ ಅಧ್ಯಯನದ ಫಲಿತಗಳು ಹಾಗೂ ಇಲ್ಲಿಯವರೆಗೆ ನಡೆದಿರುವ ಅಧ್ಯಯನ ಮಿತಿಗಳನ್ನು ಗುರುತಿಸಲಾಗಿದೆ. ಈ ಅಧ್ಯಯನದಿಂದ ಸಮುದಾಯಕ್ಕೆ ಯಾವ ರೀತಿ ಉಪಯೋಗವಾಗಬಹುದು. ಸಮುದಾಯವನ್ನು ಕುರಿತು ಅಧ್ಯಯನ ಮಾಡುವವರಿಗೆ ಈ ಅಧ್ಯಯನವು ಹೇಗೆ ಮಾದರಿಯಾಗುತ್ತದೆ? ಹಾಗೆಯೇ ಅಧ್ಯಯನವನ್ನು ಮುಂದೆ ಹೇಗೆ ಮಾಡಬಹುದು ಎಂಬುದನ್ನೂ

ಚರ್ಚಿಸಲಾಗಿದೆ. ಸರ್ಕಾರ ಸಮುದಾಯಗಳಿಗೆ ಹಲವಾರು ಯೋಜನೆಗಳನ್ನು ಇಂದು ರೂಪಿಸುತ್ತಿದೆ. ಇಂಥ ಯೋಜನೆಗಳ ಉಪಯೋಗವನ್ನು ಸಮುದಾಯ ಹೇಗೆ ಪಡೆದುಕೊಳ್ಳುತ್ತಿವೆ? ಸಮುದಾಯಕ್ಕೆ ಈ ಯೋಜನೆಗಳು ಯಾವ ಮಟ್ಟದಲ್ಲಿ ತಲುಪುತ್ತಿವೆ? ಇಂಥ ಯೋಜನೆಗಳಿಂದ ಸಮುದಾಯದ ಜೀವನ ಮಟ್ಟ ಹೇಗೆ ಸುಧಾರಣೆಯಾಗಿದೆ ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

**ಟಿಪ್ಪಣಿಗಳು**

೧. ಜಾಜಿ ದೇವೇಂದ್ರಪ್ಪ, ೨೦೦೪, **ಆಂಧ್ರ-ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು,** ಪು.೧೮

೨. ಎಡ್ಗರ್ ಥರಸ್ಟನ್ ಮತ್ತು ಕೆ.ರಂಗಚಾರಿ, ೧೯೮೭, **ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್ ಆಫ್ ಸದರನ್ ಇಂಡಿಯಾ,** ಪು.೧೮೩

೩. ಅನಂತಕೃಷ್ಣ ಅಯ್ಯರ್ ಎಲ್.ಕೆ., ೧೯೮೮, **ಮೈಸೂರು ಕ್ಯಾಸ್ಟ್ ಆ್ಯಂಡ್ ಟ್ರೈಬ್ಸ್,** ವ್ಯಾಲ್ಯೂಂ ೨, ಪು.೧೯೭-೨೩೭

೪. ರಾಜಣ್ಣ ಆರ್. ೧೯೯೨, **ನಾಯಕ ಜನಾಂಗದ ಇತಿಹಾಸ,** ಪು.೨-೩

೫. ಥಂಗ ಡಿ.ಬಿ., ೧೯೮೮, **ಜನಾಂಗ ಪರಿಚಯ,** ಪು.೧೭

೬. ಹಿರೇಮಠ ಎಸ್.ಎಸ್., ೧೯೯೩, **ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ,** ಭಾಗ, ೨, **ಜಾತ್ರೆಗಳು,** ಪು.೧

೭. ಯೋಗೀಶ್ವರಪ್ಪ ಡಿ.ಎನ್., ೨೦೦೯, **ಮಧ್ಯಕಾಲೀನ ಕರ್ನಾಟಕದ ಪಾಳೆಯಗಾರರು,** ಪು.೩೨

೮. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಚಿನ್ನಹಗರಿ ಸಿರಿ,** ಪು.೩೩

ಅಧ್ಯಾಯ ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಏಷ್ಯಾ ಖಂಡದಲ್ಲೇ ಅತಿ ಪ್ರಾಚೀನ ನಿವೇಶನ ಮತ್ತು ಚರಿತ್ರೆ ಹೊಂದಿದ ಜಿಲ್ಲೆ ಚಿತ್ರದುರ್ಗ. ಮಧ್ಯ ಕರ್ನಾಟಕದಲ್ಲಿರುವ ಚಿತ್ರದುರ್ಗ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಕ್ಕೆ ರಾಯಭಾರಿಯಂತಿದೆ. ಆಂಗ್ಲರ ಕಾಲದಲ್ಲಿ ಚಿಟಲ್‌ಡ್ರೂಗ್ ಎಂದು ಹೆಸರಿತ್ತು. ಅದಕ್ಕೂ ಹಿಂದೆ ಸೀಪಳ ಅಥವಾ ಚಿತ್ರಕಲ್ಲುದುರ್ಗ, ಚಿತ್ತರಕಲ್ಲು, ಸಿದ್ದರಕಲ್ಲು, ಚಿತ್ತಮಲೆಗುಡ್ಡ ಎಂದು ಕರೆಯುತ್ತಿದ್ದರು. ಮಧ್ಯಕಾಲದಲ್ಲಿ ಸೊಳ್ಗಲ್ಲು, ಸೂಳನಕಲ್ಲು, ಬೊಮ್ಮತ್ತನಕಲ್ಲು ಬೆಮ್ಮತ್ತನೂರು ಅಥವಾ ಬೆಮ್ಮತ್ತೂರು ಎಂದು ಕರೆಯುತ್ತಿದ್ದುದರ ಬಗ್ಗೆ ಉಲ್ಲೇಖಗಳಿವೆ.[೧]

ಈ ಜಿಲ್ಲೆಯ ಮೇರೆಗಳೆಂದರೆ ಉತ್ತರಕ್ಕೆ ಬಳ್ಳಾರಿ, ಪೂರ್ವಕ್ಕೆ ಅನಂತಪುರ(ಆಂಧ್ರಪ್ರದೇಶ) ಆಗ್ನೇಯ ದಿಕ್ಕಿಗೆ ತುಮಕೂರು, ಪಶ್ಚಿಮಕ್ಕೆ ದಾವಣಗೆರೆ, ವಾಯವ್ಯಕ್ಕೆ ಹಾವೇರಿ ಮತ್ತು ನೈಋತ್ಯಕ್ಕೆ ಚಿಕ್ಕಮಗಳೂರು ಜಿಲ್ಲೆಗಳಿಂದ ಸುತ್ತುವರೆದಿದೆ. ಮೊದಲು ಚಿತ್ರದುರ್ಗ ಜಿಲ್ಲೆಯಲ್ಲಿ ೯ ತಾಲೂಕುಗಳಿದ್ದವು. ದಾವಣಗೆರೆ ನೂತನ ಜಿಲ್ಲೆಯಾದ ತರುವಾಯ ದಾವಣಗೆರೆ, ಹರಿಹರ ಮತ್ತು ಜಗಳೂರು ತಾಲೂಕುಗಳು ಈ ಜಿಲ್ಲೆಗೆ ಸೇರ್ಪಡೆಯಾದವು. ಉಳಿದಂತೆ ಚಳ್ಳಕೆರೆ, ಹೊಳಲ್ಕೆರೆ, ಹೊಸದುರ್ಗ, ಹಿರಿಯೂರು ಚಿತ್ರದುರ್ಗ ಮತ್ತು ಮೊಳಕಾಲ್ಮೂರುಗಳು ಮಾತ್ರ ಚಿತ್ರದುರ್ಗ ಜಿಲ್ಲೆಯಲ್ಲಿವೆ.

ಚಿತ್ರದುರ್ಗ ಜಿಲ್ಲೆ ೧೩°.೩೪ ಮತ್ತು ೧೫°.೨೦ರ ಅಕ್ಷಾಂಶ ಮತ್ತು ೭೫°.೩೭ ಮತ್ತು ೭೭°.೦೧ ರೇಖಾಂಶದಲ್ಲಿದೆ. ಜಿಲ್ಲೆಯ ವಿಸ್ತೀರ್ಣ ೧೦.೮೫೨ ಚ.ಕಿ.ಮೀ ಇದ್ದು, ಉತ್ತರ-ದಕ್ಷಿಣವಾಗಿ ೮೮ ಮೈಲಿ, ಪೂರ್ವ-ಪಶ್ಚಿಮವಾಗಿ ಸು.೧೦೦ ಮೈಲಿದೆ.[೨] ವಿಸ್ತಾರದಲ್ಲಿ ರಾಜ್ಯದ

ಜಿಲ್ಲೆಗಳಲ್ಲಿ ೭ನೇ ಸ್ಥಾನ ಪಡೆದಿತ್ತು. ಈಗ ಬದಲಾಗಿದೆ. ಈ ಜಿಲ್ಲೆ ದಖನ್ ಪ್ರಸ್ಥಭೂಮಿ ಭಾಗವಾಗಿದ್ದು, ರಾಜ್ಯದಲ್ಲಿ ಕಡಿಮೆ ಮಳೆ ಬೀಳುವಲ್ಲಿ ಇದು ಎರಡನೆ ಸ್ಥಾನದಲ್ಲಿದೆ. ವಾರ್ಷಿಕ ಮಳೆ ೬೫೫ ಮಿ.ಮೀ. ಇದೆ. ಆಗಾಗ ಈ ಜಿಲ್ಲೆ ಅನಾವೃಷ್ಟಿಗೆ ಒಳಗಾಗಿ ಬರಗಾಲ ವನ್ನು ಅನುಭವಿಸುತ್ತದೆ.

ಚಿತ್ರದುರ್ಗ ಪ್ರದೇಶವೆಂದರೆ ಬೆಟ್ಟ-ಗುಡ್ಡ, ಕೋಟೆಗಳು ಗೋಚರಿಸುವುದು ಸಹಜ. ಸ್ಥಳೀಯವಾಗಿ ಅವುಗಳನ್ನು ನಾನಾ ಹೆಸರುಗಳಿಂದ ಕರೆದುಕೊಂಡಿದ್ದಾರೆ. ಅವುಗಳಲ್ಲಿ ಮೊಳಕಾಲ್ಮೂರು ತಾಲೂಕಿನ ಜಟಿಂಗರಾಮೇಶ್ವರಬೆಟ್ಟ(೩೪೬೯ ಅಡಿ), ಬ್ರಹ್ಮಗಿರಿ(೨೩೧೭), ನುಂಕಪ್ಪನಗುಡ್ಡ(೩೦೨೨), ಜೋಗಪ್ಪನಗುಡ್ಡ(೨೯೩೯), ಹೊಳಲ್ಕೆರೆ ತಾಲೂಕಿನ ದೊಡ್ಡಹಟ್ಟಿ, ರಂಗಪ್ಪನ ಗುಡ್ಡ, ವಡ್ಡರಗುಡ್ಡ, ಹೊಸದುರ್ಗ ತಾಲೂಕಿನ ನೀರುಗುಡ್ಡ, ಕೊಟಕಲ್‌ಗುಡ್ಡ, ತಿರುಮಲದೇವರ ಗುಡ್ಡ, ಹಾಲುರಾಮೇಶ್ವರ, ಹಿರಿಯೂರು ತಾಲೂಕಿನ ಉತ್ತರ ಸರಣಿಬೆಟ್ಟ, ಹಿಂದಸಕಟ್ಟೆ ಮತ್ತು ಚಿತ್ರದುರ್ಗ ತಾಲೂಕಿನ ಜೋಗಿಮಟ್ಟಿ(೩೮೦೩), ಧವಳಪ್ಪನಗುಡ್ಡ(೩೨೮೫), ಭೀರನಕಲ್ಲುಗುಡ್ಡ(೩೮೬೩), ಈಚಲುಗುಡ್ಡ(೩೮೦೪), ಓಬಳದೇವರಗುಡ್ಡ ಮುಂತಾದವುಗಳು ಕಂಡುಬರುತ್ತವೆ.[೩]

ಜಲಸಂಪತ್ತಿನಲ್ಲಿ ಈ ಜಿಲ್ಲೆ ಮಹತ್ತರವಾದ ಸ್ಥಾನವೇನೂ ಪಡೆದಿಲ್ಲ. ವೇದಾವತಿ ಚಿನ್ನಹಗರಿ(ಜನಿಗೆಹಳ್ಳ), ಸುವರ್ಣಮುಖಿ ಮುಂತಾದ ನದಿಗಳು ಹರಿದು ನೀರಾವರಿ ಸೌಲಭ್ಯವನ್ನು ಅಲ್ಪವಾಗಿ ಕಲ್ಪಿಸಿವೆ. ಈ ಜಿಲ್ಲೆಯಲ್ಲಿ ವೇದಾವತಿ ನದಿ ೨೦೮ ಕಿ.ಮೀ. ಜನಗಿಹಳ್ಳ(೧೨೮ ಕಿ.ಮೀ), ಸುವರ್ಣಮುಖಿಹಳ್ಳ ೧೧ ಕಿ.ಮೀ, ಹರಿದು ೨೦೨೦ ಎಕರೆಗೆ ನೀರೊದಗಿಸುತ್ತದೆ. ಭದ್ರಾ ಜಲಾಶಯದಿಂದ ೪೭.೪೬೦ ಎಕರೆ ವಾಣಿವಿಲಾಸದಿಂದ ೧೦.೦೦೦ ಹೆಕ್ಟೇರು ಗಾಯಿತ್ರಿ ಜಲಾಶಯದಿಂದ ೯೨೮ ಹೆಕ್ಟೇರು, ರಂಗಯ್ಯನದುರ್ಗ ಜಲಾಶಯದಿಂದ ಸು.೧.೦೦೦ ಎಕರೆಗೆ ನೀರಾವರಿ ಸೌಲಭ್ಯವಾಗಿದೆ. ಚಂದ್ರವಳ್ಳಿ, ರಾಣಿಕೆರೆ, ನಾಯಕನಹಟ್ಟಿ, ಭರಮಸಾಗರ, ಗೌರಸಮುದ್ರ, ನಾಗಸಮುದ್ರ, ಗೋನೂರು, ಪರಶುರಾಂಪುರ, ಬುಕ್ಕುಂಬುದಿ ಮುಂತಾದ ಪ್ರಾಚೀನ ಕೆರೆಗಳಿಂದಲೂ ನೀರಾವರಿಯಾಗುತ್ತದೆ.

ಈ ಜಿಲ್ಲೆಯ ಪ್ರಮುಖ ನದಿ ವೇದಾವತಿ. ವೇದ ಮತ್ತು ಆವತಿ ಎಂಬ ಹೊಳೆಗಳೂ ಸೇರಿ ವೇದಾವತಿ ನದಿಯಾಗಿ ಹರಿಯುತ್ತದೆ. ಹೊಸದುರ್ಗದ ಮೂಲಕ ಮತ್ತೋಡು ಸಮೀಪದಿಂದ ಹರಿದುಬಂದು ಬ್ರಹ್ಮಗಿರಿದುರ್ಗದಿಂದ ವಾಣಿವಿಲಾಸ ಸಾಗರ ಸೇರುತ್ತದೆ. ನಂತರ ಹಿರಿಯೂರು ತಾಲೂಕಿನಿಂದ ಚಳ್ಳಕೆರೆ ತಾಲೂಕನ್ನು ಪ್ರವೇಶಿಸಿ ಘಟಪರ್ತಿಯಿಂದ ಆಂಧ್ರಕ್ಕೆ ಹರಿದು, ತರುವಾಯ ಚಿನ್ನಹಗರಿನದಿಯನ್ನು ಕೂಡುವುದು.

ಜನ್ನಿಗೆಹಳ್ಳ ಅಥವಾ ಚಿನ್ನಹಗರಿನದಿ ಈ ಭಾಗದ ಜನರಿಗೆ ಪವಿತ್ರವಾದುದು. ಈ ನದಿ ಆಧ್ಯಾತ್ಮಿಕವಾಗಿಯೂ ಸಾಂಸ್ಕೃತಿಕವಾಗಿಯೂ ಬೇಡರಿಗೆ ಆವಾಸದ ನೆಲೆಯಾಗಿದೆ. ಗಂಗೆಪೂಜೆ,

ಹಬ್ಬ, ಜಾತ್ರೆಗಳಲ್ಲದೆ ವಾಸಿಸುವ ಮನೆಗೆ ಆಪು ಕೊಯ್ಯಲು, ಮೀನು ಹಿಡಿಯಲು, ಕುರಿ ಮೇಕೆಗಳನ್ನು ಮೇಯಿಸಲು ಮತ್ತು ಮಡುವಿನಲ್ಲಿ ಸ್ನಾನ ಮಾಡಿಸಲು ನೆರವಾಗಿದೆ. ಈ ನದಿ ಚಿತ್ರದುರ್ಗ ಸಮೀಪದ ಬೆಟ್ಟಗಳಲ್ಲಿ ಹುಟ್ಟಿ ಹೊಳಲ್ಕೆರೆ, ಚಿತ್ರದುರ್ಗ, ಕೂಡ್ಲಿಗಿ ಮತ್ತು ಜಗಳೂರು ತಾಲೂಕಿನಲ್ಲಿ ಹರಿದು ಮುಂದೆ ಇದಕ್ಕೆ ಮೊಳಕಾಲ್ಮುರು ಸಮೀಪ ರಂಗಯ್ಯನದುರ್ಗ ಜಲಾಶಯವನ್ನು ನಿರ್ಮಿಸಿದ್ದಾರೆ. ಭಟ್ಟರಹಳ್ಳಿ, ದೇವಸಮುದ್ರ ಕೆರೆಗಳ ನೀರು ಬಂದು ಈ ನದಿಯನ್ನು ಸೇರುತ್ತವೆ. ಇದು ಮುಂದೆ ಮೊಳಕಾಲ್ಮುರು ಗಡಿ ಮಾಚೇನಹಳ್ಳಿ ಮೂಲಕ ರಾಯದುರ್ಗ ತಾಲೂಕನ್ನು ಪ್ರವೇಶಿಸಿ ವೇದಾವತಿ ನದಿಗೆ ಸೇರಿ ಕೊನೆಗೆ ಸಿರುಗುಪ್ಪ ಬಳಿ ತುಂಗಭದ್ರಾ ನದಿಯನ್ನು ಸೇರುತ್ತದೆ.

ಸುವರ್ಣಮುಖಿ ಇಲ್ಲಿನ ಪ್ರಮುಖ ಹೊಳೆ. ಇದರ ಮೂಲ ತುಮಕೂರು ಜಿಲ್ಲೆ. ಚಿತ್ರದುರ್ಗ ಜಿಲ್ಲೆಯಲ್ಲಿ ಸುಮಾರು ೭ ಕಿ.ಮೀ. ಹರಿಯುತ್ತಿದೆ. ಹಿರಿಯೂರು ತಾಲೂಕು ಇಕ್ಕನೂರಿನ ಬಳಿ ಈ ನದಿಯನ್ನು ಸೇರುತ್ತದೆ. ಚಳ್ಳಕೆರೆ ತಾಲೂಕಿನ ರಾಣಿಕೆರೆಗೆ ಫೀಡರ್ ನಾಲೆ, ಹಿರಿಯೂರು ಧರ್ಮಪುರ ಫೀಡರ್ ನಾಲೆಗಳಿಂದ ನೀರಾವರಿ ಕೃಷಿ ನಡೆಯುತ್ತದೆ. ಇಲ್ಲಿ ಇನ್ನೂ ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದು ಸೂಕ್ತ.

ಈ ಜಿಲ್ಲೆಯ ೩೭೦ ಕಿ.ಚ. ಮೈಲಿಗಳ ವ್ಯಾಪ್ತಿಯಲ್ಲಿ ರಕ್ಷಿತ ಅರಣ್ಯ ಪ್ರದೇಶಗಳಿವೆ. ಹೆಚ್ಚು ಭಾಗ ಕಣಶಿಲೆಯ ಬೋಳು ಬೆಟ್ಟಗಳಿಂದ ಕೂಡಿದ್ದು, ಅಲ್ಲಲ್ಲೇ ಕಣಿವೆಗಳಿಂದ ಕೂಡಿದೆ. ಬೆಟ್ಟದ ಸಾಲು ದಕ್ಷಿಣ ಆಗ್ನೇಯದಿಂದ ಉತ್ತರ ವಾಯವ್ಯದ ಕಡೆಗೆ ಸಮಾನಾಂತರದಲ್ಲಿ ಸಾಗಿವೆ. ಪೂರ್ವದ ಸಾಲು ಹಿರಿಯೂರಿನ ಪಶ್ಚಿಮದಿಂದ ಕಂಡುಬರುತ್ತದೆ.

ಇಲ್ಲಿ ಅರಣ್ಯ ಪ್ರದೇಶ ವ್ಯಾಪಕವಾಗಿದೆ. ಮುತ್ತಿಗಾರಹಳ್ಳಿ ಕಾಯ್ದಿಟ್ಟ ಅರಣ್ಯದಲ್ಲಿ ಸು.೧೨ ಮೈಲು ಉದ್ದ ರಸ್ತೆ ಹಾದು ಹೋಗುತ್ತದೆ. ಇಂತಹ ಬೃಹತ್ ಅರಣ್ಯಗಳು ಕಡಿಮೆಯಿದ್ದು, ಈ ಪ್ರದೇಶದಲ್ಲಿ ಇದು ಸುಂದರವನ, ತೋಪು, ನದಿ, ಹಳ್ಳ-ಕೊಳ್ಳಗಳಿಂದ ಫಲವತ್ತಾದ ಮಣ್ಣಿಲ್ಲದ್ದರಿಂದ ನಿರೀಕ್ಷಿತ ಬೆಳೆ ಪಡೆಯುವುದು ಕಷ್ಟ. ಇಲ್ಲಿನ ಸಸ್ಯಕ್ಷೇತ್ರಕ್ಕೆ ಇಂದಿರಾ ಪ್ರಿಯದರ್ಶಿನಿ ಪ್ರಶಸ್ತಿ ಲಭಿಸಿದೆ. ಮ್ಯಾಸಬೇಡರ ಮೂಲವನ್ನು ಈ ಅರಣ್ಯವೆ ಆಗಿದೆ ಎಂದು ಗುರುತಿಸುತ್ತಾರೆ.

ಈ ಜಿಲ್ಲೆಯಲ್ಲಿ ಶಿಲಾಯುಗ, ಆದಿ ಶಿಲಾಯುಗ, ಮಧ್ಯಶಿಲಾಯುಗ ಮತ್ತು ನವಶಿಲಾಯುಗ, ಬೃಹತ್ ಶಿಲಾಯುಗ ಸಂಸ್ಕೃತಿ ಮುಂತಾದ ನೆಲೆಗಳನ್ನು ಶೋಧನೆ ಮಾಡಿದ್ದಾರೆ. ಇಲ್ಲಿನ ನಾಗರಿಕತೆಯನ್ನು ಸಿಂಧೂ, ಕ್ರೀಟ್ ಮತ್ತು ಸುಮರ್‌ಗೆ ಹೋಲಿಸಿದ್ದಾರೆ. ಕ್ರಿ.ಪೂ. ೩ರಲ್ಲಿರುವಂತೆ ಸ್ಥಳೀಯರು ರೊಪ್ಪ ಸಂಸ್ಕೃತಿಯನ್ನು ಹೊಂದಿದ್ದರು. ಇವರ ಕಾಲಮಾನ ಕ್ರಿ.ಪೂ. ೮೦೦೦ರಿಂದ ೬೦೦೦ ಎನ್ನಲಾಗಿದೆ.

## ಜಲಸಂಪತ್ತು

ವೇದಾವತಿ, ಚಿನ್ನಹಗರಿ, ಸುವರ್ಣಮುಖಿ ನದಿಗಳು ನೀರು ಸಂಪರ್ಕ ಕಲ್ಪಿಸಿರುವ ಮುಖ್ಯವಾದ ನದಿಗಳಾಗಿವೆ. ವೇದಾವತಿ ನದಿಗೆ ಹೊಸದುರ್ಗ, ಹಿರಿಯೂರು ತಾಲೂಕುಗಳ ಗಡಿಯಲ್ಲಿ ಅಣೆಕಟ್ಟನ್ನು ನಿರ್ಮಿಸಲಾಗಿದೆ. ಇದನ್ನು ಮಾರಿಕಣಿವೆ ಜಲಾಶಯ ಎಂದೇ ಕರೆಯುತ್ತಾರೆ. ಪ್ರಸ್ತುತ ಅಣೆಕಟ್ಟಿನ ಉದ್ದ ೧೩೩೦ ಅಡಿಗಳು, ಎತ್ತರ ೧೬೨ ಅಡಿಗಳಿದ್ದು, ೨೧೬೪೫ ಎಕರೆ ಪ್ರದೇಶಕ್ಕೆ ನೀರುಣಿಸುತ್ತದೆ. ೧೮೯೮ರಲ್ಲಿ ಕೃಷ್ಣರಾಜ ಒಡೆಯರಿಂದ ಪ್ರಾರಂಭವಾದ ಈ ಅಣೆಕಟ್ಟು ೧೯೦೭ರಲ್ಲಿ ಮುಕ್ತಾಯವಾಯಿತು. ಇದು ಸ್ವಾತಂತ್ರ್ಯಪೂರ್ವ ಭಾರತದ ಮೊಟ್ಟ ಮೊದಲನೆಯ ಕೃತಕ ಸರೋವರವೆಂಬ ಕೀರ್ತಿಗೂ ಭಾಜನವಾಗಿದೆ. ಇದು ರಾಜ್ಯದ ನೀರಾವರಿ ಯೋಜನೆಗಳಲ್ಲಿ ಅತ್ಯಂತ ಹಳೆಯದು.[೪] ಉಳಿದಂತೆ ಜನಗಿಹಳ್ಳ, ಚಿನ್ನಹಗರಿ ಚಿಕ್ಕಹಗರಿ, ಹನೆಯತೊರೆ ಎಂದು ಕರೆಯಿಸಿಕೊಳ್ಳುವ ಬಡನದಿ, ಚಿತ್ರದುರ್ಗ, ಜಗಳೂರು ಮತ್ತು ಮೊಳಕಾಲ್ಮುರು ತಾಲೂಕುಗಳಲ್ಲಿ ಹರಿದು ವೇದಾವತಿಗೆ ಸೇರುತ್ತದೆ. ಸುವರ್ಣಮುಖಿ ನದಿಯು ಜಿಲ್ಲೆಯಲ್ಲಿ ಸುಮಾರು ೭ ಕಿ.ಮೀ. ಹರಿದು ಹಿರಿಯೂರು ತಾಲೂಕು ಇಕ್ಕನೂರಿನ ಬಳಿ ವೇದಾವತಿ ನದಿಗೆ ಸೇರುತ್ತದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಪ್ರಾಚೀನ ಕೆರೆಗಳು, ಹಳ್ಳಗಳಿದ್ದು ಇವುಗಳ ನೀರನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲಾಗಿದೆ.

## ಭೂ ಇತಿಹಾಸ ಮತ್ತು ಖನಿಜ ಸಂಪತ್ತು

ಪ್ರಪಂಚದಲ್ಲಿಯೇ ಚಿತ್ರದುರ್ಗ ಶಿಲಾಪದರ ವಲಯವು ಪ್ರಸಿದ್ಧಿ ಹೊಂದಿದೆ. ಮರಡಿಹಳ್ಳಿಯ ದಿಂಬುರಚನೆ ಶಿಲಾಪದರಗಳು(ಪಿಲ್ಲೋಲಾವಸ್) ಸುಮಾರು ೨೭೦ ಕೋಟಿ ವರ್ಷಗಳಿಗಿಂತ ಹಿಂದೆ ಸಮುದ್ರದ ತಳಭಾಗವಾಗಿತ್ತೆಂದು ಭೂವಿಜ್ಞಾನಿಗಳಾದ ಬ್ರೂಸ್‌ಫೂಟ್(೧೮೭೬), ಪಿಚಿ ಮುತ್ತು(೧೯೩೮), ರಸ್ಸೆಲ್(೧೯೫೪) ಮುಂತಾದವರು ಅಭಿಪ್ರಾಯಪಟ್ಟಿದ್ದಾರೆ. ಇವರು ಚಿತ್ರದುರ್ಗದ ಪದರ ಶಿಲೆಗಳನ್ನು "ಕಿರಿಯ ಹಸಿರುಕಲ್ಲು ವಲಯ" ಎಂದು ಗುರುತಿಸಿದ್ದಾರೆ. ಈ ವಲಯದಲ್ಲಿ ಒರಟು ಕಣಶಿಲೆ(ಗ್ರಾನೈಟ್), ಡಯೋರೈಟ್, ಡಾಲೋರೈಟ್ ಮುಂತಾದ ಶಿಲೆಗಳಿದ್ದವು.[೫] ಇಂದು ಈ ಸ್ಥಳವನ್ನು ರಾಷ್ಟ್ರೀಯ ಶಿಲಾ ಉದ್ಯಾನದ ಸ್ಮಾರಕವನ್ನಾಗಿ ಸಂರಕ್ಷಿಸಿದ್ದಾರೆ.[೬]

ಚಿತ್ರದುರ್ಗ ಜಿಲ್ಲೆಯು ಭಾರತದ ಖನಿಜ ಭೂಪಟದಲ್ಲಿ ತಾಮ್ರದ ನಿಕ್ಷೇಪಗಳಿಂದಾಗಿ ತನ್ನದೇ ಆದ ಸ್ಥಾನವನ್ನು ದೊರಕಿಸಿಕೊಂಡಿದೆ. ಕರ್ನಾಟಕದ ಅತಿ ಪ್ರಾಚೀನ ತಾಮ್ರಗಣಿ ಚಿತ್ರದುರ್ಗ ಸಮೀಪದ ಇಂಗಳದಾಳುವಿನಲ್ಲಿದೆ.[೭] ೧೯೭೪ರಲ್ಲಿ ತಾಮ್ರದ ಅದಿರು ಸಂಸ್ಕರಣದ ಕಾರ್ಯಾಗಾರವನ್ನು ಸ್ಥಾಪಿಸಲಾಗಿದೆ. ಈ ಪರಿಸರದಲ್ಲಿ ಸೀಸ ಮತ್ತು ತಾಮ್ರದ ಅದಿರುಗಳನ್ನು ತೆಗೆಯಲಾಗುತ್ತಿದೆ. ಚಾಲ್ಕೊಪೈರೇಟ್ ಎಂಬ ತಾಮ್ರ ಹಾಗೂ ಗಂಧಕ, ಸಲ್ಫೈಟ್ ಮತ್ತು ಗೆಲನಾ ಎಂಬ ಸತುಗಳು ಶಿಲಾಗರ್ಭದಲ್ಲಿವೆ. ಹೀಗೆ ಪುರಾತನ ಗಣಿ ಉದ್ಯಮದಿಂದ ಈ ಪ್ರದೇಶ ಬೆಳ್ಳಿಗುಡ್ಡ ಎಂಬ ಆಕರ್ಷಣೀಯ ಹೆಸರಿನಿಂದ ಕರೆಸಿಕೊಳ್ಳಲಾರಂಭಿಸಿತು.[೮]

ಚಿತ್ರದುರ್ಗ ಜಿಲ್ಲೆ ಸಲ್ಫೈಡ್ ಲೋಹ, ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು, ಸುಣ್ಣಶಿಲೆ, ಕಯನೈಟ್, ಹಾಸುಗಲ್ಲು, ಸಿಲಿಕಾದಿಂದ ಕೂಡಿದ ಬಾಕ್ಸೈಟ್, ಕಾವಿಮಣ್ಣು ಮುಂತಾದ ಖನಿಜಗಳಿಗೆ ಹೆಸರಾಗಿದೆ. ಜಿಲ್ಲೆಯಾದ್ಯಂತ ಗ್ರಾನೈಟ್ ಹೆಚ್ಚಾಗಿ ಹರಡಿದೆ. ಚಳ್ಳಕೆರೆ ಮತ್ತು ಮೊಳಕಾಲ್ಮುರು ತಾಲೂಕುಗಳಲ್ಲಿ ಚದುರಿದಂತೆ ಕಣಶಿಲೆಯ ಬೆಟ್ಟಗಳಿವೆ. ಚಿತ್ರದುರ್ಗ ತಾಲೂಕಿನ ಜವಗೊಂಡನಹಳ್ಳಿ, ಆನೆಸಿದ್ರಿ, ದಿಂಡಾವರ ಹಾಗೂ ಇತ್ತೀಚೆಗೆ ಗುಡ್ಡದರಂಗವ್ವನಳ್ಳಿ, ಲಕ್ಕಿಹಳ್ಳಿ(ಹೊಸದುರ್ಗ) ಕ್ಯಾಸಾಪುರ, ಭೀಮಸಮುದ್ರ ಮುಂತಾದೆಡೆ ಚಿನ್ನದ ನಿಕ್ಷೇಪಗಳು ಕಂಡುಬಂದಿವೆ.[೯]

## ಅರಣ್ಯ ಹಾಗೂ ಪ್ರಾಣಿಸಂಪತ್ತು

ಅರಣ್ಯ ಸಂಪತ್ತಿನಲ್ಲಿ ಜಿಲ್ಲೆಯು ಬೇರೆ ಬೇರೆ ಜಿಲ್ಲೆಗಳಿಗಿಂತ ಹಿಂದುಳಿದಿದೆ. ಕಾರಣ ಜಿಲ್ಲೆಯಲ್ಲಿ ಮಳೆಯ ಪ್ರಮಾಣ ತುಂಬಾ ಕಡಿಮೆಯಿದೆ. ಹಾಗಾಗಿ ಜಿಲ್ಲೆಯನ್ನು ಬಯಲು ಸೀಮೆಯಾಗಿ ಗುರುತಿಸಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೭೩೭೯ ಹೆಕ್ಟೇರ್ ಅರಣ್ಯ ಪ್ರದೇಶವಿದೆ.[೧೦] ಇದರಲ್ಲಿ ಹೆಚ್ಚಾಗಿ ಕುರುಚಲು ಗಿಡಗಳಿದ್ದು, ಮೂರನೆಯ ಒಂದು ಭಾಗವು ಜಾಲಿಗಿಡಗಳಿಂದ ಕೂಡಿದೆ. ಉಳಿದಂತೆ ಅಲ್ಲಲ್ಲಿ ಹುಣಸೆ, ಕರಿಜಾಲಿ, ಸೀತಾಫಲ, ಬೇವು ಮುಂತಾದ ಮರಗಳು ಕಂಡುಬರುತ್ತವೆ. ಬೆಟ್ಟಗುಡ್ಡಗಳಲ್ಲಿ ಚಿರತೆ, ಕರಡಿ, ಕಾಡುಹಂದಿ, ಕತ್ತೆಕಿರುಬ, ಜಿಂಕೆ, ಉರುಗಾ, ನೀರುಕೋಳಿ, ನವಿಲು ಮುಂತಾದ ಪ್ರಾಣಿಗಳನ್ನು ಕಾಣಬಹುದು. ಇವುಗಳಲ್ಲದೆ ಜಿಲ್ಲೆಯಲ್ಲಿ ಪಶುಪಾಲನೆ ಹೆಚ್ಚಾಗಿ ಕಂಡುಬಂದಿದೆ.[೧೧]

## ಭೂಗುಣ ಮತ್ತು ವಾಯುಗುಣ

ಹವಾಮಾನವು ಏರಿಳಿತಗಳಿಂದ ಕೂಡಿದ್ದು, ಬಿಸಿಲಿನ ತಾಪ ಏಪ್ರಿಲ್ ತಿಂಗಳಿನಲ್ಲಿ ಅತಿ ಹೆಚ್ಚು ಉಷ್ಣಾಂಶವನ್ನು ಹೊಂದಿರುತ್ತದೆ. ಸಾಮಾನ್ಯ ಉಷ್ಣಾಂಶ ೪೧° ಸೆಂಟಿಗ್ರೇಡ್‌ವರೆಗೆ ಇರುತ್ತದೆ. ನವೆಂಬರ್, ಡಿಸೆಂಬರ್ ತಿಂಗಳುಗಳು ಅತಿ ಹೆಚ್ಚು ತಂಪಾದ ತಿಂಗಳಾಗಿರುತ್ತವೆ. ಈ ತಿಂಗಳುಗಳಲ್ಲಿ ಕನಿಷ್ಠ ಉಷ್ಣಾಂಶವು ೧೬.೬ ರಷ್ಟಿರುತ್ತದೆ. ವರ್ಷಕ್ಕೆ ಸರಾಸರಿ ಸುಮಾರು ೨೧.೯೪ ಅಂಗುಲ ಮಳೆಯಾಗುತ್ತಿದ್ದು, ಇತ್ತೀಚೆಗೆ ಅದು ತುಂಬಾ ಕಡಿಮೆಯಾಗಿದೆ. ಜಿಲ್ಲೆಯ ದಕ್ಷಿಣದಲ್ಲಿ ಕೆಂಪು ಉತ್ತರದಲ್ಲಿ ಕಪ್ಪುಮಣ್ಣಿನಿಂದ ಕೂಡಿದ ಭೂಮಿ ಹೆಚ್ಚಾಗಿದ್ದು ಜಿಲ್ಲೆಯ ಮಧ್ಯಭಾಗದಲ್ಲಿ ಉತ್ತರ ದಿಕ್ಕಿನಿಂದ ದಕ್ಷಿಣ ದಿಕ್ಕಿನವರೆಗೆ ಭೂಪ್ರದೇಶವು ಉಳಿದ ಪ್ರದೇಶಗಳಿಗಿಂತ ಫಲವತ್ತಾಗಿದ್ದು ವ್ಯವಸಾಯಕ್ಕೆ ಯೋಗ್ಯವಾಗಿದೆ.[೧೨]

## ಬಳ್ಳಾರಿ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

ಇಂದಿನ ಕರ್ನಾಟಕ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿಯೂ ಒಂದು. ಈ ಜಿಲ್ಲೆ ಪ್ರಾಕೃತಿಕ ಸಂಪನ್ಮೂಲಗಳಾದ ಖನಿಜ ನಿಕ್ಷೇಪ, ಗಣಿಗಾರಿಕೆಯಿಂದ ವಿಶ್ವಪ್ರಸಿದ್ಧಿ ಪಡೆದಿದೆ. ಈ

ಜಿಲ್ಲೆ ರಾಜ್ಯದ ಮಧ್ಯಭಾಗದಿಂದ ಪೂರ್ವಕ್ಕಿದೆ. ದಕ್ಷಿಣಕ್ಕೆ ಮೈಸೂರು ರಾಜ್ಯಕ್ಕೆ(ಕರ್ನಾಟಕ) ಸೇರಿದ ಚಿತ್ರದುರ್ಗ, ಉತ್ತರಕ್ಕೆ ಕೊಪ್ಪಳ ಮತ್ತು (ತುಂಗಭದ್ರಾ ಗಡಿ) ರಾಯಚೂರು, ಪಶ್ಚಿಮಕ್ಕೆ ಧಾರವಾಡ(ಮುಂಬಯಿ ಪ್ರಾಂತ್ಯ) ಮತ್ತು ಪೂರ್ವಕ್ಕೆ ಆಂಧ್ರಪ್ರದೇಶದ ಕರ್ನೂಲು, ಅನಂತಪುರ ಜಿಲ್ಲೆ ಈ ಜಿಲ್ಲೆಯ ಮೇರೆಗಳಾಗಿವೆ. ಪ್ರಸ್ತುತ ಜಿಲ್ಲೆಯ ವಿಸ್ತೀರ್ಣ ಪೂರ್ವ ಪಶ್ಚಿಮವಾಗಿ ೧೬೧ ಕಿ.ಮೀ. ಉದ್ದವಾಗಿ, ಉತ್ತರ ದಕ್ಷಿಣವಾಗಿ ೮೩.೭ ಕಿ.ಮೀ. ಅಗಲವನ್ನು, ನೈಋತ್ಯ ಮತ್ತು ಈಶಾನ್ಯದಿಂದ ನೋಡಿದಾಗ ಇದರ ಉದ್ದ ೧೮೭ ಕಿ.ಮೀ. ಹೊಂದಿದೆ. ಜಿಲ್ಲೆಯ ಉತ್ತರ ಅಕ್ಷಾಂಶ ೩೦-೧೪-೧೫-೫೦ ಮತ್ತು ರೇಖಾಂಶ ೭೫-೪೦-೭೭-೧೧ ನಡುವೆ ಇದ್ದು, ಒಟ್ಟು ಜಿಲ್ಲೆಯ ವಿಸ್ತೀರ್ಣ ೯೮೯೮ ಚದರ ಕಿಲೋಮೀಟರ್‌ಗಳು.

ಈ ಜಿಲ್ಲೆಯಲ್ಲಿ ಆಡಳಿತದ ಅನುಕೂಲಕ್ಕಾಗಿ ಸ್ವಾತಂತ್ರ್ಯ ನಂತರ ಎರಡು ಭಾಗಗಳಾಗಿ ಮತ್ತು ೮ ತಾಲೂಕುಗಳಾಗಿ ವಿಭಾಗಿಸಿದ್ದಾರೆ. ಒಂದು ಬಳ್ಳಾರಿ ವಿಭಾಗ, ಮತ್ತೊಂದು ಹೊಸಪೇಟೆ ಉಪವಿಭಾಗ, ಬಳ್ಳಾರಿ ವಿಭಾಗದಲ್ಲಿ ಸೊಂಡೂರು, ಸಿರುಗುಪ್ಪ ಸೇರಿದ್ದು, ಕೂಡ್ಲಿಗಿ, ಹರಪನಹಳ್ಳಿ, ಹೂವಿನಹಡಗಲಿ ಮತ್ತು ಹಗರಿಬೊಮ್ಮನಹಳ್ಳಿ ತಾಲ್ಲೂಕುಗಳು ಹೊಸಪೇಟೆ ಉಪವಿಭಾಗಕ್ಕೆ ಬರುತ್ತವೆ. ಹೊಸ ಜಿಲ್ಲೆಗಳಾದಾಗ ಹರಪನಹಳ್ಳಿ ತಾಲ್ಲೂಕು ನೂತನ ದಾವಣಗೆರೆ ಜಿಲ್ಲೆಗೆ ಸೇರಿಹೋಯಿತು. ಜಿಲ್ಲೆಯಲ್ಲಿ ಸುಮಾರು ೨೦೦ ಗ್ರಾಮ, ೩೫ ಫಿರ್ಕಾಗಳಿದ್ದು, ಪ್ರಸ್ತುತ ಸಂದರ್ಭದಲ್ಲಿ ೧೨ ಲಕ್ಷಕ್ಕೂ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ. ಅತೀ ಹೆಚ್ಚು ಗ್ರಾಮಗಳಿರುವ ಬಳ್ಳಾರಿ ಜಿಲ್ಲೆ ಕೃಷಿಯಲ್ಲಿ ಪ್ರಧಾನ ಸ್ಥಾನ ಪಡೆದಿದೆ. ಇದು ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ಹಿಂದುಳಿದಿಲ್ಲ. ಈ ಅಂಶಗಳನ್ನು ತಿಳಿಯಲು ಇದರ ಹಿಂದಿನ ಭೌಗೋಳಿಕತೆಯನ್ನು ಅರಿಯುವುದು ಸೂಕ್ತ.

ಕ್ರಿ.ಶ. ೧೭೯೨ರಲ್ಲಿ ಬಳ್ಳಾರಿ ಪ್ರದೇಶ ಹೈದರನ ಆಳ್ವಿಕೆಗೆ ಸೇರ್ಪಡೆಯಾಗಿ, ಮೈಸೂರು ಯುದ್ಧದಲ್ಲಿ ಸೋತಾಗ ನಿಜಾಮನಿಗೆ ಇದು ಸೇರಿತು. ನಿಜಾಮನು ೧೮೦೦ರಲ್ಲಿ ಸಹಾಯಕ ಸೈನ್ಯಪದ್ಧತಿಗೆ ಸಹಿ ಹಾಕಿ, ಒಪ್ಪಂದ ಮಾಡಿಕೊಂಡು ಆಂಗ್ಲರಿಗೆ ಇದನ್ನು ಬಿಟ್ಟುಕೊಟ್ಟನು. ಆಗ ಇದರ ಭೌಗೋಳಿಕತೆ ವಿಸ್ತಾರವಾಯಿತಲ್ಲದೆ, ಈ ಜಿಲ್ಲೆಗೆ ಕರ್ನೂಲು, ಕಡಪ, ಅನಂತಪುರ ಸೇರಿದವು. ಅಂದು ಮದ್ರಾಸ್ ಸಂಸ್ಥಾನದ ವಾಯವ್ಯ ದಿಕ್ಕಿಗಿರುವ ಬಳ್ಳಾರಿ ಜಿಲ್ಲೆಯು ತನ್ನದೇ ಆದ ಭೌಗೋಳಿಕ ಲಕ್ಷಣಗಳನ್ನು ಹೊಂದಿತ್ತು. ನಾಲ್ಕು ದತ್ತಿ ಜಿಲ್ಲೆಗಳಲ್ಲಿ ಇದೂ ಒಂದು. ಅಕ್ಷಾಂಶವಾಗಿ ೧೪-೨೦ ೧೫-೫೮ರಲ್ಲಿ ಮತ್ತು ರೇಖಾಂಶ ೭೫-೪೩ ೭೫-೪೫ರ ಮಧ್ಯೆ ಇತ್ತು. ಜಿಲ್ಲೆಯ ಆಗಿನ ಭೌಗೋಳಿಕ ವಿಸ್ತೀರ್ಣ ೫೯೦೪ ಚದರ ಮೈಲುಗಳು. ಈ ಜಿಲ್ಲೆಯನ್ನು ಉತ್ತರ ಭಾಗದಲ್ಲಿ ಹರಿಯುವ ತುಂಗಭದ್ರಾ ನದಿ ಪಶ್ಚಿಮಕ್ಕೆ ಧಾರವಾಡ, ಉತ್ತರಕ್ಕೆ ರಾಯಚೂರು ಜಿಲ್ಲೆಗಳನ್ನು ಪ್ರತ್ಯೇಕಿಸಿತ್ತು. ದಕ್ಷಿಣಕ್ಕೆ ಮೈಸೂರು ಸಂಸ್ಥಾನವಿದ್ದು, ಚಿತ್ರದುರ್ಗ ಜಿಲ್ಲೆ ಗಡಿ ಪ್ರದೇಶವಾಗಿತ್ತು.

೧೮೦೦ರಲ್ಲಿ ಈ ಪ್ರದೇಶದಲ್ಲಿ ಬ್ರಿಟಿಷರು ದತ್ತಿಮಂಡಲ(ರಾಯಲಸೀಮ) ಎಂದು ಕರೆದರು. ಆಗ ಸ್ಥಳೀಯ ಪಾಳೆಯಗಾರರು ಇಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಇವರು ಕೋಟೆ, ಕೊತ್ತಲು, ಅರಮನೆಗಳನ್ನು ಕಟ್ಟಿಕೊಂಡಿದ್ದರು. ವಿಜಯನಗರ ರಾಜರು ಈ ಪಾಳೆಯಗಾರರ ಆಡಳಿತ ವ್ಯವಸ್ಥೆಗೆ ನಾಂದಿ ಹಾಡಿದ್ದರು. ಪಾಳೆಯಗಾರರು ವಿಜಯನಗರದ ಸೇವೆ ಮಾಡುತ್ತಿದ್ದರು. ಅನಂತರ ಈ ಪ್ರದೇಶದ ಮೇಲೆ ಪ್ರಭುತ್ವ ಹೊಂದಿದರು. ಸರ್ವಾಧಿಕಾರಿಗಳಾದ ನಿಜಾಮರು ತೆಲಂಗಾಣ ಜಹಗೀರು ಪಡೆದು ದೇಶಮುಖ್ ಪಾಳೆಯಗಾರರಿಗೆ ಬಿಟ್ಟುಕೊಟ್ಟಿದ್ದರು. ರಾಯಲ ಸೀಮದಲ್ಲಿ ೫೦ ವರ್ಷಗಳಿಂದ ಆಳುತ್ತಿದ್ದ ಪಾಳೆಯಗಾರರನ್ನು ಅಧೀನಕ್ಕೊಳಪಡಿಸಿಕೊಂಡಾಗ ಹೈದರಾಲಿ ರಾಯಲಸೀಮೆಯಲ್ಲಿ ೮೦ ಮಂದಿ ಪಾಳೆಯಗಾರರಿದ್ದರು. ಕಡಪ ಜಿಲ್ಲೆಯಲ್ಲಿ ಕೆಲವು ಹಳ್ಳಿಗಳು ಇವರಿಗೆ ಸೇರಿದ್ದವು.[೧೩]

ಮದ್ರಾಸ್ ಆಧಿಪತ್ಯಕ್ಕೆ ಒಳಗಾದಾಗ ಜಿಲ್ಲೆಯಲ್ಲಿ ೧೮ ತಾಲೂಕುಗಳಿದ್ದವು. ಅವುಗಳೆಂದರೆ ಆಲೂರು, ಆದೋನಿ, ಗುತ್ತಿ, ಉರವಕೊಂಡ, ತಾಡಪತ್ರಿ, ರಾಯದುರ್ಗ, ಅನಂತಪುರ, ಧರ್ಮಾವರಂ, ಕಲ್ಯಾಣದುರ್ಗ, ಪೆನುಕೊಂಡ, ಬುಕ್ಕಪಟ್ಟಣಂ, ಹಿಂದೂಪುರ, ಮಡಕಶಿರಾ ಮತ್ತು ಎಮ್ಮಿಗನೂರು; ಬಳ್ಳಾರಿ ಜಿಲ್ಲೆಯ ತಾಲೂಕುಗಳಾದ ಸಿರುಗುಪ್ಪ, ಕಂಪ್ಲಿ(ಹೊಸಪೇಟೆ) ಕೂಡ್ಲಿಗಿ, ಹೂವಿನಹಡಗಲಿ ಮತ್ತು ಹರಪನಹಳ್ಳಿ ಸೇರಿದ್ದವು. ಸೊಂಡೂರು ಪ್ರತ್ಯೇಕ ಸಂಸ್ಥಾನವಾಗಿತ್ತಲ್ಲದೆ, ಆಂಗ್ಲರ ಅಧೀನದಲ್ಲಿ ಆಳ್ವಿಕೆ ನಡೆಸಿತು. ೧೮೫೧ರಲ್ಲಿ ಕಂಪ್ಲಿಯಲ್ಲಿದ್ದ ತಾಲ್ಲೂಕು ಕೇಂದ್ರವನ್ನು ವರ್ಗಾಯಿಸಿ ಹೊಸಪೇಟೆಯನ್ನು ತಾಲ್ಲೂಕು ಕೇಂದ್ರವಲ್ಲದೆ, ಉಪವಿಭಾಗವಾಗಿ ಕೂಡ ಮಾಡಲಾಯಿತು. ಜಿಲ್ಲೆಯಲ್ಲಿ ತುಂಗಭದ್ರಾ ನದಿಯು ಮುಖ್ಯವಾಗಿದ್ದು, ಇದರ ಉಪನದಿಗಳಾಗಿ ಚಿನ್ನಹಗರಿ, ನಾರಿಹಳ್ಳ, ಚಿಕ್ಕಹಗರಿಗಳಿದ್ದವು. ಈ ಪರಿಸರದಲ್ಲಿ ಹೆಚ್ಚು ಬೆಟ್ಟಗುಡ್ಡಗಳ ಸಾಲುಗಳಿದ್ದು, ಅವುಗಳಲ್ಲಿ ಸೊಂಡೂರು, ಗುಡೇಕೋಟೆ, ಜರಿಮಲೆ, ಹಂಪೆ, ಉಚ್ಚಂಗಿದುರ್ಗ ಮತ್ತು ಬಳ್ಳಾರಿ ಪಟ್ಟಣದ ನಡುವೆ ಇರುವ ಬೆಟ್ಟಗಳು ಮುಖ್ಯವಾಗಿವೆ. ಸೊಂಡೂರು ಮತ್ತರ ಬೆಟ್ಟಗಳಲ್ಲಿ ಉತ್ತಮ ದರ್ಜೆಯ ಮ್ಯಾಂಗನೀಸ್, ಕಬ್ಬಿಣದ ಅದಿರು ದೊರೆಯುತ್ತದೆ. ಈ ಜಿಲ್ಲೆಯು ಅಮೂಲ್ಯವಾದ ಖನಿಜ ಸಂಪತ್ತನ್ನು ಹೊಂದಿದೆ. ಇಲ್ಲಿ ಅನೇಕ ಗಣಿಗಳಿದ್ದು, ಕಬ್ಬಿಣದ ಅದಿರನ್ನು ವಿದೇಶಗಳಿಗೆ ರಫ್ತು ಮಾಡುವುದರಿಂದ ಅಪಾರ ಆರ್ಥಿಕ ವಹಿವಾಟನ್ನು ನಡೆಸುವ ಜಿಲ್ಲೆ ಇದಾಗಿದೆ. ಗಣಿಗಳಿಂದ ಕೆಲವೇ ವ್ಯಕ್ತಿಗಳು ಶ್ರೀಮಂತರಾಗುತ್ತಿದ್ದು, ಇಂಥ ಶ್ರೀಮಂತರೇ ರಾಜಕೀಯದಲ್ಲಿ ಮುಂದುವರೆಯುತ್ತಾರೆ. ಬಂಡವಾಳಶಾಹಿಗಳಿಂದ ಬಡವರು ನಿರ್ಗತಿಕರಾಗಿದ್ದು ಶೋಚನೀಯ ಸ್ಥಿತಿಯಲ್ಲಿದ್ದಾರೆ.

## ದಾವಣಗೆರೆ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

ದಾವಣಗೆರೆ ಕರ್ನಾಟಕ ರಾಜ್ಯದ ಮಧ್ಯಭಾಗದಲ್ಲಿದ್ದು, ಸಮುದ್ರ ಮಟ್ಟಕ್ಕಿಂತ ಸರಾಸರಿ ೬೦೨.೬ ಮೀ ಎತ್ತರದಲ್ಲಿದೆ. ೧೪.೨೮ ಅಕ್ಷಾಂಶ ಮತ್ತು ೭೫.೯೯ ರೇಖಾಂಶದಲ್ಲಿರುವ ದಾವಣಗೆರೆ

ಜಿಲ್ಲೆಯ ಬಯಲು ಹಾಗೂ ಸಮತಲದಲ್ಲಿರುವುದರಿಂದ ವರ್ಷದ ಬಹುಕಾಲ ಒಣಹವೆಯಿಂದ ಕೂಡಿರುತ್ತದೆ. ಜನವರಿ ಕೊನೆಯಿಂದ ಪ್ರಾರಂಭವಾದ ಬೇಸಿಗೆಯ ತಾಪಮಾನ ಮಾರ್ಚ್, ಏಪ್ರಿಲ್, ಮೇ ತಿಂಗಳಲ್ಲಿ ಹೆಚ್ಚಿರುತ್ತದೆ. ೨೨.೩ ಫ್ಯಾರನ್‌ಹೀಟ್‌ನಷ್ಟು ವರ್ಷದ ಸರಾಸರಿ ಉಷ್ಣಾಂಶವಿರುತ್ತದೆ. ೫೦.೧ ಸಾಪೇಕ್ಷ ಆರ್ದ್ರತೆಯು ಮಾರ್ಚ್ ತಿಂಗಳಿನಲ್ಲಿರುತ್ತದೆ. ಆದರೆ ಜುಲೈ ಆಗಸ್ಟ್‌ನಲ್ಲಿ ೮೦ ವರೆಗೂ ಏರುತ್ತದೆ. ಜೂನ್ ತಿಂಗಳಿನಿಂದ ಮಳೆಗಾಲ ಪ್ರಾರಂಭವಾದರೂ ಜುಲೈ-ಆಗಸ್ಟ್, ಸೆಪ್ಟೆಂಬರ್‌ನಲ್ಲಿ ಹೆಚ್ಚು ಮಳೆಯಾಗಿ ಅಕ್ಟೋಬರ್‌ವರೆಗೂ ಮಳೆ ಬರುತ್ತದೆ. ಸರಾಸರಿ ೫೭೮ ಮಿ.ಮೀ. ಮಳೆ ಬೀಳುತ್ತದೆ.[೧೪]

ಮೈಸೂರು ವಿಶ್ವವಿದ್ಯಾನಿಲಯದ ಭೂಗೋಳಶಾಸ್ತ್ರದ ಅಧ್ಯಾಪಕರಾಗಿದ್ದ ಡಾ.ಘೋರೆಯವರು ೧೯೬೦-೬೧ರಲ್ಲಿ ನೀಡಿದ ಉಪನ್ಯಾಸದಲ್ಲಿ ಕರ್ನಾಟಕದ ಹೃದಯ ಸ್ಥಾನದಲ್ಲಿರುವ ದಾವಣಗೆರೆ ನೀರಿನ ಆಸರೆ, ಫಲವತ್ತಾದ ಜಮೀನು, ಕಾರ್ಮಿಕರ ಸಂಘಟನೆ, ಸಮೃದ್ಧಿಗಳಿಂದ ನವ ಕರ್ನಾಟಕಕ್ಕೆ ಒಂದು ಆದರ್ಶ ರಾಜಧಾನಿಯಾಗಬಲ್ಲದು ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದರು.[೧೫] ದಾವಣಗೆರೆ ರಾಜಧಾನಿಯಾಗದಿದ್ದರೂ ತೊಂದರೆ ಇಲ್ಲ. ಜಿಲ್ಲಾ ಕೇಂದ್ರವಾದರೆ ಸಾಕು ಎನ್ನುವ ಜನರ ಅಕಾಂಕ್ಷೆ ಇಂದು ನಿನ್ನೆಯದಲ್ಲ. ಸುಮಾರು ೮೦ರ ದಶಕದಿಂದಲೇ ಬಂದಿದ್ದು, ಬಾಗಲಕೋಟೆ ಹಾಗೂ ದಾವಣಗೆರೆಯನ್ನು ಜಿಲ್ಲಾ ಕೇಂದ್ರವನ್ನಾಗಿ ಮಾಡುವ ವಿಚಾರದಲ್ಲಿ ಕರ್ನಾಟಕ ಸರ್ಕಾರ ಶ್ರೀ ಎ.ಡಿ.ಗೊರ್ವಲ ಮತ್ತು ಶ್ರೀ ಪಿ.ಸಿ. ಮಹಾಲ ನೋಬಿಸ್ ಮುಂತಾದ ತಜ್ಞರನ್ನು ಒಳಗೊಂಡ ಸಮಿತಿಯನ್ನು ನೇಮಿಸಿತ್ತು. ಈ ಸಮಿತಿ ಈ ಮುಂದಿನಂತೆ ವರದಿಯನ್ನು ಸಲ್ಲಿಸಿತ್ತು.

ದಾವಣಗೆರೆ ಜಿಲ್ಲೆಯಾಗಲು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ, ಹರಪನಹಳ್ಳಿ ತಾಲೂಕು ಶಿವಮೊಗ್ಗ ಜಿಲ್ಲೆಯಿಂದ ಚನ್ನಗಿರಿ, ಚಿತ್ರದುರ್ಗ ಜಿಲ್ಲೆಯಿಂದ ಹರಿಹರ, ಜಗಳೂರು, ಧಾರವಾಡ ಜಿಲ್ಲೆಯಾದ ಬ್ಯಾಡಗಿ, ರಾಣೆಬೆನ್ನೂರು, ಹಿರೇಕೆರೂರು ತಾಲೂಕುಗಳನ್ನು ಸೇರಿಸಿದ್ದಾರೆ. ಆಗ ದಾವಣಗೆರೆ ಒಂಬೈನೂರು ಹಳ್ಳಿಗಳಿಂದ ಕೂಡಿ, ಒಟ್ಟು ವಿಸ್ತೀರ್ಣ ೮೪೯೦.೧೫ ಚ.ಕಿ.ಮೀ. ಆಗುತ್ತದೆ ಎಂದು ತನ್ನ ಅಭಿಪ್ರಾಯ ಮಂಡಿಸಿತ್ತು.[೧೬]

ಶ್ರೀ ಹುಂಡೇಕಾರ್ ಮತ್ತು ಗದ್ದೀಗೌಡರ್ ಸಮಿತಿಗಳ ಒಮ್ಮತದ ಶಿಫಾರಸ್ಸಿನಂತೆ ರಾಜ್ಯದಲ್ಲಿ ಏಳು ಹೊಸ ಜಿಲ್ಲೆಗಳನ್ನು ೧೯೯೭ ಆಗಸ್ಟ್ ೧೫ರಂದು ರಚಿಸಲು ಈ ಸಂಬಂಧವಾಗಿ ಕರ್ನಾಟಕ ಸರ್ಕಾರ ಆದೇಶ ಹೊರಡಿಸಿದೆ. ಈ ರೀತಿ ಹೊಸದಾಗಿ ರಚಿಸಲ್ಪಟ್ಟ ಜಿಲ್ಲೆಗಳಲ್ಲಿ ದಾವಣಗೆರೆ ಜಿಲ್ಲೆಯೂ ಒಂದು. ಕರ್ನಾಟಕದ ಜಿಲ್ಲೆಗಳ ಮರುವಿಂಗಡಣೆ ಯೋಜನೆಯಂತೆ ಹಳೆಯ ಚಿತ್ರದುರ್ಗ, ಶಿವಮೊಗ್ಗ, ಬಳ್ಳಾರಿ ಜಿಲ್ಲೆಗಳಿಂದ ದಾವಣಗೆರೆ, ಹರಿಹರ ಜಗಳೂರು, ಚನ್ನಗಿರಿ, ಹೊನ್ನಾಳಿ, ಹರಪನಹಳ್ಳಿ ತಾಲೂಕುಗಳ ಭೌಗೋಳಿಕ ಎಲ್ಲೆಗಳನ್ನು ಪಡೆದು ಆವಿರ್ಭವಿಸಿದ ನೂತನ ದಾವಣಗೆರೆ ಜಿಲ್ಲೆ ೧೯೯೭ ಆಗಸ್ಟ್ ೧೫ರಂದು ಅಸ್ತಿತ್ವಕ್ಕೆ ಬಂದಿದೆ.

## ಭೂ ಸಂಪತ್ತು

ಸುಮಾರು ಒಂಬೈನೂರ ಹದಿನೇಳು ಗ್ರಾಮಗಳನ್ನೊಳಗೊಂಡಂತೆ ಈ ಜಿಲ್ಲೆಯ ವ್ಯಾಪ್ತಿ ೫೯೩೮.೯ ಚ.ಕಿ.ಮಿ.[೧೬] ಪೂರ್ವಕ್ಕೆ ಚಿತ್ರದುರ್ಗ, ಉತ್ತರಕ್ಕೆ ಬಳ್ಳಾರಿ ಜಿಲ್ಲೆ, ದಕ್ಷಿಣಕ್ಕೆ ಶಿವಮೊಗ್ಗ-ಚಿಕ್ಕಮಗಳೂರು ಜಿಲ್ಲೆಗಳಿಂದ ದಾವಣಗೆರೆ ಜಿಲ್ಲೆ ಸುತ್ತುವರಿದಿದೆ.[೧೭]

ಈ ಜಿಲ್ಲೆಯ ಪ್ರಮುಖ ನದಿ ತುಂಗಭದ್ರಾ, ಅಲ್ಲದೆ ಚಿಕ್ಕ ನದಿಗಳಾದ ಚಿನ್ನಹಗರಿ, ಚಿಕ್ಕಹಗರಿ ಹರಿದ್ರಾವತಿಗಳು ಹರಿಯುತ್ತವೆ. ದೊಡ್ಡಹಳ್ಳಗಳಾದ ಶಾಗಲಿಹಳ್ಳ ಹಾಗೂ ಸೂಳೆಕೆರೆಹಳ್ಳ ಸಹ ಇಂದಿನ ರೈತರ ಜೀವನಾಡಿಯಾಗಿವೆ. ಈ ಪ್ರದೇಶ ಕೃಷಿ ಜಲಾನಯನ ಪ್ರದೇಶಕ್ಕೆ ಒಳಪಟ್ಟಿದೆ. ಹಾಗೆಯೇ ಭದ್ರಾ ಜಲಾಶಯದಿಂದ ಎರಡು ಕಾಲುವೆ ಈ ಜಿಲ್ಲೆಯಲ್ಲಿ ಪ್ರವಹಿಸಿ ನೀರಾವರಿಗೆ ಎರಡು ನಾಲೆಗಳು ೨.೬೬.೮೮೮ ಹೆಕ್ಟೇರು ಅಥವಾ ೬೦ ಸಾವಿರ ಎಕರೆಗೆ ನೀರೊದಗಿಸಿದ್ದು, ಅದು ಅಚ್ಚುಕಟ್ಟು ಪ್ರದೇಶವಾಗಿ ಮಾರ್ಪಾಡಾಗಿದೆ.[೧೮]

ದೇವರಬೆಳಕೆರೆಯಲ್ಲಿ ಶಾಗಲಿಹಳ್ಳಿ-ಹರಿದ್ರಾನದಿ(ಸೂಳೆಕೆರೆಹಳ್ಳ) ಸಂಗಮಸ್ಥಳದಲ್ಲಿ ಅಣೆಕಟ್ಟೆ ನಿರ್ಮಿಸಿದ್ದಾರೆ. ೬೦೦೦ ಎಕರೆ ಪ್ರದೇಶದಲ್ಲಿ ನೀರು ಹರಡಿದ್ದು, ೧೩.೫೩ ಎಕರೆ ಪ್ರದೇಶಕ್ಕೆ ನೀರು ಒದಗಿಸುತ್ತದೆ. ಚನ್ನಗಿರಿಗೆ ೨೦ ಕಿ.ಮೀ. ದೂರದಲ್ಲಿರುವ ಶಾಂತಿಸಾಗರ(ಸೂಳೆಕೆರೆ), ದಕ್ಷಿಣ ಭಾರತದ ಸುಂದರ ಜಲಾಶಯಗಳಲ್ಲಿ ಒಂದಾಗಿದೆ. ೧೧-೧೨ನೇ ಶತಮಾನದಲ್ಲೇ ಹಿರೆಹಳ್ಳ ಮತ್ತು ಸೊಪ್ಪಿನಹಳ್ಳಗಳಿಗೆ ಕಟ್ಟೆ ಕಟ್ಟಿ ಜಲಾಶಯ ನಿರ್ಮಿಸಲಾಗಿದೆ. ಮುಖ್ಯ ಕಾಲುವೆಗೆ 'ಹರಿದ್ರಾವತಿ' ಎಂದು ಉತ್ತರ ನಾಲೆಗೆ ಸಿದ್ಧನಾಲೆ ಎಂದು, ದಕ್ಷಿಣದ ನಾಲೆಗೆ ಬಸವನಾಲೆ ಎಂದು ಹೆಸರಿಸಲಾಗಿದೆ. ಇವು ೧೭೯೨.೫ ಹೆಕ್ಟೇರು ಅಚ್ಚುಕಟ್ಟು ಪ್ರದೇಶಕ್ಕೆ ನೀರೊದಗಿಸುತ್ತವೆ.

ತುಂಗಭದ್ರಾ ನದಿಯು ಜಗಳೂರು ತಾಲೂಕೊಂದನ್ನು ಹೊರತುಪಡಿಸಿ ಉಳಿದ ಹೊನ್ನಾಳಿ, ಚನ್ನಗಿರಿ, ದಾವಣಗೆರೆ, ಹರಿಹರ, ಹರಪನಹಳ್ಳಿ ತಾಲೂಕುಗಳಲ್ಲಿ ಹರಿಯುತ್ತದೆ. ಜನಿಗೆಹಳ್ಳಕ್ಕೆ ಸಂಗೇನಹಳ್ಳಿಯ ಬಳಿ ಅಣೆಕಟ್ಟೆ ನಿರ್ಮಿಸಿ ದೊಡ್ಡಕೆರೆಯನ್ನಾಗಿಸಿ ಜಗಳೂರು ತಾಲೂಕಿನ ನೀರಾವರಿಗೆ ಅನುಕೂಲ ಕಲ್ಪಿಸಲಾಗಿದೆ. ಜಿಲ್ಲೆಯಲ್ಲಿ ಬಾಗಳಿ, ಅಣಜಿ ಮುಂತಾದೆಡೆ ಪ್ರಾಚೀನವಾದ ಅನೇಕ ಕೆರೆಗಳಿವೆ.

ಇಷ್ಟೆಲ್ಲಾ ಜಲಸಂಪತ್ತನ್ನು ಹೊಂದಿದ ಈ ಪ್ರದೇಶ ಪ್ರಾಗೈತಿಹಾಸಿಕ ಕಾಲದಿಂದಲೂ ಜನರಿಗೆ ಅವಶ್ಯಕವಾಗಿದ್ದ ಜೀವಸೆಲೆ(ನೀರನ್ನು)ಯನ್ನು ಒದಗಿಸುತ್ತಾ ಬಂದಿದೆ. ಪರಿಣಾಮವಾಗಿ ಇಲ್ಲಿನ ನದಿ ಹಳ್ಳ ಕೆರೆಗಳ ಸನಿಹದಲ್ಲಿ ಪ್ರಾಗೈತಿಹಾಸಿಕ ಕಾಲದ ಜನವಸತಿಯ ತಾಣಗಳು ಕಂಡುಬಂದಿವೆ. ಪ್ರಕೃತಿಯ ಅಧೀನದಲ್ಲಿಯೇ ಬದುಕುತ್ತಿದ್ದ, ಮಾನವನಿಗೆ ಶಿಲಾಯುಧಗಳನ್ನು ತಯಾರಿಸಲು ಉಪಯುಕ್ತವಾದ ಉಂಡೆಕಲ್ಲುಗಳನ್ನು ಸಹ ನದಿಯ ಇಕ್ಕೆಲಗಳಲ್ಲಿ ಸ್ವಾಭಾವಿಕವಾಗಿ ಕೊರೆಯುತ್ತಿದ್ದರಿಂದಾಗಿ ಪ್ರಾಗೈತಿಹಾಸಿಕ ಕಾಲದ ಮನುಷ್ಯ ಈ ಜಿಲ್ಲೆಯ ವಿವಿಧೆಡೆ ನೆಲೆಯೂರಿದ್ದ

ಬಗೆಗೆ ಮಾಹಿತಿಗಳು ದೊರಕುತ್ತವೆ.[೧೯] ಹಾಗೆಯೇ ಈ ಭಾಗದಲ್ಲಿ ಅನೇಕ ರಾಜವಂಶಗಳು ಆಳಿ ಅಳಿದು ಅವರ ಸಂಸ್ಕೃತಿಯ ಪ್ರತೀಕಗಳಾದ ದೇವಾಲಯಗಳನ್ನು ನದಿಯ ಇಲ್ಲವೇ ಕೆರೆಯ ದಂಡೆಯ ಮೇಲೆ ಕಟ್ಟಿಸಿ ನಮಗೆ ಕಲಾಕಾಣಿಕೆಯಾಗಿ ಬಿಟ್ಟುಹೋಗಿದ್ದಾರೆ.

**ಚಾರಿತ್ರಿಕ ಹಿನ್ನೆಲೆ**

ಮಾನವ ಮೊದಲು ಕಾಡು, ಕಣಿವೆ, ಗುಡ್ಡ, ಗವಿಗಳನ್ನೇ ತನ್ನ ವಾಸಸ್ಥಳ ಮಾಡಿಕೊಂಡ. ಮಾನವ ಚರ್ಮ, ತೊಗಟೆಯನ್ನು ಧರಿಸುತ್ತಿದ್ದರು. ಸಾಮಾನ್ಯವಾಗಿ ಇವರು ಅಲೆಮಾರಿಗಳಾಗಿದ್ದು, ಒಂದೇ ಕಡೆ ಖಾಯಂ ಆಗಿ ವಾಸಿಸುವುದಿಲ್ಲ. ಕಾಡಿನಲ್ಲಿ ದೊರೆಯುವ ಪ್ರಕೃತಿದತ್ತವಾಗಿ ಸಿಗುವ ಗಡ್ಡೆಗೆಣಸು, ಹಣ್ಣುಹಂಪಲು ಜೇನು ಸಂಗ್ರಹಿಸಿ ಆಹಾರಕ್ಕಾಗಿ ಉಪಯೋಗಿಸುತ್ತಿದ್ದರು. ಅಲ್ಲದೆ ಕಾಡಿನಲ್ಲಿ ದೊರೆಯುವ ಅನೇಕ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡುವುದು. ಅಲ್ಲದೆ ಕಾಡಿನಲ್ಲಿ ದೊರೆಯುವ ಅನೇಕ ಪ್ರಾಣಿ ಮಾಂಸವನ್ನು ತಮ್ಮ ಆಹಾರದ ಮುಖ್ಯ ಅಂಗವನ್ನಾಗಿ ಮಾಡಿಕೊಂಡಿದ್ದರು. ಕಾಡಿನಲ್ಲಿ ವಾಸಿಸುತ್ತಿದ್ದರೂ ಇವರು ತಮ್ಮದೇ ಆದ ಜೀವನ ಶೈಲಿಯನ್ನು ರೂಢಿಸಿಕೊಂಡಿದ್ದರು. ಸಾಂಸ್ಕೃತಿಕವಾಗಿ ಹಲವಾರು ವಿಶೇಷ ಸಂಗತಿಗಳಿಂದ ಆದಿವಾಸಿಗಳಾಗಿ ಬದುಕುತ್ತಿದ್ದರು. ಊರಿನ ಸಂಪರ್ಕವಿಲ್ಲದಿದ್ದರೂ, ಕಾಡಿನಲ್ಲಿದ್ದುಕೊಂಡೆ ಆಚರಣೆ, ಸಂಪ್ರದಾಯ ಈ ದೃಷ್ಟಿಯಿಂದ ಪ್ರತ್ಯೇಕ ಜೀವನಪದ್ಧತಿಯನ್ನು ರೂಢಿಸಿಕೊಂಡು, ಅನನ್ಯ ಸಾಂಸ್ಕೃತಿಕ ಮೌಲ್ಯಗಳನ್ನು ಉಳಿಸಿಕೊಂಡು ಬಂದಿರುವ ಜನ ಸಮುದಾಯವನ್ನು ಬುಡಕಟ್ಟು ಸಮುದಾಯವೆಂದು ಗುರುತಿಸಲಾಗುತ್ತದೆ. ಆದಿವಾಸಿ ಜನರನ್ನು ಬುಡಕಟ್ಟು ಗಿರಿವಾಸಿಗಳೆಂದು, ಗುರುತಿಸಲಾಗುತ್ತದೆ. ಆದಿವಾಸಿ ಜನರನ್ನು ಬುಡಕಟ್ಟು ಗಿರಿವಾಸಿಗಳು, ಮೂಲನಿವಾಸಿಗಳು, ಗಿರಿಜನರು, ಅರಣ್ಯವಾಸಿಗಳು ಎಂದೂ ಗುರುತಿಸಲಾಗುತ್ತಿದೆ.

ಮಾನವ ವಿಕಾಸದ ಮೊದಲ ಹಂತ ಬೇಟೆ. ಈ ಹಂತದಲ್ಲಿ ಬೇಟೆಯಾಡಿ ಬದುಕುವುದೇ ಅವರ ಪ್ರವೃತ್ತಿಯಾಗಿತ್ತು. ಹಾಗಾಗಿ ಅವರಿಗೆ ಸಿಕ್ಕ ಬಿಡುವಿನ ವೇಳೆಯಲ್ಲಿ ಬೇಟೆಗೆ ಹೋಗಿ ಪ್ರಾಣಿಗಳನ್ನು ಬೇಟೆಯಾಡಿಕೊಂಡು ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದ. ಎರಡನೇ ಹಂತ ಪಶುಪಾಲನೆಯಲ್ಲಿ ಅಲೆಮಾರಿಯಾಗಿ ಜೀವನ ನಡೆಸಿದನು. ಮಾನವರು ಅರಣ್ಯಗಳಲ್ಲಿ ಸಂಚರಿಸುತ್ತಾ ಆನಂತರ ಕೃಷಿಗಾಗಿ ಅಲ್ಲಲ್ಲಿ ಕೆಲಕಾಲ ಬೀಡು ಬಿಡುತ್ತಿದ್ದರು. ತಾತ್ಕಾಲಿಕವಾಗಿ ಜೋಪಡಿಗಳನ್ನು ಹಾಕಿಕೊಳ್ಳುತ್ತಿದ್ದರು. ಹೀಗೆ ಜೋಪಡಿಗಳನ್ನು ಪ್ರಾರಂಭಿಸಿದಾಗ ಒಂದೆಡೆ ನೆಲೆ ನಿಲ್ಲಲು ಪ್ರಾರಂಭಿಸಿದರು. ಅವರು ಜೋಪಡಿ ಹಾಕಿಕೊಳ್ಳುವಾಗ ಸಾಮಾನ್ಯವಾಗಿ ಪೂರ್ವಾಭಿಮುಖವಾಗಿ ಮೂರು ಸಾಲುಗಳಲ್ಲಿ ಹಾಕಿಕೊಳ್ಳುವುದು ವಾಡಿಕೆಯಾಗಿತ್ತು. ಒಂದು ಕಡೆ ವಾಸಿಸಲು ಆರಂಭಿಸಿದರು. ಆವಾಗ ಮನೆಯ ಕಲ್ಪನೆ ಮೂಡಿರಬಹುದು.

ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಸುವ ಸಲುವಾಗಿ ಒಂದೆಡೆ ಗುಡಿಸಲನ್ನು ನಿರ್ಮಿಸಿದ.

ಹೀಗೆ ಹತ್ತಾರು ಗುಡಿಸಲುಗಳು ತಲೆ ಎತ್ತಿದ ಮೇಲೆ ಆ ಸ್ಥಳದ ಸುತ್ತ ಬೇಲಿ ಹಾಕಿಕೊಳ್ಳುವರು. ಆಗ ಹಟ್ಟಿಯ ಪರಿಕಲ್ಪನೆ ಬಂದಿರಬಹುದು. ಹಟ್ಟಿಗೆ ಹಿರಿಯರ ದೇವರ ಭೌಗೋಳಿಕ ಪ್ರದೇಶದ ನದಿ, ಕೆರೆ, ತೊರೆ ಮುಂತಾದ ಹೆಸರುಗಳನ್ನು ಇಡುವುದು ತಿಳಿಯುತ್ತದೆ. ಶುಕ್ರ ನೀತಿಸಾರ ಗ್ರಂಥದಲ್ಲಿ ಕುಂಭ, ಪಳ್ಳಿ ಮತ್ತು ಗ್ರಾಮ ಎಂಬ ಮೂರು ಪ್ರಕಾರಗಳಿವೆ. ಕುಂಭವು ಅತಿ ಚಿಕ್ಕ ಜನವಸತಿ ಅದರ ಎರಡರಷ್ಟು ಇರುವ ಜನವಸತಿಯ ಪಳ್ಳಿ, ಪಳ್ಳಿಯ ಎರಡರಷ್ಟು ಇರುವ ಸಮುದಾಯವು ಗ್ರಾಮವಾಗಿದೆ.

ಗ್ರಾಮ ಸಮಾಜ ಅತೀ ಪ್ರಾಚೀನ ಕಾಲದಿಂದ ಅಸ್ತಿತ್ವದಲ್ಲಿದ್ದರೂ ನಮಗೆ ಸ್ಪಷ್ಟವಾದ ವಿವರಗಳು ಸಿಗುವುದು ಮೌರ್ಯರ ಕಾಲದಿಂದ. ಚಂದ್ರಗುಪ್ತ ಮೌರ್ಯನ ಗುರುವೂ ಮಾರ್ಗದರ್ಶಕನೂ ಆದ ಕೌಟಿಲ್ಯನು ತನ್ನ ಅರ್ಥಶಾಸ್ತ್ರದಲ್ಲಿ ಗ್ರಾಮದ ವಿವಿಧ ಪ್ರಕಾರಗಳನ್ನು ಹಾಗೂ ಜನಸಂಖ್ಯೆಗೆ ಅನುಗುಣವಾಗಿ ಗ್ರಾಮಗಳ ವರ್ಗೀಕರಣವನ್ನು ದಾಖಲಿಸಿದ್ದಾನೆ. ಗ್ರಾಮಗಳ ಅಧಿಕಾರಿಯನ್ನು 'ಗ್ರಾಮಿಣಿ' ಎಂದು ಕರೆಯುತ್ತಿದ್ದರು. ಶಾಂತಿ ವ್ಯವಸ್ಥೆ, ಕಂದಾಯ ವಸೂಲಿ ಈತನ ಕಾರ್ಯವಾಗಿತ್ತು. ಶ್ರೇಷ್ಠ, ಮಧ್ಯಮ, ಕನಿಷ್ಠ ಎಂಬ ಗ್ರಾಮಸಮುದಾಯಗಳನ್ನು, ಗ್ರಾಮ, ಪಲ್ಲಿ, ಕುಂಬ ಎಂಬ ಹೆಸರುಗಳಿಂದ ಕರೆಯುವುದು ತಿಳಿದುಬರುತ್ತದೆ. ವೇದಗಳ ಕಾಲದಲ್ಲಿ ಗ್ರಾಮಗಳ ಆಡಳಿತವನ್ನು 'ಸಭಾ' ಹಾಗೂ 'ಸಮಿತಿ'ಗಳು ನಿರ್ವಹಿಸುತ್ತಿದ್ದಂತೆ ಮೌರ್ಯರ ಕಾಲದಲ್ಲಿ 'ಗಣ'ಗಳು ನಿರ್ವಹಿಸುತ್ತಿದ್ದುದು ಕಂಡುಬರುತ್ತದೆ. ಪ್ರಾಚೀನ ಕಾಲದಿಂದಲೂ ಸ್ಥಳೀಯ ಆಡಳಿತ ಸಂಸ್ಥೆಗಳು ಗ್ರಾಮಸಮಾಜದ ಉಸ್ತುವಾರಿಯನ್ನು ವಹಿಸಿಕೊಂಡಿದ್ದವು. ಬ್ರಿಟಿಷರ ಆಳ್ವಿಕೆಯ ಪೂರ್ವಕಾಲದಲ್ಲಿ ಗ್ರಾಮ ಪಂಚಾಯಿತಿಗಳು ಬಹಳ ಜನಪ್ರಿಯವಾಗಿದ್ದವು ಎಂಬುದು ಗಮನಿಸಬಹುದಾದ ವಿಚಾರ. ಬ್ರಿಟಿಷರ ಆಳ್ವಿಕೆಯ ಆರಂಭ ಕಾಲಕ್ಕೆ ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ಪ್ರೋತ್ಸಾಹ ದೊರೆಯಲಿಲ್ಲ. ಬ್ರಿಟಿಷರು ಕೇಂದ್ರೀಕೃತ ಆಡಳಿತ ವ್ಯವಸ್ಥೆಯನ್ನು ಪ್ರೋತ್ಸಾಹಿಸಿದ್ದರಿಂದ ಅವು ಕ್ರಮೇಣ ಶಿಥಿಲಗೊಂಡವು.

ಕದಂಬ ಮತ್ತು ಬಾದಾಮಿ ಚಾಲುಕ್ಯರ ಕಾಲದಿಂದ ಕರ್ನಾಟಕ ರಾಜಕೀಯ ಚರಿತ್ರೆ ಆರಂಭ ವಾಯಿತೆಂದು ತಿಳಿದುಬರುತ್ತದೆ. ರಾಜರ ಪ್ರಮುಖ ಆದಾಯ ಭೂಕಂದಾಯವಾಗಿದ್ದು, ಭೂಕಂದಾಯದಲ್ಲಿ ಮಾನ್ಯ, ಅರ್ಧಮಾನ್ಯ, ಸರ್ವಮಾನ್ಯವೆಂದು ವಿನಾಯಿತಿ ನೀಡುತ್ತಿದ್ದರು.

ವಿಜಯನಗರ ಕಾಲದಲ್ಲಿ ಗ್ರಾಮಮಟ್ಟದಲ್ಲಿಯೂ ಅತಿ ಚಿಕ್ಕ ಘಟಕಗಳಿರುವ ಬಗ್ಗೆ ಶಾಸನಗಳ ಆಧಾರದಿಂದ ಪಿ.ವಿ.ಕೃಷ್ಣಮೂರ್ತಿ ಅವರು ಹೀಗೆ ಗಮನಿಸಿದ್ದಾರೆ. "ಸೀಮೆಯ ಕೆಳಸ್ತರದಲ್ಲಿ ಸ್ಥಳ ಮತ್ತು ಗ್ರಾಮಗಳು ಬರುತ್ತವೆ. ಅನೇಕ ಗ್ರಾಮಗಳ ಸಮೂಹವೇ ಸ್ಥಳ. ಒಂದು ಸ್ಥಳದಲ್ಲಿ ಇಂತಿಷ್ಟೇ ಗ್ರಾಮಗಳಿರಬೇಕೆಂಬ ನಿಯಮವಿರಲಿಲ್ಲ. ಇವು ಆಡಳಿತದ ಕೆಳಸ್ತರಗಳಲ್ಲಿ ಇರುವ ವಿಭಾಗಗಳಾಗಿದ್ದವು. ವಿಜಯನಗರ ಆಡಳಿತ ಕಾಲದಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಇವುಗಳಲ್ಲಿ ಒಂದೆರಡು ಸ್ಥಳಗಳನ್ನು, ಒಂದು ಹಳ್ಳಿಯನ್ನು ಪಡೆದಿದ್ದ

ಅಮರನಾಯಕರಿದ್ದರು. ಅವರು ಚಕ್ರವರ್ತಿಯ ನೇರ ನಿಯಂತ್ರಣದಲ್ಲಿ ಅಥವಾ ಅಧೀನ ರಾಜರ ಹತೋಟಿಯಲ್ಲಿರುತ್ತಿದ್ದರು. ಇಂಥ ಅಮರನಾಯಕರನ್ನು ಶಾಸನಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಗಮನಿಸಬಹುದು. ಗೌಡನಹಳ್ಳಿಯ ಸ್ಥಳ ಹತ್ತು ಗ್ರಾಮಗಳನ್ನೊಳಗೊಂಡಂಥ ಒಂದು ಸ್ಥಳವಾಗಿತ್ತೆಂಬ ಅಂಶ ಕ್ರಿ.ಶ. ೧೫೪೯ರ ತಾಮ್ರ ಶಾಸನದಿಂದ ತಿಳಿದುಬರುತ್ತದೆ.

ಕುಲ, ಅಡಮ ಬಾದಾಮಿ ಚಾಲುಕ್ಯರ ಕಾಲದಲ್ಲಿ ಭೂಮಿ ಅಳತೆಯ ಹೆಸರುಗಳಾಗಿದ್ದವು. ಸಾರ್ವಜನಿಕ ಕಾರ್ಯಗಳಾದ ಕೆರೆ ಕಟ್ಟೆಗಳ ನಿರ್ಮಾಣಕ್ಕೆ ರಾಜ್ಯದ ಬೊಕ್ಕಸದಿಂದ ಸಹಾಯ ದೊರೆಯುತ್ತಿತ್ತು. ಕುಂಬಾರಿಕೆ, ಗಣಿಗಾರಿಕೆ, ನೇಯ್ಗೆ, ಪಾತ್ರೆಪಡಗಗಳ(ಹಿತ್ತಾಳೆ) ತಯಾರಿಕೆ ಮಹತ್ವದ ಉದ್ಯೋಗಗಳಾಗಿದ್ದವು. ಕೂಲಿಯನ್ನು ಧಾನ್ಯದ ರೂಪದಲ್ಲಿ ನೀಡಲಾಗುತ್ತಿತ್ತೆಂದು ತಿಳಿದುಬರುತ್ತದೆ. ರಾಷ್ಟ್ರಕೂಟರ ಕಾಲದಲ್ಲಿ ಗ್ರಾಮಗಳ ಆಡಳಿತ ವಂಶಪಾರಂಪರ್ಯವಾಗಿ ಪಡೆದು 'ಗೌಡ'ರ ಮೂಲಕ ಅಧಿಕಾರ ನಡೆಯುತ್ತಿತ್ತು. ಕರ ಕಂದಾಯ ವಸೂಲಿ, ಗ್ರಾಮದ ಕಾಮಗಾರಿಗಳ ಮೇಲ್ವಿಚಾರಣೆ, ಮೇಲಧಿಕಾರಿಗಳ ಆತಿಥ್ಯ, ಗ್ರಾಮದ ಸರಹದ್ದಿನ ಕಾವಲು ಈತನ ಮೇಲ್ವಿಚಾರಣೆಗಳಾಗಿದ್ದವು. ಗೌಡರಿಗೆ ಕಂದಾಯ, ಭೂದಾಖಲೆಗಳ ಲೆಕ್ಕಪತ್ರಗಳನ್ನು ರಕ್ಷಣೆ ಮಾಡಲು, ಈತನ ಕೆಲಸದಲ್ಲಿ ನೆರವಾಗಲು ಲೆಕ್ಕಿಗನೊಬ್ಬ ಇರುತ್ತಿದ್ದ. ರಾಷ್ಟ್ರಕೂಟರ ಕಾಲದಲ್ಲಿ ಹಣ್ಣು, ತರಕಾರಿಗಳಿಂದ ನಿತ್ಯ ತೆರಿಗೆ ರಾಜ್ಯಕ್ಕೆ ಸೇರುತ್ತಿದ್ದವು. ಕಂದಾಯದ ಪ್ರಮಾಣವನ್ನು 'ಸದ್ಭಾಗ'ವೆಂದು ಕರೆಯಲಾಗುತ್ತಿತ್ತು. ಭೂಗುಣಕ್ಕೆ ಅನುಸಾರವಾಗಿ ಕಂದಾಯ ವಿಧಿಸುತ್ತಿದ್ದರು. ತೆರಿಗೆಯನ್ನು ನಾಣ್ಯ ಮತ್ತು ಕಾಳಿನ ರೂಪದಲ್ಲಿ ವಸೂಲು ನೀಡಬೇಕಿತ್ತು. ವರ್ಷದಲ್ಲಿ ತೆರಿಗೆಯನ್ನು ಮೂರು ಕಂತುಗಳಲ್ಲಿ ಪಾವತಿಸಲು ಅನುಕೂಲವಿತ್ತು. ಗ್ರಾಮದ ಉತ್ಪನ್ನದಲ್ಲಿ ಶೇ. ೨೦ರಷ್ಟು ಸರ್ಕಾರ ತೆರಿಗೆ ರೂಪದಲ್ಲಿ ಪಡೆಯುತ್ತಿದ್ದರು. ಅಲ್ಲದೆ ಶೇ. ೧೫ರಷ್ಟನ್ನು ಗ್ರಾಮದ ಒಟ್ಟು ಹಿತದ ಕಾರ್ಯಗಳಿಗಾಗಿ ಹಿಂದಿರುಗಿಸುತ್ತಿತ್ತು.

ವಿಜಯನಗರ ಅರಸರ ಕಾಲದಲ್ಲಿ ರಾಜ್ಯದ ಆದಾಯದಲ್ಲಿ ಹೆಚ್ಚು ಪಾಲು ಸ್ಥಳೀಯ ಅಂಶಗಳಿಂದ ಬರುತ್ತಿತ್ತು. ಭೂಕಂದಾಯದಲ್ಲಿ ಬೆಳೆ ನಾಶವಾದಾಗ, ಜಳ್ಳು ಹಿಡಿದಾಗ, ಮಳೆ ಏರುಪೇರು, ಲೂಟಿ, ಆಕ್ರಮಣ ಆದಾಗ ತೆರಿಗೆ ವಿನಾಯಿತಿ ಇರುತ್ತಿತ್ತು. ಫಸಲಿನ ಒಟ್ಟು ಆದಾಯದ ಆರರಲ್ಲಿ ಒಂದು ಪಾಲು ಸರ್ಕಾರಕ್ಕೆ ಕಂದಾಯ ಕೊಡಬೇಕಾಗಿತ್ತು. ಕಂದಾಯವನ್ನು ಕಾಳು ಇಲ್ಲವೆ ನಾಣ್ಯದ ರೂಪದಲ್ಲಿ ಪಾವತಿಸಲಾಗುತ್ತಿತ್ತು. ಪಂಚಾಯಿತಿ ಮಟ್ಟದಲ್ಲಿಯೇ ಆಸ್ತಿ ತಕರಾರು ಬಗೆಹರಿಯುತ್ತಿತ್ತು. ಸಣ್ಣ ಗ್ರಾಮಗಳ ಆಡಳಿತವನ್ನು ಗ್ರಾಮಸಭೆ ಮತ್ತು ದೊಡ್ಡ ಪ್ರದೇಶದಲ್ಲಿ ನಾಡು ನೋಡಿಕೊಳ್ಳುತ್ತಿದ್ದವು. ಗ್ರಾಮಾಡಳಿತದಲ್ಲಿ ಪಟೇಲ ಮುಖ್ಯಾಧಿಕಾರಿ, ಶಾನುಭೋಗ, ಕಾರ್ಯದರ್ಶಿ, ತೋಟಿ, ವೀರಶಾಲಿ ಆಡಳಿತದಲ್ಲಿ ಸಹಾಯಕರಾಗಿದ್ದರು. ಗ್ರಾಮ ಜೀವನದಲ್ಲಿ ದೇವಾಲಯಗಳು ವಿಶೇಷ ಪಾತ್ರ ವಹಿಸುತ್ತಿದ್ದು ಹಲವರಿಗೆ ಉದ್ಯೋಗ

ನೀಡುವ ಸಂಸ್ಥೆಯಾಗಿ, ನ್ಯಾಯಾಲಯವಾಗಿ, ಸ್ಥಳೀಯ ಕುಶಲಕರ್ಮಿಗಳಿಗೆ ಸಾಲದ ನೆರವು ನೀಡುವ ಬ್ಯಾಂಕ್ ಆಗಿ ಕಾರ್ಯನಿರ್ವಹಿಸಿದ್ದವು.

ವಿಜಯನಗರ ನಂತರದ ಕಾಲದಲ್ಲಿ ಕರ್ನಾಟಕ ಕಲೆ, ಸಾಹಿತ್ಯ, ಸಂಸ್ಕೃತಿಗೆ ವಿಶೇಷ ಕಾಣಿಕೆ ನೀಡಿದ ಕೀರ್ತಿ ಮೈಸೂರು ಅರಸರಿಗೆ ಸಲ್ಲಬೇಕು. ಕುಶಲಕಲೆಗಳಿಗೆ ಚಿಕ್ಕದೇವರಾಯ ಒಡೆಯರು ವಿಶೇಷ ಪ್ರೋತ್ಸಾಹ ನೀಡಿದ್ದರ ಫಲವಾಗಿ ಬೆಂಗಳೂರು ನಗರದಲ್ಲಿ ೧೨ ಸಾವಿರ ನೇಯ್ಗೆಯವರು ನೆಲೆಸಲು ಅವಕಾಶವಾಯಿತು. ಕಾವೇರಿ ನದಿಗೆ ಅಣೆಕಟ್ಟು ಕಟ್ಟಿಸಿ ಚಿಕ್ಕದೇವರಾಜ ನಾಲೆ, ದೇವರಾಜ ನಾಲೆಗಳ ನಿರ್ಮಾಣ ಮಾಡಿ ಕೃಷಿಗೆ ಅನುಕೂಲ ಮಾಡಿಕೊಟ್ಟರು. ಅಂಚೆ ವ್ಯವಸ್ಥೆಯನ್ನು ಜಾರಿಗೆ ತಂದು ಆಧುನಿಕವೆನ್ನಬಹುದಾದ ಸವಲತ್ತುಗಳನ್ನು ನಾಡಿಗೆ ಪರಿಚಯಿಸಿದರು. ನೌಕರ ವರ್ಗಕ್ಕೆ ಸಂಬಳದ ಅರ್ಧಭಾಗದಷ್ಟು ಆಹಾರ ಧಾನ್ಯದ ರೂಪದಲ್ಲಿ, ಉಳಿದರ್ಧವು ಹಣದ ರೂಪದಲ್ಲಿ ಪಾವತಿಸುವ ವ್ಯವಸ್ಥೆ ಮಾಡಿದ್ದರು. ಕ್ರಿ.ಶ. ೧೭೭೦ರ ಕಾಲಾವಧಿಯ ವೇಳೆಗೆ ದಕ್ಷಿಣ ಭಾರತದಲ್ಲಿಯೇ ಮೈಸೂರು ಅತ್ಯಂತ ಪ್ರಮುಖ ಹಾಗೂ ಇಂಗ್ಲಿಷರಿಗೆ ಪ್ರಬಲ ರಾಜ್ಯವಾಗಿ ಕಾಣಿಸಿತು. ಇದಕ್ಕೆ ಕಾರಣ ಹೈದರ್ ಮತ್ತು ಟಿಪ್ಪು ಸುಲ್ತಾನರ ಆಡಳಿತವೇ ಕಾರಣವಾಗಿದೆ. ಟಿಪ್ಪು ಸುಲ್ತಾನನು ನೀರಾವರಿಗೆ ಮಹತ್ವ ಕೊಟ್ಟು ಕೆರೆಕಟ್ಟೆಗಳ ನಿರ್ಮಾಣ ಕಾರ್ಯವನ್ನು ಕೈಗೊಂಡಿದ್ದನು. ಟಿಪ್ಪುವಿನ ಮರಣಾನಂತರ ಮೈಸೂರು ಬ್ರಿಟಿಷರ ಕೈವಶವಾಗಲು ಹೆಚ್ಚು ಸಮಯ ಬೇಕಾಗಲಿಲ್ಲ. ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಕೈತಪ್ಪಿದ ಆಡಳಿತವನ್ನು ಮತ್ತೆ ತಂದುಕೊಡಿಸುವುದರಲ್ಲಿ ಲಕ್ಷ್ಮಿಯಮ್ಮಣ್ಣಿಯವರು ಸಹಾಯವಾದರು. ಕ್ರಿ.ಶ. ೧೮೩೧ರಲ್ಲಿ ಒಡೆಯರ ಆಡಳಿತ ಮತ್ತೆ ಕೈತಪ್ಪಿ ಬ್ರಿಟಿಶ್ ಕಮೀಷನರ್‌ಗಳ ಆಳ್ವಿಕೆಯಲ್ಲಿ ಮೈಸೂರು ವಿವಿಧ ಬದಲಾವಣೆಗೆ ಒಳಗಾಯಿತು. ಕಮೀಷನರ್ ನೇಮಕವಾದ ನಂತರ ರಾಜ್ಯದಲ್ಲಿ ಆಡಳಿತವನ್ನು ಬೆಂಗಳೂರು, ಅಷ್ಟಗ್ರಾಮ, ಚಿತ್ರದುರ್ಗ, ನಗರವೆಂದು ನಾಲ್ಕು ವಿಭಾಗಗಳಾಗಿ ವಿಂಗಡಿಸಿ ಪ್ರತಿಯೊಂದಕ್ಕೂ ಒಬ್ಬೊಬ್ಬ ಐರೋಪ್ಯ ಅಧಿಕಾರಿಯನ್ನು ನೇಮಿಸಲಾಯಿತು. ಪ್ರತಿಯೊಂದು ವಿಭಾಗದಲ್ಲೂ ತಾಲೂಕುಗಳನ್ನು ರಚಿಸಿ ಆಡಳಿತವನ್ನು ಅಮಲ್‌ದಾರನಿಗೆ ವಹಿಸಲಾಯಿತು. ಹಾಗೆಯೇ ಹೋಬಳಿಗಳಾಗಿ ವಿಭಜಿಸಿ ಇವುಗಳ ಆಡಳಿತವನ್ನು ಶೇಖದಾರನಿಗೆ ವಹಿಸಲಾಯಿತು. ಕೇಂದ್ರ ಕಾರ್ಯಾಲಯದಲ್ಲಿ ಕಂದಾಯ, ಅಂಚೆ, ಪೋಲೀಸ್, ಸಾರಿಗೆ ಸಂಪರ್ಕ, ನ್ಯಾಯಾಂಗ, ವಿದ್ಯಾಭ್ಯಾಸ ಹೀಗೆ ಪ್ರತ್ಯೇಕ ಇಲಾಖೆಗಳಿದ್ದು, ಅವುಗಳಿಗೆ ಒಬ್ಬೊಬ್ಬ ಮುಖ್ಯಾಧಿಕಾರಿಯನ್ನು ನೇಮಕ ಮಾಡಲಾಯಿತು. ಇಷ್ಟಾಗಿಯೂ ಬ್ರಿಟಿಷರ ಕಾಲದಲ್ಲಿ ಗ್ರಾಮಸ್ಥರಿಗೆ ಆತ್ಮರಕ್ಷಣೆಗಾಗಿ ಆಯುಧ ಬಳಸಲು ಅನುಮತಿಯಿತ್ತು.

ಬ್ರಿಟಿಷರ ಕಾಲದಲ್ಲಿ ಗ್ರಾಮಗಳ ಆರ್ಥಿಕ ಸ್ಥಿತಿ ಹದಗೆಟ್ಟಿತೆಂದೇ ಹೇಳಬೇಕು. ಕಾರಣ ಬ್ರಿಟೀಶರು ಭೂಮಿಯನ್ನು ಖಾಸಗಿಯಾಗಿಸಿ ಅದನ್ನು ಸರ್ಕಾರದ್ದೆಂದು, ಸರ್ಕಾರದ ಇಚ್ಛೆಯಂತೆ ವರ್ಗಾಯಿಸಬಹುದು ಹಾಗೂ ಗುತ್ತಿಗೆ ನೀಡಬಹುದು ಎನ್ನುವ ಹಂತಕ್ಕೆ ಬಂದರು. ಅಂದರೆ

ರೈತ ಉಳುವ ಭೂಮಿ ಸರ್ಕಾರದ್ದು, ಆತ ಕೊಡುವ ಕಂದಾಯ ಬಾಡಿಗೆ ಮತ್ತು ಅದನ್ನು ಗುತ್ತಿಗೆಯೆಂದು ತಿಳಿದಿದ್ದಿತ್ತು. ಕ್ರಿ.ಶ. ೧೭೯೩ರಲ್ಲಿ ಬಂಗಾಳದಲ್ಲಿ ಕಾಯಂ ಗುತ್ತೇದಾರಿ ಪದ್ಧತಿಯನ್ನು ಜಾರಿಗೆ ತಂದರು.

ಬ್ರಿಟಿಷರ ಈ ನೀತಿಯಿಂದ ಜಮೀನ್ದಾರಿ ವರ್ಗವೊಂದನ್ನು ಅಸ್ತಿತ್ವಕ್ಕೆ ತಂದರು. ಇದರಿಂದ ರೈತನಿಗೂ ಸರ್ಕಾರಕ್ಕೂ ನೇರವಾದ ಸಂಬಂಧವೇರ್ಪಟ್ಟದ್ದೇನೋ ನಿಜ. ಆದರೆ ಕಂದಾಯವನ್ನು ಅವರಿಗೆ ತಿಳಿದ ಹಾಗೆ ಏರಿಸುವ ಕ್ರಯಕ್ಕೆ ಈ ಪದ್ಧತಿಯಲ್ಲಿ ಅವಕಾಶವಿತ್ತು. ಯಾವುದೇ ವ್ಯವಸ್ಥೆ ಪದ್ಧತಿಯಿದ್ದರೂ ಬ್ರಿಟಿಷರಿಗೆ ಕಂದಾಯವೇ ಪ್ರಮುಖವಾದ ಆದಾಯವಾಗಿತ್ತು. ಭಾರತದಲ್ಲಿ ಬಹುತೇಕ ಗ್ರಾಮಗಳಲ್ಲಿ ಮಳೆಯನ್ನು ಆಶ್ರಯಿಸಿದ ಬೆಳೆಯಾದುದರಿಂದ ಕಂದಾಯವನ್ನು ಪಾವತಿಸಲು ರೈತರಿಗೆ ಕಷ್ಟವಾಗಿರುತ್ತಿತ್ತು. ಮಳೆ ಬರಲಿ, ಬಾರದಿರಲಿ ಕಂದಾಯವನ್ನು ಕಡ್ಡಾಯವಾಗಿ ಕಟ್ಟಲೇಬೇಕಾಗಿತ್ತು. ಅತಿವೃಷ್ಟಿಯಿಂದ ಕೆಲಮೊಮ್ಮೆ ಬೆಳೆ ನಾಶವಾದರೆ, ಮತ್ತೊಮ್ಮೆ ಅನಾವೃಷ್ಟಿಯಿಂದ ಬೆಳೆಯೇ ಬರುತ್ತಿರಲಿಲ್ಲ. ನಮ್ಮ ಬೇಸಾಯವನ್ನು ಮಳೆಯೊಡನಾಡುವ ಜೂಜಾಟ ಎಂದು ಕರೆದಿರುವುದು ಈ ಹಿನ್ನೆಲೆಯಲ್ಲಿಯೇ. ಕಂದಾಯವನ್ನು ರೈತರು ಕಟ್ಟದಿದ್ದ ಸಂದರ್ಭದಲ್ಲಿ ಭೂಮಿ ಹರಾಜಾಗುವ ಸಂದರ್ಭ ಇದ್ದವು. ನಿರ್ದಯಿಯಾದ ಜಮೀನ್ದಾರವರ್ಗ, ಲೇವಾದೇವಿಗಾರರು ಹುಟ್ಟಿಕೊಂಡದ್ದು ಈ ಸಂದರ್ಭದಲ್ಲಿಯೇ. ಈ ಪರಿಸ್ಥಿತಿಯನ್ನು ಗಮನಿಸಿದರೆ ಗ್ರಾಮಗಳ ಅಭಿವೃದ್ಧಿ ಎಲ್ಲಿ ಸಾಧ್ಯವಾದೀತು.

ಕೈಗಾರೀಕರಣದ ನಂತರ ಗ್ರಾಮಸಮಾಜ ಬದಲಾವಣೆಯ ಗಾಳಿಗೆ ಸಿಕ್ಕಿ ಹಾಗೂ ಹೊಸ ಉತ್ಪಾದನಾ ಸಾಮಗ್ರಿಗಳನ್ನು ರೂಪಿಸಿಕೊಳ್ಳುವಲ್ಲಿ ಯಶಸ್ವಿಯನ್ನು ಪಡೆಯಲಾಗದೆ ತೊಳಲಾಡಿತು. ದಲಿತ ಮತ್ತು ಕೆಳವರ್ಗದ ಜನರಿಗೆ ಗ್ರಾಮಸಮಾಜ ಜಮೀನ್ದಾರಿ ವ್ಯವಸ್ಥೆಯಿಂದ ಬಿಡುಗಡೆ ಹೊಂದಲು ಸಹಾಯಕವಾಯಿತು. ಗ್ರಾಮಸಮಾಜ ಅದಕ್ಕಿಂತ ದೂರವಾಗಿ ಉಳಿದಿರುವ ಬುಡಕಟ್ಟು ಸಮಾಜ ಕೈಗಾರೀಕರಣದ ಸವಾಲುಗಳನ್ನು ಪ್ರತಿಕ್ರಿಯಿಸಲಾರದ ಸ್ಥಿತಿಯಲ್ಲಿ ಉಳಿದು ಕೊಂಡಿದೆ. ಹಕ್ಕಿಪಕ್ಕಿಗಳು, ಜೇನುಕುರುಬರು, ಹಸಲರು, ಮ್ಯಾಸರು ಇತ್ಯಾದಿ ಬುಡಕಟ್ಟುಗಳು ಯಂತ್ರನಾಗರಿಕತೆಯ ಮುಂದೆ ನಿಸ್ಸಹಾಯಕವಾಗಿವೆ.

ಕೈಗಾರೀಕರಣ ಮತ್ತು ನಗರೀಕರಣದ ಪರಿಣಾಮವಾಗಿ ಗ್ರಾಮಸಮಾಜದಿಂದ ಪ್ರದೇಶಗಳಿಗೆ ವಲಸೆ ಹೋದ ಜನರಿಗೆ ಆಧುನಿಕ ಸವಲತ್ತುಗಳು ದೊರಕಿದವೇನೋ ನಿಜ. ಆದರೆ ನಗರ ಜೀವನದ ಸಂಕೀರ್ಣತೆ ಗ್ರಾಮೀಣ ನೆಲೆಯಿಂದ ಬಂದ ಸರಳಜೀವಿಗಳ ಜೀವನದಲ್ಲಿ ಸ್ಥಾನ ಪಡೆಯಿತು. ಹಟ್ಟಿಯಿಂದ ಹೋದ ಸಾಮಾನ್ಯವರ್ಗ ನಗರ ಸಮಾಜದೆದುರು ಪ್ರತಿಭಟಿಸುವ ಶಕ್ತಿಯಿಲ್ಲದೆ ಕಳವಳಕ್ಕೊಳಗಾಗಿ ಕುಬ್ಜವಾಯಿತು. ವಲಸೆ ಹೋದ ಗ್ರಾಮೀಣ ಜನರು, ಕೆಳವರ್ಗದವರು ಅತ್ಯಂತ ಕಡುಬಡವರಾದುದರಿಂದ ಪಟ್ಟಣಗಳಲ್ಲಿ ಬಾಡಿಗೆ ಮನೆ ಹಿಡಿಯುವ ಆರ್ಥಿಕ ಶಕ್ತಿಯಿಲ್ಲದೆ ಪಟ್ಟಣಗಳ ಹೊರವಲಯದಲ್ಲಿ ಕೊಳಚೆ ಪ್ರದೇಶಗಳಲ್ಲಿ ವಾಸಿಸಿದರು.

ಅವರು ಜೋಪಡಿಗಳು ಶುದ್ಧ ನೀರು, ಗಾಳಿ, ಬೆಳಕು ಇಲ್ಲದ ವಾತಾವರಣದಲ್ಲಿ ಒಂದು ರೀತಿಯಲ್ಲಿ ಹಟ್ಟಿಗಳೇ ಎಂದು ಹೇಳಿದರೆ ತಪ್ಪಾಗುವುದಿಲ್ಲ. ಗಣಿಯಿಂದ ತಮ್ಮ ಜಮೀನು ಕಳೆದುಕೊಂಡು ಹಟ್ಟಿಯ ಕೆಲಸ ಸಿಗದೆ ಸಂಸಾರ ಸಮೇತ ಬೆಂಗಳೂರಿಗೆ ಗುಳೆ ಹೋಗಿ ಅತಂತ್ರ ಸ್ಥಿತಿಯಲ್ಲಿ ಜೀವನ ಮಾಡುತ್ತಿರುವುದು ತಿಳಿದುಬರುತ್ತದೆ.

**ಬೇಡರು ನೆಲೆಸಿರುವ ಪ್ರಮುಖ ಎಡೆಗಳು**

ಒಂದು ನಿರ್ದಿಷ್ಟ ನೆಲೆ ಮಾನವನ ನಾಗರಿಕತೆಯನ್ನು ಸೂಚಿಸುತ್ತದೆ. ಒಂದು ಸ್ಥಳ ಅವನ ಬದುಕನ್ನು ನಿರ್ಧರಿಸುವಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಮಾನವನ ಅನಾಗರಿಕತೆಯನ್ನು ಹೋಗಲಾಡಿಸಿ ನಾಗರಿಕತೆಯನ್ನು ತರುವಲ್ಲಿ ಒಂದು ಸ್ಥಳವೇ ಕಾರಣವಾಯಿತು. ಅಲೆಮಾರಿಗಳಾಗಿದ್ದ ಕೆಲವು ಬುಡಕಟ್ಟು ಸಮುದಾಯಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದುದನ್ನು ನಿಲ್ಲಿಸಿ ಕಾಡಿನಲ್ಲೋ ಕಾಡಿನಂಚಿನಲ್ಲೋ ನೆಲೆಸಿ ಜೀವನವನ್ನು ರೂಪಿಸಿಕೊಂಡರು. ಕಾಡು ಅವರ ಅವಿಭಾಜ್ಯ ಅಂಗವಾಗಿತ್ತು. ಕಾಡು, ಬೆಟ್ಟಗುಡ್ಡ, ಕಣಿವೆ ಪ್ರದೇಶದಲ್ಲಿ ಅನೇಕ ಬುಡಕಟ್ಟು ಜನ ಸಮುದಾಯಗಳು ಇಂದಿಗೂ ಜೀವನವನ್ನು ನಡೆಸಿಕೊಂಡು ಬಂದಿವೆ. ಕರ್ನಾಟಕದಲ್ಲಿ ಕಂಡುಬರುವ ಅನೇಕ ಬುಡಕಟ್ಟು ಜನಸಮುದಾಯಗಳಲ್ಲಿ ಬೇಡ ಜನಾಂಗವೂ ಒಂದೆಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಕುರುಚಲು ಗಿಡಗಳಿಂದ ಕೂಡಿದ, ಕಲ್ಲು ಗುಡ್ಡಗಳಿಂದ ಆವೃತವಾದ ಅರಣ್ಯ ಪ್ರದೇಶದಲ್ಲಿ ಬೇಡರು ಕರ್ನಾಟಕದಲ್ಲಿ ಈ ಹಿಂದಿನಿಂದಲೂ ವಾಸಿಸುತ್ತಾ ಬಂದಿದ್ದಾರೆ. ಆದರೆ ನಾಗರಿಕತೆಯ ತೀವ್ರ ಬೆಳವಣಿಗೆಯಿಂದಾಗಿ ಈ ಅರಣ್ಯ ಪ್ರದೇಶ ಬಹಳಷ್ಟು ಬದಲಾಗಿದೆ. ಹಿಂದೆ ಅಧಿಕಾರಕ್ಕೆ ಬಂದ ಪಾಳೆಯಗಾರರ ನೆಲೆಗಳು ಇಂತಹ ಅರಣ್ಯ ಪ್ರದೇಶಗಳಿಂದಲೇ ರೂಪಿತವಾಗಿದ್ದವು. ಪಾಳೆಯಗಾರರು ದಖನ್ ಪ್ರಸ್ಥಭೂಮಿಯಾದ್ಯಂತ ಹರಡಿರುವ ಬೆಟ್ಟಗುಡ್ಡಗಳ ಮೇಲೆ ಕಟ್ಟಿದ್ದ ದುರ್ಗಗಳ ಭವನಗಳಲ್ಲಿ ವಾಸ ಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ.[೨೦]

ಪುರಾಣಗಳು ತಿಳಿಸುವಂತೆ ದ್ವಾಪರಯುಗದಿಂದಲೂ ದಕ್ಷಿಣದ ಪೈನಗಂಗ ತೀರ ಪ್ರದೇಶದಿಂದ ರತ್ನಗಿರಿಯವರೆಗಿನ ಪ್ರದೇಶ ಬೇಡರ ರಾಜ್ಯವಾಗಿತ್ತು. ಕಲಿಯುಗ ಪ್ರಾರಂಭದಲ್ಲಿ ದಕ್ಷಿಣ ದೇಶದಲ್ಲಿ ಬೇಡರ ವಿನಾಃ ಬೇರೆ ಯಾವ ಜನಾಂಗವೂ ಇರಲಿಲ್ಲ. ವೇದಗಳು ಹಾಗೂ ಮಹಾಕಾವ್ಯಗಳು ಸಹ ಬೇಡರ ನೆಲೆ, ರಾಜ್ಯಗಳ ಕುರಿತು ಮಾಹಿತಿಯನ್ನು ನೀಡುತ್ತವೆ. ಬೇಡರು ತಪತಿ ನದಿಗಳ ಪ್ರದೇಶದಿಂದ ಹಿಡಿದು ವಿಂಧ್ಯ ಪರ್ವತದಲ್ಲೆಲ್ಲ ಹೆಚ್ಚಾಗಿದ್ದು ತದನಂತರ ಗುಂಟೂರು, ಕಡಪ, ಕರ್ನೂಲು, ಅನಂತಪುರ ಮತ್ತು ಬಳ್ಳಾರಿ, ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸತೊಡಗಿದ್ದರು. ಆರ್ಯ ಸಂಸ್ಕೃತಿಯ ವಿಸ್ತರಣೆಯಿಂದಾಗಿ ದಕ್ಷಿಣ ಭಾರತದ ಕಡೆಗೆ ಬಂದು ವಿಂಧ್ಯ ಪರ್ವತ ಪ್ರದೇಶದಲ್ಲಿ ನೆಲೆಯೂರಿದರು ಎಂಬ ಉಲ್ಲೇಖವು ಋಗ್ವೇದದ ಕಡೆಯ ಶ್ಲೋಕಗಳಲ್ಲಿ ಇದೆ. ಭಾರತದ ಅತ್ಯಂತ ಪ್ರಾಚೀನ ಪ್ರದೇಶವಾಗಿದ್ದ ವಿಂಧ್ಯ

ಪರ್ವತ ಹಾಗೂ ಕನ್ಯಾಕುಮಾರಿಗಳ ನಡುವಿನ ದೇಶದಲ್ಲಿ ಈ ಜನ ವಾಸಿಸುತ್ತಿದ್ದರು. ವಿಂಧ್ಯ ಪರ್ವತ ಪ್ರದೇಶ ಈ ಹಿನ್ನೆಲೆಯೂ ಅವರ ಮೂಲಸ್ಥಳವಾಗಿರಬಹುದು. ಆದರೆ ಋಗ್ವೇದದಲ್ಲಿನ ಉಲ್ಲೇಖವನ್ನು ನೋಡಿದಾಗ ಸಿಂಧೂ ತೀರ ಪ್ರದೇಶದಲ್ಲಿದ್ದ ಬೇಡರು ಆರ್ಯರ ದಾಳಿಗೆ ಅಂಜಿ ದಕ್ಷಿಣದ ಕಡೆ ಬಂದರು. ಸಿಂಧೂ ತೀರ ಪ್ರದೇಶವೇ ಬೇಡರ ನೆಲೆಯಾಗಿರ ಬಹುದೆಂದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ನೆಲೆಸಿರುವ ಕೆಲವು ಬೇಡರು ತಾವು ಶ್ರೀಶೈಲ ಪ್ರದೇಶದಿಂದ ಬಂದವರೆಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹೀಗೆ ಹೇಳಿಕೊಳ್ಳುವ ಅನೇಕ ಕುಟುಂಬಗಳನ್ನು ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಕಾಣಬಹುದು. ಪಶುಪಾಲನೆ ಕೈಗೊಂಡು ಜೀವನ ನಡೆಸುತ್ತಿರುವಾಗ ಒಮ್ಮೆ ಶ್ರೀಶೈಲ ಪ್ರದೇಶದಲ್ಲಿ ಭೀಕರ ಬರಗಾಲ ಕಾಣಿಸಿಕೊಂಡಿತು. ಆಗ ತಮ್ಮ ತುರು ಮುಂದೆಯೊಂದಿಗೆ ಕರ್ನಾಟಕದ ಕಡೆ ವಲಸೆ ಬಂದರು ಎಂದು ಹೇಳಲಾಗುವುದು. ನಾಯಕನಹಟ್ಟಿ ಪಾಳೆಯಗಾರರ ಮೂಲಪುರುಷ ಕಾಟೇಮಲ್ಲನಾಯಕನು ಶ್ರೀಶೈಲ ಪ್ರದೇಶದಿಂದಲೇ ಬಂದವನಾಗಿದ್ದಾನೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಬೇಡರು ನೆಲೆಸಿರುವುದನ್ನು ಕಾಣಬಹುದು. ಚಿತ್ರದುರ್ಗ, ಬಳ್ಳಾರಿ, ರಾಯಚೂರು, ಕೊಪ್ಪಳ, ಗುಲ್ಬರ್ಗಾ, ತುಮಕೂರು, ದಾವಣಗೆರೆ, ಕೋಲಾರ ಮುಂತಾದ ಜಿಲ್ಲೆಗಳಲ್ಲಿ ಅತ್ಯಧಿಕವಾಗಿ ಬೇಡರು ನೆಲೆಸಿದ್ದಾರೆ. ಭಾರತದ ಜನಗಣತಿ ವರದಿಗಳು ಇದನ್ನು ಪುಷ್ಟೀಕರಿಸುತ್ತವೆ. ಕ್ರಿ.ಶ. ೧೯೧೧ರಲ್ಲಿ ಒಟ್ಟು ೧೪೦೮೫೨ ಬೇಡರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ಅತ್ಯಧಿಕ ಅಂದರೆ ೬೮೧೭೪ ಬೇಡರು ನೆಲೆಸಿದುದು ಕಂಡುಬರುತ್ತದೆ.[೨೧]

ಭಾರತದ ವಿವಿಧ ಭಾಗಗಳಲ್ಲಿ ಬೇಡರು ಅನೇಕ ಹೆಸರುಗಳಿಂದ ಕರೆಸಿಕೊಂಡು ನೆಲೆಸಿದ್ದಾರೆ. ಅವರನ್ನು ಆ ಪ್ರದೇಶದಲ್ಲಿ ಬುಡಕಟ್ಟು ಜನರೆಂದೇ ಗುರುತಿಸುತ್ತಾರೆ. ದಕ್ಷಿಣ ಭಾರತದ ಮಧ್ಯಯುಗೀನ ಕಾಲದಲ್ಲಿ ಪ್ರಸಿದ್ಧಿ ಪಡೆದ ವಿಜಯನಗರ ಸಾಮ್ರಾಜ್ಯಕ್ಕಿಂತ ಮುನ್ನ ತುಂಗಭದ್ರಾ ನದಿತೀರ ಪ್ರದೇಶದಲ್ಲಿದ್ದ ಕುಮ್ಮಟದುರ್ಗ ಅರಸರ ಕಾಲದಲ್ಲಿ ಬೇಡರು ಒಂದು ನಿಶ್ಚಿತ ನಿರ್ದಿಷ್ಟ ನೆಲೆಯನ್ನು ಕಂಡುಕೊಂಡರು. ಅದಕ್ಕಾಗಿ ದೊರೆಗಳು ಅವರನ್ನು ನೆಲೆಸುವಂತೆ ಮಾಡಲು ಅನೇಕ ಅಗತ್ಯಕ್ರಮಗಳನ್ನು ಕೈಗೊಂಡರು. ಆಗ ಬೇಡರು ಕುಮ್ಮಟದುರ್ಗದ ಪ್ರದೇಶದ ಸುತ್ತಮುತ್ತ ಬಂದು ನೆಲೆಸಿದರು. ವಿಜಯನಗರ ಕಾಲದಲ್ಲಿ ದೊರೆತ ರಾಜಾಶ್ರಯದಿಂದ ಬಲಿಷ್ಠರಾದ ಕೆಲವು ಬೇಡರು ಪಾಳೆಯಗಾರಿಕೆಯನ್ನು ಆರಂಭಿಸಿದರು. ಆನೆಗೊಂದಿಯೇ ಬೇಡ ಪಾಳೆಗಾರಿಕೆಯ ಮೊದಲ ಸ್ಥಳ. ನಂತರದಲ್ಲಿ ಕರ್ನಾಟಕ, ಆಂಧ್ರ, ತಮಿಳುನಾಡು ಭಾಗಗಳಲ್ಲಿ ಬೇಡರು ವಿಜಯನಗರ ಅರಸರ ಅಧೀನರಾಗಿ, ಪಾಳೆಯಗಾರರಾಗಿ, ಮಾಂಡಲಿಕರಾಗಿ ಸೇವೆಯನ್ನು ಸಲ್ಲಿಸಿದರು. ವಿಜಯನಗರೋತ್ತರ ಕಾಲದಲ್ಲಿ ಸುಮಾರು ಎಪ್ಪತ್ತೇಳು ಪಾಳೆಯಗಾರರು ಇದ್ದರೆಂದು ಹೇಳಲಾಗುವುದು. ಮದ್ರಾಸ್ ಕಂದಾಯ ಸಂಗ್ರಹಣ ಮುಖ್ಯಾಧಿಕಾರಿಯಾಗಿದ್ದ ಥಾಮಸ್ ಮನ್ರೋ(ಕಲೆಕ್ಟರ್) ಒಟ್ಟು ಎಂಬತ್ತು ಮಂದಿ ಪಾಳೆಯಗಾರರ ಯಾದಿಯನ್ನು ಸಿದ್ಧಪಡಿಸಿದನು.

ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು, ಕೋಲಾರ, ದಾವಣಗೆರೆ, ಬಳ್ಳಾರಿ, ಕೊಪ್ಪಳ, ರಾಯಚೂರು, ಗುಲ್ಬರ್ಗಾ ಜಿಲ್ಲೆಗಳಲ್ಲಿ ವಿಜಯನಗರೋತ್ತರದಲ್ಲಿ ಅನೇಕ ಪಾಳೆಯಗಾರರು ಸ್ವತಂತ್ರಗೊಂಡು ಅಧಿಕಾರ ನಡೆಸಿದರು. ಅನೇಕ ಪಾಳೆಯಗಾರರ ವಂಶಜರು ಆನೆಗುಂದಿಯೇ ತಮ್ಮ ಮೂಲ ಸ್ಥಳವೆಂದು ಹೇಳಿಕೊಳ್ಳುತ್ತಾರೆ. ಕರ್ನಾಟಕದ ವಿವಿಧ ಸ್ಥಳಗಳಲ್ಲಿ ಅಲ್ಲದೆ ವಿದೇಶದಲ್ಲೂ ಕೆಲವು ಪಾಳೆಯಗಾರರ ವಂಶಸ್ಥರು ನೆಲೆಸಿದ್ದಾರೆ.

ಕರ್ನಾಟಕದಲ್ಲಿ ಪೂರ್ವ ಕಾಲದಿಂದ ಕ್ಷಾತ್ರವೃತ್ತಿಯಿಂದ ಉಪಜೀವನ ಮಾಡುತ್ತಿದ್ದ ಬೇಡರು ವಿಶೇಷವಾಗಿ ಕರ್ನಾಟಕ ಮತ್ತು ಆಂಧ್ರದಲ್ಲಿರುವವರು. ಕಲ್ಬುರ್ಗಿ, ಬಿಜಾಪುರ, ರಾಯಚೂರು, ಬಳ್ಳಾರಿ, ಕರ್ನೂಲು, ಕಡಪ, ಅನಂತಪುರ, ಚಿತ್ರದುರ್ಗ, ಉತ್ತರ ಆರ್ಕಾಟ್ ಜಿಲ್ಲೆಗಳಲ್ಲಿ ವಾಸಿಸುತ್ತಿರುವರು.[೨೨] ಚಿನ್ನಹಗರಿ ನದಿಯ ಪರಿಸರದಲ್ಲಿ ಅಥವಾ ತುಂಗಭದ್ರಾ ಮತ್ತು ವೇದಾವತಿ ನದಿ ಮಧ್ಯದ ಪ್ರದೇಶವನ್ನು ಬೇಡರನಾಡು ಎನ್ನಲಾಗುತ್ತದೆ.[೨೩]

ಬೇಡರು ಯಾವುದೇ ಸ್ಥಳಕ್ಕೆ ಹೋಗಿ ನೆಲೆಸಿದ್ದರೂ ವಿಜಯನಗರದೊಡನೆ ಮೊದಲಿದ್ದಂತಹ ಸಂಬಂಧವನ್ನೇ ಮುಂದುವರೆಸಿಕೊಂಡು ಬಂದಿದ್ದಾರೆ. ಆಗಾಗ ಅಲ್ಲಿಗೆ (ಹಂಪಿ) ತೆರಳಿ ತಮ್ಮ ಪೆಟ್ಟಿಗೆ ದೇವರುಗಳನ್ನು ಪೂಜಿಸಿಕೊಂಡು, ಅಲ್ಲಿನ ರಾಜವಂಶಸ್ಥರಿಗೆ ಕಾಣಿಕೆಯನ್ನು ನೀಡಿ ಬರುವ ಸಂಪ್ರದಾಯವಿದೆ. ಹರತಿ ದೊರೆ ತಿಪ್ಪರಾಜನ ತಂದೆಯೋ ತಾತನೋ ಆನೆಗೊಂದಿ ಮತ್ತು ವಿಜಯನಗರ ಕಡೆಯಿಂದ ವಲಸೆ ಬಂದವನು ಎನ್ನಲಾಗಿದೆ. ಕಾಟೇಮಲ್ಲನಾಯಕನು ಸಹ ಮೊದಲು ಆನೆಗೊಂದಿಗೆ ಬಂದು ನಂತರ ಹಟ್ಟಿ ಮನೆತನ ಸ್ಥಾಪಿಸಿದನು ಎನ್ನಲಾಗುತ್ತದೆ.[೨೪] ತರೀಕೆರೆ ಪಾಳೆಯಗಾರ ವಂಶ ವೃತ್ತಾಂತದ ಪ್ರಕಾರ ಧೂಮರಾಜ ಎಂಬುವನು ವಿಜಯನಗರ ದಿಂದ ಬಂದವನು.[೨೫] ಚಿತ್ರದುರ್ಗದ ಮೂಲಪುರುಷ ಚಿತ್ರನಾಯಕ ಆನೆಗೊಂದಿಯ ಕಡೆಯಿಂದ ಬಂದು ಉಚ್ಚಂಗಿದುರ್ಗ, ಬಿಳಿಚೋಡು, ಕೋಗುಂಡೆ, ಹೆಬ್ಬಾಳು ಮಾರ್ಗವಾಗಿ ನೀರ್ಥಡಿಗೆ ಬಂದು ಪಾಳೆಯ ಹಾಕಿದನಂತೆ. ಆನೆಗೊಂದಿ ಮತ್ತು ಬೇಡರ ಬಗ್ಗೆ ಜಿ.ವರದರಾಜರಾವ್ ಅವರು, ವಿಜಯನಗರವು ಆನೆಗೊಂದಿ ಬೇಡರ ಪ್ರಮುಖ ಕೇಂದ್ರವಾಗಿತ್ತು. ಈ ಸ್ಥಳವು ಕರ್ನಾಟಕದಲ್ಲಿ ವಿಜಯನಗರೋತ್ತರ ಕಾಲದಲ್ಲಿ ತಲೆ ಎತ್ತಿದ ಅನೇಕ ಬೇಡ ಪಾಳೆಯ ಪಟ್ಟುಗಳ ಕೇಂದ್ರ ಸ್ಥಾನವೂ ಆಗಿತ್ತು. ಒಂದು ಕಾಲದಲ್ಲಿ ಬೇಡರ ಮುಖ್ಯ ನೆಲೆಯಾಗಿದ್ದ ಈ ಆನೆಗೊಂದಿಯಿಂದ ಅನೇಕ ಶಾಖೆಗಳವರು ಬೇರೆ ಬೇರೆ ಕಡೆಗೆ ಹೋಗಿ ನೆಲೆಸಿದುದನ್ನು ಕಂಪಳ ಎಂದು ಕರೆಯುವುದುಂಟು ಎಂಬ ಸಂಗತಿಯನ್ನು ತಿಳಿಸಿದ್ದಾರೆ. ಹಲಗಲಿಯ ಬೇಡರು ಶೂರರು, ಕಲಿಗಳು ಆಗಿದ್ದುದನ್ನು ಸ್ವಾತಂತ್ರ್ಯ ಹೋರಾಟವೇ ನಿರೂಪಿಸುತ್ತದೆ. ಅವರದು ಸೈನಿಕ ಸೇವಾವರ್ಗವಾಗಿತ್ತು. ಅವರು ತರೀಕೆರೆ, ಚನ್ನಗಿರಿ, ಸುರಪುರ, ಚಿತ್ರದುರ್ಗ, ಹರಪನಹಳ್ಳಿ ಮುಂತಾದ ಸ್ಥಳಗಳಲ್ಲಿ ಹೋಗಿ ಸೈನಿಕರಾಗಿ ಸೇವೆ ಸಲ್ಲಿಸುತ್ತಾ ಅವರ ರಕ್ಷಕರಾಗಿದ್ದರು. ಪಾಳೆಯಗಾರರ ಆಶ್ರಯದಲ್ಲಿ ನೆಮ್ಮದಿಯ ಬದುಕನ್ನು ಕಳೆಯುತ್ತಿದ್ದರು.[೨೬] ಈ ಸಂಸ್ಥಾನಗಳು

ಒಂದೊಂದಾಗಿ ಅಧಿಕಾರವನ್ನು ಕಳೆದುಕೊಳ್ಳುತ್ತಾ ಬಂದ ಹಾಗೆ ಅವರ ಜೀವನವೂ ಅತಂತ್ರ ವಾಯಿತು. ಯುದ್ಧಗಳು, ಟಿಪ್ಪು ಸುಲ್ತಾನ ಮತ್ತು ಅವನ ತಂದೆ ಹೈದರನ ಮತಾಂತರ ಹಾಗೂ ದಾಳಿಗಳಿಗೆ ಅಂಜಿದ ಕೆಲ ಬೇಡರು ಬೇರೆ ಬೇರೆ ಸ್ಥಳಗಳಿಗೆ ಹೋಗಿ ನೆಲೆಸಿರುವರು.[೨೭] ಜೀವನ ನಿರ್ವಹಣೆಗಾಗಿಯೂ ಕೆಲ ಕುಟುಂಬಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿರುವುದುಂಟು.

## ಬುಡಕಟ್ಟು ಜನಾಂಗದಲ್ಲಿ ಸೀಮೆಯ ಪರಿಕಲ್ಪನೆ

ಯಾವುದೇ ಬುಡಕಟ್ಟು ಜನಾಂಗ ತಾವು ತಲಾತಲಾಂತರಗಳಿಂದ ಜೀವಿಸಿದ ಪರಿಚಿತ ಪರಿಸರದಲ್ಲಿ ತಮ್ಮ ಪೂರ್ಣಮಟ್ಟದ ಬುಡಕಟ್ಟು ಸಂಸ್ಕೃತಿಯ ನೆಮ್ಮದಿಯ ಬದುಕಿನ ಚಟುವಟಿಕೆ ಗಳಿಗಾಗಿ ತಮಗೆ ಬೇಕಾದಷ್ಟು ಸಂಪನ್ಮೂಲಾಧಾರಿತ ಕಾಡನ್ನು ಹಳ್ಳಿಯ ಸುತ್ತಲೂ ಸಾಂಪ್ರದಾಯಿಕ ವಾಗಿ ಗುರುತಿಸಿಕೊಂಡ ಸಾಂಸ್ಕೃತಿಕ ಗಡಿರೇಖೆಯನ್ನು ಸೀಮಾ/ಜಮ್ಮಾ/ಎಲ್ಲೆ ಗಡಿ ಎಂದು ಕರೆಯಲಾಗುತ್ತದೆ. ಹೀಗೆ ಸಾವಿರಾರು ವರ್ಷಗಳಿಂದಲೂ ನಿರ್ಮಿಸಿಕೊಂಡ ಈ ಗಡಿರೇಖೆಯು ಒಳಗೆ ನಿರ್ದಿಷ್ಟ ಬುಡಕಟ್ಟು ಸಮುದಾಯ ತನ್ನ ಬದುಕಿಗಾಗಿ ಕಾಡಿನ ಉತ್ಪನ್ನ ಆಹಾರಕ್ಕಾಗಿ ಬೇಸಾಯ ಹಾಗೂ ಇಡೀ ಬುಡಕಟ್ಟು ಜನಾಂಗದ ಸಾಂಸ್ಕೃತಿಕ ಬದುಕಿನ ಅವಿಚ್ಛಿನ್ನ ಚಟುವಟಿಕೆಯ ಭಾಗವಾಗಿರುತ್ತದೆ. ಇದನ್ನೇ ಸೀಮಾ ಪದ್ಧತಿಯೆಂದು ಕರೆಯಲಾಗುತ್ತದೆ. ತಲತಲಾಂತರಗಳಿಂದ ಮಡಿದ ಬುಡಕಟ್ಟು ಪೂರ್ವಜರ ಆತ್ಮಗಳು ಈ ಸೀಮಾ ರೇಖೆಯ ಒಳಗಿನ ಕ್ಷೇತ್ರದಲ್ಲಿ ನೆಲೆಸಿದ್ದು, ಕಾಡನ್ನು ಮತ್ತು ಕಾಡಿನ ಸಂಪನ್ಮೂಲಗಳನ್ನು ಬುಡಕಟ್ಟು ಹಳ್ಳಿಯವರಿಗಾಗಿ ರಕ್ಷಿಸುತ್ತಾ ಸಂಚರಿಸುತ್ತವೆ. ಇವರ ಆತ್ಮಗಳು ಹಳ್ಳಿಯ ಗಡಿರೇಖೆಯ ಅಂಚುಗಳಲ್ಲಿ ಕಲ್ಲಿನ ಗುಂಡಿನ ರೂಪದಲ್ಲಿಯೂ, ಮರಗಳಲ್ಲಿಯೂ ಇದ್ದು ಸೀಮೆಯನ್ನು ರಕ್ಷಿಸಿರುತ್ತಾರೆಂಬ ಗಾಢವಾದ ನಂಬಿಕೆಯಿಂದಾಗಿ ಆ ಬುಡಕಟ್ಟು ಜನಾಂಗಕ್ಕೆ ಗಡಿಯ ವ್ಯಾಪ್ತಿಯ ಒಳಗಿನ ಬುದಕು ನಿಶ್ಚಿಂತೆಯಿಂದಿರುತ್ತದೆ. ಹೀಗೆ ಮಡಿದವರ ಆತ್ಮಗಳಲ್ಲದೆ ಆತ್ಮಗಳನ್ನು ರಕ್ಷಿಸುವ ದೇವತೆಗಳು, ರಕ್ಷಣಾ ದೇವರುಗಳು ಬೇರೆ ಬೇರೆಯವೆಯಿದ್ದು, ಒಂದಕ್ಕೊಂದು ಪರಸ್ಪರ ಪೂರಕವಾಗಿ ಸೀಮಾಕ್ಷೇತ್ರದ ವ್ಯಾಪ್ತಿಯ ಸಂರಕ್ಷಣೆಯ ಜವಾಬ್ದಾರಿಯನ್ನು ಹೊಂದಿರುತ್ತವೆ.

ಕರ್ನಾಟಕದಲ್ಲಿ ವಾಸಿಸುತ್ತಿದ್ದ ಮಾನವ ತನಗಾಗಿ ಮನೆ ಅಂತ ಒಂದು ವ್ಯವಸ್ಥೆಯನ್ನು ಕಟ್ಟಿಕೊಳ್ಳಲು ಆರಂಭವಾದದ್ದು ಕ್ರಿ.ಪೂ. ೪೫೦೦ ವರ್ಷಗಳ ಹಿಂದೆ. ಅಂದರೆ, ನೂತನ ಶಿಲಾಯುಗದಲ್ಲಿ ಎಂಬುದು ಇತಿಹಾಸಕಾರರ ಅಭಿಮತವಾಗಿದೆ. ಏಕೆಂದರೆ, ಆ ನೂತನ ಶಿಲಾಯುಗದ ಕಾಲದ ಹೊತ್ತಿಗೆ ಆ ಮೊದಲು ಬೇಟೆಗಾರನಾಗಿ ಅಲೆಮಾರಿಯಾಗಿದ್ದ ಬದುಕು ಬದಲಾಗಿ ವ್ಯವಸಾಯಗಾರನಾಗಿ ಒಂದೆಡೆ ತಳವೂರುವಂತಾಯಿತು. ಆಗ ಆತನಿಗೆ ಮನೆ ಕಟ್ಟಿಕೊಳ್ಳುವುದೂ ಅನಿವಾರ್ಯವಾಯಿತು.

ಆ ಕಾಲದ ಮನೆಗಳು ಹೇಗಿದ್ದವು ಎಂಬುದು ನಮಗೆ ಇಂದು ಪೂರ್ಣವಾಗಿ ಗೊತ್ತಾಗದಿದ್ದರೂ ಸಿಕ್ಕಿರುವ ಕೆಲವೊಂದು ಸಾಕ್ಷ್ಯಗಳಿಂದ ಅವುಗಳ ಸ್ವರೂಪದ ಅಂದಾಜನ್ನಾದರೂ ಮಾಡಬಹುದಾಗಿದೆ. ಇತಿಹಾಸಕಾರರು ಮೈಸೂರು ಜಿಲ್ಲೆಯ ಹೆಮ್ಮಿಗೆ, ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಪಿಕ್ಲಿಹಾಳು, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆ ಮೊದಲಾದ ಸ್ಥಳಗಳಲ್ಲಿ ನಡೆಸಿರುವ ಉತ್ಖನನಗಳಲ್ಲಿ ಕಂಬಗಳನ್ನು ನೆಡಲು ಮಾಡಿರುವ ಗುಂಡಿಗಳು ಕಂಡುಬಂದಿದ್ದು, ಅವುಗಳ ಆಧಾರದ ಮೇಲೆ ಆ ಕಾಲದಲ್ಲಿ ಮರದ ಕಂಬಗಳನ್ನು ನೆಟ್ಟು, ಅವುಗಳ ಆಧಾರದ ಮೇಲೆ ಗುಡಿಸಲುಗಳನ್ನು ನಿರ್ಮಿಸುತ್ತಿದ್ದರು ಎಂದು ತಿಳಿದುಬರುತ್ತದೆ. ಬಳ್ಳಾರಿ ಜಿಲ್ಲೆಯ ಸಂಗನಕಲ್ಲಿನಲ್ಲಿ ನಡೆಸಿದ ನೆಲ ಅಗೆತದಲ್ಲಿ ಬಿದಿರಿನ ಪಡಿಯಚ್ಚನ್ನೊಳಗೊಂಡ ಮಣ್ಣಿನ ಭಾಗಗಳು ದೊರತಿವೆಯಂತೆ. ಸೀಳಿದ ಬೊಂಬಿನ ಜಾಳಿಗೆಗಳನ್ನು ನಾಲ್ಕರಿಂದ ಆರು ಅಡಿಗಳಷ್ಟು ಎತ್ತರದ ಗೋಡೆಗಳ ಮೇಲೆ ನಿಲ್ಲಿಸಿ, ಆ ಜಾಳಿಗೆಗೆ(ಚಾವಣಿಗಳಿಗೆ ಮಣ್ಣನ್ನು ಮೆತ್ತಲಾಗಿದ್ದುದನ್ನೂ ಗುರುತಿಸಲಾಗಿದೆ. ಅಲ್ಲಿ ದೊರೆತಿರುವ ಒಂದು ಗುಡಿಸಲಿನ ವ್ಯಾಸ ೧೮ ಅಡಿಯಷ್ಟು ದೊಡ್ಡದಾಗಿದ್ದಿತಂತೆ. ತೆಕ್ಕಲಕೋಟೆಯಲ್ಲಿ ಕಂಡುಬಂದ ಗುಡಿಸಲಿನ ಅವಶೇಷದ ಸ್ಥಳದಲ್ಲಿ ಮೊದಲು ತಗ್ಗು-ದಿಣ್ಣೆ ಇದ್ದ ನೆಲವನ್ನು ಕಲ್ಲು ಮಣ್ಣು ಹಾಕಿ ದಮ್ಮಸ್ಸು ಮಾಡಿ ಅಂದರೆ ಮಟ್ಟಸ ಮಾಡಿ ಅದರ ಮೇಲೆ ಒಂದೇ ಕೋಣೆಯ ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಿದ್ದರೆಂದು ತಿಳಿದುಬಂದಿದೆ. ಆ ಗುಡಿಸಲುಗಳು ೧೦ರಿಂದ ೧೨ ಅಡಿಯಷ್ಟು ವ್ಯಾಸದವಾಗಿದ್ದವು ಎಂದು ಗುರುತಿಸಲಾಗಿದೆ. ಈ ಗುಡಿಸಲುಗಳ ಗೋಡೆಗಳು ಬರಿಯ ಕಡ್ಡಿಗಳು ಅಥವಾ ಗರಿ ಇಲ್ಲವೆ ಸೊಪ್ಪುಗಳಿಂದ ಮಾಡಿದ ಸಾಮಾನ್ಯ ತಡಿಕೆಗಳೋ ಅಥವಾ ಅವುಗಳ ಮೇಲೆ ಮಣ್ಣು ಮೆತ್ತಿದ ಗೋಡೆಗಳೋ ಆಗಿರುತ್ತಿದ್ದವು ಎನ್ನಲಾಗಿದೆ. ಚಾವಣಿಯಿಂದ ಸೋರಿದ ಅಥವಾ ಬಯಲಿನಿಂದ ಹರಿದು ಬರುವ ನೀರು ಗುಡಿಸಲಿನ ಒಳಗೆ ನುಗ್ಗದಿರಲೆಂದು ಸುತ್ತಲೂ ಕಲ್ಲುಗುಂಡುಗಳನ್ನು ಜೋಡಿಸಿ ದಿಂಡು ಮಾಡಿರುತ್ತಿದ್ದರು ಎಂದೂ ಅಧ್ಯಯನಕಾರರು ತಿಳಿಸುತ್ತಾರೆ. ವಿಶೇಷವೆಂದರೆ ಇದೇ ರೀತಿ ಗುಡಿಸಲುಗಳನ್ನು ನಿರ್ಮಿಸಿಕೊಳ್ಳುವ ಪದ್ಧತಿ ಈಗಲೂ ಹಲವೆಡೆ ಕಂಡುಬರುತ್ತಿದೆ.

ತೆಕ್ಕಲಕೋಟೆಯಲ್ಲಿ ದೊರೆತಿರುವ ಅವಶೇಷಗಳಿಂದ ಅಲ್ಲಿನ ಗುಡಿಸಲುಗಳು ವೃತ್ತಾಕಾರದ ತಳವಿನ್ಯಾಸ ಹೊಂದಿದ್ದವು ಎಂದು ತಿಳಿದುಬಂದಿದ್ದರೆ, ಹೆಮ್ಮಿಗೆಯ ಉತ್ಖನನದಲ್ಲಿ ಬಹುಮಟ್ಟಿಗೆ ಆಯಾಕಾರದ ತಳವಿನ್ಯಾಸದ ಏಕಕೋಣೆಯ ಮನೆಗಳನ್ನು ಕಟ್ಟುತ್ತಿದ್ದರೆಂದು ತಿಳಿದುಬಂದಿದೆ.

ಮುಂದೆ ಕ್ರಿ.ಪೂ. ಒಂದನೆಯ ಶತಮಾನದ ಅವಧಿಯಲ್ಲಿ ಗೋಡೆಗಳಿಗೆ ಕಲ್ಲುಗಳನ್ನು ಬಳಸುವ ಅಭ್ಯಾಸ ಪ್ರಾರಂಭವಾಗಿರುವುದನ್ನು, ಕ್ರಿ.ಶತಕದ ಆಸುಪಾಸಿನಲ್ಲಿ ಇಟ್ಟಿಗೆಗಳನ್ನು ಬಳಸಿ ಗೋಡೆಗಳನ್ನು ಕಟ್ಟುವುದು ಪ್ರಾರಂಭವಾಗಿರುವುದನ್ನು ಅಧ್ಯಯನಕಾರರು ಗಮನಿಸಿದ್ದಾರೆ. ಆ ಕಾಲದಲ್ಲಿ ಹೆಚ್ಚು ಆಳವಾದ ಅಡಿಪಾಯ ಹಾಕದೆ ಸೇರುಮಣ್ಣು ಮತ್ತು ಇಟ್ಟಿಗೆ ಬಳಸಿ ಗೋಡೆಗಳನ್ನು ಕಟ್ಟುತ್ತಿದ್ದರು. ಮನೆಗಳು ಆಯತಾಕಾರವಾಗಿದ್ದು ಎರಡು ಮೂರು ಕೋಣೆ,

ನಡುಮನೆ ಇರುತ್ತಿದ್ದವು. ಛಾವಣಿಗೆ ಚಪ್ಪಟೆಯಾದ ಮಣ್ಣಿನ ಹೆಂಚುಗಳನ್ನು ಬಳಸುತ್ತಿದ್ದರು ಎಂದು ತಿಳಿದುಬಂದಿದೆ. ಕಲ್ಲು ಮತ್ತು ಇಟ್ಟಿಗೆಯ ಗೋಡೆಗಳನ್ನು ಕಟ್ಟುವ ತಂತ್ರಜ್ಞಾನ ಹೊಯ್ಸಳರ ಕಾಲದಲ್ಲಿ ತಿಳಿದಿತ್ತು. ಮಣ್ಣಿಗೆ ಬದಲು ಸಣ್ಣಗಾರೆ ಬಳಸಿ ಬೃಹತ್ ಕಟ್ಟಡಗಳನ್ನು ಕಟ್ಟುವ ತಂತ್ರ ಮುಸ್ಲಿಂ ದೊರೆಗಳಿಂದಾಗಿ ಸುಮಾರು ೧೪-೧೫ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಪ್ರಾರಂಭವಾಯಿತು ಎಂದು ಅಧ್ಯಯನಕಾರರು ಹೇಳುತ್ತಾರೆ.

ಮಾಲೂರು ತಾಲೂಕಿನ ಬನಹಳ್ಳಿಯಲ್ಲಿ ನಡೆದ ಉತ್ಖನನದಲ್ಲಿ ಪತ್ತೆಯಾಗಿರುವ ಅವಶೇಷಗಳಿಂದ ಬೃಹತ್ ಶಿಲಾ ಸಂಸ್ಕೃತಿಯ ಘಟ್ಟದಲ್ಲಿ ಅಲ್ಲಿದ್ದ ಜನಸಮುದಾಯದ ಮನೆಗಳು ಇಂದಿನ ವೃತ್ತ ವಿನ್ಯಾಸದ ಗುಡಿಸಲುಗಳಂತೆ ಇದ್ದವು. ಮೊದಲುಹಳದಿ ಮಣ್ಣು, ಸಣ್ಣ ಸಣ್ಣ ಕಲ್ಲಿನ ಚಕ್ಕೆಗಳು ಮತ್ತು ಮಣ್ಣಿನ ಪಾತ್ರೆಗಳ ಚೂರುಗಳನ್ನು ಮಿಶ್ರ ಮಾಡಿ ನೆಲಕ್ಕೆ ಹಾಕಿ ದಮ್ಮಸ್ಸು ಮಾಡಿರುವುದು ಒಂದು ವೈಶಿಷ್ಟ್ಯ. ಸ್ವಲ್ಪ ಆನಂತರದ ಕಾಲದಲ್ಲಿ ಕಲ್ಲಿನ ಚಕ್ಕೆಗಳನ್ನು ಮಿಶ್ರಣಕ್ಕೆ ಸೇರಿಸುತ್ತಿರಲಿಲ್ಲ. ಹಳದಿ ಮಣ್ಣಿಗೆ ಬದಲಾಗಿ ಕೆಂಪು ಗರಸು ಮಣ್ಣನ್ನು ಸೇರಿಸಲಾಗುತ್ತಿತ್ತು. ನೆಲದಂಚಿನಲ್ಲಿ ಹೊರಗಿನ ಮಳೆನೀರು ಒಳಗೆ ಬರದಂತೆ ದಿಂಡು ಇತ್ತು. ಸುತ್ತಲೂ ಅಲ್ಲಲ್ಲಿ ಕಂಬಗಳನ್ನು ಹುಗಿಯಲು ಮಾಡಿದ ಗುಂಡಿಗಳಿದ್ದವು. ಒಂದೆಡೆಯಲ್ಲಿ ೬೦೦ ಮೀಟರ್ ವ್ಯಾಸದ ಒಂದು ದೊಡ್ಡ ಮನೆಯಿದ್ದು ಅದರ ಸುತ್ತಲೂ ಸಣ್ಣ ಸಣ್ಣ ಮನೆಗಳಿದ್ದವು. ದೊಡ್ಡ ಮನೆಯಲ್ಲಿ ಒರಳು ಕಲ್ಲು, ಕೆಲವು ಮನೆಗಳಲ್ಲಿ ಕಬ್ಬಿಣದ ಅದಿರಿನ ಸಂಗ್ರಹ, ಕಿಟ್ಟದ ರಾಶಿ ಮೊದಲಾದವುಗಳ ಗುರುತುಗಳು ಇದ್ದು ಅವು ಕಮ್ಮಾರರ ಶಾಖೆಗಳಾಗಿದ್ದವು ಎಂಬುದನ್ನು ಸೂಚಿಸುತ್ತವೆ ಎಂಬ ಅಭಿಪ್ರಾಯವಿದೆ.[೨೮]

**ಟಿಪ್ಪಣಿಗಳು**

೧. ಗೋಪಾಲ ಬಾ.ರಾ., ೧೯೮೫, **ಕಾರ್ಪಸ್ ಆಫ್ ಕನ್ನಡ ಇನ್‌ಸ್ಕ್ರಿಪ್ಷನ್ಸ್ ಸಂ. ೧, ಕದಂಬ ಇನ್‌ಸ್ಟಿಟ್ಯೂಟ್ ಆಫ್ ಕಲ್ಚರಲ್ ಸ್ಟಡೀಸ್ ಶಾಸನ ಸಂ. ೨೦, ಸಿರ್ಸಿ(ಕರ್ನಾಟಕ)** ಪು.೧೦೫

೨. ತಿಪ್ಪೇಸ್ವಾಮಿ ಎಸ್., **ರಕ್ಷಣಾ ವಾಸ್ತುಶಿಲ್ಪ, ಚಿತ್ರದುರ್ಗ ಜಿಲ್ಲೆ(ಅಪ್ರಕಟಿತ ಪಿಎಚ್.ಡಿ. ಪ್ರಬಂಧ),** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೯

೩. ಸತ್ಯನ್ ಬಿ., ಎನ್., ೧೯೭೮, **ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್,** ಪು. ೭

೪. **ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ,** ಪು. ೧೧೫೪

೫. ಶಿವರುದ್ರಪ್ಪ ಜಿ.ವಿ., ೧೯೮೭, *ಚಿತ್ರದುರ್ಗ ಜಿಲ್ಲೆಯ ಭೂ ಇತಿಹಾಸ,* **ಹರಿತಿಸಿರಿ,** ಲಕ್ಷ್ಮಣ್ ತೆಲಗಾವಿ(ಸಂ), ಪು. ೫೭೪–೭೫

೬. **ಪ್ರಜಾವಾಣಿ ದಿನಪತ್ರಿಕೆ,** ದಿನಾಂಕ ೧೬–೧–೧೯೯೯

೭. **ಕನ್ನಡ ವಿಶ್ವವಿದ್ಯಾಲಯದ ಶಾಸನ ಸಂಪುಟ,** ಪು. ೭೧

೮. ಅದೇ, ಪು. ೭೧

೯. ರಮೇಶ್ ಬೆ.ಗೋ., ೧೯೮೫, **ಸಂಪನ್ಮೂಲಗಳು ಮತ್ತು ಕೈಗಾರಿಕಾವಕಾಶಗಳು: ಚಿತ್ರದುರ್ಗ ಜಿಲ್ಲೆ,** ಪು. ೨೪

೧೦. **ಚಿತ್ರದುರ್ಗ ಜಿಲ್ಲೆಯ ಅಂಕಿಅಂಶಗಳ ನೋಟ,** ಪು.೫

೧೧. ಅದೇ, ಪು. ೧೨

೧೨. ಅದೇ, ಪು. ೧೨

೧೩. ಚೆಟುಕೂರ ಬಲರಾಮಮೂರ್ತಿ, **ಆಂಧ್ರ ಸಂಕ್ಷಿಪ್ತ ಚರಿತ** ೧೯೫೬, **ವಿಜಯವಾಡ,** ಪು. ೨೩೮–೩೯

೧೪. ಸತ್ಯನ್ ಬಿ.ಎನ್., ೧೯೭೫, **ಚಿತ್ರದುರ್ಗ ಜಿಲ್ಲಾ ಗೆಜೆಟಿಯರ್,** ಪು. ೮೧೨

೧೫. ನಾಗರಾಜರಾವ್ ಎಂ.ಎನ್. ೧೯೭೧, **ಪ್ರೊಟೋ ಹಿಸ್ಟಾರಿಕ್ ಕಲ್ಚರ್ ಆಫ್ ದಿ ತುಂಗಭದ್ರಾ,** ಪು.೧೪–೧೫

೧೬. ನೋಡಿ: ದಿನಾಂಕ ೯–೧೧–೧೯೯೭ **ಪ್ರಜಾವಾಣಿ ಸಾಪ್ತಾಹಿಕ ಪುರವಣಿ**

೧೭. ಸುಮತೀಂದ್ರ ನಾಡಿಗ, ಜನತಾವಾಣಿಯಲ್ಲಿ ಬರೆದ ಲೇಖನ ೭–೮–೧೯೯೮

೧೮. ಸತ್ಯನಾರಾಯಣ ನಾಡಿಗ್, ೧೯೯೯, ವಿಜಯ, ಪು. ೫೧–೫೩

೧೯. ನಾಗರಾಜ ಎಂ.ಎಸ್., **ಪೂರ್ವೋಕ್ತ,** ಪು.೧೪–೧೫

೨೦. ಪ್ರೊ.ಬಿ.ಷೇಕ್ ಅಲಿ(ಸಂ), **ಕರ್ನಾಟಕ ಚರಿತ್ರೆ,** ಸಂಪುಟ ೬, ೧೯೯೭, ಪು.೨೯೭

೨೧. ಹಸನ್ ಸೈಯದ್ ಸಿರಾಜುಲ್, ದಿ **ಕ್ಯಾಸ್ಟ್ಸ್ ಆ್ಯಂಡ್ ಟ್ರೈಬ್ಸ್ ಆಫ್** ಎಚ್.ಇ.ಎಚ್.ದಿ ನಿಜಾಮನ್ ಡೊಮಿನಿಯನ್ಸ್, ೧೯೮೯, ಪು.೪೩

೨೨. ಎಲ್.ಕೆ.ಎ.ಅಯ್ಯರ್, ದಿ **ಮೈಸೂರು ಟ್ರೈಬ್ಸ್ ಆ್ಯಂಡ್ ಕ್ಯಾಸ್ಟ್ಸ್,** ೧೯೮೮, ಸಂ.೨, ಪು.೨೦೨

೨೩. ಕಪಳರಾಳ ಕೃಷ್ಣರಾವ್, **ಸುರಪುರ ಸಂಸ್ಥಾನ ಇತಿಹಾಸ,** ೧೯೭೭, ಪು.೨೨೩

೨೪. ಕರ್ನಾಟಕ ಇತಿಹಾಸ ಅಕಾಡೆಮಿ, **ಇತಿಹಾಸ ದರ್ಶನ ಸಂಪುಟ** ೧೨

೨೫. ಮೀರಾಸಾಬಿಹಳ್ಳಿ ಶಿವಣ್ಣ, **ನಾಯಕನಹಟ್ಟಿ ಪಾಳೆಯಗಾರರು**(ಸಂ.ವಸು.ಎಂ.ವಿ.) ದಕ್ಷಿಣ **ಕರ್ನಾಟಕದ ಅರಸು ಮನೆತನಗಳು,** ೨೦೦೧, ಪು.೭೬

೨೬. ಪಿ.ಅಬ್ದುಲ್ ಸತ್ತಾರ್, **ತರೀಕೆರೆಯ ಪಾಳೆಯಗಾರರು,** ೧೯೯೭, ಪು.೨

೨೭. ಶ್ರೀನಿವಾಸ ಕೊರಟಿ, **ರಾಜಾವೆಂಕಟಪ್ಪ ನಾಯಕ,** ೧೯೭೨

೨೮. ಸುಂದರ ಅ.,**ಮಾಲೂರು ತಾಲೂಕಿನ ಪ್ರಾಚ್ಯಾವಶೇಷಗಳು,** ೨೦೦೪ ಪು ೫೬

ಅಧ್ಯಾಯ ಮೂರು

# ಹಟ್ಟಿಯ ಪರಿಕಲ್ಪನೆ, ಹುಟ್ಟು ಮತ್ತು ಬೆಳವಣಿಗೆ

೩.೧. ಮ್ಯಾಸ ಪದದ ನಿಷ್ಪತ್ತಿ

೩.೨. ಹಟ್ಟಿಗಳ ಪರಿಚಯ ಸ್ವರೂಪ ಹಾಗೂ ಲಕ್ಷಣಗಳು

അധ്യായ മൂരു

## ಹಟ್ಟಿಯ ಪರಿಕಲ್ಪನೆ, ಹುಟ್ಟು ಮತ್ತು ಬೆಳವಣಿಗೆ

ಮಾನವ ಉಗಮವಾದ ಕಾಲದಿಂದಲೂ ಆತನು ವಸತಿಯನ್ನು ತನ್ನ ಮನಸ್ಸಿಗೆ ಬಂದಂತೆ ನಿರ್ಮಿಸುವುದನ್ನು ಅಭ್ಯಾಸ ಮಾಡಿಕೊಂಡಿದ್ದಾನೆ. ಪ್ರಾಚೀನ ಮಾನವ ತನ್ನನ್ನು ಪ್ರಕೃತಿ ಪ್ರಕೋಪಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ಸಹಜವಾಗಿ ನಿರ್ಮಿತವಾದ ಗುಹೆಗಳನ್ನು ಆಶ್ರಯಸ್ಥಾನವನ್ನಾಗಿ ಪಡೆದಿದ್ದ. ಗುಹೆಗಳಲ್ಲಿ ಮೂಲಮಾನವ ವಾಸಮಾಡುತ್ತಿದ್ದ ಎಂಬುದಕ್ಕೆ ಈಗಲೂ ಕುರುಹುಗಳಿವೆ. ಆದರೆ ಕಾಲ ಕಳೆದಂತೆಲ್ಲಾ ತನ್ನ ಆಹಾರ ಇತ್ಯಾದಿಗಳಿಗೆ ಪ್ರದೇಶದಿಂದ ಪ್ರದೇಶಕ್ಕೆ ಅಲೆದಾಡಬೇಕಾದ ಸಂದರ್ಭದಲ್ಲಿ ಪ್ರಕೃತಿನಿರ್ಮಿತವಾದ ಇಂಥ ಗುಹೆಗಳನ್ನು ಹುಡುಕಿಕೊಳ್ಳುವುದು ಕಷ್ಟವಾಯಿತು. ಈ ಕಾರಣದಿಂದ ಅನಿವಾರ್ಯವಾಗಿ ತಾನೇ ದೇಹ ಶ್ರಮದಿಂದ ಮತ್ತು ಬುದ್ಧಿಬಲವನ್ನು ಉಪಯೋಗಿಸಿ ರಕ್ಷಣಾಸ್ಥಾನವನ್ನು ನಿರ್ಮಿಸಿಕೊಳ್ಳುವುದು ಅನಿವಾರ್ಯ ಮತ್ತು ಅಗತ್ಯವಾಯಿತು. ಮೊದಮೊದಲು ಮರಗಿಡಗಳ ಟೊಂಗೆಗಳನ್ನು ಮತ್ತು ಎಲೆಗಳನ್ನು ಉಪಯೋಗಿಸಿ ತನ್ನ ಜೋಪಡಿಗಳನ್ನು ಆತ ನಿರ್ಮಿಸಿಕೊಳ್ಳುತ್ತಿದ್ದ. ಆದರೆ ಬರಬರುತ್ತಾ ಆತನ ಬುದ್ಧಿಶಕ್ತಿ, ಕಲಾಪ್ರಜ್ಞೆ ಬೆಳೆದಂತೆಲ್ಲಾ ಈ ವಸತಿಗಳ ಆಕಾರ, ವಿಸ್ತಾರ ಉದ್ದೇಶಗಳು ಬದಲಾಗುತ್ತಾ ಬಂದವು. ಮೊಟ್ಟಮೊದಲು ಔಪಯೋಗಿಕ ಪ್ರಜ್ಞೆಯಿಂದಲೇ ಮನುಷ್ಯ ಇಂಥ ವಸತಿಗಳನ್ನು ನಿರ್ಮಾಣ ಮಾಡತೊಡಗಿದ. ಅನಂತರ ಔಪಯೋಗಿಕ ಪ್ರಜ್ಞೆ ಜೊತೆ ಕಲಾಪ್ರಜ್ಞೆ ಮೇಳೈಸಿ ವಾಸ್ತುಶಿಲ್ಪ ಸಂಸ್ಕೃತಿ ಅರಳಿತು. ಸಾಮಾನ್ಯವಾಗಿ ಹಳ್ಳಿಯಲ್ಲಿ ಒಪ್ಪಾರು ಮನೆಗಳು, ಜೋಪಡಿ ಮನೆಗಳೂ, ನೆರಿಕೆ ಮನೆಗಳು, ಗುಡಾರಗಟ್ಟು ಮನೆಗಳು, ಮಾಳಿಗೆ ಮನೆಗಳು ಹೀಗೆ ವಿವಿಧ ಬಗೆಯ ಮನೆಗಳಿವೆ. ಮಣ್ಣು, ಮರ, ಹೆಂಚು ಕಲ್ಲುಗಳು, ತೆಂಗು, ಅಡಿಕೆ, ಗೊದಮಟ್ಟೆ ಗರಿ ಇತ್ಯಾದಿ ಮೂಲತಃ ಈ ಮನೆಗಳ ಸಾಮಗ್ರಿಗಳು. ಒಪ್ಪಾರು

ಮನೆಗಳು ಕೇವಲ ಒಮ್ಮುಖವಾಗಿ ಇಳಿಜಾರನ್ನು ಹೊಂದಿದ್ದರೆ, ತೋಳು ಮನೆಗಳು ಸರಳ ರೇಖಾಕೃತಿಯಲ್ಲಿ ಇದ್ದು ಎರಡೂ ಕಡೆ ಒಪ್ಪಾರುಗಳನ್ನು ಒಳಗೊಂಡಿರುತ್ತವೆ. ತೊಟ್ಟಿ ಮನೆಗಳು ಚೌಕಾಕಾರವಾಗಿದ್ದು, ಒಳಭಾಗದಲ್ಲಿ ಆಕಾರಕ್ಕೆ ತೆರೆದ ಅಂಕಣವನ್ನು ಒಳಗೊಂಡಿರುತ್ತದೆ. ಇವುಗಳಲ್ಲಿ ನಾಲ್ಕು ಕಂಬದ ತೊಟ್ಟಿ, ಹನ್ನೆರಡು ಕಂಬದ ತೊಟ್ಟಿ, ಹದಿನಾರು ಕಂಬದ ತೊಟ್ಟಿ ಹೀಗೆ ವೈವಿಧ್ಯತೆಗಳುಂಟು.

ಈ ಮನೆಗಳ ಒಳವಿಭಾಗ ಕೂಡ ಅತ್ಯಂತ ಕುತೂಹಲಕಾರಿಯಾಗಿದ್ದು, ಇಲ್ಲಿಯೇ ಅಡುಗೆಮನೆ, ನಡುಮನೆ, ಕಿರುಮನೆ, ನೀರುಮನೆ, ಹಜಾರ, ಧಾನ್ಯ ತುಂಬುವ ಕಣಜ, ದೇವರಮನೆ ಅಥವಾ ಮನೆದೇವರಮನೆ, ದನಗಳ ಹಟ್ಟಿ, ಕುರಿ ಆಡುಗಳ ಕೊಟ್ಟಿಗೆ, ಕೋಳಿ ಗೂಡು ಇತ್ಯಾದಿ ಒಳವಿಭಾಗಗಳಿರುತ್ತವೆ. ಹೀಗೆಯೇ ದನಗಳನ್ನು ಕಟ್ಟುವ ಗುಂಪು. ಅವುಗಳಿಗೆ ಕಲಗಚ್ಚು ಕೊಡುವ ಬಾನಿಗಳ ಸ್ಥಳ ಇತ್ಯಾದಿಗಳು ಕೂಡ ಉಂಟು. ಸ್ತ್ರೀಯರು ಮುಟ್ಟಾದಾಗ ಕೂರಿಸುವ ಹೊಲೆಮನೆ ಎಂಬ ಹೊರಕೋಣೆ ಕೆಲವು ಮನೆಗಳಲ್ಲಿ ಇರುವುದು ಉಂಟು. ನಡುಮನೆಯಲ್ಲಿ ಸರಸ್ವತಿ ಗೂಡು ಎಂಬ ಒಂದು ಭಾಗವಿದ್ದು ದೇವರನ್ನು ಪೂಜಿಸುವುದು ಉಂಟು. ಹಾಗೆಯೇ ಅದರ ಇಕ್ಕೆಲಗಳಲ್ಲಿ ಮತ್ತು ಮನೆಯ ಮುಖ್ಯ ಬಾಗಿಲಿನ ಇಕ್ಕೆಲಗಳಲ್ಲಿ ದೀಪದ ಗೂಡುಗಳನ್ನು ಮಾಡಿರುವುದು ಉಂಟು. ರಾತ್ರಿ ವೇಳೆಯಲ್ಲಿ ಹಿಂದಿನ ಕಾಲದ ಮನೆಗಳಲ್ಲಿ ಹೊರ ಬಾಗಿಲಿನಲ್ಲಿ ಹರಳೆಣ್ಣೆ ಹಣತೆಗಳಿಂದ ಈ ದೀಪಗಳನ್ನು ಗೂಡುಗಳಲ್ಲಿ ಉರಿಸುತ್ತಿದ್ದರು. ಹಾಗೆ ಕೆಲವು ಮನೆಗಳ ಮುಂದೆ ಜಗಲಿಗಳಿದ್ದು, ೪ ಅಥವಾ ೫ ಜನ ಬಂದು ಕುಳಿತುಕೊಂಡು ಪರಸ್ಪರ ಸಮಾಲೋಚನೆ ಮಾಡುವುದಕ್ಕೆ ಅನುಕೂಲವಾಗಿರುತ್ತದೆ. ಕಿರುಮನೆ ಹಳ್ಳಿಗರು ವಿವಿಧ ಸಾಮಗ್ರಿಗಳನ್ನು ಇಡುವ ಉಗ್ರಾಣವಾಗಿರುವುದು ಉಂಟು. ತೆಂಗಿನ ಗರಿಗಳು, ದಿಂಡಲು ಮುಂತಾದ ಗಿಡಗಳ ಸರಬಲು, ಜೊಂಡುಗಳು ಹಾಗೂ ನೊದೆಹುಲ್ಲುಗಳು ಇವುಗಳಿಂದ ರಚಿಸಿದ ಮನೆಗಳನ್ನು ಜೋಪಡಿ ಮನೆಗಳೆಂದು ಕರೆಯುತ್ತಾರೆ. ಈ ಮನೆಗಳ ವೈವಿಧ್ಯ ಈ ಮನೆಗಳಿಗೆ ಹದಿ ತೋಡಿಸುವ, ಒರಳು ಕಲ್ಲನ್ನು ಹೂಳುವ, ಮನೆಯನ್ನು ಪ್ರವೇಶಿಸುವ ಸಂದರ್ಭದಲ್ಲಿ ವಿಶೇಷವಾದ ಸಮಾರಂಭಗಳು ನಡೆಯುವ ಸಂಪ್ರದಾಯವಿದೆ. ಹೀಗಾಗಿ ಮನೆಗಳ ನಿರ್ಮಾಣ ಮತ್ತು ಪ್ರದೇಶಗಳಿಗೆ ಸಂಬಂಧಪಟ್ಟ ವಿವಿಧ ಜನಪದ ಸಂಪ್ರದಾಯಗಳು ವಿವಿಧ ಜನಾಂಗಗಳಲ್ಲಿ ಬೇರೆ ಬೇರೆಯಾಗಿರುವುದು ಸಹ ಒಂದು ಕುತೂಹಲಕಾರಿ ಅಧ್ಯಯನವಾಗುತ್ತದೆ. ಪ್ರಕೃತಿ ಪರಿಸರಕ್ಕೆ ತಕ್ಕಂತೆ ಮನೆಗಳ ನಿರ್ಮಾಣವಾಗಿರುವುದನ್ನು ಗಮನಿಸಬಹುದು. ಬಯಲುಸೀಮೆ ಮನೆಗಳು, ಮಲೆನಾಡಿನ ಮನೆಗಳು, ಉತ್ತರ ಕರ್ನಾಟಕದ ಮನೆಗಳು ಇತ್ಯಾದಿಗಳು ಸ್ವರೂಪದಲ್ಲಿ ಬೇರೆ ಬೇರೆ ಆಗಿರುವುದು ಗಮನಿಸಬೇಕಾದ ಅಂಶವಾಗಿರುತ್ತದೆ. ಇವುಗಳ ಪ್ರಾದೇಶಿಕ ಹಾಗೂ ಸಾಂಸ್ಕೃತಿಕ ಅಧ್ಯಯನ ಪ್ರಯೋಜನಕಾರಿ.

## ಹಟ್ಟಿಯ ಪರಿಕಲ್ಪನೆ

ಇತಿಹಾಸ ಆರಂಭಕಾಲದಿಂದಲೂ ಮಾನವ ಮತ್ತು ಪ್ರಾಣಿಗಳ ಸಂಬಂಧ ಒಂದಕ್ಕೊಂದು ಪೂರಕವಾಗಿಯೇ ರೂಪುಗೊಂಡು ಬಂದಿದೆ. ಅಲೆಮಾರಿ ಜೀವನ ನಡೆಸುವಾಗಲೂ ಪ್ರಾಣಿಗಳನ್ನು ಬೇಟೆಯಾಡಿ ಬದುಕು ಸಾಗಿಸುತ್ತಿದ್ದ ಕಾಲದಿಂದಲೂ ಮಾನವ ಪ್ರಾಣಿಗಳ ಜೊತೆ ಒಂದಿಲ್ಲೊಂದು ಬಗೆಯ ಸಂಬಂಧವಿರಿಸಿಕೊಂಡೇ ಬಂದಿದ್ದಾನೆ. ಮನುಷ್ಯನಿಗೆ ಬದುಕಿನ ಕಲ್ಪನೆ ಮೂಡಿದ್ದೇ ಪ್ರಾಣಿಗಳಿಂದ, ಬೆಂಕಿ, ಕತ್ತಲೆ, ಬೆಳಕು, ಬೇಸಾಯಗಳ ಕಲ್ಪನೆಯನ್ನು ಪ್ರಾಣಿಗಳಿಂದಲೇ ಆತ ಪಡೆದುಕೊಂಡ. ಅವನ ಸಾಹಸ, ಓಟ, ಜಿಗಿತ, ಅಬ್ಬರ, ಅಳುಕುಗಳಿಗೆ, ಚಪಲತೆಗೆ, ಠಕ್ಕುತನಗಳಿಗೆ, ಸ್ನೇಹಕ್ಕೆ, ದ್ರೋಹಕ್ಕೆ, ಪ್ರಾಣಿಗಳ ಸ್ವಭಾವ ಶಕ್ತಿ, ಸಾಮರ್ಥ್ಯಗಳೇ ಪ್ರೇರಣೆ. ಈ ಹಿನ್ನೆಲೆಯಲ್ಲಿ ಮಾನವ ಬದುಕಿನ ಜೊತೆ ಪ್ರಾಣಿಗಳು ಸಂಯೋಗಾತ್ಮಕ ಸಂಬಂಧ ಹೊಂದಿವೆ.

ಅಲೆಮಾರಿ ಬದುಕಿಗೆ ಶರಣು ಹೊಡೆದು ವ್ಯವಸಾಯವನ್ನು ಕಂಡುಕೊಂಡ ಮೇಲೆ ಒಂದು ಕಡೆ ನೆಲೆ ನಿಂತು ವಾಸಿಸತೊಡಗಿದುದು ಮಾನವ ವಿಕಾಸದ ಹಂತದಲ್ಲಿ ಮಹತ್ವದ ಘಟ್ಟ. ಪ್ರಾಣಿ ಸಾಕಾಣಿಕೆಗೆ ಹೆಚ್ಚಿನ ಮಹತ್ವ ಬಂದುದು ಈ ಕಾಲದಲ್ಲಿಯೇ. ಎಮ್ಮೆ, ಆಕಳಿನ ಹಾಲು ಉತ್ತಮ ಆಹಾರವೆಂಬುದನ್ನು ಕಂಡುಕೊಂಡ ಮೇಲೆ ಇಡಿಯಾಗಿ ಕುಟುಂಬಕ್ಕೆ, ಗುಂಪುಜೀವನಕ್ಕೆ ಅದರ ಅಗತ್ಯ ಉಂಟಾಯಿತು. ಮತ್ತೊಂದು ನೆಲೆಯಲ್ಲಿ ಕೋಣ ಮತ್ತು ಎತ್ತುಗಳನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲು ಸಾಧ್ಯವಾದಾಗ ದನಕರುಗಳ ಸಾಕಾಣಿಕೆಗೆ ಮಹತ್ವ ಬಂತು.

ದನಕರುಗಳ ಸಾಕಾಣಿಕೆ ರೈತಾಪಿ ಜೀವನಕ್ಕೆ ತುಂಬಾ ಸಹಕಾರಿ ಎನಿಸಿಕೊಂಡ ಮೇಲೆ ಈ ಸಂತತಿಯನ್ನು ಸಂಪಾದಿಸುವುದರಿಂದ ಕುಟುಂಬದ ಆರ್ಥಿಕತೆ ಗಣನೀಯವಾಗಿ ಸುಧಾರಿಸ ತೊಡಗಿತು. ಇದರಿಂದ ಪಶು ಸಾಕಾಣಿಕೆ ತುಂಬ ಲಾಭದಾಯಕವಾಗಿ ಪರಿಣಮಿಸಿ ಸಮಾಜದಲ್ಲಿ ಪ್ರತಿಷ್ಠೆಯನ್ನು ತಂದುಕೊಡಲು ದನಕರುಗಳು ಮಹತ್ವದ ಅಂಶಗಳಾದವು. ಇಡಿಯಾಗಿ ಮನೆತನದ ಸ್ಥಿತಿ ಎಂಬುದು ಆಯಾ ಕುಟುಂಬ ಹೊಂದಿರುವ ದನಕರುಗಳ ಸಂಖ್ಯೆಯನ್ನು ಅವಲಂಬಿಸಿತು. ಹೆಣ್ಣು ತರುವಾಗ, ಕೊಡುವಾಗ ಮನೆತನದ ಸ್ಥಿತಿಯನ್ನು ತಿಳಿದುಕೊಳ್ಳಲು ಮನೆಯಲ್ಲಿ ದನಕರುಗಳು ಎಷ್ಟು? ಎಷ್ಟೆತ್ತಿನ ಒಕ್ಕಲುತನ? ಇತ್ಯಾದಿ ಮಾತುಗಳನ್ನು ಬಳಸುವುದು ಒಂದು ಪದ್ಧತಿಯಾಗಿ ಪರಿಣಮಿಸಿತು.

ದನಕರುಗಳನ್ನು ಕಾಪಾಡಿಕೊಳ್ಳುವುದರಿಂದ ತನಗೂ ತನ್ನ ಕುಟುಂಬಕ್ಕೂ ಹೆಚ್ಚು ಲಾಭದಾಯಕವೆಂದು ಅರಿತ ಮೇಲೆ ತನಗಾಗಿ ನಿರ್ಮಿಸಿಕೊಂಡಂತೆ ದನಕರುಗಳಿಗಾಗಿ ಕೊಟ್ಟಿಗೆ, ದನದ ಮನೆ, ಮೇವು ಸಂಗ್ರಹಿಸಿಡಲು ಅಟ್ಟ, ಮೇವು ಹಾಕಲು ಗೋದಲಿ, ನೀರು ಕುಡಿಸಲು ಕಲಗಚ್ಚುಗಳನ್ನು ನಿರ್ಮಿಸಿದ. ವರ್ಷದುದ್ದಕ್ಕೂ ದನಗಳಿಗೆ ಬೇಕಾಗುವ ಮೇವು, ಸೊಪ್ಪು,

ಹುಲ್ಲುಗಳನ್ನು ಸಂಗ್ರಹಿಸಿಡಲು ಹಿತ್ತಲು, ಹಗೇವು ಅಲ್ಲಿ ಬಣವೆಗಳನ್ನು ನಿರ್ಮಿಸಿಕೊಂಡ. ದನಗಳ ಸಗಣಿಯಂತೂ ಫಲವತ್ತಾದ ಗೊಬ್ಬರವೆಂಬುದನ್ನು ಅರಿತ ಮೇಲೆ ದನಗಳಿಗೆ ಮಾಡುವ ಆರೈಕೆ ಯಾವ ದೃಷ್ಟಿಯಿಂದಲೂ ನಿಷ್ಪ್ರಯೋಜನವಲ್ಲ ಎಂದು ಮಾನವ ಭಾವಿಸಿದ. ದನಗಳನ್ನು ಕಾಯುವ ಜನರನ್ನು ದನಗಾರರು, ಹಟ್ಟಿಗರೆಂದು ಕರೆಯುತ್ತಾರೆ.

ಸಮುದಾಯದ ಭಾಷೆಯನ್ನು ಮಾನವಶಾಸ್ತ್ರೀಯ ನೆಲೆಯಲ್ಲಿ ನೋಡಿದರೆ ಅದು ಕುತೂಹಲಕರವಾದ ಮಾನಸಿಕ ಕ್ರಿಯೆಗಳ ಅಭ್ಯಾಸವೆಂದು ತಿಳಿಯುತ್ತದೆ. ಆ ಕ್ರಿಯೆಗಳು ಸಾಮಾಜಿಕವಾಗಿರಬಹುದು ಅಥವಾ ಸಾಂಸ್ಕೃತಿಕವಾಗಿರಬಹುದು. ಅಂದರೆ ಸಮಾಜ, ಜನಾಂಗ, ಸಂಸ್ಕೃತಿ ಇವುಗಳ ಹುಟ್ಟು ಬೆಳವಣಿಗೆ ಮುಂತಾದವುಗಳ ಅಧ್ಯಯನಕ್ಕೆ ಅದು ತುಂಬ ನೆರವಾಗುತ್ತದೆ.

ಒಂದು ವಸತಿ ಸ್ಥಾನ ಹೇಗೆ ಆರಂಭವಾಯಿತೆನ್ನುವುದು ಗ್ರಾಮವಾಚಕ ಶಬ್ದಗಳಿಂದ ತಿಳಿದುಬರುತ್ತದೆ. ಪಟ್ಟಿ, ಹಟ್ಟಿ, ವಾಡಿ, ಹಾಡಿ, ದಡ್ಡಿ ಮುಂತಾದ ಶಬ್ದಗಳು ಸ್ಥಳವಾಚಕ ಗಳಾಗಿವೆ(ಕೊಮ್ಮನಪಟ್ಟಿ, ನಾಯಕನಹಟ್ಟಿ, ಗಣೇಶವಾಡಿ, ದೇವರದಡ್ಡಿ ಇತ್ಯಾದಿ). ಅವುಗಳಲ್ಲಿ ಅರ್ಥ ಸಾದೃಶ್ಯದಂತೆ ರೂಪ ಸಾದೃಶ್ಯವೂ ಇದೆ. ಪ್ರಾಗೈತಿಹಾಸಿಕ ಅನೇಕ ರಹಸ್ಯಗಳ ಮೇಲೆ ಅವು ಬೀರುವ ಸಾಧ್ಯತೆಯಿದೆ. ಪ್ರಾಚೀನ ಕಾಲದಲ್ಲಿ ಪ್ರದೇಶಗಳಿಗೆ ಹೆಸರು ಬಂದದ್ದು ಅಲ್ಲಿ ಮೊಟ್ಟ ಮೊದಲು ನೆಲೆಸಿದ್ದ ಜನರಿಂದ ಎಂಬ ಬಗೆಗೆ ಸಂದೇಹವಿಲ್ಲ. ಈ ಕ್ರಮವು ಜಗತ್ತಿನ ಎಲ್ಲೆಡೆಯೂ ಇದೆ. ಅಲ್ಲಿಯ ಸ್ಥಳವಾಚಕಗಳಿಂದ ಒಂದು ಭಾಷಾ ಸಮುದಾಯದ ಪೂರ್ವಚರಿತ್ರೆಯನ್ನು ಅರಿಯಬಹುದಾಗಿದೆ. ಒಂದು ಶಬ್ದದ ಮೂಲವನ್ನು ಅದರ ಬಳಕೆಯ ಚಾರಿತ್ರಿಕ ಕಾಲಘಟ್ಟ ಮತ್ತು ಸಂದರ್ಭದ ಮೇಲಿಂದ ಅರಿಯಬಹುದೆಂದು ಮಾನವಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಪದದ ಚರಿತ್ರೆಯಿಂದ ಸಂಸ್ಕೃತಿಯ ಚರಿತ್ರೆಯೂ ಅನಾವರಣಗೊಳ್ಳುತ್ತದೆ.

ಈ ನೆಲೆಯಲ್ಲಿ ಹಲವು ಪ್ರದೇಶಗಳ ಸ್ವರೂಪವನ್ನು ಶಂಬಾ ಹುಡುಕುತ್ತಾರೆ. ಉದಾಹರಣೆಗೆ ಮಹಾರಾಷ್ಟ್ರ ಶಬ್ದದ ಮೂಲರೂಪ "ಮರಹಟ್ಟ" ಇಲ್ಲವೆ "ಮರ್ಹಾಟ" ಎಂದು ಸ್ಪಷ್ಟವಾಗಿದೆ. ಈ ಕುರಿತು ಶಂಬಾ ಅವರ ವಾದ ಸಮರ್ಥವಾಗಿದೆ. "ಮರಹಟ್ಟ"ದಲ್ಲಿ ಹಟ್ಟಿ ಎಂಬುದು ಪ್ರದೇಶವಾಚಕ. ಮರ್ಹಾಟ ಪ್ರದೇಶಕ್ಕೆ "ಝಾಡಮಂಡಳ" ಎಂಬ ಹೆಸರು ಪ್ರಚಾರದಲ್ಲಿದೆ. ಝಾಡಮಂಡಳದಲ್ಲಿಯ ಮಂಡಳ ಎಂದರೆ ಹಟ್ಟಿ, ಪ್ರದೇಶ, ಝಡ ಎಂದರೆ ಮರ, ಮರಹಟ್ಟ ಶಬ್ದದ ಭಾಷಾಂತರ ಝಾಡಮಂಡಳ ಎಂದೇ ಆಗುತ್ತದೆ. ಅದೊಂದು ಸಾಂಸ್ಕೃತಿಕ ಭಾಷಾಂತರವಾಗಿದೆ. ಮರಹಟ್ಟ ಶಬ್ದದ ಅರ್ಥ ಮಸುಕಾದಾಗ ಭಾಷಾಂತರ ಅಗತ್ಯವಿದೆ. ಈ ಹಟ್ಟಿ ಜನರೇ ಮರ್ಹಾಟದ ಮೂಲನಿವಾಸಿಗಳಾಗಿದ್ದಾರೆ. ಉತ್ತರ ಮಹಾರಾಷ್ಟ್ರದಲ್ಲಿ ಕನ್ನಡ ಹೆಸರಿನ ತಾಲ್ಲೂಕು ಪ್ರದೇಶವಿದೆ. ಆ ಭಾಗದಲ್ಲಿ ಹಟ್ಟಿಕಾರರೇ ಪ್ರಮುಖ ಜನಾಂಗವಾಗಿವೆ.' ಒಟ್ಟಾರೆ ಮಹಾರಾಷ್ಟ್ರ ಶಬ್ದದ ಮೂಲ ಮರಹಟ್ಟವಾಗಿದೆ. ಅದು ಒಂದು ಕಾಲಕ್ಕೆ ಕನ್ನಡ

ಪ್ರದೇಶವಾಗಿದೆ. ಅದಕ್ಕೆ ಹಲವಾರು ಭಾಷಿಕ ಪ್ರಮಾಣಗಳು(ಶಾಸನಗಳು, ಸ್ಥಳನಾಮಗಳು ಇತ್ಯಾದಿ) ಪುರಾವೆಗಳಾಗಿವೆ ಎಂಬುದು ಅಧ್ಯಯನದಿಂದ ದೃಢಪಟ್ಟಿದೆ.

ಪ್ರಾಚೀನ ಕಾಲದಿಂದಲೂ ಕರ್ನಾಟಕ ಮತ್ತು ಮಹಾರಾಷ್ಟ್ರ ಸಂಸ್ಕೃತಿಗಳ ಮಧ್ಯೆ ಅವಳಿ ಸಂಬಂಧವಿತ್ತೆಂದು ಶಂಬಾ ಜೋಶಿಯವರು ಹಲವಾರು ಪುರಾವೆಗಳ ಮೂಲಕ ತಮ್ಮ ವಾದವನ್ನು ಸಮರ್ಥಿಸಿಕೊಳ್ಳುತ್ತಾರೆ. ಆ ಕುರಿತು ಹಲವಾರು ಪ್ರಮೇಯಗಳ ಕಡೆ ಸಮಸ್ಯೆಗಳ ಕಡೆಗೆ ಮಾನವಶಾಸ್ತ್ರಜ್ಞರ ಗಮನ ಸೆಳೆದಿದ್ದಾರೆ. ಗೋದಾವರಿ ನದಿ ತೀರ, ನಾಸಿಕ ಪರಿಸರದಲ್ಲಿ ಪಶುಪಾಲಕರು ವಾಸಿಸುವ ಪ್ರದೇಶದಲ್ಲಿ ಹಾಟಕೇಶ್ವರ ಎಂಬ ಹೆಸರಿನ ದೇವತೆಗಳಿವೆ. ಅವು ಹಟ್ಟಿಕಾರರ ಆರಾಧ್ಯ ದೇವತೆಗಳು. ಮರಾಠಿ ಪೇಶ್ವೆಯವರ ದಫ್ತರಗಳಲ್ಲಿ ಆ ಹೆಸರು ದಾಖಲಾಗಿದೆ. ಬೇಟೆ ಪಶುಪಾಲನೆಯ ಸಂದರ್ಭದಲ್ಲಿ ಹಟ್ಟಿಕಾರರು ವೀರ ಮರಣ ಹೊಂದಿದಾಗ ಅಲ್ಲಿ ಅವರು ಸ್ಮಾರಕ ಶಿಲೆಗಳನ್ನು ನೆಡುತ್ತಿದ್ದರು. ಆ ಶಿಲೆಗಳು ನಾಸಿಕ ಪರಿಸರದಲ್ಲಿ ಉಳಿದಿವೆ. ಇಂದಿಗೂ ಆ ಪರಿಸರದಲ್ಲಿ ಹಟ್ಟಿಕಾರರೇ ಪ್ರಬಲ ಜನಾಂಗವಾಗಿದೆ. ಆ ಪರಿಸರದಲ್ಲಿ ಹಾಟಕೇಶ್ವರವಿದ್ದಂತೆ ಕಾಲೇಶ್ವರ/ಕಲ್ಲೇಶ್ವರ ಎಂಬ ದೇವತೆಗಳಿವೆ. ಕಲ್/ಕಳ್ ಇದು ಪ್ರಾಚೀನ ಕಂದಮಿಳ ಪದ. ಅದರರ್ಥ ರಸ, ಪಾಲ ಶಬ್ದದಂತೆ ಕ್ಷೀರವಾಚಕವಾಗಿದೆ. ಕಲ್ಲೇಶ್ವರ ಎಂದರೆ ಹಾಲಿನ ದೇವತೆ ಅದು ಸಹಿತ ಹಟ್ಟಿಕಾರರ ದೇವತೆಯಾಗಿದೆ.

ಹಟ್ಟಿಕಾರರ ದೇವತೆಗಳಾದ ಮಲ್ಲಯ್ಯ, ಮಲ್ಹಾರಿ, ಮೈಲಾರ ಇವು ಸಹಿತ ಕನ್ನಡ, ಮರಾಠಿ ಭಾಷೆ ಸಂಸ್ಕೃತಿಗಳ ವೈಶಿಷ್ಟ್ಯವನ್ನು ಸೂಚಿಸುತ್ತದೆ. ಮಲೆ-ಅಯ್ಯ ಮಲೆ ಎಂದರೆ ಬೆಟ್ಟ-ಗುಡ್ಡ ಅಯ್ಯ ಎಂಬುದು ಅದೇ ಸಮಾನಾರ್ಥದಲ್ಲಿದೆ. ಅಂದರೆ ಪಶುಪಾಲನೆಗಾಗಿ ಗುಡ್ಡಗಳಲ್ಲಿ ಹಟ್ಟಿಗಳ ದೇವತೆಯೇ ಮಲ್ಲಯ್ಯ ಈ ಹೆಸರಿಗೆ ಸಮಾನಾರ್ಥಕವಾಗಿ ಗುಡ್ಡಪ್ಪ, ಗಿರಿಯಪ್ಪ ಎಂಬ ಹೆಸರುಗಳು ಹಟ್ಟಿಕಾರರ ಸಮುದಾಯದಲ್ಲಿವೆ. ದನಗಳ ರಕ್ಷಣೆಗಾಗಿ ಅವರು ಆ ದೇವತೆಗಳನ್ನು ಪೂಜ್ಯಭಾವದಿಂದ ಗೌರವಿಸುತ್ತಾರೆ. ಮಲ್ಹಾರಿ, ಮೈಲಾರಿ ಹೆಂಡತಿ ಮಾಳವ್ವ, ಈ ದೇವತೆಯ ಮೂಲದಲ್ಲಿ ಹಟ್ಟಿ ಜನರ ದೇವತೆಯಾಗಿದೆ. ಅವರ ಕುಟುಂಬಗಳಲ್ಲಿ ಅವರು ಸಾಕುಪ್ರಾಣಿಗಳ ಹೆಸರುಗಳಿವೆ. ಕುರಿ ಎಮ್ಮೆನ್ನವರ್ ಇತ್ಯಾದಿ ಇವು ವಿಕಾಸದ ಮೇಲೆ ಹೊಸಬೆಳಕು ಚೆಲ್ಲುತ್ತವೆ.

ಪಟ್ಟಿ/ಹಟ್ಟಿ, ಪಾಡಿ/ಹಾಡಿ ಇವು ಅಚ್ಚಕನ್ನಡ ಪದಗಳೇ ಆಗಿವೆ. ಹಳಗನ್ನಡದ ಪಕಾರ ನಡುಗನ್ನಡದಲ್ಲಿ ಹಕಾರವಾಗಿ ಪರಿವರ್ತನೆಯಾಗಿತ್ತು. ಆ ಧ್ವನಿ ಬದಲಾವಣೆಗೆ ಬಹುದೊಡ್ಡ ಚರಿತ್ರೆ ಇದೆ. ಅದರ ಚರ್ಚೆ ಇಲ್ಲಿ ಅನಗತ್ಯ. ಪಟ್ಟಿ/ಹಟ್ಟಿ ಎಂದರೆ ದನಕರುಗಳನ್ನು ಕಟ್ಟುವ ಸ್ಥಳ, ಗುಡಿಸಲು, ಸಣ್ಣ ಹಳ್ಳಿ. ಅದು ಪಶುಪಾಲನ ವೃತ್ತಿಯಿಂದ ಒಕ್ಕಲುತನದ ಜೀವನ ಕ್ರಮದವರೆಗಿನ ವಿಕಾಸ ಸ್ಥಿತಿಯನ್ನು ಸೂಚಿಸುತ್ತದೆ. ಪ್ರಾಚೀನ ಕನ್ನಡದ ಸಾಹಿತ್ಯದ ಕೃತಿಗಳಲ್ಲಿಯೂ

ನಿಘಂಟುಗಳಲ್ಲಿಯೂ ಬಳಕೆಯಾಗಿದೆ. ಅಲ್ಲಿಯೂ ಸಹಿತ ವಸತಿವಾಚಕವಾಗಿಯೇ ಬಳಕೆಯಾಗಿದೆ. ಅದು ಪಶುಪಾಲನೆಯ ಸಂಸ್ಕೃತಿ ವಿಶಿಷ್ಟಪದ. ಅದು ಆ ಸಮುದಾಯದ ಸಾಮಾಜಿಕ ಚಹರೆಯಾಗಿಯೂ ಕಾಣಿಸುತ್ತದೆ. ಮುಂದೆ ಲಕ್ಷಣಾವೃತ್ತಿಯವರೆಗೆ ಈ ಶಬ್ದ ಅನೇಕ ಅರ್ಥಗಳನ್ನು ಪಡೆಯಿತು. ಈಗಲಾದರೂ ಆದಿವಾಸಿಗಳು ವಾಸಿಸುವ ಪ್ರದೇಶಗಳಿಗೆ ಹಾಡಿಗಳೆಂದೇ ಕರೆಯುತ್ತಾರೆ(ಇರುಳರ ಹಾಡಿ, ಕಾಡುಕುರುಬರ ಹಾಡಿ, ಹಾಲಕ್ಕಿಗಳ ಹಾಡಿ, ಮಲೆಕುಡಿಯರ ಹಾಡಿ ಇತ್ಯಾದಿ). ಈ ಶಬ್ದ ಅರ್ಥ ಬದಲಾವಣೆಯ ಹಿಂದೆ ಅಡಗಿರುವ ಮನುಕುಲದ ಇತಿಹಾಸದ ಮೇಲೆ ಸಾಕಷ್ಟು ಬೆಳಕು ಬೀರಬಹುದಾಗಿದೆ. ಸಾಮಾಜಿಕ ಹಿನ್ನೆಲೆಯಲ್ಲಿ ನಡೆದಿರಬಹುದಾದ ಅನೇಕ ಸಂಗತಿಗಳೂ ಸಹಿತ ಪ್ರಭಾವ ಬೀರುತ್ತವೆ.

ಹಟ್ಟಿಯಲ್ಲಿ ವಾಸಿಸುವರು ಹಟ್ಟಿಕಾರ. ಈ ಪದದ ಕೊನೆಯಲ್ಲಿರುವ ಕಾರ ಎಂಬುದು ತದ್ಧಿತ ಪ್ರತ್ಯಯ. ಒಂದು ವೃತ್ತಿಯಲ್ಲಿ ವ್ಯವಹರಿಸುವವನು ಎಂದರ್ಥ. ಅವರಿಗೆ ದನಕಾರ ಎಂದು ಕರೆಯುತ್ತಾರೆ. ಅದರರ್ಥವೂ ಕೂಡ ಪಶುಪಾಲಕರೇ ಎಂಬುದಾಗಿದೆ(ದನಗಳನ್ನು ಸಾಕುವವರು). ಪಶುಪಾಲನ ವೃತ್ತಿಯ ಮುಂದಿನ ಹೆಜ್ಜೆ ಎಂದರೆ ಒಕ್ಕಲುತನ. ಅದಕ್ಕೆ ಮರಾಠಿಯಲ್ಲಿ ಶೇತಿವಾಡಿ ಎಂಬ ಜೋಡುನುಡಿ ಪ್ರಸಿದ್ಧವಾಗಿದೆ. ಶೇತಗಿ ಎಂದರೆ ಕೃಷಿ. ಅದರರ್ಥ ಮಳೆನೀರಿನಿಂದ ಬೆಳೆ ತೆಗೆಯುವುದು. ವಾಡಿ ಎಂದರೆ ಪ್ರದೇಶ. ಕನ್ನಡದಲ್ಲಿ ತೋಟಪಟ್ಟಿ ಎಂಬ ಜೋಡುಪದವಿದೆ. ಇಲ್ಲಿಯೂ ಸಹಿತ ಪಟ್ಟಿ ಶಬ್ದಕ್ಕೆ ತೋಟ ಎಂದೇ ಅರ್ಥವಿದೆ. ಈ ಎಲ್ಲಾ ಪದಗಳು ಪಶುಪಾಲನೆ, ಕೃಷಿ ಪರಿಸರವನ್ನೇ ಹೇಳುತ್ತವೆ. ಕನ್ನಡದ ಸಂದರ್ಭದಲ್ಲಿ ಇವರಿಗೆ ತುರುಕರು ಎಂದೂ ಕರೆಯುತ್ತಾರೆ. ತುರು ಎಂದರೆ ದನಕರುಗಳ ಸಮುದಾಯ. ತುರುಕರು ಎಂಬ ಶಬ್ದವು ಹಟ್ಟಿಕಾರ ಶಬ್ದಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತದೆ. ಕಾವೇರಿಯಿಂದ ಗಂಗೆಯವರೆಗೆ, ನೀಲಗಿರಿಯಿಂದ ರಾಜಮಹಾಲದವರೆಗೆ ವ್ಯಾಪಿಸಿಕೊಂಡಿರುವ ಈ ಹಟ್ಟಿಕಾರ ದನಗಾರರು ದ್ರಾವಿಡ ಜನಾಂಗದವರು. ಇವರು ಕನ್ನಡ ಶಾಖೆಗೆ ಸೇರಿದವರು.

ನರ್ಮದಾ ನದಿಯ ದಕ್ಷಿಣ ಭಾಗದಲ್ಲಿ ಪತ್ತಿ ಎಂಬ ಹೆಸರಿನ ಜನರಿದ್ದಾರೆ. ಪಟ್ಟಿ>ಪತ್ತಿ ಎಂದಾಗಿರಬಹುದು. ಭಾಷಾಶಾಸ್ತ್ರ ನಿಯಮದ ಪ್ರಕಾರ ಟ>ತ ಧ್ವನಿ ಪರಿವರ್ತನೆ ಸಹಜ. ಆದರೂ ಈ ಬಗ್ಗೆ ಯೋಚಿಸಬೇಕಾಗಿದೆ. ಪಟ್ಟಿ ಇಲ್ಲಿ ಎರಡು ಸೇರಿ ಪಟ್ಟಿಲ ಎಂಬ ಪ್ರಯೋಗ ಪ್ರಾಕೃತದಲ್ಲಿದೆ. ಇದು ತದ್ಧಿತ ಪ್ರತ್ಯಯ. ಅದರಲ್ಲಿ ವಾಸಿಸುವವನು ಎಂಬುದು ಅದರ ಅರ್ಥ. ಪಟ್ಟಿಲ ಶಬ್ದದ ಮುಂದುವರೆದ ರೂಪ ಪಾಟೀಲ. ಎಂದರೆ ಪಟ್ಟಿ/ಹಟ್ಟಿಯಲ್ಲಿ ವಾಸಿಸುವವನು ಎಂದರ್ಥ. ಬೆಳಗಾವಿ ಪರಿಸರದಲ್ಲಿ ಪಶುಪಾಲಕ ವೃತ್ತಿ ಸಮುದಾಯದವರಲ್ಲಿ ಪಾಟೀಲ ಎಂಬುದು ಕುಟುಂಬ ನಾಮವಾಗಿದೆ ಎಂಬುದು ಗಮನಿಸಬೇಕಾದ ಸಂಗತಿ. ಕರ್ನಾಟಕ ಸಂದರ್ಭದಲ್ಲಿ ಪಾಟೀಲ ಮತ್ತು ಗೌಡ ಶಬ್ದಗಳು ಸಮಾನಾರ್ಥಕವಾಗಿ ಬಳಕೆಯಾಗುತ್ತವೆ. ಗೋಪಾಲ>ಗೋವಳ>ಗೌಂಡ>ಗೌಡ ಆಗಿರಬೇಕು. ಶಂಬಾ ಅವರ ಈ ನಿಷ್ಪತ್ತಿಯನ್ನು ಸಹಿತ

ಸ್ವಲ್ಪ ಯೋಚಿಸಬೇಕಾಗಿದೆ. ಆದರೆ ಒಂದು ವಾರ್ಗಿಕವಾಗಿ ಬಳಕೆಯಾಗಿದೆ ಎಂಬುದು ಅಷ್ಟೇ ಗಮನಾರ್ಹ ಸಂಗತಿಯಾಗಿದೆ.

ಪಶುಪಾಲಕರು ಅಲೆಮಾರಿಗಳಾದ್ದರಿಂದ ಪ್ರಕೃತಿಯ ಆರಾಧಕರು. ಪ್ರಕೃತಿಯಲ್ಲಿ ಕಂಡುಬರುವ ನೆಲ, ಮುಗಿಲು, ಮಳೆ, ಬೆಳೆ, ಮರ, ಹುತ್ತ ಎಲ್ಲವೂ ಅವರ ಪಾಲಿಗೆ ದೇವರೆ. ಹಬ್ಬ ಹರಿದಿನಗಳಲ್ಲಿ ಪ್ರಕೃತಿಯನ್ನು ಪೂಜಿಸುತ್ತಾರೆ. ಹಟ್ಟಿಗರು ಪ್ರತಿವರ್ಷ ಹಟ್ಟಿಹಬ್ಬ ಎಂಬ ಹಬ್ಬವನ್ನು ಆಚರಿಸುತ್ತಾರೆ. ಕುರಿ, ಮೇಕೆ, ದನಕರುಗಳನ್ನು ಪೂಜಿಸುವುದು, ಎತ್ತುಗಳ ಮೆರವಣಿಗೆ, ಹಿರಿಯರ ಪೂಜೆ, ಕೆರಕಲ ನೀಡುವುದು ಇತ್ಯಾದಿ ಹತ್ತಾರು ಬಗೆಯ ಸಂಪ್ರದಾಯಗಳು, ಆಚರಣೆಗಳನ್ನು ಒಳಗೊಂಡಂತಹ ವಿಶಿಷ್ಟವಾದ ಹಬ್ಬ ಇದಾಗಿದೆ.

ಹಟ್ಟಿ ಎಂಬುದು ಅಶ್ವಿನಿ ಮತ್ತು ಕಾರ್ತಿಕ ಮಾಸಗಳೆರಡರ ಕಕ್ಷೆಯಲ್ಲಿ ಬರುತ್ತದೆ. ಹೊಲಗದ್ದೆಗಳಲ್ಲಿ ಪೈರು-ಪಚ್ಚೆ ಹುಲಸಾಗಿ ಬೆಳೆದು ನಿಂತು ರೈತನ ಮನಸ್ಸಿಗೆ ಹರ್ಷವನ್ನುಂಟು ಮಾಡುವ ಕಾಲವದು. ಸಾಮಾನ್ಯವಾಗಿ ಹಬ್ಬಗಳು ಒಂದು ದಿವಸ, ಹೆಚ್ಚೆಂದರೆ ಎರಡು ದಿವಸದಲ್ಲಿ ಮುಗಿಯುತ್ತವೆ. ಆದರೆ ಇದು ಹಾಗಲ್ಲ. ನೀರು ತುಂಬುವ ಹಬ್ಬ, ನರಕ ಚತುರ್ದಶಿ, ಲಕ್ಷ್ಮೀಪೂಜೆ ಹೀಗೆ ವಿಧಿವತ್ತಾಗಿ ಒಂದೊಂದನ್ನು ಒಂದೊಂದು ದಿವಸ ನಡೆಸುವಂಥ ಹಬ್ಬ, ಭರಮದೇವನು ಹಟ್ಟಿಯ ಪಾಲಕನೆಂದು ಅವನ ಪೂಜೆಯನ್ನು ಮಾಡುವುದರಿಂದ ಹಟ್ಟಿ ಹಬ್ಬವೆಂತಲೂ ಕರೆಯುತ್ತಾರೆ. ಇದರಲ್ಲಿ ಮುಖ್ಯವಾಗಿ ದನಕರುಗಳ ಪಾತ್ರವೇ ಹೆಚ್ಚು. ಅವುಗಳನ್ನು ಶೃಂಗರಿಸುತ್ತಾರೆ. ಪೂಜೆ ಮಾಡುತ್ತಾರೆ. ಅದರ ಹಿಂದಿರುವ ತರ್ಕ ಫಲವಂತಿಕೆ ಹಾಗೂ ಪಶುಸಂಪತ್ತು ಹೆಚ್ಚುವುದೆಂದು ಹಟ್ಟಿಗರ ದೃಢವಾದ ನಂಬಿಕೆ. ಕನ್ನಡಿಗರು ಹಾಗೂ ಕನ್ನಡೇತರರೂ ಸಹಿತ ಸಾಂಪ್ರದಾಯಿಕವಾಗಿ ಈ ಹಬ್ಬವನ್ನು ನಡೆಸಿಕೊಂಡು ಬರುತ್ತಾರೆ. ಆಚರಣೆಯ ದೃಷ್ಟಿಯಿಂದ ಅಲ್ಪವೆನಿಸಿ ತೋರಿದರೂ ಮಾನವ ಸಂಸ್ಕೃತಿಯ ವಿಕಾಸದ ದೃಷ್ಟಿಯಿಂದ ಬಹು ಅರ್ಥಪೂರ್ಣವಾದ ಹಬ್ಬವಾಗಿದೆ. ದನಗಳ ರಕ್ಷಣೆ ಮತ್ತು ಸಂವರ್ಧನೆಗೆ ಹುಟ್ಟಿಕೊಂಡ ಆರಾಧನೆ ಇದಾಗಿದೆ.



ಮೇಲಿನ ಎಲ್ಲ ವಿವೇಚನೆಯಿಂದ ಪಟ್ಟಿ-ಹಟ್ಟಿ ಇವು ಪಶುಪಾಲಕ ವೃತ್ತಿಯಿಂದ ಒಕ್ಕಲುತನದವರೆಗಿನ ಮಾನವ ವಿಕಾಸದ ಅವಸ್ಥೆಯನ್ನು ತೋರಿಸುತ್ತವೆ. ಸಾವಿರಾರು ವರ್ಷಗಳ ಕಾಲಾವಧಿಯಲ್ಲಿ ಈ ಶಬ್ದಗಳ ಅರ್ಥವಲಯದಲ್ಲಿ ಪರಿವರ್ತನೆಗಳಾಗಿವೆ. ಅವುಗಳ ಪಟ್ಟಿಯನ್ನು ಶಂಬಾ ಅವರು ಕೊಡುತ್ತಾರೆ.

ಪಟ್ಟಿ-ಹಟ್ಟಿಗಳ ವಿವಿಧ ಪರ್ಯಾಯಗಳು

ಪಾಡು-ಪಾಡಿ, ಪಟ್ಟಿ, ಪಟ್ಟಣ-ಪಾಟಣ-ಪಾಟಣಾ

ಪಟ್ಟ-ಪಾಟ-ಪಾಟಕ, ಪಟ್ವಾರ ಪೇಠ-ಪೇಠಾ

ಪಾಡು-ಪಾಡಾ-ಪಾರಾ

ಪಾರಾ-ಹಾರಾ, ಹಾರ-ಹರ-ಅರ

ಪಾಡು-ಆಡು, ಪಾಡಿ-ಆಡಿ

ಬಾಡಿ-ಬಾಳು-ಬಾಳ

ಬಾಳು-ವಾಳು-ವಾಳ-ವಳ-ವಲ

ಪಾಡು-ವಾಡಾ-ವಾಡ-, ವಡ, ವಾಡೆ, ವಡಿಗೆ

ಪಟ್ಟಿ-ಪಾಟ

ಪಾಟಿ-ವಾಟಿ, ವಾಟಿಕಾ

ಪಟ್ಟಿ-ಪಾಟ

ಪಾಟ-ವಾಟ-ವಾಟಕ-ವಾಡಾರ(ಪಾಠಾರ); ವಾಠಾರ; ವಠಾಣ

ಪಟ್ಟಿ-ಪಾಡಿ-ಪ್ಯಾಟಿ-ಪೇಟೆ-ಪೇಠ-ಪೇಠಾ-ಪಾಠಾರ-ಪಾಟಕ

ಪಟ್ಟಿ-ಹಟ್ಟಿ; ಪಟ್ಟ-ಹಟ್ಟ; ಪಾಟ-ಹಾಟ

ಪಾಟಕ-ಹಾಟಕ; ಪಾಡಿ-ಹಾಡಿ

ಪಾಟಕ-ಹಾಟಕ; ಪಾಡಿ-ಹಾಡಿ...

ಪಾಡು-ಪಾಳು-ಹಾಳು-ಹಾಳ... ಆಳ; ಆಲ... ಆಣ

ಪಾಳಿ-ಪಳ್ಳಿ-ಹಳ್ಳಿ

ಪಳ್ಳಿ-ವಳ್ಳಿ-ವಳಿ...ವಲಿ...ಓಲಿ...ಳಿ

ಪಾಡಿ-ಪಾಳಿ-ಹಾಳಿ-ಹಾಳ

ಪಾಳಿ-ಪಾಳ್ಯ, ಪಲ್ಯ

ಪಟ್ಟಿ-ಹಟ್ಟಿ ವರ್ಗದ ಈ ಹಬ್ಬುಗೆಯನ್ನು ನೋಡಿದಾಗ ಬಹಳಷ್ಟು ಸಮಸ್ಯೆಗಳ ಮೇಲೆ ಬೆಳಕು ಬೀಳಬಹುದಾಗಿದೆ. ಆದರೂ ಒಂದು ಮಾತು, ಹಟ್ಟಿ-ಹಾಡಿಗಳು ಕನ್ನಡ ಪೂರ್ವಿಕರ ಮೊದಲ ವಸತಿ ಸ್ಥಾನದಿಂದ ಹುಟ್ಟಿರುವ ರೂಪಗಳಾಗಿರುವ ಸಾಧ್ಯತೆಯಿದ್ದರೂ ಇವು ಇಂದು ಕಾಣಿಸಿಕೊಳ್ಳುವ ಹೆಸರಿನ ಊರುಗಳಲ್ಲೆಲ್ಲ ಕನ್ನಡ ಪೂರ್ವಿಕರು ಇದ್ದರೆಂದು ಹೇಳುವಂತಿಲ್ಲ, ಹಟ್ಟಿ-ಹಾಡಿ ರೂಪಗಳಿರುವ ಕೆಲವೇ ಊರ ಹೆಸರುಗಳು ಅನುಕರಣೆಯಿಂದಾಗಿ ಇತರ ಊರ ಹೆಸರುಗಳಲ್ಲಿಯೂ ಈ ರೂಪಗಳು ಅಂಟಿಕೊಳ್ಳುತ್ತವೆ. ಇದರಿಂದಾಗಿ ಯಾವ ಹೆಸರು ಪೂರ್ವಕಾಲದ್ದು, ಯಾವುದು ಅರ್ವಾಚೀನದ್ದು, ಎಂಬುದನ್ನು ನಿರ್ಣಯಿಸುವುದು ಸುಲಭವಾದ ಕೆಲಸವಲ್ಲ. ಆದರೂ ಶಂಬಾ ಅವರು ಈ ನಿಟ್ಟಿನಲ್ಲಿ ಅಧ್ಯಯನಕಾರರ ಗಮನ ಸೆಳೆದಿದ್ದಾರೆ ಎಂಬುದು ತುಂಬಾ ಮುಖ್ಯವಾದ ಸಂಗತಿಯಾಗಿದೆ.

ಆಧುನೀಕರಣದ ಈ ಸಂದರ್ಭದಲ್ಲಿಯೂ ಹಟ್ಟಿಕಾರರು ತಮ್ಮದೇ ಆದ ಹಟ್ಟಿಗಳನ್ನು ಕಟ್ಟಿಕೊಂಡು ಊರಿನಿಂದ ದೂರದಲ್ಲಿರುವ ಗುಡ್ಡಗಾಡು ಪ್ರದೇಶದಲ್ಲಿ ಹುಲ್ಲು ಗುಡಿಸಲುಗಳಲ್ಲಿ ವಾಸ ಮಾಡುತ್ತಾರೆ. ಮ್ಯಾಸನಾಯಕರು ವಾಸ ಮಾಡುವ ಪ್ರದೇಶಗಳನ್ನು ಹಟ್ಟಿಗಳೆಂದು ಹೇಗೆ ಕರೆಯುತ್ತಾರೆಯೋ ಅದೇ ರೀತಿ ಮ್ಯಾಸರು ವಾಸ ಮಾಡುವ ಪ್ರದೇಶವನ್ನು ಮ್ಯಾಸರ ಹಟ್ಟಿಗಳೆಂದು ಕರೆಯುತ್ತಾರೆ. ಈ ಹಟ್ಟಿಗಳಲ್ಲಿ ೧೦೦ಕ್ಕೆ ೭೫ರಷ್ಟು ಗುಡಿಸಲು ಉಳಿದ ೨೫ರಷ್ಟು ಮಣ್ಣು ಮತ್ತು ಇಟ್ಟಿಗೆಗಳಿಂದ ಕಟ್ಟಿದ ಕಟ್ಟಡ, ಮಾಳಿಗೆಯಿಂದ ಕೂಡಿದ ಮಣ್ಣಿನ ಮನೆಗಳು. ಮ್ಯಾಸ ತಾವು ಕಟ್ಟಿದ ಕೊಟ್ಟಿಗೆಗಳನ್ನು ಕಟ್ಟಿ ದನ ಕರು, ಕುರಿ, ಮೇಕೆಗಳನ್ನು ಕಟ್ಟುತ್ತಾರೆ. ಗೊಲ್ಲರಂತೆ ಮ್ಯಾಸರು ಕುರಿಗಳಿಗೆ ಕೊಟ್ಟಿಗೆಗಳನ್ನು ಕಟ್ಟಿ ದನ ಕರು, ಕುರಿ, ಮೇಕೆ ಗಳನ್ನು ಕಟ್ಟುತ್ತಾರೆ. ಮ್ಯಾಸನಾಯಕರಂತೆ ಗೊಲ್ಲರು ಕುರಿಗಳಿಗೆ ಪ್ರತ್ಯೇಕವಾದ ದೊಡ್ಡಿಗಳನ್ನು ಕಟ್ಟಿ ಅದರೊಳಗೆ ಕುರಿಗಳನ್ನು ಕೂಡಿ ಹಾಕಿ ತಾವು ಅಲ್ಲಿಯೇ ಮಲಗುತ್ತಾರೆ. ಸಾಮಾನ್ಯವಾಗಿ ಮ್ಯಾಸನಾಯಕರು ಸೂರಿಗೆ, ತೆಂಗಿನಗರಿ, ಹುಲ್ಲು, ಎಲೆಗಳನ್ನು ಬಳಸುತ್ತಾರೆ. ಆಯಾ ಹಟ್ಟಿಗಳಲ್ಲಿ ಅವರದೇ ಆದ ಬಂಧು-ಬಳಗದ ಜನ ವಾಸ ಮಾಡುವುದನ್ನು ಕಾಣಬಹುದು. ಈ ರೀತಿಯಾಗಿ ವಾಸ ಸ್ಥಳಕ್ಕೆ ಸಂಬಂಧಿಸಿದಂತೆ ಮ್ಯಾಸರಲ್ಲಿ ಮತ್ತು ಗೊಲ್ಲರಲ್ಲಿ ಒಂದು ರೀತಿಯ ಸಾಮ್ಯತೆಯನ್ನು ಕಾಣಬಹುದು.[೧]

ಮೇಲಿನ ಎಲ್ಲ ಅಂಶಗಳಿಗೆ ಪೂರಕವಾಗಿ ಕಂಡುಬರುವ ಇನ್ನೊಂದು ಸಂಗತಿ ಎಂದರೆ ಹಟ್ಟಿ ಮೂಲ ಮತ್ತು ಸ್ವರೂಪದ ಬಗ್ಗೆ ಹೇರಳವಾಗಿ ಪುರಾಣಗಳು, ಐತಿಹ್ಯಗಳು ಲಭ್ಯವಿವೆ. ಉದಾಹರಣೆಗೆ ಜನಪದ ಬೇಡ ಬುಡಕಟ್ಟಿನ ಕಥೆಗಳು, ಜುಂಜಪ್ಪನ ಕಾವ್ಯ ಮುಂತಾದ ಕಾವ್ಯ, ಪುರಾಣಗಳಲ್ಲಿ ಹಟ್ಟಿ ಮೂಲ ಮತ್ತು ಉಗಮದ ಬಗ್ಗೆ ವಿವರಗಳು ಸಿಗುತ್ತವೆ. ಅಲ್ಲಿಯೂ ಸಹಿತ ಹಟ್ಟಿ ಹೆಚ್ಚಾಗಿ ಪಶುಪಾಲಕರಿಗೆ ಸಂಬಂಧಿಸಿದ ವಾಸ್ತವ್ಯವೆಂದು ಗುರುತಿಸಲಾಗಿದೆ. ಒಟ್ಟಾರೆ ಪಶುಪಾಲಕರು ಭಾರತದ ಮೂಲನಿವಾಸಿಗಳು. ಅವರು ಭಾರತದಾದ್ಯಂತ ವ್ಯಾಪಿಸಿದ್ದಾರೆ. ಅವರು ಕರ್ನಾಟಕದ ಮೂಲದವರೆಂದು ವಿದ್ವಾಂಸರು ಪುರಾವೆಗಳ ಮೂಲಕ ಹೇಳಿದ್ದಾರೆ. ಆ ನಿಟ್ಟಿನಲ್ಲಿ ಇನ್ನೂ ವ್ಯಾಪಕವಾದ ಅಧ್ಯಯನ ನಡೆಯಬೇಕಾಗಿದೆ. ಈಗಾಗಲೇ ಹಲವಾರು ವಿದ್ವಾಂಸರು ಈಗ ಪ್ರಯತ್ನಿಸಿರುವುದು ಸ್ವಾಗತಾರ್ಹ. ಚರಿತ್ರೆ, ಮಾನವಶಾಸ್ತ್ರ, ಭಾಷಾಶಾಸ್ತ್ರ, ಸಮಾಜಶಾಸ್ತ್ರ ಮುಂತಾದ ವಿಷಯಗಳನ್ನು ಹಿನ್ನಲೆಯಾಗಿಟ್ಟುಕೊಂಡು ಅಂತರ್‌ಶಿಸ್ತೀಯ ಅಧ್ಯಯನ ನಡೆಸುವ ಮೂಲಕ ಮನುಕುಲದ ನೈಜ ಚರಿತ್ರೆ ತಿಳಿಯುವ ಅವಶ್ಯಕತೆ ಇದೆ.

ಹಟ್ಟಿ ಎಂಬ ಪದದ ಅರ್ಥ ಪ್ರೀತಿಗೆ ಪಾತ್ರನಾದ ಸ್ನೇಹಿತ, ಅವನು ಸೂಕ್ಷ್ಮ ಹಾಗೂ ರಹಸ್ಯವಾಗಿರುತ್ತಿದ್ದನು. ಒಮ್ಮೆ ಭೇಟಿಯಾದರೆ ಜೀವನದಲ್ಲಿ ಒಳ್ಳೆಯ ಸ್ನೇಹಿತನಾಗಿರುತ್ತಾನೆ. ಹಳೇ ಜರ್ಮನಿಯಲ್ಲಿ ಹಟ್ಟಿ ಎಂದರೆ ಹುಡುಗಿಯ ಹೆಸರು ಎಂದು ಕರೆಯುವುದಿದೆ. ಹಾಗೆಯೇ ಜರ್ಮನಿಯ ಆಡಳಿತಗಾರ ಎಂದು ಕರೆಯುತ್ತಾರೆ. ಹಾಗೆಯೇ ಸಣ್ಣ ಮಗುವಿನ

ಹೆಸರಿನ ಧ್ವನಿಯಾಧರಿಸಿ ಹಟ್ಟಿ, ಮಟ್ಟಿ, ನಟ್ಟಿ ಹಾಗೂ ಪಟ್ಟಿ ಈ ತರಹದ ಹೆಸರುಗಳು ಹಟ್ಟಿಯಲ್ಲಿ ಪುನರಾವರ್ತನೆಯಾಗುತ್ತವೆ. ಹಟ್ಟಿ ಜನಪ್ರಿಯವಾಗಿ ಒಬ್ಬ ಮಹಿಳೆಯ ಹೆಸರಾಗಿರಬಹುದು. ಅದು ಸಾಮಾನ್ಯವಾಗಿ ಅಡ್ಡ ಹೆಸರು ಅಥವಾ ವಾಕ್ಯದ ಕೊನೆಯ ನಾಮವಾಗಿರಬಹುದು ಎಂದು ಜರ್ಮನಿಯ ೧೯೯೦ರ ಜನಗಣತಿಯಿಂದ ತಿಳಿದುಬಂದಿದೆ. ಅದು ತಲಾಂತರದಲ್ಲಿ ಅಂದರೆ ೨೦೧೦ರ ವೇಳೆಗೆ ಸಣ್ಣಮಕ್ಕಳ ಹೆಸರಿನಲ್ಲಿ ಹಟ್ಟಿಗಳು ಜನಪ್ರಿಯವಾದವು.

ಅನಾಟಾಲಿಯಾದಲ್ಲಿ ಕಂಚಿನ ಯುಗ ಆರಂಭದ ವೇಲೆ ಹಟ್ಟಿ ಎಂದರೆ ಅಸ್ಸಿರಿಯನ್ ಊರು, ಹಟ್ಟಿ ಎಂದು ತಿಳಿದುಬರುತ್ತದೆ. ಇವುಗಳನ್ನು ಸಾಮಾನ್ಯವಾಗಿ ಪವಿತ್ರ ನದಿದಂಡೆಯಲ್ಲಿ ಕಾಣಬಹುದು. ಕ್ರಿ.ಪೂ. ೩ ಮತ್ತು ೨ನೇ ಶತಮಾನದಲ್ಲಿ 'ಹಟ್ಟಿಯನ್' ಎಂಬ ಜನಾಂಗ ಅಸ್ಸಿರಿಯಾ ಪ್ರಾಂತ್ಯದಲ್ಲಿರುತ್ತದೆ. ಕ್ರಿ.ಪೂ. ೧೪೦೦-೧೨೦೦ರಲ್ಲಿ ಹಟ್ಟಿ ಎಂಬ ಸಾಮ್ರಾಜ್ಯ ಬೆಳಕಿಗೆ ಬರುತ್ತದೆ. ಕ್ರಿ.ಪೂ. ೧೦೦೦-೭೦೦ರ ಅವಧಿಯಲ್ಲಿ ಪಶ್ಚಿಮ ಯುಪ್ರಟಿಸ್ ಪ್ರಾಂತ್ಯದಲ್ಲಿ ನವಹಟ್ಟಿ ಸಾಮ್ರಾಜ್ಯ ಆ ಭಾಗವನ್ನು ತನ್ನ ನಿಯಂತ್ರಣಕ್ಕೊಳಪಡಿಸಿಕೊಳ್ಳುತ್ತದೆ.

ಹಟ್ಟಿ ಎಂಬ ಪಂಜಾಬಿನ ಪದ ರಸ್ತೆಯ ಬದಿಯಲ್ಲಿರುವ ಸಣ್ಣ ಅಂಗಡಿಯನ್ನು ಸಂಕೇತಿಸುತ್ತದೆ. ಕರ್ನಾಟಕದ ರಾಯಚೂರು ಪ್ರದೇಶದಲ್ಲಿ ಹಟ್ಟಿ ಎಂಬ ಮೂಲನಿವಾಸಿಗಳ ನೆಲೆಯನ್ನು ಕಾಣಬಹುದು. ದಾವಣಗೆರೆ ಜಿಲ್ಲೆಯಲ್ಲಿ ಹಟ್ಟಿ ಎಂದರೆ ದನಗಾಹಿಗಳು ವಾಸಿಸುವ ನೆಲೆ ಎಂದು ಕರೆಯುತ್ತಾರೆ. ಇರಾನ್ ದೇಶದಲ್ಲಿ ಹಟ್ಟಿ ಎಂದರೆ ಜಿಲ್ಲಾ ಆಡಳಿತಾತ್ಮಕ ಉಪವಿಭಾಗ ಎಂದು ಕರೆಯಿಸಿಕೊಂಡಿದೆ. ಟರ್ಕಿ ದೇಶದಲ್ಲಿ ಹಟ್ಟಿ ಎಂದರೆ ಪ್ರವಾಸೋದ್ಯಮ ತಾಣ ಎಂದು ಕರೆಯುತ್ತಾರೆ. ಈ ಪ್ರವಾಸ ಅಲ್ಲಿನ ಪ್ರಸಿದ್ಧ ಸಂಸ್ಕೃತಿಯ ಬಗ್ಗೆ ಅಗೋಚರವಾಗಿದ್ದ ಜನಾಂಗ ಮತ್ತು ಐತಿಹಾಸಿಕ ಸ್ಥಳಗಳನ್ನು ತೋರಿಸುತ್ತದೆ. ಅಲ್ಲಿನ ಸ್ಥಳೀಯ ಜನರೊಡನೆ ಯಾವ ತರಹದ ಸಂಸ್ಕೃತಿ ಕಟ್ಟಿಕೊಂಡಿದ್ದಾರೆ ಎಂಬುದನ್ನು ಮನದಟ್ಟು ಮಾಡಿಕೊಡುತ್ತದೆ.

ಲೂಸಿಯಾನ, ಅಮೇರಿಕಾ, ಇಂಗ್ಲೇಂಡ್ ವಾಷಿಂಗ್ ಟನ್ ಮುಂತಾದ ದೇಶಗಳಲ್ಲಿ ಹಟ್ಟಿ ಎನ್ನುವ ಪದ ಹೊಟೇಲ್ ಮತ್ತು ರೆಸ್ಟೋರೆಂಟ್ ಗಳಿಗೆ ಬಳಕೆಯಾಗುತ್ತದೆ. ಇಂಗ್ಲೇಡ್ ನಲ್ಲಿ ಮನೆಯನ್ನೇ ಹಟ್ಟಿ ಎಂದು ಕರೆಯುತ್ತಾರೆ. ಅಮೇರಿಕಾದಲ್ಲಿ ಪನಾಮಹಟ್ಟಿಗಳು ಬಳಕೆಯಲ್ಲಿವೆ. ಇನ್ನು ಕೆಲ ಭಾಗಗಳಲ್ಲಿ ಮದುವೆಯ ಸಮಾರಂಭಗಳಿಗೆ ಹಟ್ಟಿಗಳು ಸೇವೆ ಸಲ್ಲಿಸುತ್ತಿವೆ. ವಿದೇಶದಲ್ಲಿ ಪ್ರವಾಸ ತಾಣಗಳ ನದಿ ಹಂಚಿನ ಹಿನ್ನಿರು ಪ್ರದೇಶಗಳು ಹಟ್ಟಿಗಳಿದ್ದವು ಎಂಬುದು ತಿಳಿದುಬಂದಿದೆ.

ಕ್ರಿ.ಪೂ.೨೩೫೦-೨೧೫೦ರ ಅವಧಿಯಲ್ಲಿ ಮೆಸಪಟೋಮಿಯಾದ ದೊರೆ ಸರ್ಗಾನ್ ಎಂಬ ಪ್ರಸಿದ್ಧ ಸಾಮ್ರಾಟ ಆಳ್ವಿಕೆ ಮಾಡುತ್ತಾನೆ. ಆತನ ಕಾಲದ ದಾಖಲೆಗಳು ಸ್ಪಷ್ಟಪಡಿಸುವಂತೆ ಹಳೆ ಅನಾಟಾಲಿಯಾ ಹಟ್ಟಿಗಳು ತೊಟ್ಟಿಲು ಎಂದು ಕರೆದಿವೆ. ಇವನು ಸುಮಾರು ೧೫೦ ವರ್ಷಗಳ ಆಳ್ವಿಕೆ ಮಾಡಿ ಹಟ್ಟಿ ಸಾಮ್ರಾಜ್ಯದ ಒಡೆಯನಾಗಿದ್ದು. ಸರ್ಗಾನ್ ನ ನಂತರ ಹಟ್ಟಿಗಳ ದೊರೆ

ಬರುಕಂದದ ನರ್ದಾಜಲ್ ಅಧಿಕಾರವನಿಸಿಕೊಂಡನು. ನರಾಮ್ ಸ್ಯೂನ್ ಎಂಬ ಅಕ್ಕಡ ದೊರೆ ಪಂಬ ದೊರೆ ಯುದ್ದ ಮಾಡಿದ ನಂತರ ಹಟ್ಟಿಯ ೧೬ ಪಾಳೆಗಳಾಗಿ ಮಾರ್ಪಟ್ಟವು. ಇವರಾಡುವ ಭಾಷೆ ನಾನ್ ಇಂಡೋ ಯುರೋಪಿಯನ್ ಭಾಷೆ ಎಂದೂ ನಂತರ ಹಲವು ವಿದ್ವಾಂಸರು ಉತ್ತರ ಪಶ್ಚಿಮರ ಭಾಷೆಯ ಸಂಬಂಧವನ್ನು ಕಲ್ಪಿಸುತ್ತಾರೆ. ಈ ತರಹದ ಬರಹಗಳನ್ನು ಟೆವೂರ್ ಬ್ರೇಸಿಯಲ್ಲಿ ಕಾಣಬಹುದು. ಈ ಆಧಾರಗಳು ಹಟ್ಟಿ ನಾಗರೀಕತೆಯನ್ನು ವ್ಯಾಖ್ಯಾನಿಸುವ ಒಂದು ವಿಧಾನವಾದಲ್ಲಿ ನಂತರ ಅವಧಿಯಲ್ಲಿ ನಾನ್ ಇಂಡೋ-ಯುರೋಪಿನ್ ಭಾಷೆಗಳಲ್ಲಿ ಹಟ್ಟಿ, ಭಾಷೆ ಚಹರೆಯನ್ನು ಗುರುತಿಸುತ್ತಾರೆ. ಕೆಲವು ಪುಸ್ತಕಗಳಲ್ಲಿ ಹಟ್ಟಿಯ ಧರ್ಮ ದೇವತೆಗಳ, ಸ್ಥಳ ಅಂಕಿ ಸಂಖ್ಯೆಗಳನ್ನು ಗುರುತಿಸುತ್ತಾರೆ. ಹಟ್ಟಿ ಎಂಬ ಪದ ಪ್ರೊಟೋ ಹಟ್ಟಿಯನ್ ಕಾಲದಲ್ಲಿ ಸರಿಯಾದ ಅರ್ಥ ಕಲ್ಪಿಸಿರುವುದಿಲ್ಲ. ಹಟ್ಟಿಯ ಎಲ್ಲರೂ ಸಮಸ್ಯೆಗಲಣ್ನು ಪರಿಹರಿಸುವುದು ಎನ್ನುವುದಿದೆ. ಅದು ವ್ಯಕ್ತಪಡಿಸುವಂತೆ ಸ್ವರಾಷ್ಟ್ರ ಎಂಬ ಕಲ್ಪನೆಯಲ್ಲಿ ಭಾಷೆಯಿಂದ ಇಂಡೋ ಯುರೋಪಿಯನ್ ಭಾಷೆ ಎಂದು ಕರೆಯುವರು. ಕ್ರಿ.ಪೂ.೨೦೦೦ರ ವೇಳೆಗೆ ಹಟ್ಟಿಗಳು ಉಗಮವಾಗಿ ಊಳಿಗಮಾನ್ಯ ನಗರರಾಜ್ಯಗಳು ಹಾಗೂ ಸಣ್ಣಪುಟ್ಟ ಸಾಮ್ರಾಜ್ಯಗಳು ಉಗಮವಾಗಿ ನಗರಗಳನ್ನು ತನ್ನ ನಿಯಂತ್ರಣಕ್ಕೊಪಡಿಸಿಕೊಂಡವು. ಮಧ್ಯ ಅನಾಟಾಲಿಯಾದಲ್ಲಿ ಕಂಚಿನಯುಗ, ಹಟ್ಟಿಯ ಸಾಮ್ರಾಟರು ಸಾಮ್ರಾಜ್ಯ ವಿಸ್ತರಿಸಿ ಜನಸಂಖ್ಯೆ ಹೆಚ್ಚಾಯಿತು. ಈ ಅವಧಿಯಲ್ಲಿ ಹಟ್ಟಿ ಸಾಮ್ರಾಜ್ಯ ಹಟ್ಟಿ ಕಟ್ಟಿಕೊಳ್ಳುವ ಹವ್ಯಾಸ ಬೆಳಸಿಕೊಂಡರು.

ಸ್ಥಳನಾಮಶಾಸ್ತ್ರ ಎಂದು ಕರೆಯಲಾಗುವ ನಾಮಶಾಸ್ತ್ರ ಪ್ರಕಾರದಲ್ಲಿ ಗ್ರಾಮನಾಮ ಶಾಸ್ತ್ರ ಹಾಗೂ ಸ್ಥಳನಾಮಶಾಸ್ತ್ರ ಎಂದು ಎರಡು ಕವಲುಗಳಿವೆ. ಸ್ಥಳನಾಮ, ನಾಮಪ್ರಕಾರದ ಸಮಗ್ರ ರೂಪವಾದರೆ ಗ್ರಾಮನಾಮವೆಂಬುದು ಅದರ ಸಂಕ್ಷಿಪ್ತ ವ್ಯಾಪ್ತಿಯ ರೂಪ. ಹಾಗೆಂದು ಇವೆರಡು ಪ್ರತ್ಯೇಕವೆಂದಾಗಲಿ ಅಥವಾ ಒಂದೇ ಎಂದಾಗಲಿ ಭಾವಿಸುವಂತಿಲ್ಲ. ತಮ್ಮದೇ ಆದ ವಿಶಿಷ್ಟತೆಯಿಂದ ಏಕಕಾಲಕ್ಕೆ ಅಭಿನ್ನವೂ, ಭಿನ್ನವೂ ಆಗಿಬಿಡುವ ಸಾಧ್ಯತೆಯಿದೆ. ಅವೆರಡರ ವಿಸ್ತೃತವಾದ ಅಧ್ಯಯನದ ಮೂಲಕವೇ ನಾಮಾಧ್ಯಯನದ ಇಡಿಯಾದ ರೂಪವೊಂದರ ಗ್ರಹಿಕೆಯಾಗಲು ಸಾಧ್ಯವಿದೆ.[೨]

ಗ್ರಾಮನಾಮದ ಪರಿಧಿ ಮಾನವ ನಿರ್ಮಿತ ಸಂಸ್ಕೃತಿಯೊಂದರ ನೆಲೆಸುವಿಕೆಗೆ ಮಾತ್ರ ವ್ಯಾಪಿಸಿಕೊಂಡಿರುತ್ತದೆ. ಹಾಗೆ ನೋಡಿದರೆ ಇದು ಸ್ಥಳನಾಮವೆಂಬ ಸಮಗ್ರತೆಯಲ್ಲಿ ಒಂದಾಗಿಯೇ ಇರುವುದು ಗಮನಿಸಬಹುದು. ಭೌಗೋಳಿಕ ಸೃಷ್ಟಿಯ ಬೆಟ್ಟಗುಡ್ಡ, ತೊರೆ, ನದಿ, ಹೊಲಗದ್ದೆ ಮುಂತಾದವು ಅಲ್ಲದೆ ಕೆರೆ, ಕಾಲುವೆ ಕುಂಟೆ ಎಂಬ ಕೆಲವು ಮಾನವನಿರ್ಮಿತ ಸ್ಥಳಗಳು ಸಮಗ್ರತೆಯಲ್ಲಿ ಒಳಗಾಗುತ್ತವೆ. ಸ್ಥಳನಾಮಗಳ ಹೆಸರಿನ ಅಡಿಯಲ್ಲಿ ಗ್ರಾಮನಾಮಗಳನ್ನು ಗ್ರಾಮನಾಮಗಳು ಎಂಬ ಹೆಸರಿನಡಿಯಲ್ಲಿ ನಿರ್ವಸತಿ, ನಿರ್ವಸಿತ ವಸತಿ ಸ್ಥಳನಾಮಗಳ ಅಧ್ಯಯನಗಳು ನಡೆದುಕೊಂಡು ಬಂದಿವೆ.

ಗ್ರಾಮ, ಊರು, ಪುರ ಎಂಬುವು ಅಷ್ಟೇ ಪುರಾತನವಲ್ಲವೆನ್ನುವ ಶಂಬಾ ಅವರು ಮಾನವ ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಚಯನಕ್ಕಾಗಿ ಅಲೆಮಾರಿಯಾಗಿದ್ದು, ಆತನ ವಸತಿಸೂಚಕವಾದ ಹೆಸರು 'ಹಟ್ಟಿ' ಎಂದು ಊಹಿಸುವರು. ಈ ಶಬ್ದವು ದನಗಾರಿಕೆಯು ಬಾಳಿನ ದ್ಯೋತಕವಾಗಿದೆ. ಹಟ್ಟಿಗಳು ನಮ್ಮ ನಾಡಿನ ಆರಂಭಕಾಲದ ವಸತಿಗಳೆಂದು ಊಹಿಸುವರು. ಹಟ್ಟಿಯ ಮೂಲರೂಪ 'ಪಟ್ಟಿ' ಎಂದೂ, ಇದಕ್ಕೆ ತಮಿಳಿನಲ್ಲಿ ಮನೆ, ಹಳ್ಳಿ ಎಂಬ ಅರ್ಥವಿದೆಯೆಂದು ವಾದಿಸುತ್ತಾರೆ.[೩]

ಸ್ಥಳನಾಮಗಳು ಸಾಮಾಜಿಕ ಇತಿಹಾಸದಲ್ಲಿ ಮನುಷ್ಯನನ್ನು ತಿಳಿಯಲು ಹೇಗೆ ಮಹತ್ವವಾಗಿದೆಯೆಂಬುದನ್ನು ವಿವರಿಸುತ್ತಾರೆ. ಪಟ್ಟಿ, ಪಾಡಿ, ವಾಡ, ಹಟ್ಟಿ ಮೊದಲಾದುವು ಗ್ರಾಮನಾಮದ ರೂಪಗಳು. ಜನಾಂಗದ ವಾಸಸ್ಥಾನ ಸೂಚಕಗಳು ಎಂದು ಶಂಬಾ ತರ್ಕಿಸುತ್ತಾರೆ. ನಾಮ ಇಂದು ವ್ಯಾಕರಣ ಮತ್ತು ಕೋಶಗಳ ವ್ಯಾಪ್ತಿಯನ್ನು ಮೀರಿ ಜನಾಂಗದ ಸಾಂಸ್ಕೃತಿಕ ಅಧ್ಯಯನದ ಮಹತ್ವಪೂರ್ಣ ಸಾಧನವಾಗಿ ಪರಿಣಮಿಸಿದೆ.

ನಿಸರ್ಗಕ್ಕಿಂತ ಜನಾಂಗದ ಬಗೆಗೆ ವ್ಯಕ್ತಿ ಮೋಹ ಬೆಳಸಿಕೊಳ್ಳುವಲ್ಲಿ ನಿಸರ್ಗವಾಚಿಗೆ ಬದಲು ಕ್ರಮೇಣ ಜನಾಂಗವಾಚಿ ಗ್ರಾಮನಾಮಗಳು ತಲೆದೋರಲಾರಂಭಿಸಿದವು.[೪]

ನಿಸರ್ಗನಿಷ್ಠತೆಯಿಂದ ಜನಾಂಗ ನಿಷ್ಠತೆಗೆ ಸರಿದ ಮನುಷ್ಯ. ಕಾಲಕ್ರಮದಲ್ಲಿ ವ್ಯಕ್ತಿನಿಷ್ಠತೆಯ ಅಂಚನ್ನು ತಲುಪಿದ. ಈ ಅವಧಿಯಲ್ಲಿ ಅವರು ಊರುಗಳಿಗೆ ತನ್ನ ಕುಟುಂಬದ ಹಿರಿಯರ ಹೆಸರನ್ನು ಆಮೇಲೆ ತನ್ನ ಸಂಬಂಧಿಕರ ಇಲ್ಲವೇ ತನ್ನ ಹೆಸರನ್ನು ಇಡತೊಡಗಿದ.[೫]

ಯಾವುದೇ ನಾಮ ವ್ಯಕ್ತಿ, ಕುಟುಂಬ, ಗ್ರಾಮಗಳಿಗೆ ಅಂಟಿಕೊಂಡು ಕ್ರಮೇಣ ಬೆಳೆದುಕೊಳ್ಳುವುದು ಒಂದು ಹಂತವಾದರೆ ಆ ತರುವಾಯ ಅದು ಕ್ರಮೇಣ ವ್ಯತ್ಯಾಸವಾಗುತ್ತ ಇಂದಿನ ರೂಪ ಧರಿಸುವುದು ಎರಡನೆಯ ಹಂತವೆನಿಸುತ್ತದೆ.[೬]

ವ್ಯಕ್ತಿನಾಮದಲ್ಲಿ ಪೂರ್ವ ಮತ್ತು ಉತ್ತರ ಎಂಬ ಎರಡು ಘಟಕಗಳಿರುತ್ತಿದ್ದು, ಪೂರ್ವ ಘಟಕವೇ ವ್ಯಕ್ತಿಯ ನಿಜವಾದ ಹೆಸರು, ಉತ್ತರದಲ್ಲಿರುವುದು ಎಲ್ಲ ವ್ಯಕ್ತಿಗಳ ಹೆಸರಿಗೂ ಅಂಟುವ ಸಾಮಾನ್ಯ ಘಟಕ.[೭]

ಹೆಸರು ಸಂಸ್ಕೃತಿಯ ಅಧ್ಯಯನದ ಬಹುಮುಖ್ಯ ಆಕರ ಸಾಮಗ್ರಿಯಾಗಿ ಇಂದು ಬಳಕೆಯಾಗುತ್ತಲಿದೆ. ಗ್ರಾಮ ಕುಟುಂಬಗಳ ಹೆಸರುಗಳಂತೆ ವ್ಯಕ್ತಿಯ ಹೆಸರನ್ನು ಸರಿಯಾಗಿ ಬಿಚ್ಚಿ ಅದು ಪ್ರತಿನಿಧಿಸುವ ಸಂಸ್ಕೃತಿಯ ಶೋಧಕಾರ್ಯದಲ್ಲಿ ವಿದ್ವಾಂಸರು ದಿನೇ ದಿನೇ ಹೆಚ್ಚು ಆಸಕ್ತಿ ವಹಿಸುತ್ತಲಿದ್ದಾರೆ.

## ೩.೧. 'ಮ್ಯಾಸ' ಎಂಬ ಪದದ ನಿಷ್ಪತ್ತಿ

ಆಹಾರ ಸಂಗ್ರಹಣೆಯ ಒಂದು ವಿಧಾನವಾಗಿ ಮನುಷ್ಯನು ಭೇಟೆಯಾಡುವುದನ್ನು ಕಲಿತನು. ಇದು ಆತನ ಬದುಕಿಗೆ ಅನಿವಾರ್ಯವೇ ಆಗಿತ್ತು. ಈ ಬಗೆಯ ಜೀವನ ವಿಧಾನದಲ್ಲಿ ಜಗತ್ತಿನ ಎಲ್ಲಾ ಜನಾಂಗಗಳ ನಡುವೆಯೂ ಸಾಮ್ಯತೆ ಇದೆ. ಹೀಗೆ ಬೇಟೆಯಾಡಿ, ಆಹಾರ ಸಂಗ್ರಹ ಮಾಡಿ ಬದುಕುವ ಸಮುದಾಯವನ್ನು ನಿಷಾಧರು, ವ್ಯಾಧರು, ಪುಳಿಂದರು, ಬೇಡರು, ಬಿಲ್ಲರು ಹೀಗೆಲ್ಲಾ ಕರೆಯುವ ವಾಡಿಕೆ ಇದೆ. ಭಾರತದಲ್ಲಿ ಇರುವ ಜನರೆಲ್ಲಾ ಇದೇ ಮೂಲದಿಂದ ಬಂದಿರುವಾಗ ಅವರನ್ನೆಲ್ಲಾ ಏಕೆ ಹೀಗೆ ಕರೆಯಲಾಗುತ್ತಿಲ್ಲ ಎಂಬ ಪ್ರಶ್ನೆಯೂ ಇಲ್ಲಿ ಉದ್ಭವಿಸುತ್ತದೆ. ಬಹುಶಃ ಕಾಲ ಕ್ರಮೇಣ ಮೂಲ ವೃತ್ತಿಯನ್ನು ತೊರೆದು ಕೃಷಿ ಪಶುಪಾಲನೆ ಅಥವಾ ಇತರೆ ಬದುಕುವ ವಿಧಾನಗಳಿಗೆ ಬಹಳ ಬೇಗ ಸ್ಥಿತ್ಯಂತರಗೊಂಡವರು ತಮ್ಮ ವೃತ್ತಿಗಳಿಗನುಗುಣವಾಗಿ ಬೇರೆಯದೆ ಹೆಸರುಗಳಿಂದ ತಮ್ಮನ್ನು ಗುರುತಿಸಿಕೊಂಡಿರಬಹುದು ಎಂಬುದು ಸರಳ ಉತ್ತರ. ಆದರೆ ನಾಗರೀಕತೆಯ ವಿಕಾಸದ ವಿವಿಧ ಹಂತಗಳಿಂದ ದೂರ ಉಳಿದು, ಬೇಟೆಯನ್ನೇ ಮೂಲ ಪ್ರವೃತ್ತಿಯನ್ನಾಗಿಸಿಕೊಂಡು ಬಂದಿದ್ದು, ಇತ್ತೀಚೆಗೆ ಕಾಡಿನ ನೆಲೆ ಕಳೆದುಕೊಂಡ ನಂತರ ಬೇಟೆಯಾಡುವುದನ್ನು ಒಂದು ಆಚರಣೆಯನ್ನಾಗಿ ಮಾತ್ರ ಉಳಿಸಿಕೊಂಡು ಬಂದಿರುವ ಜನಸಮುದಾಯವನ್ನು ಶಬರ, ಕಿರಾತ, ವಿಷಾದ, ವ್ಯಾಧ, ಬೇಟೆಗಾರ, ಪುಳಿಂದ, ಬಿಲ್ಲವ ನಾಯಕ, ನಾಯಕ ಮಕ್ಕಳು, ಕನ್ನಯ್ಯನ ಮಕ್ಕಳು ಇತ್ಯಾದಿ ಹೆಸರುಗಳಿಂದ ಕರೆಯಲಾಗುತ್ತದೆ ಎಂದು ಊಹಿಸಬಹುದು. ಈ ಸಮುದಾಯದ ಉಲ್ಲೇಖ ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತದಲ್ಲಿಯೂ ಬರುತ್ತದೆ. ರಾಮಾಯಣ ದಲ್ಲಿ ಶ್ರೀರಾಮನು ವನವಾಸವನ್ನು ಆರಂಭಿಸಿದಾಗ ಕಾಡಿನ ಬೇಡರ ಪಡೆಯ ದೊರೆಯಾದ, ಗುಹಾನನ್ನು ನಂತರ ಶಬರಿಯನ್ನು ಭೇಟಿ ಮಾಡುತ್ತಾನೆ. ಹಾಗೆಯೇ ಮಹಾಭಾರತದಲ್ಲಿ ಬೇಡ ಪಡೆಯ ನಾಯಕನಾದ ಏಕಲವ್ಯನ ಪಾತ್ರ ಬರುತ್ತದೆ. ಶಬರಶಂಕರ ವಿಲಾಸದಲ್ಲಿ ಶಂಕರನೇ ಶಬರನಾಗಿ ಅರ್ಜುನನೊಂದಿಗೆ ಸಂಘರ್ಷಕ್ಕಿಳಿದ ವಿವರ ಬರುತ್ತದೆ. ಇದೆಲ್ಲವನ್ನು ಹಿನ್ನೆಲೆಯಾಗಿ ಕೊಡುತ್ತಿರುವ ಉದ್ದೇಶವಿಷ್ಟೇ, ಬೇಡ ಅಥವಾ ಬೇಟೆಗಾರ, ವಿಷಾದ ಈ ಸಮೂಹಗಳು ಕಾಡನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದವು. ಇವು ಸಾಹಸ, ಶೌರ್ಯವನ್ನು ಮೈಗೂಡಿಸಿಕೊಂಡಿದ್ದ ಸಮುದಾಯಗಳು ಇವರು ಅಗತ್ಯವಿದ್ದಾಗ, ಅರಸರ ಸೇನೆಯಲ್ಲಿ ದುಡಿಯುತ್ತಿದ್ದರು ಎಂಬುದನ್ನು ವಿವರಿಸುವುದು. ತಮ್ಮ ಈ ಪರಾಕ್ರಮ ಮತ್ತು ಮುಂದಾಳತ್ವದ ಗುಣಗಳ ಕಾರಣವಾಗಿಯೇ ಇವರಿಗೆ ನಾಯಕ ಎಂಬ ಅಭಿದಾನವು ದೊರೆತಿರಲು ಸಾಧ್ಯ. ಈಗ ಕರ್ನಾಟಕದಲ್ಲಿ ನೆಲೆಗೊಂಡಿರುವ ಈ ಬೇಡ ಅಥವಾ ನಾಯಕ ಸಮುದಾಯದ ಬಗ್ಗೆ ವಿಚಾರ ಮಾಡಿದರೆ ಸಂಖ್ಯೆಯ ದೃಷ್ಟಿಯಿಂದ ಕರ್ನಾಟಕದಲ್ಲಿರುವ ಬಹುದೊಡ್ಡ ಜನ ಸಮುದಾಯಗಳಲ್ಲೊಂದಿದು. ಈ ಸಮುದಾಯದಲ್ಲಿರುವ ಒಂದು ಪ್ರಕಾರವೇ ಮ್ಯಾಸಬೇಡರು

ಅಥವಾ ಮ್ಯಾಸನಾಯಕರು ಎಂಬ ಸಮುದಾಯ. ಇವರು ಹೆಚ್ಚಾಗಿ ಮಧ್ಯ ಕರ್ನಾಟಕದಲ್ಲಿ ನೆಲೆಸಿದ್ದಾರೆ. ಮೂಲತಃ ಉತ್ತರದಿಂದ ಬಂದು ಆಂಧ್ರದ ಗುಡ್ಡಗಾಡುಗಳಲ್ಲಿ, ನದಿ ಬಯಲುಗಳಲ್ಲಿ ಹಲವಾರು ವರ್ಷಗಳನ್ನು ಕಳೆದು ನಂತರ ಮಧ್ಯೆ ಕರ್ನಾಟಕದ ಕಡೆ ಬಂದ ಜನಸಮುದಾಯವಿದು. ಇತರ ಬೇಡರಿಗೂ ಮತ್ತು ಇವರಿಗೂ ಸ್ವಲ್ಪ ಮಟ್ಟಿನ ಸಾಂಸ್ಕೃತಿಕ ಭಿನ್ನತೆಗಳಿವೆ. ಎರಡೂ ಸಮುದಾಯ ಬೇಟೆಯ ಮೂಲದಿಂದಲೇ ಬಂದ ಸಮುದಾಯವಾದರೂ ಮ್ಯಾಸನಾಯಕರು ಬೇಟೆಯೊಂದಿಗೆ ಕ್ರಮೇಣ ಪಶುಪಾಲಕತನವನ್ನು ಕೈಬಿಡಬೇಕಾಯಿತು. ಇವರು ಆಳಿದುಳಿದ ಪಶುಸಂಪತ್ತನ್ನು ಇಂದು ಅರಣ್ಯದಲ್ಲಿ ಗೂಡುಗಳಲ್ಲಿ ಸಂರಕ್ಷಿಸುತ್ತಾ ತಮ್ಮ ಮೂಲ ಮಾದರಿಯನ್ನು ಜತನದಿಂದ ಆರಾಧನೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿದ್ದೂ, ಈ ಮೂಲಕ ಕರ್ನಾಟಕದ ಇತರ ಬೇಡರಿಗಿಂತ ಸಾಂಸ್ಕೃತಿಕವಾದ ಭಿನ್ನತೆಗಳನ್ನು ಹೊಂದಿದ್ದಾರೆ. ಉತ್ತರದಿಂದ ಬಂದ ಈ ಶಬರರಂತೆಯೇ ದಕ್ಷಿಣ ಭಾರತದ ದ್ರಾವೀಡ ಗಿರಿಜನ ಸಮುದಾಯಗಳಲ್ಲಿಯೂ ಇವರ ನೆಲೆಯಿದೆಯೇ ಎನ್ನುವುದು ಕುತೂಹಲಕಾರಿಯಾದ ಸಂಗತಿ ಎಂದರೆ ಇವರ ಆಚಾರ ವಿಚಾರಗಳಲ್ಲಿ ಇರುವ ಆರ್ಯ ಹಾಗೂ ದ್ರಾವಿಡ ಮೂಲಗಳ ತೌಲನಿಕ ಅಧ್ಯಯನವೂ ಆಸಕ್ತಿಯನ್ನು ಹುಟ್ಟಿಸುತ್ತದೆ. ಇವರನ್ನು ನಿರ್ದೇಶಿಸುವ 'ಬೇಡ' ಎಂಬ ಪದಕ್ಕೆ ಮ್ಯಾಸ ಎಂಬ ವಿಶೇಷಣ ಹೇಗೆ ಸೇರಿತು ಎಂಬುದರ ಬಗ್ಗೆ ಈಗಾಗಲೇ ಸಾಕಷ್ಟು ಚರ್ಚೆ ನಡೆದಿದೆ."[೮]

೧೯೮೭ರಲ್ಲಿ ಎಂ.ಜಿ.ಈಶ್ವರಪ್ಪನವರು 'ಮ್ಯಾಸಬೇಡರು' ಎಂಬ ಕಿರು ಕೃತಿಯಲ್ಲಿ "ಮ್ಯಾಸಪದ ಮೇಯಿಸುವವರು ಶಬ್ದದಿಂದ ನಿಷ್ಪನ್ನವಾಗಿದೆ ಎಂದು ಅವರು ಹೇಳಿದ್ದಾರೆ. ಅಲ್ಲದೆ ವಿಜಯನಗರದ ರಾಜ ಮಹಾರಾಜರುಗಳ ಆಳ್ವಿಕೆಯಡಿ ಇದ್ದುದ್ದರಿಂದ ಮೀಸಲುನಾಯಕರು ಅಥವಾ ಮ್ಯಾಸ ನಾಯಕರು ಎಂದು ಕರೆಯಲ್ಪಟ್ಟರು"[೯] ಎಂಬ ಸಾಧ್ಯತೆಯನ್ನು ಕುರಿತು ವಿವರಿಸುತ್ತಾರೆ. ಮ್ಯಾಸನಾಯಕರ ಬುಡಕಟ್ಟು ದೇವರಿಗೆ ಮೀಸಲು ಹಾಲು ಅರ್ಪಿಸುವ ಆಚರಣೆಯೂ ಇದೆ. ಇದರಿಂದ ಮ್ಯಾಸ ಪದ ನಿಷ್ಪನ್ನವಾಗಿರಬಹುದು. ಮೊದಲ ಬಾರಿಗೆ ಈ ಸಮುದಾಯದ ಬಗ್ಗೆ ಸಂಶೋಧನಾ ಕೃತಿಯನ್ನು ರಚಿಸಿದವರು ಡಾ.ಕೃಷ್ಣಮೂರ್ತಿ ಹಾನೂರರು "ಇವರು ಸಂದರ್ಶಿಸಿದ ಸಮುದಾಯದ ವಕ್ತೃಗಳು ತಾವು ವ್ಯಾಸ ಮಹರ್ಷಿಯ ಕುಲದವರಾದ್ದರಿಂದ 'ವ್ಯಾಸ', 'ಮ್ಯಾಸ' ಎಂಬುದಾಗಿ ಗೋತ್ರವಾಗಿ ಬಳಕೆಯಾಗುತ್ತದೆ"[೧೦] ಎಂದು ತಿಳಿಸಿದ್ದಾರೆ. ಅವರು ಅದನ್ನು ಹೇಳುತ್ತಾ ಇದೊಂದು ಸಮುದಾಯದಲ್ಲಿರುವ ದಂತಕಥೆ, ಪ್ರತಿಷ್ಠೆಗಾಗಿ ರೂಪಿಸಿಕೊಂಡ ಕಥೆ ಎಂದು ವ್ಯಾಖ್ಯಾನಿಸುತ್ತಾರೆ. ವಕ್ತೃಗಳು ಕೊಡುವ ಮತ್ತು ಎಂ.ಜಿ.ಈಶ್ವರಪ್ಪನವರು ಹೇಳುವ ಅಭಿಪ್ರಾಯಗಳನ್ನು ನಿರಾಕರಿಸುತ್ತಾ, ಕೃಷ್ಣಮೂರ್ತಿಯವರು ಇದು ಜನಾಂಗ ವಾಚಕ ಪದವಲ್ಲ, ಮೇಯಿಸುವವರು ಜೊತೆಗೆ ಬೇಡಪದ ಹೊಂದುವುದಿಲ್ಲ. ಬೇಟೆಗಾರ ಮತ್ತು ಮೇಸುವವ ಎರಡೂ ಕ್ರಿಯಾ ಮೂಲವಾದ ಪದಗಳು ಸೇರಿ ಜನಾಂಗ ಪದವಾಗಿರುವುದು ಅಸಂಭವ ಎಂದು ಹೇಳುತ್ತಾರೆ." ಇದಕ್ಕೆ ಬದಲಾಗಿ ಸಂಸ್ಕೃತದ 'ಮೀವರ' ಎಂಬ ಪದಕ್ಕೆ ಅರ್ಥಕೋಶದ

ಪ್ರಕಾರ hurtful cauring hart, leader of army ಅಲ್ಲದೆ ಗೌರವಾರ್ಥ, ಪೂಜ್ಯ ಎಂಬ ಅರ್ಥಗಳಿವೆ.'' ಹಾಗೆಯೇ ತಮಿಳು ಅರ್ಥಕೋಶದಲ್ಲಿ 'ಮೀಚರನ್' ಎಂಬ ಪದವಿದ್ದು ಅದಕ್ಕೆ That which is suprerior or great person ಎಂಬ ಅರ್ಥವಿದೆ ಅಲ್ಲದೆ ಮೀಸರ ಎಂಬ ಪದ ಕುಮಾರರಾಮನ ಸಾಂಗತ್ಯದಲ್ಲಿ ಪ್ರಯೋಗವಾಗಿದೆ. ಅಂದರೆ ಈ ಮ್ಯಾಸರು ಎಂಬ ಪದಕ್ಕೆ ಪರಾಕ್ರಮಿ ಎಂಬ ಅರ್ಥವಿರಬಹುದು. ಮ್ಯಾಸಬೇಡರು ಎಂದರೆ ಪರಾಕ್ರಮಿಸಬೇಡರು ಎಂದು ಕರೆದಂತೆ ಆಗುತ್ತದೆ. ಕೀಸರು ಕ್ಯಾಸರ ಆಗಿ ಬೇಸರ ವ್ಯಾಸರ ಆಗಿರುವಂತೆ ಮೀಸರ ಮ್ಯಾಸರು ಆಗಿದ್ದಿರಬಹುದು ಎಂದು ಊಹೆ ಮಾಡುತ್ತಾರೆ. ಹೀಗೆ ಹನೂರರು ಈ ಪದದ ನಿಷ್ಪತ್ತಿಯ ಬಗೆಗೆ ತುಂಬಾ ವ್ಯಾಪಕವಾಗಿ ಚರ್ಚೆಯನ್ನು ಮಾಡಿರುತ್ತಾರೆ. ಡಿ.ಬಿ.ಢಂಗ ಅವರು ಜನಾಂಗದ ಪರಿಚಯದಲ್ಲಿ ಮ್ಯಾಸಬೇಡರು ಎಂದರೆ ಮೂಸಲ್ಮಾನರ ಗುಣಗಳನ್ನು ಹೊಂದಿರುವವರು ಎಂದು ಹೇಳುತ್ತಾ ಇವರು ಮದ್ರಾಸಿನ ಕಡೆ, ಮೈಸೂರಿನ ಕಡೆಯೂ ನೆಲೆಸಿದ್ದಾರೆ ಎಂದು ಹೇಳುತ್ತಾರೆ. ಆದರೆ ಮುಸ್ಲಿಂ ಮೂಲದಿಂದ ಇದನ್ನು ನಿಷ್ಪನ್ನ ಮಾಡಲು ಯಾವ ಆಧಾರಗಳೂ ದೊರೆಯುವುದಿಲ್ಲ.

ಡಾ.ಮೀರಾಸಾಬಿ ಹಳ್ಳಿ ಶಿವಣ್ಣನವರು 'ಮ್ಯಾಸಮಂಡಲ' ಎಂಬ ತಮ್ಮ ಕೃತಿಯಲ್ಲಿರುವ ಪಶುಪಾಲಕ 'ಮ್ಯಾಸಬೇಡರು' ಎಂಬ ಲೇಖನದಲ್ಲಿ "ಮ್ಯಾಸ ಎಂಬ ವಿಶೇಷಣ ಪಶುಗಳನ್ನು ಮೇಯಿಸುವ ವೃತ್ತಿಯಿಂದಲೇ ಬಂದಿರಬೇಕೆಂದು ಅಭಿಪ್ರಾಯಪಡುತ್ತಾರೆ. ಮೇಯ್ಸು ಶಬ್ದವು ಕ್ರಮೇಣ ಮೇಸು, ಮ್ಯಾಸು ಮ್ಯಾಸ ಎಂಬ ರೂಪಾಂತರಗೊಂಡಂತೆ ಕಾಣುತ್ತದೆ ಎಂದು ಊಹಿಸುತ್ತಾರೆ.[೧೧]

ಬೇಡರ ಎಂಬುದು ಉರ್ದುಪದ ೧೬೮೦ರಲ್ಲಿ ಆದಿಲ್ ಶಾಹಿಯ ಬಳಿ ಬೇಡರು ತಮ್ಮ ಅಲ್ಪ ಪ್ರಮಾಣದ ಸೈನ್ಯದಿಂದ ಮೊಗಲ್ ಸೈನ್ಯವನ್ನು ಧೈರ್ಯದಿಂದ ಸಾಹಸದಿಂದ ಎದುರಿಸಿದ್ದನ್ನು ಕಂಡು ಔರಂಗಜೇಬನು ಏ ಕಿಸಿಸೇ ನಹಿ ಡರೆನೇ ವಾಲೆ ಲೋಗ್ "ಬೇಡರ್ ಲೋಗ್" ಎಂದು ನುಡಿದನು ಆದ ಕಾರಣ ಉರ್ದುವಿನಲ್ಲಿ 'ಬೇಡರ್ ' ಎಂದೇ ಇವರನ್ನು ಕರೆಯುತ್ತಾರೆ.

ಸದಾ ಸುಸಜ್ಜಿತ ಸೈನ್ಯವನ್ನು ಹೊಂದಿ ದಂಡಿನೊಡನೆ ಪಾಳವನ್ನು ಹಾಕಿ ಇಳಿದುಕೊಂಡು ಕದನಕ್ಕೆ ಸಿದ್ಧವಾಗಿರತಕ್ಕವರಿಗೆ ಪಾಳೆಯಗಾರರೆಂದು ಕರೆಯುತ್ತಾರೆ. ಡಾ.ಕೆ.ಎಂ.ಮೈತ್ರಿಯವರು ಕೃಷ್ಣಗೊಲ್ಲರ ಕಥನಕಾವ್ಯಗಳು ಕೃತಿಯಲ್ಲಿ ಮ್ಯಾಸಬೇಡರು ಕುರಿ ಸಾಕಾಣಿಕೆಯನ್ನು ಸಹ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಕುರಿಗಳಿಗೆ ಸಂಸ್ಕೃತದಲ್ಲಿ ಮೇಷ ಎಂದು ಅರ್ಥ. "ಈ ಮೇಷ ಪದವೇ ಮೇಸ ಆಗಿ ಮ್ಯಾಸ ಆಗಿದೆ ಅಂದರೆ ಕುರಿ ಸಾಕಾಣಿಕೆ ಮಾಡುವವರೇ ಮ್ಯಾಸಬೇಡರು ಎಂದು ಅಭಿಪ್ರಾಯಪಡುತ್ತಾರೆ.''[೧೨] ದ್ರಾವಿಡ ಮೂಲದಿಂದ ನಿಷ್ಪನ್ನವಾಗುವ ಮೇಷ ಪದ ಅಷ್ಟಾಗಿ ಹೊಂದುವುದಿಲ್ಲ ಎನ್ನಿಸುತ್ತದೆ. ಈ ಎಲ್ಲಾ ಅಧ್ಯಯನಗಳನ್ನು ಗಮನಿಸಿ ಈ ಪದದ ಬಗ್ಗೆ ಹೆಚ್ಚು ವಿಚಾರ ಮಾಡಿದಾಗ ಸಮುದಾಯದಿಂದಲೇ ಸಿಗುವ

ಮೂಲ ಪದ ಸಂಚು ಮ್ಯಾಸವಾಳ್ಳು ಎಂದು ಸಂಚು ಎಂದರೆ ಶ್ರೀ ಶೈಲ ಪ್ರಾಂತ್ಯದ ನಲಮಲ್ಲೈ ಯರ್ರಮಲ್ಲೈ ಪ್ರಾಂತ್ಯದಲ್ಲಿರುವ ಅಡವಿ ಚಂಚರು ಇದೇ ಪರಿಸರಕ್ಕೆ ಉತ್ತರದಿಂದ ಬಂದು ನೆಲೆಸಿದವರು. ಈ ಪಶುಪಾಲಕರಾದ ಬೇಡರು(ಪಶುಪಾಲಕತನ ಕಾರಣವಾಗಿ ಇವರನ್ನು ಒಟ್ಟಾರೆಯಾದವರು ಎಂದು ಗುರುತಿಸಿದ್ದು ಉಂಟು) ಪಶುಪಾಲಕ ಬೇಡರಿಗೂ ಮತ್ತು ಚೆಂಚರಿಗೂ ಉಂಟಾದ ಮೈತ್ರಿಯೇ ಕಾರಣವಾಗಿ ಉಂಟಾದ ಪರಂಪರೆ ಸಂಚು ಮ್ಯಾಸುವಾಳ್ಳು ಎಂದು ಕರೆದರು. ಇವರಲ್ಲಿ ಸಂಚು ಎಂಬ ಪದ ಬಿಟ್ಟು ಹೋಗಿ ಮ್ಯಾಸವಾಳ್ಳು ಉಳಿದು ಮ್ಯಾಸುಲು ಅಂದರೆ ಮ್ಯಾಸ ಬೇಡಲು, ಮ್ಯಾಸನಾಯಕಲು ಎಂಬ ಪದ ಉಳಿದುಬಂದಿದೆ. ಈಗಲೂ ಕೆಲವೊಮ್ಮೆ ಈ ಮ್ಯಾಸಬೇಡರು ತಮ್ಮನ್ನು ಮ್ಯಾಸಲು ಎಂದಷ್ಟೇ ಕರೆದುಕೊಳ್ಳುವುದುಂಟು. ಉದಾಹರಣೆಗೆ ಮ್ಯಾಸರು ವಾಸಿಸುವ ಹಟ್ಟಿ ಮ್ಯಾಸರಹಟ್ಟಿ ಎಂದು ಕರೆಯಿಸಿಕೊಳ್ಳುತ್ತವೆ. ಮ್ಯಾಸರು ಮ್ಯಾಸಲು ಎಂಬ ತೆಲುಗು ಪದದಿಂದ ಬಂದಿರುವ ಕನ್ನಡ ಪದ ಮ್ಯಾಸಬೇಡರ ಭಾಷೆ ತೆಲುಗು ಎಂಬುದನ್ನು ನಾವಿಲ್ಲಿ ಮರೆಯುವಂತಿಲ್ಲ. ಹಾಗಾಗಿಯೇ ನಾವು ತೆಲುಗು ಮೂಲದಿಂದಲೇ ಈ ಪದವನ್ನು ನಿಷ್ಪನ್ನ ಮಾಡಬೇಕಾಗುತ್ತದೆ. ತೆಲುವಿನ ಪದ ಕೋಶದಲ್ಲಿ(ಅಂತರ್ಜಾಲದಲ್ಲಿ) Mesalu ಪದಕ್ಕೆ To Move about, go about, Shift ಎಂಬ ಅರ್ಥವಿದೆ ಅಂದರೆ ಒಂದೆಡೆಯಿಂದ ಮತ್ತೊಂದೆಡೆಗೆ ಅಲೆದಾಡುವ, ಸ್ಥಳಾಂತರಗೊಳ್ಳುವ ಎಂಬ ಅರ್ಥವು ಇಲ್ಲಿ ಸ್ಪಷ್ಟವಾಗುತ್ತದೆ. ತಮ್ಮ ಪಶುಪಾಲಕತನವೇ ಕಾರಣವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಅಲೆದಾಡುವ ಬೇಟೆಯನ್ನು ಪ್ರವೃತ್ತಿಯನ್ನಾಗಿ ಹೊಂದಿರುವ ಜನಸಮುದಾಯವಿದು. ಮ್ಯಾಸಲು ಮ್ಯಾಸಲು ಆಗಿದ್ದು ಕನ್ನಡಕ್ಕೆ ಬರುವಾಗ ಮ್ಯಾಸರು ಆಗಿದೆ ಎಂದು ಹೇಳಬಹುದಾಗಿದೆ. ಮ್ಯಾಸಬೇಡರ ಬೆಡಗುಗಳನ್ನು ನಿಷ್ಪನ್ನ ಮಾಡುವಾಗಲೂ ನಾವು ತೆಲುಗು ಮೂಲದಿಂದಲೇ ಹುಡುಕಬೇಕಾದ ಅಗತ್ಯವಿದೆ. ನಾಯಕ ಎಂದರೆ ಮುಖ್ಯಸ್ಥ, ಮುಂದಾಳು ಎಂದಾಗುತ್ತದೆ. ಈ ಮ್ಯಾಸಬೇಡರು ಸೇನಾಪಡೆಯಲ್ಲಿ ಸೇನೆಯ ಮುಂದಾಳುಗಳಾಗಿ ಕೆಲಸ ನಿರ್ವಹಿಸುವುದರ ಮೂಲಕ ನಾಯಕ ಎಂಬ ಅಭಿದಾನವನ್ನು ಪಡೆದಿದ್ದು, ಮ್ಯಾಸನಾಯಕ ಎಂದೂ ಕರೆಯಲ್ಪಟ್ಟರು. ಹೀಗೆ ಮ್ಯಾಸಬೇಡರು ಮ್ಯಾಸನಾಯಕ ಎಂಬ ಪದದ ಮೂಲವನ್ನು ಇದುವರೆಗೆ ಮಂಡಿಸಲಾಗಿರುವ ವಾದಗಳಿಗಿಂತ ವಿಭಿನ್ನವಾಗಿ ಗುರುತಿಸುವ ಸಾಧ್ಯತೆಯಿದೆ.

ಕರ್ನಾಟಕದ ಮಧ್ಯ ಭಾಗದಲ್ಲಿರುವ ಚಿತ್ರದುರ್ಗ, ದಾವಣಗೆರೆ ಗಡಿ ಅಂಚಿನಲ್ಲಿರುವ ಬಳ್ಳಾರಿ, ಬಯಲುಸೀಮೆಯಲ್ಲಿ ಬರುವುದರಿಂದ ಅಲ್ಲಲ್ಲಿ ಚಿಕ್ಕ ಚಿಕ್ಕ ಬೆಟ್ಟಗಳಿವೆ. ತುಂಗಭದ್ರಾ ಮತ್ತು ಚಿನ್ನಹಗರಿ ನದಿ ನೀರಿನ ಪೂರೈಕೆಯಿಂದ ಕೊಂಚ ನೀರಾವರಿ ಪ್ರದೇಶವಾಗಿ ಮಾರ್ಪಟ್ಟಿದೆ. ಶೇಕಡಾ ೭೫ರಷ್ಟು ಭೂಮಿ ಕಪ್ಪು-ಕೆಂಪು ಮಣ್ಣಿನಿಂದ ಕೂಡಿದ್ದು, ವ್ಯವಸಾಯಕ್ಕೆ ಯೋಗ್ಯವಾಗಿದೆ. ಮಳೆಯನ್ನು ಅವಲಂಬಿಸಿ ಬೆಳೆಯ ಪ್ರಮಾಣ ನಿರ್ಧರಿತವಾಗುತ್ತದೆ. ಈ ಪ್ರದೇಶದಲ್ಲಿ ಅರಣ್ಯ ಪ್ರದೇಶವು ತುಂಬಾ ಕಡಿಮೆ ಪ್ರಮಾಣದಲ್ಲಿದೆ. ಭೌಗೋಳಿಕವಾಗಿ ಎತ್ತರದಲ್ಲಿರುವ ಬಯಲುಸೀಮೆ

ಬಿಸಿಲಿನ ಪ್ರಮಾಣ ಹೆಚ್ಚಾಗಿರುತ್ತದೆ. ಈ ಪ್ರದೇಶದಲ್ಲಿ ನಿಸರ್ಗದತ್ತವಾಗಿ ಕೆರೆಕುಂಟೆ, ಕಾಲುವೆ, ಹಳ್ಳ ಮುಂತಾದ ಜಲಮೂಲಗಳಿವೆ. ಕೋಟೆ, ಕೊತ್ತಲಗಳಿಂದ ಕೂಡಿದ ಈ ತಾಲ್ಲೂಕುಗಳು ಐತಿಹಾಸಿಕ ಮಹತ್ವ ಪಡೆದಿವೆ. ಆದಿಮಾನವನ ನೆಲೆ, ಪ್ರಾಚೀನ ಪುರಾತತ್ವ ಪರಿಸರ ಈ ಪ್ರದೇಶ ಒಳಗೊಂಡಿದೆ.

## ಸ್ಥಳನಾಮಗಳ ನಿಷ್ಪತ್ತಿ

ಉಸಿರುವವನಿಗೊಂದು ಹೆಸರಿರುವಂತೆ ಆತ ನೆಲೆಸಿದ ನೆಲೆಗೂ ಒಂದು ಹೆಸರಿರುತ್ತದೆ. ''ಮಗು ಹುಟ್ಟಿದ ಮೇಲೆ ಇಟ್ಟ ಹೆಸರನ್ನೋ, ಅಡ್ಡಹೆಸರನ್ನೊ ಪಡೆಯುವಂತೆ. ಒಂದು ಸ್ಥಳಕ್ಕೆ ಕಾಲಿಟ್ಟ ಮಾನವ ಸ್ಥಳಕ್ಕೊಂದು ಹೆಸರು ಕೊಡುವುದು ಸ್ವಾಭಾವಿಕ.''[೧೩] ಹಾಗೆ ಇಟ್ಟ ನೆಲೆಯ ಹೆಸರಿಗೂ ಒಂದು ಉಸಿರಿರುತ್ತದೆ. ಆ ಉಸಿರು ಅದರ ಅರ್ಥದಲ್ಲಿರುತ್ತದೆ. ಅಂಥ ಅರ್ಥವನ್ನು ಹೊರಹೊಮ್ಮಿಸಲು ಇರುವ ಮಾರ್ಗವನ್ನೇ ಸ್ಥಳನಾಮದ ನಿಷ್ಪತ್ತಿ ನಿರ್ಣಯ ಎನ್ನುತ್ತೇವೆ. ಯಾವುದೋ ಕಾಲದಲ್ಲಿ, ಯಾವುದೋ ಕಾರಣಕ್ಕಾಗಿ, ಯಾವುದೋ ಅರ್ಥವನ್ನು ಹುದುಗಿಸಿಕೊಂಡಿರುವ ಸ್ಥಳನಾಮದ ನಿಷ್ಪತ್ತಿ ನಡೆಯಬೇಕಾಗಿರುವುದು ಸಮಕಾಲೀನ ಭಾಷಾ ಮಾನದಂಡಗಳಿಂದ.

''ಗ್ರಾಮನಾಮಗಳ ಅಧ್ಯಯನ ಪ್ರಸಂಗದಲ್ಲಿ ಅದರ ನಿಷ್ಪತ್ತಿ ನಿರ್ಣಯ ಪ್ರಥಮ ಮತ್ತು ಪ್ರಮುಖ ಅಂಶವಾಗಿದೆ. ಅದಿಲ್ಲದೆ ಮಾಡುವ ಅಧ್ಯಯನ ವ್ಯರ್ಥ ಮತ್ತು ನಿಷ್ಪ್ರಯೋಜನಕಾರಿ. ಆದರೆ ನಿಷ್ಪತ್ತಿ ನಿರ್ಣಯ ಅಷ್ಟು ಸುಲಭವಾದುದಲ್ಲ[೧೪] ಎಂಬ ವಿದ್ವಾಂಸರ ಮಾತು ಗಮನಾರ್ಹವಾದುದು. ನಿಷ್ಪತ್ತಿ ನಿರ್ಣಯದಲ್ಲಿ ಎದುರಿಸಬೇಕಾದ ಸವಾಲುಗಳನ್ನು ಕಠಿಣ ಮಾರ್ಗವನ್ನು ಅದು ಧ್ವನಿಸುತ್ತದೆ.

## ಸ್ಥಳನಾಮಗಳ ವರ್ಗೀಕರಣ

| **ಪ್ರಾಕೃತಿಕ ಸ್ಥಳನಾಮಗಳು** | **ಸಾಂಸ್ಕೃತಿಕ ಸ್ಥಳನಾಮಗಳು** | **ಸಂಕೀರ್ಣ ಸ್ಥಳನಾಮಗಳು** |
|---|---|---|
| ಜಲವಾಚಿ | ವ್ಯಕ್ತಿವಾಚಿ | |
| ಶಿಲಾವಾಚಿ | ದೈವವಾಚಿ | |
| ಎತ್ತರದ ಭೂಪ್ರದೇಶ | ಪ್ರಾಣಿ ಪಕ್ಷಿ | |
| ಬಯಲು ಪ್ರದೇಶ | ವ್ಯಕ್ತಿಜಾತಿ | |
| ಸಸ್ಯ ಗಿಡ ಮರ | ಪಟ್ಟಣ-ನಗರ, ಬೀದಿ | |
| ಕ್ಷೇತ್ರವಾಚಕ | | |
| ಲೋಹಸಂಪತ್ತು | | |
| ವರ್ಣ | | |

## ಜಲವಾಚಿ

ಮಾನವ ಸಂಸ್ಕೃತಿಯ ವಿಕಾಸದ ಹಂತದಲ್ಲಿ ಜಲಕ್ಕೆ ಅತಿ ಮುಖ್ಯ ಸ್ಥಾನವಿದೆ. ಬಹುತೇಕ ಜಗತ್ತಿನ ನಾಗರಿಕತೆಗಳೆಲ್ಲವೂ ನದಿಯ ದಂಡೆಯ ಮೇಲೆ ಜೀವನವನ್ನು ಆರಂಭಿಸಿದೆ ಎಂದು ತಿಳಿಯುತ್ತದೆ. ಸದಾ ಸಂಚಾರಿಯಾಗಿದ್ದ ಆದಿಮಾನವನು ಒಂದೆಡೆ ತಮ್ಮ ಅಸ್ತಿತ್ವವನ್ನು ಕಂಡುಕೊಂಡರು. ಆಗ ಜಲ ಮುಖ್ಯವಾಗಿ ಬೇಕಿತ್ತು. ಈ ಕಾರಣಗಳಿಂದ ಕಾಡನ್ನು ತೊರೆದು ನೀರಿನ ಸಮೀಪ ತಮ್ಮ ನೆಲೆಗಳನ್ನು ಕಟ್ಟಿಕೊಂಡರು ಅಥವಾ ಸಹಜವಾಗಿ ಹರಿಯುವ ನೀರಿಗೆ ಕೆರೆ, ಕೊಳ ಕುಂಟೆಗಳಂಥ ಕೃತಕ ಜಲ ಸಂಗ್ರಾಹಕಗಳನ್ನು ನಿರ್ಮಿಸಿಕೊಂಡರು. ಇಂದಿಗೂ ಗ್ರಾಮಗಳ ನಿರ್ಮಾಣ ನೀರನ್ನು ಅವಲಂಬಿಸಿ ರಚನೆಯಾಗುತ್ತವೆ. ಹೀಗೆ ಜಲಮೂಲ ಸಂಸ್ಕೃತಿಯಿಂದ ಆರಂಭವಾದ ಸಂಸ್ಕೃತಿಯಲ್ಲಿ ಆ ಜಲವನ್ನವಲಂಬಿಸಿಯೇ ಕೆಲವು ಹಟ್ಟಿಗಳಿವೆ. ಹೆಸರು ಕರೆದುಕೊಳ್ಳುವ ರೂಢಿ ಆರಂಭವಾಗಿರಬೇಕು. ಅಂಥ ಭೂಸ್ಥಿತಿಯನ್ನು ಹೇಳುವ ಸ್ಥಳನಾಮಗಳು ಹೇರಳವಾಗಿ ದೊರೆಯುತ್ತವೆ.

೧. ಕೆರೆಕಾವಲಹಟ್ಟಿ ೨. ತಾಳವಟ್ಟಿ ೩. ರಾಮಸಾಗರದಹಟ್ಟಿ ೪. ಕೆರೆಕಾಟ್ಲಟ್ಟಿ. ಕೂಡ್ಲಿಗಿ ತಾಲೂಕಿನಲ್ಲಿ ಬರುವ ಕೆರೆಕಾವಲಹಟ್ಟಿಗೆ ಈ ಹೆಸರು ಬರಲು ಕಾರಣವೆಂದರೆ ಈ ಹಟ್ಟಿ ಅಂಚಿನಲ್ಲಿಯೇ ಕೆರೆ ಇದೆ. ಕೆರೆಯನ್ನು ಶುದ್ಧವಾಗಿಡಲು ಈ ಹಟ್ಟಿಯನ್ನು ನಿರ್ಮಾಣ ಮಾಡಿರುವುದರಿಂದ ಕೆರೆಕಾವಲಹಟ್ಟಿ ಎಂಬ ಹೆಸರು ಉತ್ಪತ್ತಿಯಾಗಿರಬಹುದು.

## ರಾಮಸಾಗರದಹಟ್ಟಿ

ಕೂಡ್ಲಿಗಿ ತಾಲ್ಲೂಕು ಗುಡೇಕೋಟೆ ಹೋಬಳಿ ಕೆ.ದಿಬ್ಬದಹಳ್ಳಿ ಪಕ್ಕದಲ್ಲಿರುವ ಹಟ್ಟಿ. ಗಂಡೆಬೊಮ್ಮನಹಳ್ಳಿಕೆರೆ ಇರುವುದರಿಂದ, ದೊಡ್ಡಕೆರೆಗೆ ಅಣೆಕಟ್ಟು ಕಟ್ಟಿಸಿದ್ದರಿಂದ, ಕೆರೆಯ ನೀರು ಸಾಗರೋಪಾದಿಯಲ್ಲಿ ಕಂಡಿದ್ದರಿಂದ ಈ ಹಟ್ಟಿಗೆ ರಾಮಸಾಗರ ಎಂದು ಹೆಸರು ಬಂದಿತೆಂದು ತಿಳಿಸುತ್ತಾರೆ. ಹಟ್ಟಿಯಲ್ಲಿ ಬಹಸಂಖ್ಯಾತ ಜನ ಮ್ಯಾಸರು ವಾಸಿಸುವುದರಿಂದ ರಾಮಸಾಗರದಹಟ್ಟಿ ಎಂದು ಕರೆಯುತ್ತಾರೆ. ಈ ಹಟ್ಟಿಯಲ್ಲಿ ಮರಿಕುಂಟ್ಲ ದೇವರಗುಡಿಯಿದೆ.

## ಶಿಲಾವಾಚಿ

೧. ಗುಡ್ಡದಹಟ್ಟಿ, ೨. ಕಪ್ಪಡಬಂಡೆಹಟ್ಟಿ, ೩. ಏಣಿವ್ಯಾಗಳಹಟ್ಟಿ, ೪. ಓಣಿಹಟ್ಟಿ, ೫. ದೊಣಮಂಡ್ಲಹಟ್ಟಿ, ೬. ಗುಡ್ಡರಹಟ್ಟಿ, ೭. ಕೋಟೆಹಟ್ಟಿ, ೮. ಯರಗುಂಡ್ಲಹಟ್ಟಿ, ೯. ರತ್ನಗಿರಿಹಟ್ಟಿ, ೧೦. ಕಲ್ಲುಹಟ್ಟಿ, ೧೧. ಬಂಡೆಹಟ್ಟಿ, ೧೨. ಕರ್ಲಹಟ್ಟಿ, ೧೩. ಮೇಗಳಹಟ್ಟಿ, ೧೪. ಕೆಳಗಳಹಟ್ಟಿ, ೧೫. ಮೇಗಳಕರ್ನಾರಹಟ್ಟಿ, ೧೬. ನಡುವಲಕರ್ನಾರಹಟ್ಟಿ.

## ಲೋಹ

### ಚಿಲಕನಹಟ್ಟಿ

ಹೊಸಪೇಟೆಯಿಂದ ಮರಿಯಮ್ಮನಹಳ್ಳಿಯ ಮಾರ್ಗದಲ್ಲಿ ಪ್ರಯಾಣ ಬೆಳೆಸಿದರೆ ಬರುವ ಊರೇ ಚಿಲಕನಹಟ್ಟಿ. ಈ ಚಿಲಕನಹಟ್ಟಿಯ ಬಗೆಗೆ ಐತಿಹ್ಯ ಹೀಗಿದೆ. ವಿಜಯನಗರ ಅರಸರ ಕಾಲದ ಭುವನೇಶ್ವರಿ ಗುಡಿ(ಹಂಪಮ್ಮ ಒಂದು).

"ಚಿಲಕನಹಟ್ಟಿಯು ಹಂಪಿ ವಿರೂಪಾಕ್ಷ(ಪಂಪಾಪತಿ)ನ ಹೆಂಡತಿಯಾದ ಹಂಪಮ್ಮನ ತವರು ಮನೆಯಂತೆ. ಹಂಪಿಯಲ್ಲಿ ನಡೆಯುವ ಫಲಪೂಜೆಯ ಸಂದರ್ಭದಲ್ಲಿ ಹಂಪಮ್ಮ ಪಂಪಾಪತಿಯಿಂದ ಲಗ್ನದ ನಿಶ್ಚಿತಾರ್ಥ ನಡೆಯುತ್ತದೆ. ಈ ನಿಶ್ಚಿತಾರ್ಥಕ್ಕೆ ಚಿಲಕನಹಟ್ಟಿಯಿಂದ ಹಂಪಮ್ಮ ಹೊರಟು ಬರಬೇಕು. ಹಂಪಿ ಹೊಳೆ ಬದಿಯಲ್ಲಿರುವ ಕೋದಂಡರಾಮನ ದೇವಸ್ಥಾನದ ಅಂಗಳದಲ್ಲಿ ನಿಶ್ಚಿತಾರ್ಥ ನಡೆಯುತ್ತದೆ. ಈ ನಿಶ್ಚಿತಾರ್ಥದ ದಿವಸ ಚಿಲಕನಹಟ್ಟಿಯ ಜನರಿಗೆ ಭಾರಿ ಸಂಭ್ರಮ. ಅವರು ಹೆಣ್ಣಿನ ಕಡೆಯವರಂತೆ ಭಾವಿಸಿಕೊಂಡು ಹಂಪಮ್ಮನನ್ನು ಚೆನ್ನಾಗಿ ಶೃಂಗರಿಸುತ್ತಾರೆ. ಅನಂತರ ಗುಡಿಯೊಳಗೆ ಆಕೆಯನ್ನು ಕೂಡಿ ಹಾಕಿ ಇಡೀ ರಾತ್ರಿ ಹಾಡು, ಕುಣಿತಗಳಲ್ಲಿ ಮಗ್ನರಾಗಿರುತ್ತಾರೆ. ಈ ಮಧ್ಯೆ ಹಂಪಮ್ಮ ತನ್ನ ನಿಶ್ಚಿತಾರ್ಥಕ್ಕಾಗಿ ಹಂಪಿಗೆ ಹೊರಡುತ್ತಾಳೆ. ಗುಡಿಯ ಚಿಲಕವನ್ನು ತಾನೇ ತೆಗೆದು ಆಕೆ ಹೊರಬರುತ್ತಾಳೆ. ಚಿಲಕವನ್ನು ತೆಗೆಯುವಾಗ ಶಬ್ಧವಾಗುತ್ತದೆ. ಆಗ ಪೂಜಾರಿ ಓ ಹಂಪಮ್ಮ ಹಂಪಿಗೆ ಹೋದಳು ಎನ್ನುತ್ತಾರೆ. ಜನರೆಲ್ಲ ಸಂಭ್ರಮದಿಂದ ತಮ್ಮ ಮನೆಗಳಿಗೆ ಹಿಂದಿರುಗುತ್ತಾರೆ. ಹೀಗೆ ಹಂಪಮ್ಮನ ಗುಡಿಯಲ್ಲಿ ಚಿಲಕ ತೆಗೆಯುವ ಶಬ್ದ ಕೇಳುವುದರಿಂದ ಆ ಗುಡಿಯಿರುವ ಹಟ್ಟಿಗೆ ಚಿಲಕನಹಟ್ಟಿ ಎಂದು ಹೆಸರು ಬಂದಿತೆಂದು ಹೇಳಲಾಗುತ್ತದೆ. ಚಿಲಕನಹಟ್ಟಿಗೂ ಹಾಗೂ ಚಳ್ಳಕೆರೆ ತಾಲ್ಲೂಕು ಬೋಸೆದೇವರಹಟ್ಟಿಗೂ ನಂಟು ಇದೆ. ಏಕೆಂದರೆ ಬೋಸೆದೇವರ ಸಾಲಿಗ್ರಾಮವನ್ನು ಚಿಲಕನ ಹಟ್ಟಿಯಲ್ಲಿ ಮಾಡುವ ಪ್ರತೀತಿ ಇದೆ.

ನಾಯಕ, ಕುರುಬ, ಕಮ್ಮಾರ, ಬಡಿಗೇರ, ವಡ್ಡ, ಮುಸ್ಲಿಂ, ಅಗಸ, ಹರಿಜನ, ನೇಕಾರ, ಕೊರವ, ಈಡಿಗ, ಪೂಜಾರ, ಬಾರಿಕ, ಬ್ರಾಹ್ಮಣ, ಶೆಟ್ಟಿಲಿಂಗಾಯತ, ಜೋಗಿ ಜಂಗಮ, ಕ್ರೈಸ್ತ ಮೊದಲಾದ ಜಾತಿಯವರಿದ್ದಾರೆ. ನಾಯಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಮಾರಮ್ಮ, ದುರುಗಮ್ಮ, ಬಸವಣ್ಣ, ಚೌಡಮ್ಮ, ಗಾಳೆಮಾರಮ್ಮ, ಸಾರಿದುರ್ಗಮ್ಮ, ಹುಲಿಗೆಮ್ಮ, ನಗರೇಶ್ವರ ಮೊದಲಾದ ದೇವಾಲಯಗಳಿವೆ. ನಾಯಕರ ಕೈಯಲ್ಲಿ ಹೆಚ್ಚಾಗಿ ಭೂಸ್ವಾಮ್ಯ ಇದೆ. ಶೆಟ್ಟಿಲಿಂಗಾಯತ, ಬ್ರಾಹ್ಮಣರನ್ನುಳಿದು ಮಿಕ್ಕವರೆಲ್ಲ ಕೃಷಿ ಕಾರ್ಮಿಕರಿದ್ದಾರೆ. ಹಟ್ಟಿಗೆ ಜಾಲಿಗುಡ್ಡಕೆರೆಯಿಂದ ನೀರಿನ ಸೌಲಭ್ಯ ದೊರೆಯುತ್ತದೆ."[೨೫]

**ಹೂ/ಸಸ್ಯ/ಗಿಡ ಮರ ಬಳ್ಳಿ ಮುಂತಾದವುಗಳನ್ನು ಸೂಚಿಸುವಂಥವು**

೧. ಬೆಳವಿನಮರದಹಟ್ಟಿ, ೨. ಪೆತ್ತಮಾರಹಟ್ಟಿ, ೩. ಸಾಸಲಹಟ್ಟಿ, ೪. ಆಲದಮರದಹಟ್ಟಿ, ೫. ಬನ್ನಿಹಟ್ಟಿ, ೬. ಬನ್ನೇರಹಟ್ಟಿ, ೭. ಆಲೂರುಹಟ್ಟಿ(ದಾವಣಗೆರೆ)

ಸ್ಥಳನಾಮ ನಿರ್ದೇಶನದಲ್ಲಿ ಮರ, ತೋಟ, ತೋಪು ಈ ರೀತಿಯಾಗಿ ಆಯಾ ಸ್ಥಳೀಯ ಬಯಲುಸೀಮೆಯಲ್ಲಿ ವಿಪುಲವಾಗಿರುವ ವಸ್ತು ವಿಷಯಗಳು ಅವಕಾಶವನ್ನು ಪಡೆದಿವೆ.

**ಪ್ರಾಣಿವಾಚಿ**

೧. ಕುರಿಹಟ್ಟಿ, ೨. ಎತ್ತಿನಹಟ್ಟಿ, ೩. ಎಮ್ಮೆಹಟ್ಟಿ, ೪. ಎದ್ದಲುಬೊಮ್ಮಯ್ಯನಹಟ್ಟಿ, ೫. ಕಪ್ಪೆ ಚಿಕ್ಕೇನಹಟ್ಟಿ, ೬. ಪೆಯಿಲಾರಹಟ್ಟಿ, ೭. ಕಂಪಳದೇವರಹಟ್ಟಿ.

ಪಶುಪಾಲನೆಯಿಂದ ಈ ಹಟ್ಟಿಗೆ ಪೆಯಿಲಾರಹಟ್ಟಿ ಎಂದು ಬಂದಿರಬಹುದು. ಕಾರಣ ತೆಲುಗಿನಲ್ಲಿ ಚಿಕ್ಕ ಹಸುವಿನ ಕರುಗಳನ್ನು ಪೆಯಿಲು ಎಂದು ಕರೆಯುತ್ತಾರೆ. ಕ್ಷೇತ್ರಗಳ ಹಿಂದೆ ನಿರ್ದಿಷ್ಟವಾಗಿ ಪ್ರಾಣಿ, ಪಕ್ಷಿ ವ್ಯಕ್ತಿ ಹಾಗೂ ಕೆಲವು ವಿಶೇಷಣಗಳು ಬಂದಿರುತ್ತವೆ.

ಇದರ ನಾಮ ನಿಷ್ಪತ್ತಿ ಬಹುಶಃ ಈ ರೀತಿ ಇರಬಹುದು. ಬುಡಕಟ್ಟು ಜನರು ಬೇಟೆಯಿಂದ ಸ್ಥಿತ್ಯಂತರಗೊಂಡು, ಪಶುಪಾಲನೆಯನ್ನು ಕೈಕೊಂಡಾಗ ಕೆಲವು ಪಶುಗಳ ನಾಮಗಳನ್ನೇ ಬಳಸಿರುವುದುಂಟು. ಉದಾಹರಣೆಗೆ ಕುರಿಹಟ್ಟಿ, ಪೆಯಿಲಾರಹಟ್ಟಿ ಇತ್ಯಾದಿ. ಇಲ್ಲಿ ಜನ್ನಿಗೆ ಎಂದರೆ ಗೋವುಗಳ ಒಂದು ಉತ್ಕೃಷ್ಟ ತಳಿ ಎಂದರ್ಥ. ಇವು ನೋಡಲು ಸುಂದರವಾಗಿರುತ್ತವೆ. ಹಾಗಾಗಿ ಜನ್ನಿಗೆ ಎಂದರೆ ದೇವರಿಗೆ ಮೀಸಲಾಗಿ ಬಿಟ್ಟ ಗೋವು ಮತ್ತು ಅದರ ಹಾಲು ಎನ್ನಲಾಗಿದೆ.

**ಎತ್ತಿನಹಟ್ಟಿ**

ನಾಯಕನಹಟ್ಟಿ ಹೋಬಳಿಯಲ್ಲಿ ಬರುವ ಹಟ್ಟಿಯಿದು. ಹಟ್ಟಿಯ ಜನರೆಲ್ಲರೂ ಮ್ಯಾಸನಾಯಕರೇ ಆಗಿದ್ದು, ಮೂಲತಃ ಇವರ ವೃತ್ತಿ ದನಗಾಹಿಯಾಗಿರುವುದರಿಂದ, ಇವರು ವಾಸಿಸುವ ಪ್ರದೇಶವನ್ನು ಎತ್ತಿನಹಟ್ಟಿ ಆಗಿರುತ್ತದೆ ಎಂದು ಗ್ರಾಮಸ್ಥರು ತಿಳಿಸುತ್ತಾರೆ. ಎತ್ತಿನಹಟ್ಟಿಗೆ ಸಮೀಪದಲ್ಲಿ ಹಿರೆಕೆರೆ ಕಾವಲಿದೆ. ಹಿರೆಕೆರೆ ಕಾವಲಿನ ಗೌಡರು ಈ ಹಟ್ಟಿಯಲ್ಲಿ ವಾಸಿಸುತ್ತಿದ್ದು, ಅವರ ವೃತ್ತಿ ಪಶುಪಾಲನೆ. ಅತಿ ಹೆಚ್ಚು ಪಶುಪಾಲನೆ ಈಗಲೂ ಇರುವುದರಿಂದ ಈ ಹಟ್ಟಿಗೆ ಎತ್ತಿನಹಟ್ಟಿ ಎಂದು, ಹಾಗೆಯೇ ಗೌಡ್ರರು ವಾಸಿಸುತ್ತಿರುವುದರಿಂದ ಗೊಲ್ಲಹಳ್ಳಿ(ಗೋವುಗಳು ಹೆಚ್ಚಾಗಿರುವುದರಿಂದ) ಅಥವಾ ಎತ್ತಿನಹಟ್ಟಿ ಎಂದು ಕರೆಯುತ್ತಾರೆ. ಈ ಹಟ್ಟಿಯ ಆಸು ಪಾಸಿನಲ್ಲಿ ಚೌಡಮ್ಮನ ಕಾವಲು ಇದೆ. ಅದು ಶಕ್ತಿಯ ಆರಾಧನೆ ಸ್ವರೂಪದ ಚೌಡಮ್ಮನ ನೆಲೆ. ಈ ದೇವತೆ ಅಲ್ಲಿನ ಜನರ ಮತ್ತು ಗೋವುಗಳ ರಕ್ಷಕಳಾಗಿದ್ದಾಳೆ ಎಂದು ಸ್ಥಳೀಯರಿಂದ

ತಿಳಿದುಬರುತ್ತದೆ. ಇತ್ತೀಚೆಗೆ ೨೦೦೩ರಿಂದ ಪ್ರತಿ ವರ್ಷ ಫೆಬ್ರವರಿಯಲ್ಲಿ ಚೌಡಮ್ಮನ ಜಾತ್ರೆಯನ್ನು ಆಚರಿಸಲಾಗುತ್ತದೆ. ಈ ಜಾತ್ರೆಯ ವಿಶಿಷ್ಟಾಚರಣೆಗಳೆಂದರೆ ಗಂಗೆ ಪೂಜೆ. ಗಾವು ಜಿಗಿಯುವುದು ಮತ್ತು ಸಿಡಿ ಆಡುವುದು. ದೇವಸ್ಥಾನದಿಂದ ಸುಮಾರು ನೂರು ಮೀಟರ್ ಅಂತರದಲ್ಲಿರುವ ಚೌಡಮ್ಮನ ಬಾವಿಯಲ್ಲಿ ಗಂಗೆಪೂಜೆ ಮಾಡಿಕೊಂಡು ಬರುತ್ತದೆ. ಆ ಬಾವಿಯ ವಿಶೇಷತೆ ಎಂದರೆ ಎಂಥ ಬರಗಾಲ ಬಂದರೂ ಬಾವಿಯ ನೀರು ಬತ್ತುವುದಿಲ್ಲ. ಈ ಕಾವಲಿಗೆ ಮೂರು ವರ್ಷಗಳಿಗೊಮ್ಮೆ ಬೋಸೆದೇವರಹಟ್ಟಿ, ಬೈಯನಾಯಕನಹಟ್ಟಿ, ಕಡಬನಕಟ್ಟೆ ಮ್ಯಾಸರಹಟ್ಟಿ ಚೌಡಮ್ಮ ದೇವತೆಗಳು ಗಂಗೆಪೂಜೆಗೆ ಹೋಗಿಬರುತ್ತವೆ.

**ಕುರಿಹಟ್ಟಿ**

ಕೂಡ್ಲಿಗಿ ತಾಲೂಕಿನ ಚಿಕ್ಕಜೋಗಿಹಳ್ಳಿಯಿಂದ ಈಶಾನ್ಯ ದಿಕ್ಕಿಗೆ ೨ ಕಿ.ಮೀ ದೂರದಲ್ಲಿರುವುದೇ ಕುರಿಹಟ್ಟಿ ಗ್ರಾಮ. ಹಿಂದೆ ಕುರಿಗಳಿಗೆ ಮೇವು ನೀರಿಗೆಂದು ಪಶ್ಚಿಮದಿಂದ ವಲಸೆ ಬಂದರು. ಅವರಿಗೂ ಮತ್ತು ಕುರಿಗಳಿಗೂ ನೀರಿನ ಸೌಲಭ್ಯಕ್ಕಾಗಿ ಕೆರೆಯೊಂದು ಅಲ್ಲಿಯೇ ಇದ್ದುದರಿಂದ ಕುರಿಗಳಿಗಾಗಿ ಹಟ್ಟಿಯೊಂದು(ರೊಪ್ಪನ್ನು) ಕಟ್ಟಿಕೊಂಡು ಅಲ್ಲೇ ನೆಲಸಿದರು. ಆ ಸ್ಥಳಕ್ಕೆ ಕುರಿಹಟ್ಟಿ ಎಂದು ಹೆಸರು ಬಂದಿತೆಂದು ಹೇಳುತ್ತಾರೆ. ಪ್ರಾಯಶಃ ವಲಸೆ ಪ್ರವೃತ್ತಿಯ ಮ್ಯಾಸಬೇಡರು ನೆಲೆನಿಂತ ಹಟ್ಟಿಗಳು ಕರ್ನಾಟಕದಾದ್ಯಂತ ಕಂಡುಬರುತ್ತವೆ.

**ಎದ್ದಲುಬೊಮ್ಮಯ್ಯನಹಟ್ಟಿ**

ಅಕ್ಕಪಕ್ಕ ಊರಿನ ದನಗಳನ್ನು ಕಾಯುವ ದನಗಾಹಿಯ ಹೆಸರು ಎದ್ದಲು ಬೊಮ್ಮಯ್ಯ. ಅವನು ಮ್ಯಾಸ ಜನಾಂಗದವನಾಗಿದ್ದು, ಅವನು ದನಗಳನ್ನು ದೊಡ್ಡಬೆಟ್ಟಗಳಲ್ಲಿ ಮೇಯಿಸಿಕೊಂಡು ಮಧ್ಯಾಹ್ನದ ವಿಶ್ರಾಂತಿಗಾಗಿ ಇಲ್ಲಿಯ ಹುಣಿಸೆಮರಗಳ ನೆರಳಿನಲ್ಲಿ ತರುಬುತಿದ್ದ. ಕೊನೆಗಾಲದಲ್ಲಿ ತಾನು ಮನೆಯೂ ಇಲ್ಲದ ಬಡವನಾದ ಕಾರಣ ಅವನು ಇಲ್ಲಿಯೇ ಮನೆಯೊಂದು ಕಟ್ಟಿಕೊಂಡನಂತೆ. ಹೀಗೆ ಸ್ಥಾಪಿಸಿದ ಹಟ್ಟಿಎದ್ದಲುಬೊಮ್ಮಯ್ಯಹಟ್ಟಿ ಎಂಬುದಾಗಿ ಹೇಳುತ್ತಾರೆ. ಈ ಕಂಪಳದಲ್ಲಿ ಉತ್ಕೃಷ್ಟವಾದ ಎತ್ತುಗಳು ಇರುವುದರಿಂದ ಆ ಹೆಸರು ಬಂದಿರಬಹುದೆಂದು ಊಹಿಸಬಹುದು. ಈ ಹಟ್ಟಿ ಮೊಳಕಾಲ್ಮೂರು ತಾಲ್ಲೂಕು ಆಂಧ್ರದ ಗಡಿ ಹಂಚಿನಲ್ಲಿದೆ.

**ರತ್ನಗಿರಿಹಟ್ಟಿ**

ಹಟ್ಟಿಗೆ ಕ್ಷಾಮ, ದಡಾರ, ಬರಗಾಲ ಸಂಭವಿಸಿದಾಗ ದೇವರಲ್ಲಿ ಮೊರೆ ಹೋಗಿ ಪ್ರಾರ್ಥನೆಗೆ ಒಲಿದು ಅವರಿಗೆ ಶಕ್ತಿ ಸಾಮರ್ಥ್ಯ ಬರುವುದಕ್ಕಾಗಿ ಕೆಲವು ಗಳಿಗೆ, ಕಾಲ, ಮುತ್ತು ರತ್ನ, ಚಿನ್ನದ ಮಳೆ ಸುರಿಸಿದಳಂತೆ. ಹೀಗೆ ಮುತ್ತು ಸುರಿದ ಭಾಗ ರತ್ನಗಿರಿಹಟ್ಟಿ ಎಂದು ನಾಮಕರಣವಾಗಿರುವುದು ಕಾಣಬಹುದು.

ಬಯಲುಸೀಮೆಯಲ್ಲಿ ಬರುವ ಸಾಕಷ್ಟು ಹಟ್ಟಿಯ ಸ್ಥಳನಾಮಗಳು ವ್ಯಕ್ತಿಸೂಚಕವಾದವುಗಳು. ಏಕೆಂದರೆ ಒಂದು ಹಟ್ಟಿಯನ್ನು ಕಟ್ಟುವಲ್ಲಿ ಊರಿನ ಹಿರಿಯನ ಹಾಗೂ ಯಜಮಾನನ ಪಾತ್ರ ಮುಖ್ಯವಾದುದು. ಏಕೆಂದರೆ ಹಟ್ಟಿಗೆ ಅಗತ್ಯವಿರುವ ಜಾಗವನ್ನು ಕೊಡುವುದರಿಂದ ಅವರಿಗೆ ಹಟ್ಟಿಯ ಹೆಸರು ಪ್ರಾಪ್ತವಾಗುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಜಾತಿಯನ್ನು ಸೂಚಿಸುವ, ದೇವರನ್ನು ಸೂಚಿಸುವ ನಾಮಗಳನ್ನು ಸೇರಿಸಲಾಗಿದೆ. ಇಲ್ಲಿನ ನಾಮಗಳು ನೇರವಾಗಿ ಹೆಸರನ್ನು ಹೇಳುತ್ತವೆ.

ಇಂಜಯ್ಯನಹಟ್ಟಿ ಈ ಹಟ್ಟಿಗೆ ಮೊದಲು ಕಿಟ್ಟೋರಹಟ್ಟಿ ಎಂದು ಕರೆಯಲಾಗುತ್ತಿತ್ತು. ಇಂಜಯ್ಯನಹಟ್ಟಿಗೆ ಹಿಂದೆ ಮದಕರಿನಗರ ಎಂಬ ಹೆಸರಿತ್ತು. ನಂತರ ಇಂಜಯ್ಯನವರು ಎಂಬ ನಾಯಕರ ಪೂರ್ವಜರಿಂದ ಈ ಹಟ್ಟಿಗೆ ಈ ಹೆಸರು ಬಂದಿರಬಹುದು. ನಂತರ ಮೇಗಳಹಟ್ಟಿಗೆ ಬಿಟ್ಟೋರಹಟ್ಟಿ ಎಂದು ಗಾಂಧಿನಗರಕ್ಕೆ ಕರೆಯುತ್ತಿದ್ದರು. ಮೇಗಳಹಟ್ಟಿ ಎಂದರೆ ಚಳ್ಳಕೆರೆ ಕೊನೆಯ ದಿಗಂತ ಅಥವಾ ಹಳೆ ಚಳ್ಳಕೆರೆ ಪಟ್ಟಣದ ಮೇಲಿನ ಭಾಗಕ್ಕೆ ಇರುವುದರಿಂದ ಮೇಗಳಹಟ್ಟಿ ಎಂದು. ಬಿಟ್ಟ ಅಥವಾ ಕೆಟ್ಟ ಜನತೆ ಬಂದು ನೆಲೆಸಿದ್ದರಿಂದ ಕೆಟ್ಟೋರಹಟ್ಟಿ ಎಂದು ಹೆಸರು ಬಂದಿರಬಹುದು.

ಹೊಸಬೇಡರಹಟ್ಟಿ ಎಂಬ ಪದವು ಕೊತ್ತಬಾಲರು ಎಂಬ ತೆಲುಗು ಪದದಿಂದ ಬಂದಿದೆ. ಕೊತ್ತ ಎಂದರೆ ಹೊಸ. ಬಾಲಯ್ಯ ಎಂದರೆ ಪಾಲಯ್ಯ ಎಂದು ಹೆಸರು. ಇದರಿಂದ ಇವರು ನಿಡಗಲ್ಲು ಸಂಸ್ಥಾನದಿಂದ ಬಂದ ಬೇಡರಾಗಿ ಹೊಸಬೇಡರಹಟ್ಟಿ(ಈಗಿನ ವಾಲ್ಮೀಕಿನಗರ) ಎಂದು ಹೆಸರು ಬಂದಿತು. ಇವರು ನನ್ನಿವಾಳ ಸಂಸ್ಥಾನ ಹಾಗೂ ನಿಡಗಲ್ಲು ಸಂಸ್ಥಾನಕ್ಕೂ ಸೇರಿದವರಾಗಿದ್ದಾರೆ. ಕಾವಲೋರಹಟ್ಟಿ ಎಂಬ ಹೆಸರು ಬಂದಿದ್ದು ನಾಯಕ ಜನಾಂಗದ ಕಾವಲೋರು(ಕಾವಲು ಎಂದರೆ ಅಡವಿ ಕಾಯುವವರು) ಎಂಬ ಪದದಿಂದ. ಉದಾಹರಣೆಗೆ ಕಮರ ಕಾವಲ್, ಓಬಯ್ಯನಹಟ್ಟಿ, ಕಾವಲ್, ಕಣವೆ ದುರುಗಮ್ಮ ಕಾಯ್ದಿಟ್ಟ ಕಾವಲ್ ಇತ್ಯಾದಿಯಾಗಿ ಕಾಡಿನ ಅಂಚಿನಲ್ಲಿರುವುದರಿಂದ ಈ ಹಟ್ಟಿಗೆ ಈ ಹೆಸರು ಬಂದಿರಬಹುದು. ಬಂಗಿವಾರಹಟ್ಟಿ ಚಳ್ಳಕೆರೆ ತಾಲೂಕಿನ ಬುಡ್ನಹಟ್ಟಿ ಸಮೀಪವಿರುವ ಹಟ್ಟಿ ಬಂಗಿಕುಲದವರು ಹೆಚ್ಚಾಗಿ ನೆಲಸಿರುವುದರಿಂದ ಬಂಗಿವಾರಹಟ್ಟಿ ಎಂದು ಹೆಸರು ಪ್ರಚಲಿತವಾಗಿದೆ.

## ಸಾಂಸ್ಕೃತಿಕ ಸ್ಥಳನಾಮಗಳು

### ವ್ಯಕ್ತಿವಾಚಿ ಸ್ಥಳನಾಮಗಳು

೧. ಓಬಯ್ಯನಹಟ್ಟಿ: ವೀರನ ಆರಾಧನೆಯಿಂದ ಈ ಹಟ್ಟಿಗೆ ಓಬಯ್ಯನಹಟ್ಟಿ ಎಂಬ ಹೆಸರು ಬಂದಿರಬಹುದು. ಇಲ್ಲಿನ ವೀರಗಲ್ಲನ್ನು ಕುಮಾರರಾಮ ಎಂದು ಪೂಜಿಸಲ್ಪಡುತ್ತಾರೆ. ೨. ಗೌಡರಹಟ್ಟಿ: ಗೌಡ ಎಂಬುದು ಒಂದು ಹುದ್ದೆಯನ್ನು ಸೂಚಿಸುತ್ತದೆ. ಗ್ರಾಮದ ಮುಖಂಡರನ್ನು ಹಿಂದೆ ಈ

ಹೆಸರಿನಿಂದ ಕರೆಯಲಾಗುತ್ತಿತ್ತು. ಈ ಅಧಿಕಾರವನ್ನು ಹೊಂದಿರುವ ವ್ಯಕ್ತಿ ಇತರರಿಗಿಂತ ಭಿನ್ನವೆಂದು ಸೂಚಿಸಿಕೊಳ್ಳಲು, ತಮ್ಮ ಹೆಸರಿನ ಮುಂದೆ ತಮ್ಮ ಹುದ್ದೆಯ ಹೆಸರನ್ನು ಬರೆಯಿಸಿಕೊಳ್ಳುವಂಥದ್ದು ಒಂದು ಸಾಮಾನ್ಯ ಪ್ರಕ್ರಿಯೆಯಾಗಿತ್ತು. ಹೀಗೆ ಬಳಕೆಗೆ ಬಂದ ಹೆಸರು ವ್ಯಕ್ತಿನಾಮದ ಭಾಗವಾಗಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಪ್ರಾಚೀನ ಕಾಲದಲ್ಲಿ ಗೌಡ ಎಂಬ ಪದವನ್ನು ಗಾವುಂಡ ಎಂದು ಬಳಸುತ್ತಿದ್ದರು. ಶಾಸನ, ಕಾವ್ಯಗಳಿಂದ ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದು. 'ವಿಕ್ರಮಗಾವುಂಡ' ಎಂಬ ಹೆಸರನ್ನು ಗಮನಿಸಬಹುದು. ಕ್ಷೇತ್ರವ್ಯಾಪ್ತಿಯಲ್ಲಿ ಯರ್ರೇನಹಳ್ಳಿಗೌಡರಹಟ್ಟಿ, ತುಮಕೂರ್ಲಹಳ್ಳಿ ಗೌಡರಹಟ್ಟಿ ಹಾಗೂ ಚಳ್ಳಕೆರೆ ತಾಲೂಕು ಎತ್ತಿನಗೌಡರಹಟ್ಟಿ ಕಾಣಸಿಗುತ್ತವೆ. ಈ ಹಟ್ಟಿಗಳು ಹುದ್ದೆಯಿಂದ ನಿರ್ವಚಿಸಲ್ಪಡುತ್ತವೆ. ಎತ್ತಿನಹಟ್ಟಿ ಗೌಡ್ರು, ಗೌಡ ಎಂಬ ಪದ ಹಟ್ಟಿಯಲ್ಲಿ ಗೌರವಸೂಚಕವಾಗಿ ಬಳಕೆಯಾಗುತ್ತಿದೆ. ಇಲ್ಲಿ ಹಟ್ಟಿಯ ಗೌಡರದೆ ನಿರ್ಣಾಯಕ ಪಾತ್ರ ಇರುತ್ತದೆ. ೩. ಓಬ್ನೋಬಯ್ಯನ ಹಟ್ಟಿ, ೪. ಸಣ್ಣಪಾಪಯ್ಯನಹಟ್ಟಿ, ೫. ಉಗ್ಗಿನಿಂಗಯ್ಯನಹಟ್ಟಿ, ೬. ಪುರಬೋರನಹಟ್ಟಿ, ೭. ಕುಂಟೋಬಯ್ಯನಹಟ್ಟಿ, ೮. ಕೆಂಗೋಬಯ್ಯನಹಟ್ಟಿ, ೯. ಮುದಯ್ಯನಹಟ್ಟಿ, ೧೦. ಗೊಂಚಿಗಾರ ಪಾಲಯ್ಯನಹಟ್ಟಿ, ೧೧. ಕುಂಟೋಬಯ್ಯನಹಟ್ಟಿ(ಕೋನಸಾಗರ), ೧೨. ಕಾಕಿಪಾಲಯ್ಯನಹಟ್ಟಿ, ೧೩. ಗಾಡಿ ಪಾಲಯ್ಯನಹಟ್ಟಿ, ೧೪. ಗೌಡ್ರಹಟ್ಟಿ, ೧೫. ಬೋಸೆವರಹಟ್ಟಿ, ೧೬. ಈರಣ್ಣನಹಟ್ಟಿ, ೧೭. ಕೆರೆಕಾಟನಹಟ್ಟಿ, ೧೮. ಕರಿಯಮ್ಮನಹಟ್ಟಿ, ೧೯. ಪಂಜಯ್ಯನಹಟ್ಟಿ, ೨೦. ಮಾಳಪ್ಪನಹಟ್ಟಿ, ೨೧. ಹಳಗಪ್ಪನಹಟ್ಟಿ, ೨೨. ಜೋಗಿಬೋರನಹಟ್ಟಿ, ೨೩. ಸಿಂಗಾರಯ್ಯನಹಟ್ಟಿ, ೨೪. ಬಸಪ್ಪನಹಟ್ಟಿ, ೨೫. ಬಸವನಹಟ್ಟಿ, ೨೬. ಮಹಾರಾಜನಹಟ್ಟಿ, ೨೭. ಮೂಗಜ್ಜನಹಟ್ಟಿ, ೨೮. ಭೂತಯ್ಯನಹಟ್ಟಿ, ೨೯. ಗಾಳಿರಂಗಯ್ಯನಹಟ್ಟಿ, ೩೦. ಚಿತ್ತಯ್ಯನಹಟ್ಟಿ, ೩೧. ಮುದಿಯಪ್ಪನಹಟ್ಟಿ, ೩೨. ಓಬಯ್ಯನ ಹಟ್ಟಿ, ೩೩. ಸುಳ್ಳಪಾಪಯ್ಯನಹಟ್ಟಿ, ೩೪. ಜೋಗಿಹಟ್ಟಿ, ೩೫. ನಾಯಕನಹಟ್ಟಿ, ೩೬. ನೇತ್ರಯ್ಯನ ಹಟ್ಟಿ. ೩೭. ಬೋರಪ್ಪನಹಟ್ಟಿ: ಬೋರಪ್ಪ ಎಂಬ ಪೂರ್ವಜರು ಊರಿಗೆ ಜಾಗ ಕೊಟ್ಟಿದ್ದರಿಂದ ಮತ್ತು ಬೋರಪ್ಪನ ಕುಲದವರಿರುವ ಸ್ಥಳವಾಗಿರುವುದರಿಂದ ಬೋರಪ್ಪನಹಟ್ಟಿ ಎಂದು ಕರೆಯುತ್ತಾರೆ. ೩೮. ಚಿತ್ರಯ್ಯನಹಟ್ಟಿ: ಚಿತ್ರಯ್ಯ ಅಂದರೆ ಈಗಲೋರು ಕುಲದಿಂದ ಚಿತ್ರಯ್ಯ ಎಂಬ ಪೂರ್ವಜರಿಂದ ಈ ಹೆಸರು ಬಂದಿದೆ. ೩೯. ಮುತ್ತಯ್ಯನಹಟ್ಟಿ, ೪೦. ಚನ್ನಬಸಯ್ಯನಹಟ್ಟಿ, ೪೧. ಮಾದಯ್ಯನಹಟ್ಟಿ, ೪೨. ಗಂಗಯ್ಯನಹಟ್ಟಿ ೪೩. ಭೈಯನಾಯಕನಹಟ್ಟಿ, ೪೪. ಮಲೆಬೋರನಹಟ್ಟಿ, ೪೫. ಕಾಟಪ್ಪನಹಟ್ಟಿ- ಹೆಸರು ಬರಲು ಕಾರಣ ಈ ಕಾಟಂಲಿಂಗೇಶ್ವರ ದೇವಸ್ಥಾನವಿರುವ ಹಾಗು ಕಾಟಪ್ಪನ ಕುಲ ಅಥವಾ ಕಾಮಗೇತಿ ವಂಶಸ್ಥರು ನೆಲಸಿರುವ ಸ್ಥಳ ಇದಾಗಿರುವುದರಿಂದ ಕಾಟಪ್ಪನಹಟ್ಟಿ ಎಂದು ಹೆಸರು ಬಂದಿರಬಹುದು. ಈ ಹಟ್ಟಿಯಲ್ಲಿ ಚಿತ್ರದುರ್ಗ ಪಾಳೆಯಗಾರರ ವಂಶಸ್ಥರು ಹೆಚ್ಚಾಗಿ ವಾಸಿಸುತ್ತಿದ್ದಾರೆ. ಈ ವಂಶಸ್ಥರು ಚಳ್ಳಕೆರೆಮ್ಮನ ಜಾತ್ರೆ ಉತ್ಸವದಲ್ಲಿ ಪ್ರಮುಖ ಪಾತ್ರ ವಹಿಸುವುದು ಕಾಣಬಹುದು. ೪೬. ಭತ್ತಯ್ಯನಹಟ್ಟಿ ೪೭. ಚಿನ್ನನಾಯಕನಹಟ್ಟಿ ೪೮. ಬಲ್ಲನಾಯಕನ ಹಟ್ಟಿ ೪೯.

ಬಂಜಯ್ಯನಹಟ್ಟಿ ೫೦. ಕನ್ನಿಬೋರಯ್ಯನಹಟ್ಟಿ ೫೧. ನಾಯಕನಹಟ್ಟಿ ೫೨. ಗಡ್ಡದ ಬೋರಯ್ಯನಹಟ್ಟಿ ೫೩. ಶನಿವಾರದಬೋರಯ್ಯನಹಟ್ಟಿ ೫೪. ಹೊಸಕೆರೆಪಾಪಯ್ಯನಹಟ್ಟಿ ೫೫. ಚೌಟಯ್ಯನಹಟ್ಟಿ ೫೬. ಕಾವಲಬೋರಯ್ಯನಹಟ್ಟಿ ೫೭. ಯರ್ರೋಬಯ್ಯನಹಟ್ಟಿ ೫೮. ಬೋರಯ್ಯನಹಟ್ಟಿ ೫೯. ಕಾಮಯ್ಯನಹಟ್ಟಿ ೬೦. ಮಹಿಮನಹಟ್ಟಿ ೬೧. ಗೌಡರಹಟ್ಟಿ ೬೨. ಬುಡ್ನಹಟ್ಟಿ ೬೩. ಕೂರಬಯ್ಯನಹಟ್ಟಿ/ಕೂರಮೋರುಹಟ್ಟಿ ಕೂರ ಎಂದರೆ ತೆಲುಗಿನಲ್ಲಿ ಸೊಪ್ಪು, ಅಂದರೆ ಸೊಪ್ಪು ಮಾರುವುದರಿಂದ ಬಂದ ಹೆಸರಾಗಿದೆ. ಕೂರೋಬಯ್ಯ ಎಂಬ ಅಜ್ಜನ ಹೆಸರು. ಬಹುಶಃ ಈ ಹಟ್ಟಿಗೆ ಜಾಗ ನೀಡಿರುವುದರಿಂದ ಈ ಹೆಸರು ಬಂದಿರಬಹುದು.

### ದೈವವಾಚಿ

೧. ಪದಿನಾನ್‌ದೇವರಹಟ್ಟಿ ೨. ಕಾತ್ರಿಕೇನಹಟ್ಟಿ ೩. ದೇವರಹಟ್ಟಿ ೪. ಬಂಗಾರದೇವರಹಟ್ಟಿ ೫. ಬೋಸೆದೇವರಹಟ್ಟಿ ೬. ಬೋರೆದೇವರಹಟ್ಟಿ ೭. ದೇವರಹಟ್ಟಿ ೮. ಚಳಿಮಾಡುಭೂತಯ್ಯನಹಟ್ಟಿ ೯. ಕಂಪಳದೇವರಹಟ್ಟಿ ೧೦. ಮಲಿಯಮ್ಮನಹಟ್ಟಿ ೧೧. ಮರಿಯವ್ವನಹಟ್ಟಿ

### ಬೆಡಗು

೧. ನೆಕ್ಲೇರಹಟ್ಟಿ ೨. ನಿಂಗ್ಲಾರಹಟ್ಟಿ ೩. ಕಾಸವಾರಹಟ್ಟಿ ೪. ಕಾವಾಡಿಗರಹಟ್ಟಿ ೫. ಲಿಂಗಾವರಹಟ್ಟಿ ೬. ನಲಗೇತನಹಟ್ಟಿ ೭. ಮಲ್ಲಾರಹಟ್ಟಿ ೮. ಜಾಗನೂರಹಟ್ಟಿ ೯. ನಿಂಗಾವರಹಟ್ಟಿ ೧೦. ಕರ್ನಾರಹಟ್ಟಿ ೧೧. ಸುಟ್ಟಕರ್ನಾರಹಟ್ಟಿ ೧೨. ಗಡ್ಡದವರಹಟ್ಟಿ ೧೩. ಕೆಂಗಲಹಟ್ಟಿ ೧೪. ಜುಟ್ಟಲಿಂಗನಹಟ್ಟಿ

### ಮ್ಯಾಸ ಸಮುದಾಯದಿಂದ ಉತ್ಪತ್ತಿಯಾದ ಕೆಲವು ನಾಮಗಳು

೧. ಮುತ್ತಿಗಾರಹಳ್ಳಿ ಮ್ಯಾಸರಹಟ್ಟಿ ೨. ಹಿರೆಕೆರೆಹಳ್ಳಿ ಹೊಸಹಟ್ಟಿ ೩. ಹಿರೆಕೆರೆಹಳ್ಳಿ ಮ್ಯಾಸರಹಟ್ಟಿ ೪. ಮುದ್ದಾಪುರ ಮ್ಯಾಸರಹಟ್ಟಿ ೫. ಯಳಗೋಡು ಮ್ಯಾಸರಹಟ್ಟಿ ೬. ಕಡಬನಕಟ್ಟೆ ಮ್ಯಾಸರಹಟ್ಟಿ ೭. ಹೊಸಹಟ್ಟಿ ೮. ತಳವಾರಹಟ್ಟಿ(ಹಿರಿಯೂರು) ಪಾಳೆಯಗಾರ/ರಾಜರ ೯. ದೊರೆಗಳಹಟ್ಟಿ (ರಾಮದುರ್ಗದ ಹತ್ತಿರ) ೧೦. ದೊರೆಹಟ್ಟಿ(ನನ್ನಿವಾಳದ ಹತ್ತಿರ) ೧೧. ಕಳಚೂರಿಪಾಪಯ್ಯನಹಟ್ಟಿ

### ಇತರೆ

೧. ನಲಜಾಮನಟ್ಟಿ-ಮಳ್ಳಟ್ಟಿ(ಮರಡಿಹಳ್ಳಿ): ಮಲ್ಡಿ ಎಂದರೆ ತೆಲುಗಿನಲ್ಲಿ ದಿಬ್ಬ ಎಂಬ ಹೆಸರು- ಮಲ್ಡಿವಾರು ಕುಲವಾಸಗಿದ್ದು, ಇವರು ಜಮೀನಿನನ್ನು ವಾಸಸ್ಥಳ ಕೊಟ್ಟಿರುವುದು ಮಲ್ಡಿ ಎಂದು ಕರೆದಿರಬಹುದು. ೨. ಸಕಲಾಪುರದಹಟ್ಟಿ ೩. ಕಪಿಲೆಹಟ್ಟಿ

ಬೇಡರ ಹಟ್ಟಿಗಳು ವೀರನ ಹೆಸರಿನಲ್ಲಿ ಸ್ಥಾಪನೆಗೊಂಡಿರುವುದಕ್ಕೆ ನೂರಾರು ಸ್ಥಳಗಳು

ದೊರೆಯುತ್ತವೆ. ಉದಾಹರಣೆಗೆ ಭೈಯನಾಯಕನಹಟ್ಟಿ, ಓಬಯ್ಯನಹಟ್ಟಿ, ಕನ್ನಿ ಬೋರಯ್ಯನ ಹಟ್ಟಿ, ಚನ್ನಬಸವಯ್ಯನಹಟ್ಟಿ.

**ಉಗ್ಗಿನಿಂಗಯ್ಯನಹಟ್ಟಿ**

ಹಟ್ಟಿಯ ಜನರು ಹೇಳುವ ಪ್ರಕಾರ ಹಟ್ಟಿಗೆ ಮ್ಯಾಸನಾಯಕರ ನಿಂಗಯ್ಯನ ವಂಶಸ್ಥರು ಹುಗ್ಗಿ ಹೊಯ್ದಿರುತ್ತಾರೆ. ಬರಿ ಮ್ಯಾಸನಾಯಕರು ಪಕ್ಕದ ಗಡ್ಡದಬೋರಯ್ಯನಹಟ್ಟಿಯಿಂದ ಚಿನ್ನಹಗರಿನದಿ ದಾಟಿ ಅದರ ದಡದಲ್ಲಿ ಬಂದು ಬೀಡು ಬಿಟ್ಟು ನಿಂಗಯ್ಯ ಹುಗ್ಗಿ ಹೊಯ್ದಿದ್ದರಿಂದ ಹುಗ್ಗಿ-ಉಗ್ಗಿನಿಂಗಯ್ಯನಹಟ್ಟಿ ಎಂದು ಕರೆಯಿಸಿಕೊಂಡಿದೆ. ಈ ಹಟ್ಟಿಯಲ್ಲಿ ಈಗ ೩೫ ಮನೆಗಳಿದ್ದು ಸುಮಾರು ೨೦೦ ಜನಸಂಖ್ಯೆ ಹೊಂದಿದೆ. ಈ ಹಟ್ಟಿಯಲ್ಲಿ ಗೌರಸಮುದ್ರ ಮಾರಮ್ಮನಗುಡಿ ಮತ್ತು ಊರ ಮಾರಮ್ಮನ ಗುಡಿಗಳು ಸರಳ ಶೈಲಿಯಲ್ಲಿವೆ. ಮುಖ್ಯ ಕಸುಬು ವ್ಯವಸಾಯ. ಒಬ್ಬರಿಗೊಬ್ಬರು ಪರಸ್ಪರ ಸ್ನೇಹಮಯವಾಗಿ ಬದುಕುತ್ತಿದ್ದಾರೆ. ಹಟ್ಟಿಯ ಸಮೀಪದಲ್ಲಿ ಕಬ್ಬಿಣದ ಕಿಟ್ಟ ಹಾಗೂ ಕುಲುಮೆ ಮಾಡಿದ ಅವಶೇಷಗಳಿವೆ. ಇಲ್ಲಿ ಭೈರವನ ಆರಾಧಕರು ನೆಲೆಗೊಂಡ ನೆಲೆಗಳಿರುವುದು ಸ್ಪಷ್ಟ. ಪಕ್ಕದಲ್ಲಿಯೇ ಮತದಜೋಗಿಹಳ್ಳಿ ಇದೆ.

ಒಂದು ಹೆಸರು ಒಬ್ಬ ವ್ಯಕ್ತಿಯ ಮೂಲಕ ಒಂದು ಮನೆತನದಲ್ಲಿ ಸೇರಿಕೊಂಡಿತೆಂದರೆ ಅದನ್ನು ಹೊರಹಾಕುವುದು ಕಷ್ಟ. ಕುಟುಂಬದ ನಾಮ ಇನ್ನೂ ಕಷ್ಟ. ಗ್ರಾಮನಾಮ ಇನ್ನೂ ಕಷ್ಟ. ನಮ್ಮ ನಾಡಿನಲ್ಲಿ ಪ್ರಚಲಿತವಿರುವ ಎಲ್ಲ ಲಕ್ಷೋಪಲಕ್ಷ ಅಡ್ಡ ಹೆಸರುಗಳನ್ನು ಪಟ್ಟಿ ಮಾಡಿ ಬಳಸುವ ವಿಧಾನ ಸ್ವರೂಪ ಇತ್ಯಾದಿ ದೃಷ್ಟಿಗಳಿಂದ ಅವುಗಳನ್ನು ವರ್ಗೀಕರಿಸಿ ವಿವೇಚಿಸಿದಲ್ಲಿ ಅದು ನಮ್ಮ ಪೂರ್ವಜರ ನೆಲೆ, ವೃತ್ತಿ, ವಂಶ, ಜನಾಂಗ, ಭಾಷೆ, ಮನೋಧರ್ಮ ಇತ್ಯಾದಿಗಳ ಅಧ್ಯಯನವಾಗುತ್ತದೆ. ನಮ್ಮ ಸಂಸ್ಕೃತಿಯ ಅಧ್ಯಯನವೇ ಆಗುತ್ತದೆ.

**ಕನ್ನಿಬೋರಯ್ಯನಹಟ್ಟಿ**

ಇದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಪೂಜಾರಿಹಳ್ಳಿ ಗ್ರಾಮಪಂಚಾಯಿತಿ ವ್ಯಾಪ್ತಿಗೆ ಸೇರಿದೆ. ಈ ಹಟ್ಟಿಯ ಜನ ಹಿಂದೆ ನಲಪೂಜಾರ್ಲುಪೆಲ್ಲಿ ಎಂದು ಕರೆಯುವ ಪ್ರದೇಶದಲ್ಲಿ ನೆಲೆನಿಂತಿದ್ದರು. ಇದು ಹಾಳೂರು ಎಂದು ಹೇಳಿದರೂ ಅದು ಒಂದು ಶತಮಾನದಿಂದೀಚೆಗೆ ಎಂದು ಹೇಳಬಹುದು. ಈಗಿರುವ ಪೂಜಾರಹಳ್ಳಿ ಎಂಬ ಗ್ರಾಮದ ಮೊದಲ ಹೆಸರು ಮತ್ತು ವಾಸದ ನೆಲೆ ಇದಾಗಿತ್ತು. ಹಾಳೂರು ಎಂದು ಕರೆಯುವ ಕರೆಪೂಜಾರಹಳ್ಳಿ ಅಕ್ಕಪಕ್ಕದಲ್ಲಿ ರಕ್ಕರಾಯಿ, ನೇಂಬಂಡೆ, ಕತ್ತೆಮೊರಡೆ ಮತ್ತು ಕೊಟಗುಡ್ಡದ ಮಾರಮ್ಮನ ನೆಲೆಗಳು ಅಡವಿಯಲ್ಲಿದ್ದು, ಈ ನಿವೇಶನಕ್ಕೆ ಸಮೀಪದಲ್ಲಿವೆ. ಇಲ್ಲಿರುವ ಸ.ನಂ.೧೪ಳ ಮತ್ತು ೧೬೭ರಲ್ಲಿ ಈ ಪ್ರಾಚೀನ ನಿವೇಶನವಿದೆ. ತೋಟದ ಪೆದ್ದಓಬಯ್ಯ, ತೋಟದ ಬೋರಯ್ಯನ ಅಣ್ಣತಮ್ಮಂದಿರ ಹೊಲದಲ್ಲಿದೆ. ಈ ಹಾಳೂರು ಕೋಟೆ, ಕಂದಕ ಬುರುಜು ಇತರ ಭಗ್ನಾವಶೇಷ

ಗಳು ಪ್ರಾಚೀನತೆಯನ್ನು ಸಾಕ್ಷೀಕರಿಸುತ್ತವೆ. ಮನೆ, ಬಾವಿ, ಬೀದಿ ಇತರ ಲಕ್ಷಣಗಳಿವೆ. ಕೋಟೆ ಪಕ್ಕದಲ್ಲಿ ಕ್ರಿ.ಶ.೧೯೫೪ರ ಪೂರ್ವದಲ್ಲಿ ಇದು ಅರಣ್ಯ ಇಲಾಖೆಗೆ ಸೇರಿದರೂ ಗ್ರಾಮದ ನಿವೇಶನ(ಅನಾಧೀನ ಶಿವ ಜಮೀನು)ವೆಂದರೆ ಕರೆಯುತ್ತಿದ್ದರು. ಅನಂತರ ಈ ಜಮೀನನ್ನು ತೋಟದ ಪೆದ್ದಓಬಯ್ಯ ಬೋರಯ್ಯ ಅಣ್ಣತಮ್ಮಂದಿರಿಗೆ ಸರ್ಕಾರ ಪಟ್ಟಾ ನೀಡಿತು. ಕೋಟೆ, ಅವಶೇಷಗಳಿರುವ ನಿವೇಶನವನ್ನು ಹೊರತುಪಡಿಸಿ ಉಳಿದ ಎಲ್ಲ ಪ್ರದೇಶವನ್ನು ಉಳುಮೆ ಮಾಡುತ್ತಾರೆ. ಸುಮಾರು ೧೬ ಎಕರೆ ಜಮೀನಿದ್ದರೂ, ಕೆಲವು ಭಾಗಗಳಲ್ಲಷ್ಟೇ ಜನವಸತಿ ಯಿದ್ದಂತಿದೆ. ಇಲ್ಲಿರುವ ಕೋಟೆ-ಬುರುಜು ಕಲ್ಲು ಮಣ್ಣಿನಿಂದ ನಿರ್ಮಾಣಗೊಂಡಿವೆ. ಒಬ್ಬ ಮನುಷ್ಯನ ಆಳಕ್ಕೂ ಹೆಚ್ಚು ಕಂದಕವಿದ್ದು, ನಡುವೆ ಎತ್ತರವಾದ ಬುರುಜು ಇದೆ. ಇದನ್ನೇ ಕೋಟೆ ಎಂದು ಕರೆಯುತ್ತಾರೆ. ಇಲ್ಲಿರುವ ಅವಶೇಷಗಳ ಪೈಕಿ ಮನೆಗಳ ಅಂತರ ಸುಮಾರು ೫ ಅಡಿ ೯-೧೧-೬ರಂತೆ ಅಗಲ ಮತ್ತು ಎತ್ತರವನ್ನು ಇಟ್ಟುಕೊಳ್ಳಲಾಗಿದೆ. ಎರಡು ಬೀದಿಗಳಿದ್ದು ಪತ್ರ್ಯೇಕ ರಸ್ತೆಗಳು ಎರಡು ದಿಕ್ಕಿನಲ್ಲಿವೆ. ವೃತ್ತಕಾರದ ನೀರಿನ ಬಾವಿ, ಚಿಲುಮೆ ಇದರ ಪಕ್ಕದಲ್ಲಿವೆ.

ಕ್ರಿ.ಶ.೧೫೫೦-೧೬೦೦ರ ಸುಮಾರಿಗೆ ನಾಯಕ ಜನಾಂಗದ ಜಗದ್ಗುರು ಮತ್ತು ಪಶುಪಾಲಕ ಸಮುದಾಯಕ್ಕೆ ದೊರೆಯಾಗಿದ್ದ ಯರಮಂಚನಾಯಕ ತನ್ನ ಕಾವು ಕಂಪಳದೊಡನೆ ಇಲ್ಲಿ ವಾಸ್ತವ್ಯ ಹೂಡಿದ್ದನೆಂದು ತಿಳಿದುಬರುತ್ತದೆ. ಗುಡೇಕೋಟೆ, ಜರಿಮಲೆ ಪಾಳೆಯಗಾರರ ಆಳ್ವಿಕೆಯ ಕಾಲಕ್ಕೆ ಅವರಿಗೆ ಒಳಪಟ್ಟಿದ್ದಿತು. ಹಂಪಿ, ಆನೆಗೊಂದಿ, ಗೆದ್ದಲಗಟ್ಟೆ, ಜರಿಮಲೆ ಮೊದಲಾದ ಚಾರಿತ್ರಿಕ ಮತ್ತು ಧಾರ್ಮಿಕ ಸ್ಥಳಗಳಿಗೆ ನಡೆದುಕೊಳ್ಳುವ ಜನರು ಇಲ್ಲಿದ್ದರು. ಕ್ರಮೇಣ ಈ ಗ್ರಾಮ ಹಾಳಾಯಿತು. ಇದಕ್ಕೆ ಕಾರಣಗಳು ನಿಖರವಾಗಿ ತಿಳಿದುಬಂದಿಲ್ಲ. ಆದರೂ ಸ್ವಾಭಾವಿಕವಾಗಿ ಹೇಳುವುದಾದರೆ, ಪ್ರಕೃತಿ ವಿಕೋಪವೆಂದು(ಭೂಕಂಪ ಇನ್‌ಫ್ಲೂಯೆಂಜಾ ಕಾಲರಾ ಇತ್ಯಾದಿ) ಅತಿವೃಷ್ಟಿ ಅನಾವೃಷ್ಟಿಗಳು ಕಾರಣವೆಂದು ನಂಬಲಾಗಿತ್ತು. ಬ್ರಿಟಿಷರ(ಮದ್ರಾಸ್ ಅಧಿಪತ್ಯ) ಅವಧಿಯಲ್ಲಿ ಅಂದರೆ ಕ್ರಿ.ಶ.೧೮೯೯ರ ಸುಮಾರಿಗೆ ಈ ಪ್ರದೇಶದಲ್ಲಿ ವ್ಯಾಪಕವಾಗಿ ಪ್ಲೇಗ್ ರೋಗ ಹಬ್ಬಿತು. ಇದರಿಂದ ಸಹಸ್ರಾರು ಜನರ ತೀರಿದರು. ಈ ಕೆರೆಪೂಜಾರಹಳ್ಳಿ ಗ್ರಾಮದಲ್ಲಿ ಕೆಲವು ತೀರಿಕೊಂಡಿದ್ದರಿಂದ, ತಮ್ಮ ವಾಸದ ನೆಲೆಗಳು ಬದಲಾಯಿಸಿ ೨ ಕಿ.ಮೀ.ದೂರದಲ್ಲಿ ಹಟ್ಟಿಯನ್ನು ನಿರ್ಮಿಸಿಕೊಂಡರು. ಅಲ್ಲೊಂದು ಕೆರೆಯನ್ನು ಕಟ್ಟಿ, ಆಲದಮರದ ಕೆಳಗೆ ಕುರಿದನಗಳನ್ನು ತರುಬಿ ಜೀವನ ಸಾಗಿಸಿದರು. ಕ್ರಮೇಣ ಅಲ್ಲಿ ಕನ್ನಿಬೋರಯ್ಯನಹಟ್ಟಿ, ಪೂಜಾರಹಳ್ಳಿ ಎಂಬ ನೂತನ ಗ್ರಾಮಗಳು ಉದಯವಾದವು. ಈಗ್ಗೆ ಸುಮಾರು ೧೦೫ ವರ್ಷಗಳ ಇತಿಹಾಸ ಈ ಗ್ರಾಮಗಳಿಗಿದೆ. ಇವೆರಡು ಗ್ರಾಮಗಳಲ್ಲಿ ವಾಸಿಸಿರುವ ಕುಟುಂಬಗಳ ಸಂಖ್ಯೆ ಒಂದುನೂರ ಐವತ್ತು ಮತ್ತು ಎರಡುನೂರು. ಇವರು ಹಾಳೂರಿನಿಂದಲೇ ಬಂದಿರುತ್ತೇ ವೆಂದು ತಿಳಿಸುತ್ತದೆ. ಇಂದಿಗೂ ಸುಸ್ಥಿತಿಯಲ್ಲಿರುವ ಕೋಟೆ, ಕಂದಕಗಳು ಪ್ರಾಚೀನ ಚರಿತ್ರೆಯನ್ನು ನೆನಪಿಸುತ್ತವೆ.

ಕರೆಪೂಜಾರಹಳ್ಳಿ(ಕಾಮಗೇತಲಾರು ದೇವರಪೂಜಾರಿಗಳು ನೆಲಸಿದ ಸ್ಥಳ). ಇಂದಿನ ಪೂಜಾರಹಳ್ಳಿಯಾಗಿದೆ. ಅದೇ ರೀತಿ ಮಳೆ ಭೂಸಮುದ್ರದಿಂದ ಬಂದ ಗುಂಡೇತಲಾರು ಇಲ್ಲಿನ ಮೂಲ ಪುರುಷರು.

**ಕಾಕಿಬೋರಯ್ಯನಹಟ್ಟಿ**

ಕಾಕಿಬೋರಯ್ಯನ ವಂಶಸ್ಥರು ಈ ಹಟ್ಟಿಗೆ ಹುಗ್ಗಿ ಹುಯ್ಯುವುದರಿಂದ ಈ ಹಟ್ಟಿ ಕಾಕಿಬೋರಯ್ಯನಹಟ್ಟಿ ಎಂದು ಕರೆದಿರಬಹುದು. ಇದು ಚಳ್ಳಕೆರೆ ತಾಲ್ಲೂಕು ಹಿರೆಹಳ್ಳಿ ಗ್ರಾಮ ಪಂಚಾಯಿತಿಯಲ್ಲಿದೆ. ಈ ಹಟ್ಟಿಯ ಸಮೀಪದಲ್ಲಿ ಕೊಡಗಲಬೊಮ್ಮಯ್ಯ ಗುಡ್ಡೆ ಇದೆ.

**ದೊರೆಗಳಹಟ್ಟಿ**

ಹೊಸಗುಡ್ಡದ ಬುಡದಿಂದ ಸ್ವಲ್ಪದೂರ ಉತ್ತರಕ್ಕೆ ಇರುವ ಒಂದು ಮೈದಾನದ ಪ್ರದೇಶದಲ್ಲಿ ದೊರೆಗಳಹಟ್ಟಿ ಎಂಬ ಸಣ್ಣ ಗ್ರಾಮವಿದೆ. ಕೇವಲ ಏಳೆಂಟು ಮನೆಗಳ ಗ್ರಾಮ. ರಾಮದುರ್ಗ ಕೋಟೆಯೊಳಗೆ ಬದುಕಿದ್ದ ದೊರೆಗಳ ಸಂತತಿಯವರು. ಅದು ನಾಶವಾದ ಮೇಲೆ ಈ ಹಟ್ಟಿಯಲ್ಲಿ ಈಗ ನೆಲೆಸಿದ್ದಾರೆಂದು ಅಲ್ಲಿಯವರು ಹೇಳುತ್ತಾರೆ. ಅದಕ್ಕೆ ಅದನ್ನು ದೊರೆಗಳ ಹಟ್ಟಿ ಎಂದು ಕರೆಯುವುದೆಂತಲೂ ಹೇಳುವರು. ಆದರೆ ಅದಕ್ಕೆ ಯಾವ ದಾಖಲೆಗಳೂ ದೊರಕುವುದಿಲ್ಲ. ಈ ದೊರೆಗಳಹಟ್ಟಿಯಿಂದ ಈಗಲೂ ರಾಮದುರ್ಗ ಪಾಳೆಯಗಾರರ ವಂಶಸ್ಥರೆಂದು ಹೇಳಿಕೊಳ್ಳುವ ಮನೆತನದವರು ಪ್ರತಿ ಸೋಮವಾರ ಗುಡ್ಡ ಹತ್ತಿ ಗುಹಾಂತರ ದೇವಾಲಯಕ್ಕೆ ಪೂಜೆ ಸಲ್ಲಿಸಿಕೊಂಡು ಬರುವರು. ಇಲ್ಲಿನ ಬೇಡ ಸಮುದಾಯ ಮ್ಯಾಸ ಸಮುದಾಯಕ್ಕಿಂತ ಶ್ರೇಷ್ಠ ಎಂಬ ಭಾವನೆ ಅವರಲ್ಲಿದೆ. ಏಕೆಂದರೆ ಹಿಂದಿನ ಪಾಳೆಯಗಾರರ ದರ್ಪ ಎಂದಿನಂತೆಯೇ ಮುಂದುವರಿಸುವ ಸ್ವಭಾವ ಅವರದು. ಇಲ್ಲಿನ ಪಾಳೆಯಗಾರರಿಗೂ ಹಾಗೂ ಮೊಳಕಾಲ್ಮೂರು ತಾಲೂಕಿನ ಯರ್ಜೇನಹಳ್ಳಿ ಪಾಳೆಯಗಾರರಿಗೂ ನಂಟು ಬೆಳೆದಿದೆ.

**ಬೋಸೆದೇವರಹಟ್ಟಿ**

ಬೋಸೆದೇವರಹಟ್ಟಿ ನಾಯಕನಹಟ್ಟಿ ಬಳಿಯ ಐದು ಕಿ.ಮೀ ಅಂತರದಲ್ಲಿದೆ. ಇಲ್ಲಿ ಹೆಚ್ಚು ಸಂಖ್ಯೆಯಲ್ಲಿ ನೆಲಸಿರುವವರು ಮ್ಯಾಸನಾಯಕರು. ನಾಲ್ಕಾರು ಮಾಳಿಗೆ ಮನೆಗಳಿದ್ದು, ಉಳಿದವು ಗುಡಿಸಲು ಮನೆಗಳಿವೆ. ಎಲ್ಲರೂ ಜೀವನೋಪಯಕ್ಕಾಗಿ ವ್ಯವಸಾಯವನ್ನು ಅವಲಂಬಿಸಿ ದ್ದಾರೆ. ಇವರದು ಬಹುಮಟ್ಟಿಗೆ ಮಳೆಯನ್ನೇ ನಂಬಿರುವ ವ್ಯವಸಾಯ. ಇಲ್ಲಿ ನೆಲೆಯಾಗಿರುವ ಬೋಸೇದೇವರೂ ಕೂಡ ಗುಡಿಸಲಲ್ಲೇ ವಾಸವಾಗಿರುತ್ತಾನೆ. ಗುಡಿಯ ಸುತ್ತ ಬೇಲಿಯಿದ್ದು ಮಧ್ಯೆ ಗುಡಿಸಲಲ್ಲಿ ಬೋಸೆದೇವರ ಪೆಟ್ಟಿಗೆಯಿದೆ. ಈ ಹಟ್ಟಿಯಲ್ಲಿ ಬೋಸೆದೇವರು ನೆಲೆಸಿರುವ ಹಿನ್ನೆಲೆಯಲ್ಲಿ ಬೋಸೆದೇವರಹಟ್ಟಿ ಎಂದು ಕರೆಯುತ್ತಾರೆ. ಈ ಹಟ್ಟಿಯಲ್ಲಿ ಮೊದಲು

ಬೂಸೇವೆ(ಬುವ್ವ-ಎಂದರೆ ತೆಲುಗಿನಲ್ಲಿ ಅನ್ನ, ಸೇವೆ ಎಂದರೆ ಸಂತರ್ಪಣೆ ನಡೆಯುತ್ತಿತ್ತು) ಮೂಲದಲ್ಲಿ ಈ ದೇವರನ್ನು ಬೂಶೆದೇವರು ಎಂದು ಕರೆಯಲಾಗುತ್ತಿತ್ತು. ಕಾಲಾಂತರ ಬೂಸೆ ದೇವರು> ಬೋಸೆದೇವರಾಗಿ ಬೂಸೆದೇವರಹಟ್ಟಿ ಬೋಸೆದೇವರಹಟ್ಟಿಯಾಗಿ ಪರಿವರ್ತನೆ ಯಾಗಿರಬಹುದು ಎಂದು ಊಹಿಸಬಹುದು ಎಂದು ಹಟ್ಟಿಯ ಹಿರಿಯರು ಹೇಳುತ್ತಾರೆ.

### ರೊಪ್ಪ

ಶ್ರೀ ಎಂ.ಆರ್. ವೀಲ್ಹರ್ ರವರು ಕ್ರಿ.ಶ.೨೦೦-೧೦೦ರವರೆಗೆ ಬ್ರಹ್ಮಗಿರಿಯ ಪ್ರದೇಶವನ್ನು ಶಿಲಾಯುಗ ಅನಂತರ ಮೆಗಾಲಿಕ್ ಸಂಸ್ಕೃತಿಯವರೆಂದೂ ಮೂರನೇ ಶತಮಾನದವರೆಗೆ ಆಂಧ್ರ ಸಂಸ್ಕೃತಿ ಹೊಂದಿದ್ದಾಗಿ ಅಭಿಪ್ರಾಯಪಟ್ಟಿದ್ದಾರೆ. ಕ್ರಿ.ಪೂ. ೨೦೦೦ ವರ್ಷಗಳ ಹಿಂದೆಯೇ ಸಿಂಧ್, ಸಮರ್, ಕ್ರೀಟ್‌ಗಳೊಂದಿಗೆ ಸಂಬಂಧ ಹೊಂದಿತ್ತೆಂದು ಇಲ್ಲಿಯ ಸಂಸ್ಕೃತಿಗೆ ರೊಪ್ಪ ಸಂಸ್ಕೃತಿ ಎಂದು ಹೇಳುತ್ತಾರೆ.[೧೬] ರೊಪ್ಪ ಸಂಸ್ಕೃತಿಯೆಂದು ಹೆಸರಾದ ಈ ಪ್ರದೇಶದಲ್ಲಿ ರೊಪ್ಪ ಎಂಬ ಚಿಕ್ಕ ಗ್ರಾಮವಿದೆ. ಸಂಸ್ಕೃತಿಯ ಹೆಸರಿನಲ್ಲಿಯೇ ಸ್ಥಳ ಪ್ರಸಿದ್ಧಿ ಹೊಂದಿದೆ. ಮೊಳಕಾಲ್ಮುರು ತಾಲೂಕಿನಲ್ಲಿ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ಸ್ಥಳನಾಮವೆಂದರೆ ರೊಪ್ಪ ಗ್ರಾಮ. ಇದು ಕ್ರಿ.ಪೂ.ದಿಂದಲೂ ತನ್ನ ಸ್ಥಳನಾಮವನ್ನು ಹಾಗೆಯೇ ಉಳಿಸಿಕೊಂಡು ಬಂದಿದೆ ಎಂಬುದು ಮಹತ್ವದ ಸಂಗತಿ ಎನ್ನಬಹುದು. ರೊಪ್ಪದಲ್ಲಿನ ಪೂರ್ವಿಕರ ಸಮಾಧಿಗಳು ಇಂದಿಗೂ ಜೀವಂತ ಸಾಕ್ಷಿಯಾಗಿವೆ. ರೊಪ್ಪ ಎಂಬ ಹೆಸರು ಬರಲು ಕಾರಣ ಮ್ಯಾಸನಾಯಕರ ಮೂಲ ವೃತ್ತಿ ಪಶುಪಾಲನೆ. ಪಶುಗಳನ್ನು ಕೂಡಿ ಹಾಕುವ ಸ್ಥಳವನ್ನು ರೊಪ್ಪ, ಹಟ್ಟಿ ಎಂದು ಕರೆಯುವುದು ವಾಡಿಕೆ. ಇದರಿಂದಾಗಿ ಈ ಹಟ್ಟಿಗೆ ರೊಪ್ಪ ಎಂಬ ಹೆಸರು ಬಂದಿದೆ. ಈ ಗ್ರಾಮ ಬ್ರಹ್ಮಗಿರಿಯ ಪೂರ್ವದಿಕ್ಕಿನಲ್ಲಿ ನೆಲಗೊಂಡಿದೆ. ಬ್ರಹ್ಮಗಿರಿ ಅಡಿಯಲ್ಲಿದೆ. ಭೂ ಶೋಧನೆ, ಉತ್ಖನನ, ನಡೆದು ಪ್ರಾಚೀನ ಸಂಸ್ಕೃತಿಯನ್ನು ಪತ್ತೆ ಹಚ್ಚಲಾಗಿದೆ. ಅಕ್ಷರ ಗುಂಡು ಮತ್ತು ಎಮ್ಮೆ ತಮ್ಮನ ಗುಂಡುಗಳು ಕ್ರಿ.ಶ.೧೧೭೯ರ ಶಾಸನ ಮೊದಲಾದವು ಇಲ್ಲಿ ಕಂಡುಬರುತ್ತವೆ.

### ಬೋರೆದೇವರಹಟ್ಟಿ

ಚಳ್ಳಕೆರೆ ಪಟ್ಟಣದಿಂದ ನಾಯಕನಹಟ್ಟಿಗೆ ಹೋಗುವ ದಾರಿಯಲ್ಲಿಯೇ ಖುದಾಪುರ ಎಂಬ ಗ್ರಾಮ ಸಿಗುತ್ತದೆ. ಈ ಗ್ರಾಮದಲ್ಲಿ ಬೋರೆದೇವರ ಗುಡಿಯಿದೆ. ಈ ದೈವ ನೆಲೆಸಿದ ಧರ್ಮ ಮತ, ಜಾತಿ ದೇವತೆಗಳ ಹೆಸರನ್ನು ಸೂಚಿಸುವ ಧಾರ್ಮಿಕ ನಂಬಿಕೆಗಳ ಹಿನ್ನೆಲೆಯಲ್ಲಿ ಈ ಹಟ್ಟಿಗೆ ಬೋರೆದೇವರಹಟ್ಟಿ ಅಥವಾ ಖುದಾಪುರ ಎಂದು ಕರೆಯುತ್ತಾರೆ.

### ಕಂಪಳದೇವರಹಟ್ಟಿ

ಮೊಳಕಾಲ್ಮುರು ತಾಲೂಕಿನಿಂದ ಪಶ್ಚಿಮಾಭಿಮುಖವಾಗಿ ೧೫ ಕಿ.ಮೀ. ದೂರದಲ್ಲಿ

ಕಂಪಳದೇವರಹಟ್ಟಿ ಸಿಗುತ್ತದೆ. ಕಂಪಳ ಎಂದರೆ ಗುಂಪು, ಮ್ಯಾಸ ಗಂಪಳ, ಮ್ಯಾಸ ಕಂಪಳ, ಮ್ಯಾಸ ಮಂಡಲ, ಸಮೂಹ ದೇವರ ಗಂಪಳ ೧೨ ಪೆಟ್ಟಿಗೆ ದೇವರುಗಳ ಸಮೂಹ ಹಾಗೂ ಮ್ಯಾಸನಾಯಕ ಪ್ರಧಾನ ಕಟ್ಟೆಮನೆ ಇಲ್ಲಿಯೇ ಇರುವುದರಿಂದ ಬೇಡಗಂಪಳ, ಬೇಡಕಂಪಳ, ಚಿಕ್ಕುಂತಿ ಇತ್ಯಾದಿಯಾಗಿ ಕರೆಯಿಸಿಕೊಂಡು ಜಾತ್ರೆಯ ಸಮಯದಲ್ಲಿ ೧೨ ಪೆಟ್ಟಿಗೆ ದೇವರು ಸಮೀಕರಿಸುವುದರಿಂದಾಗಿ ಈ ಹಟ್ಟಿಗೆ ಕಂಪಳದೇವರಹಟ್ಟಿ ಎಂಬ ಹೆಸರು ಬಂದಿದೆ ಎನ್ನಬಹುದು.

**ಕಪ್ಪಡಬಂಡೆಹಟ್ಟಿ**

ಕೋನಸಾಗರ ಮತ್ತು ನೇರ್ಲಹಳ್ಳಿ ಮಧ್ಯದಲ್ಲಿ ಬರುವ ಕಪ್ಪಡಬಂಡೆಹಟ್ಟಿಯಲ್ಲಿ ಯರಮಂಚಯ್ಯನ ಮಗ ಪೆದ್ದಯ್ಯನು ಚಿರತೆಯೊಂದಿಗೆ ಹೋರಾಡಿ ಮಡಿದ ನೆಲೆ. ಕರಿನಾರು ಬೆಡಗಿನವರು ತಮ್ಮ ಹಿರಿಯರ ಸ್ಮರಣಾರ್ಥ ವೀರಗಲ್ಲು ನೆಟ್ಟು ವರ್ಷಕ್ಕೊಮ್ಮೆ ಪೂಜಿಸಿ ಹಬ್ಬ ಮಾಡುತ್ತಾರೆ. ಈ ಪರಿಸರದಲ್ಲಿ ಬೃಹತ್ ಬಂಡೆ ಇರುವುದರಿಂದ ಕಪ್ಪಡ ಎಂದರೆ ಅಲ್ಲಿ ಹೆಚ್ಚಾಗಿ ಕರಿನಾರು ಬೆಡಗಿನವರು ಇರುವುದರಿಂದ, ಬುಡಕಟ್ಟಿನ ವಸ್ತ್ರ ಧರಿಸುವುದರಿಂದ ಈ ಹಟ್ಟಿಗೆ ಕಪ್ಪಡಬಂಡೆಹಟ್ಟಿ ಎಂದು ಕರೆಯುತ್ತಾರೆ.

ಕಾಮಯ್ಯನಹಟ್ಟಿ ಮೊಳಕಾಲ್ಮೂರು ತಾಲ್ಲೂಕು ಮುತ್ತಿಗಾರಹಳ್ಳಿ ಬಳಿ ಇರುವ ಹಟ್ಟಿ ಕಾಮಯ್ಯ–ವ್ಯಕ್ತಿವಾಚಕ, ಹಟ್ಟಿ–ಕೊಟ್ಟಿಗೆ, ವಾಸಸ್ಥಳ, ಚಿಕ್ಕಹಳ್ಳಿ, ಕಾಮಯ್ಯ+ನ+ಹಟ್ಟಿ= ಕಾಮಯ್ಯನಹಟ್ಟಿ. ಇಲ್ಲಿ ಪಡ್ಲರ ಬೆಡಗಿನ ಮನೆ ದೇವರು ಇದೆ.

**ಬನ್ನೀಹಟ್ಟಿ**

ಬನ್ನಿ=ಸಣ್ಣ–ಸಣ್ಣ ಎಲೆಗಳು ಹಾಗೂ ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ, ಶಮೀವೃಕ್ಷ

ಬನ್ನಿ+ಯ+ಹಟ್ಟಿ= ಬನ್ನಿಯಹಟ್ಟಿ>ಬನ್ನಿಹಟ್ಟಿ>ಬನ್ನಿಹಟ್ಟಿ

ಬನ್ನಿಯ ವೃಕ್ಷವಿರುವ ನೆಲೆ ಎಂಬರ್ಥದಲ್ಲಿ ಈ ಸ್ಥಳನಾಮ

**ಬೆಳವಿನಮರದಹಟ್ಟಿ**

ಮೊಳಕಾಲ್ಮೂರು ತಾಲ್ಲೂಕು ನೇರ್ಲಹಳ್ಳಿ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಹಟ್ಟಿ. ಈ ಪರಿಸರದಲ್ಲಿ ಸಾಕಷ್ಟು ಬ್ಯಾಲದ ಮರಗಳು ಇದ್ದವಂತೆ. ಬೆಳ್ಳೆಹಣ್ಣು ಬ್ಯಾಲದ ಹಣ್ಣು ಹೆಚ್ಚಾಗಿ ತಿನ್ನುತ್ತಿದ್ದರಿಂದ ಹಾಗೂ ಮರಗಳಿಂದ ಈ ಹಟ್ಟಿಗೆ ಬೆಳವಿನಮರದಹಟ್ಟಿ ಎಂದು ಕರೆದಿದ್ದಾರೆ. ತೆಲುಗಿನಲ್ಲಿ ಹೆನಗುಮನ್‌ದಡ್ಡಿ ಎಂದು ಕರೆಯುತ್ತಾರೆ. ಹೆನಗು ಎಂದರೆ ಆನೆ ಎಂದರ್ಥ. ಈ ಮರದ ಹಣ್ಣು ಗಾತ್ರವಿರುವುದರಿಂದ ಈ ರೀತಿ ಕರೆದಿರಬಹುದು.

## ಪೆತ್ತಮಾರಹಟ್ಟಿ

ಚಳ್ಳಕೆರೆ ತಾಲ್ಲೂಕು ನನ್ನಿವಾಳ ಪರಿಸರದಲ್ಲಿ ಬರುವ ಈ ಹಟ್ಟಿ ಪ್ರದೇಶ ವಿಫಲವಾದ ಅತ್ತಿಮರಗಳಿರುವುದರಿಂದ ಹಾಗೂ ತೆಲುಗಿನಲ್ಲಿ ಅತ್ತಿ>ಪೆತ್ತಿ ಆಗಿ ಪೆತ್ತಮಾರಹಟ್ಟಿ ಎಂದು ಕರೆಯುತ್ತಾರೆ.

## ಕೊಮ್ಮನಹಟ್ಟಿ

ಮೊಳಕಾಲ್ಮೂರು ತಾಲ್ಲೂಕು ಹಾನಗಲ್ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಗ್ರಾಮ. ಕೊಮ್ಮ ಎಂದರೆ ಕೊಬ್ಬು ಅಹಂಕಾರವನ್ನು ಸೂಚಿಸುತ್ತದೆ. ಪಟ್ಟಿ ಎಂಬ ಶಬ್ದ ತೋಟವನ್ನು ಸಂಕೇತಿಸುತ್ತದೆ. ತೋಟದಲ್ಲಿ ಕರ್ಲುಪಟ್ಟಿ, ಮೇಗಳಪಟ್ಟಿ, ಕೆಳಗಳಪಟ್ಟಿ, ರಗಟಿಪಟ್ಟಿ ಎಂದು ವಿಭಾಗಿಸಿ ಹೇಳುವ ರೀತಿಯಲ್ಲಿ ಬಳಸುತ್ತಾರೆ.

## ಬುಡ್ನಹಟ್ಟಿ

ಚಳ್ಳಕೆರೆ ತಾಲೂಕಿನ ದಕ್ಷಿಣಾಭಿಮುಖವಾಗಿ ಮೂರು ಕಿ.ಮೀ.ದೂರದಲ್ಲಿರುವ ಹಟ್ಟಿ. ಬುಡ=ವ್ಯಕ್ತಿವಾಚಕ ಬುಡ ಮರದ ಕಾಂಡದ ಅಡಿಭಾಗ. ಬೊಡ್ಡೆ, ಅಡಿಭಾಗ, ತಳಭಾಗ, ಮೂಲ, ವಂಶ, ಮನೆತನ, ಹತ್ತಿರ, ಸಮೀಪ ಎಂಬ ಅರ್ಥಗಳನ್ನು ತಿಳಿಸುತ್ತದೆ. ಉರ್ದುವಿನಲ್ಲಿ ಬುಡ್ಡ ಎಂದರೆ ಅಜ್ಜ ಎನ್ನುವ ಅರ್ಥ ಕೊಡುತ್ತದೆ. ಬುಡ+ನ+ಹಟ್ಟಿ= ಬುಡ್ನಹಟ್ಟಿ. ಹಿರಿಯರ ನೆಲೆ ಎಂಬರ್ಥದಲ್ಲಿ ಬಳಕೆಯಾಗಿದೆ.

## ರಾಯಾಪುರ ಮ್ಯಾಸರಹಟ್ಟಿ

ಪದಿನಾನ್ ದೇವರಹಟ್ಟಿ, ಪದ್ನಾರ್ ದೇವರಹಟ್ಟಿ ಎಂದು ವಿವಿಧ ಹೆಸರುಗಳಿಂದ ಕರೆಯಿಸಿಕೊಂಡಿದೆ. ಇಲ್ಲಿನ ಬುಡಕಟ್ಟಿನ ದೇವರ ಓಬಳೇಶ್ವರ ಈ ದೇವರನ್ನು ಪದಿಯಾಳದೇವರು ಹಾಗೂ ಗುಡ್ಡಿದೇವರು ಎಂದು ಕರೆಯುತ್ತಾರೆ. ಈಗಲೂ ದೇವಾಲಯ ಆಧುನೀಕರಣಗೊಂಡರೂ ಪದಿಯಾಗಳ ದೇವರನ್ನು ಸಂಕೇತಿಸುವಂತೆ ದೇವಾಲಯದ ಪಕ್ಕದಲ್ಲಿ ಲಕ್ಕಿಸೊಪ್ಪು ಇರುವುದನ್ನು ಕಾಣಬಹುದು. ಅಂದರೆ ಪದಿಯಿಂದ ಹುಟ್ಟಿದ ದೇವರ ಎನ್ನುವ ಗ್ರಹಿಕೆ. ಪ್ರಾಚೀನ ೧೨ ಕಟ್ಟೆಮನೆಗಳಲ್ಲಿ ಇದು ಒಂದು. ಹಿಂದೆ ಶ್ರೀಶೈಲದಿಂದ ಗೋವುಗಳೊಂದಿಗೆ ೧೨ ಪೆಟ್ಟಿಗೆ ದೇವರುಗಳ ಸಮೇತ ಬಂದರೆಂದು ಹೇಳಲಾಗುತ್ತದೆ. ಅಜಡ್ಲು, ಬೋಡೆಪಾಡ್ಲು, ಕೊಂಡನರು, ರಾಬುಲು ಮುಂತಾದ ಬೆಡಗಿನವರು ವಾಸಿಸುತ್ತಿದ್ದು, ಬರೀ ಮ್ಯಾಸರಷ್ಟೇ ನೆಲೆಗೊಂಡಿರುವುದನ್ನು ಕಾಣಬಹುದು. ಈ ದೇವರ ಪೂಜಾರಿ ಬರಿಮೈಯಲ್ಲಿರುವ ತಲೆಗೆ ರುಮಾಲು ಸೊಂಟದ ಕೆಳಗೆ ಚಲ್ಲಣ, ಹೆಗಲಲ್ಲಿ ಕರಿಕಂಬಳಿಯನ್ನು ಹೊಂದಿರುವನು.

**ಡೊಣಮಂಡ್ಲರಹಟ್ಟಿ**

ನಾಯಕನಹಟ್ಟಿ ಹೋಬಳಿ ಪರಿಸರದಲ್ಲಿ ಬರುವ ಈ ಪುಟ್ಟ ಹಟ್ಟಿ ಹೊಸಗುಡ್ಡದ ಬದಿಯಲ್ಲಿದೆ. ಹೊಸಗುಡ್ಡದಲ್ಲಿರುವ ದೋಣಿ ದೈವ ಸ್ವರೂಪಿ ನೆಲೆ ಇದರಿಂದ ೧೦೦ ಅಡಿಪವಿತ್ರವಾದುದು. ಈ ದೋಣಿ ನೀರನ್ನು ದೇವರ ಕಾರ್ಯಗಳಿಗೆ ಮಾತ್ರ ಬಳಸುತ್ತಾರೆ. ನುಂಕೆಮಲೆ ಬೇಡರಾದ ಕಾಟಯ್ಯ, ಬೋಸಯ್ಯ ಬೇಟೆಗೆಂದು ಬಂದಾಗ ದೋಣಿಯಲ್ಲಿ ನೀರು ಕುಡಿದು ಅಲ್ಲಿಂದ ತೆರಳಿದರು. ದೋಣಿಗೆ ತಪ್ಪು ಮಾಡಿದರೆ ಕಾಸು ಮೀಸಲು ಕಟ್ಟಿಕೊಳ್ಳುತ್ತಾರೆ. ಇದರಿಂದ ಡೋಣ ಹಾಗೂ ಮಂಡಲ ಎನ್ನುವುದು ಸೀಮಿತ ಪ್ರದೇಶವನ್ನು ಸೂಚಿಸುತ್ತದೆ. ಆದ್ದರಿಂದ ಡೋಣಮಂಡ್ಲರಹಟ್ಟಿ ಎಂದು ಕರೆಯುತ್ತಾರೆ. ಈ ಹಟ್ಟಿಯಲ್ಲಿ ಮಂದಬೊಮ್ಮಲಿಂಗಶ್ವರ, ದುರುಗಮ್ಮ, ದಡ್ಲುಮಾರಮ್ಮ, ಚೌಡಮ್ಮ ದೇವಾಲಯಗಳಿವೆ.

**ಹೊಸಹಟ್ಟಿ**

ಕ್ಷೇತ್ರವ್ಯಾಪ್ತಿಯಲ್ಲಿ ಹುರುಳಿಹಾಳ್ ಹೊಸಹಟ್ಟಿ, ತಳವಾರಹಟ್ಟಿ, ಹೊಸಹಟ್ಟಿ ಹಾಗೂ ಮುದ್ದಾಪುರ ಹೊಸಹಟ್ಟಿ ಎಂಬ ಹಟ್ಟಿಗಳು ಬರುತ್ತವೆ. ಹೊಸತು, ಹಳೆಯ, ಹಿರಿದು, ಕಿರಿದು ಎಂಬುವು ಸಾಪೇಕ್ಷ ಗುಣವುಳ್ಳ ಶಬ್ದಗಳು. ಹೊಸತು+ಹಟ್ಟಿ>ಹೊಸತುಹಟ್ಟಿ>ಹೊಸಹಟ್ಟಿ ಹೊಸದಾದ ನೆಲೆ ಎಂಬರ್ಥದಲ್ಲಿ ಈ ಸ್ಥಳನಾಮ ಬಳಕೆಯಾಗಿದೆ.

**ಕಾತ್ರಿಕೇನಹಟ್ಟಿ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಪೂಜಾರಹಳ್ಳಿ ಗ್ರಾಮಪಂಚಾಯಿತಿಗೆ ಸೇರಿದ ಹಟ್ಟಿ. ಹಟ್ಟಿಗೆ ಈ ಹೆಸರು ಬರಲು ಕಾರಣ ಕಾತ್ರಿಕೇಯ ಮುನಿ ಕುಮಾರಸ್ವಾಮಿ ಬೆಟ್ಟದಿಂದ ಕಣ್ಣಕುಪ್ಪೆಗೆ ಹೋಗುವಾಗ ಇಲ್ಲಿ ನೆಲೆನಿಂತು ಮುಂದೆ ಸಾಗಿರಬೇಕು ಅಥವಾ ಅನುಯಾಯಿಗಳು ನೆಲಸಿರಬಹುದು. ಹಟ್ಟಿಯಲ್ಲಿ ಈಶ್ವರ ದೇವಾಲಯ ಇರುವುದರಿಂದ ಭವಿಷ್ಯ ಕಾತ್ರಿಕೇಯ ಮುನಿ ಇಲ್ಲಿ ವಾಸವಾಗಿರಬಹುದು. ಈ ಹಟ್ಟಿಯಲ್ಲಿ ಗಾದರಿಪಾಲಕ, ರಾಜಲುದೇವರು, ಬೋರೆದೇವರು, ಕರಿಯಮ್ಮ, ಆಂಜನೇಯ, ದುರುಗಮ್ಮ ದೇವಾಲಯಗಳಿವೆ. ದುರುಗಮ್ಮ ದೇವರಿಗೆ ಇಲ್ಲಿ ವಿಶೇಷ ಜಾತ್ರೆ ನಡೆಯುತ್ತದೆ. ಗಂಗಾಪೂಜೆ, ಪಾನಕಬಂಡಿ, ಅಗ್ನಿಕುಂಡ ಪ್ರವೇಶ, ಗಾವು ಸಿಗಿಯುವುದು ಮತ್ತು ಸಿಡಿ ಆಡುವುದು ಇಲ್ಲಿನ ಪ್ರಮುಖ ಕಾರ್ಯಕ್ರಮಗಳಾಗಿವೆ.

**ಬೊಚ್ಚುಬೋರಯ್ಯನಹಟ್ಟಿ**

ಚಿತ್ರದುರ್ಗ ತಾಲ್ಲೂಕಿನಲ್ಲಿ ಬರುವ ಹಟ್ಟಿ. ಬೊಚ್ಚು ಎಂದರೆ ತೆಲುಗಿನಲ್ಲಿ ಹಲ್ಲು ಇಲ್ಲದವನು ಹಾಗೂ ಹಕ್ಕಿಗಳ ಗೂಡನ್ನು ಸಹ ಬೊಚ್ಚು ಎಂದು ಕರೆಯುತ್ತಾರೆ. ಬೋರಯ್ಯ ಎನ್ನುವ ವ್ಯಕ್ತಿ ಈ ಹಟ್ಟಿಗೆ ಅಸ್ತಿಭಾರ ಹಾಕಿರುವ ಕಾರಣ ಈ ಹಟ್ಟಿಗೆ ಬೊಚ್ಚುಬೋರಯ್ಯನಹಟ್ಟಿ ಎಂದು ಕರೆದಿರುವುದು.

**ಬಸಪ್ಪನಹಟ್ಟಿ**

ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕು ಕಲ್ಲೇದೇವಾಪುರ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಹಟ್ಟಿ. ಬಸವ=ವ್ಯಕ್ತಿವಾಚಕ, ಎತ್ತು, ವೃಷಭ, ಎತ್ತನ್ನು ಬಸವನಾಗಿ ಬಿಡುವ ಸಂಪ್ರದಾಯ ಮ್ಯಾಸ ಪರಂಪರೆಯಲ್ಲಿದೆ. ದೇವರ ಹೆಸರಿನಲ್ಲಿ ಬಿಡುವ ಈ ಗೂಳಿಯನ್ನು ಯಾರ ಹೊಲ ಮೆಯ್ದಿದರೂ ಹೊಡಯುವಂತಿಲ್ಲ. ಮನೆಗಳಿಗೆ ಬಂದಾಗ ಪೂಜೆ ಸಲ್ಲಿಸಿ ದವಸಧಾನ್ಯ ತಿನ್ನಿಸುತ್ತಾರೆ. ಮದುವೆ, ಮಳೆ, ಮಕ್ಕಳಫಲ ಇನ್ನಿತರ ವಿಷಯಗಳಿಗೆ ಸಂಬಂಧಿಸಿದಂತೆ ಬಸವಣ್ಣನನ್ನು ಕೇಳುತ್ತಾರೆ. ಪಕ್ಕದ ಊರಿನಲ್ಲಿ ಕಲ್ಲೇಶ್ವರ ದೇವಾಲಯದಲ್ಲಿ ಬೃಹತ್ ನಂದಿವಿಗ್ರಹವಿದೆ. ಇದರಿಂದ ಬಸಪ್ಪನಹಟ್ಟಿ ಎಂದು ಕರೆಯುತ್ತಾರೆ.

**ಮಲ್ಲೇಬೋರಯ್ಯನಹಟ್ಟಿ**

ಚಳ್ಳಕೆರೆ ತಾಲ್ಲೂಕು ಅಬ್ಬೇನಹಳ್ಳಿ ಗ್ರಾಮ ಪಂಚಾಯಿತಿಯಲ್ಲಿರುವ ಹಟ್ಟಿ. ಮಲ್ಲೇ ಎಂದರೆ ಮಲ್ಲಿಗೆ ಹೂವು ಎಂಬ ಅರ್ಥ. ಮಲೆ, ಬೆಟ್ಟ, ಪರ್ವತವನ್ನು ಸಂಕೇತಿಸುತ್ತದೆ. ಈ ಹಟ್ಟಿಯ ಸುತ್ತಲೂ ವಿಶಾಲವಾದ ಕಾಡು ಕಂಡುಬರುತ್ತದೆ. ಬೋರಯ್ಯ ಎನ್ನುವ ವ್ಯಕ್ತಿ ಆಸ್ತಿಭಾರ ಹಾಕಿರುವ ಕಾರಣ ಮಲ್ಲೇಬೋರಯ್ಯನಹಟ್ಟಿ ಎಂದು ಕರೆದಿರಬಹುದು.

**ನಲಗೇತನಹಟ್ಟಿ**

ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ತಾಲೂಕಿನ ಮ್ಯಾಸ ನಾಯಕರ ಒಂದು ಹಟ್ಟಿ. ಈಚೆಗೆ ಒಂದು ನೂರಿನ್ನೂರು ವರ್ಷಗಳ ಹಿಂದೆಯಷ್ಟೆ ಕಟ್ಟಿದ ಹಟ್ಟಿಯಿದು. ಮ್ಯಾಸ ನಾಯಕರೇ ಹೆಚ್ಚು ಇರುವ ಬೇರೆ ಜಾತಿಯವರಿದ್ದರೂ ಸಂಖ್ಯೆ ತೀರಾ ಕಡಿಮೆ. ವಿಶೇಷ ಅಂದರೆ ಈ ಹಟ್ಟಿಯನ್ನು ವಾಸಿಸುವ ಮ್ಯಾಸ ನಾಯಕ ಕುಟುಂಬಗಳಲ್ಲಿ ಯಾವುದೇ ಬೇರೆಯಲ್ಲ. ಎಲ್ಲವೂ ರಕ್ತ ಸಂಬಂಧವೆ. ಇಂಥದ್ದೇ ಭಾವನಾತ್ಮಕ ಸಂಬಂಧ ಇತರೆ ಜಾತಿಯವರಿಗೂ ಇದೆ ಎನ್ನುವುದು ಅಚ್ಚರಿ ಮೂಡಿಸುವ ಸಂಗತಿ. ಒಟ್ಟಾರೆ ನಲಗೇತನಹಟ್ಟಿ ಸುಮಾರು ಆರುನೂರರಿಂದ ಏಳನೂರು ಮನೆಗಳಿರುವ ಹಟ್ಟಿಯಾಗಿದ್ದು ಇಲ್ಲಿ ಸುಮಾರು ಐವತ್ತು ಪಿಂಜಾರ, ನೂರು ಮಾದಿಗ ಸಮುದಾಯಗಳ ಮನೆಗಳಿದ್ದು ಉಳಿದವೆಲ್ಲವೂ ಮ್ಯಾಸ ನಾಯಕರವೆ.

ಮ್ಯಾಸ ನಾಯಕರ ಮುಖ್ಯ ಬೆಡಗುಗಳಲ್ಲಿ ಒಂದಾದ ನಲಗೇತಲು ಗುಂಪಿನವರು ಈ ಹಟ್ಟಿಯ ಸ್ಥಾಪಕರು ಎಂಬುದು ನಂಬಿಕೆ. ಅದಕ್ಕಾಗಿಯೆ ಇದನ್ನು ನಲಗೇತಲಹಟ್ಟಿ ಎಂದು ಕರೆದಿರುವುದು. ಹಾಗಂತ ಇತರೆ ಬೆಡಗಿನವರು ಇದರ ಸ್ಥಾಪನೆ ಹಾಗೂ ಕ್ಷೇಯೋಭಿವೃದ್ಧಿಗೆ ಕಾರಣರಾಗಿಲ್ಲ, ಶ್ರಮಿಸಿಲ್ಲ ಎಂದು ಭಾವಿಸಿದರೆ ತಪ್ಪಾಗುತ್ತದೆ. ಸಮುದಾಯದೊಳಗೆ ಹಲವು ಕಾರಣಗಳಿಂದ ಪ್ರಮುಖರೆನಿಸಿರುವ ನಲಗೇತಲು ಯಜಮಾನರಾಗಿ ರೂಪಿತಗೊಂಡಿದ್ದಾರೆ. ಇದು ಸಹಜವೆಂಬಂತೆ ಇವರ ಹೆಸರು ಒಂದು ಹಟ್ಟಿಯ ಹೆಸರಾಗಿದೆ.

ಈ ಹಟ್ಟಿಯ ಮ್ಯಾಸ ನಾಯಕ ಸಮುದಾಯಗಳಿಗೆ ನೂರೈವತ್ತು ವರ್ಷಗಳ ಹಿಂದೆ ಅಷ್ಟೆ ಅಲೆಮಾರಿ ಸಮುದಾಯವಾಗಿತ್ತು. ಇದಕ್ಕೆ ಈಗಲೂ ಅನೇಕ ಆಧಾರಗಳನ್ನು ಕೊಡಬಹುದಾಗಿದೆ. ಇಲ್ಲಿನ ಹಿರಿಯ ತಲೆಮಾರಿನ ಜನರು ಈ ಬಗ್ಗೆ ಹಸಿಯಾದ ಅನುಭವಗಳನ್ನು ಹೇಳುತ್ತಾರೆ. ಅಷ್ಟೆ ಅಲ್ಲ ಪ್ರಸ್ತುತ ಹಟ್ಟಿಯ ಕೆಲವು ಮೈಲುಗಳ ಅಂತರದಲ್ಲಿ ಇವರು ಇವರ ಗುಡಿಸಲು ಕಟ್ಟಿ ವಾಸಮಾಡಿದ್ದ ಅಡಿಪಾಯಗಳು ಎರಡು ಮೂರುಕಡೆ ಇನ್ನೂ ಸಾಕ್ಷಿಭೂತವಾಗಿ ನಿಂತಿವೆ. ತಮಗೆ ಎಲ್ಲೆಲ್ಲಿ ಅನುಕೂಲಕರ ಪರಸ್ಥಿತಿ ಕಂಡುಬರುತ್ತದೆ ಅಲ್ಲೆಲ್ಲ ಹಟ್ಟಿ ಕಟ್ಟಿಕೊಂಡು ಜೀವಿಸಿದ ಅನೇಕ ಸಂದರ್ಭಗಳು ಇವೆ. ಅಂಥಲ್ಲಿ ಇವರ ಮನೆಗಳ ಸ್ವರೂಪ ವಿಶಿಷ್ಟವಾಗಿರುವುದು ತಿಳಿಯಬೇಕಾದ ಸಂಗತಿ. ಕಲ್ಲು ಮಣ್ಣಿನಿಂದ ಗೋಡೆಕಟ್ಟಿ ಕಾಡುಹುಲ್ಲಿನಿಂದ ಮೇಲೊದಿಕೆ ಹಾಕುವುದು(ಇದಕ್ಕೂ ಹಿಂದೆ ಬರೀ ಕಟ್ಟಿಗೆ ಮತ್ತು ಹುಲ್ಲಿನಿಂದ ಸುತ್ತು ಗುಡಿಸಲು ನಿರ್ಮಿಸಿ ಅದನ್ನೇ ಎಲ್ಲಿಗೆಬೇಕೋ ಅಲ್ಲಿಗೆ ಕೊಂಡೊಯ್ಯುತ್ತಿದ್ದರಂತೆ). ಅನೇಕ ಸಲ ತಮ್ಮ ತಾಣಗಳನ್ನು ಬದಲಾಯಿಸುತ್ತಿದ್ದ ಇವರಿಗೆ ಇಂಥ ಮನೆ ನಿರ್ಮಾಣ ಪದ್ದತಿ ತಂಬಾ ಅನುಕೂಲಕರವಾಗಿತ್ತು. ಈಗಲೂ ಸಹ ಈ ಮಾದರಿಯ ಮನೆಗಳನ್ನು ಹಟ್ಟಿಗಳಲ್ಲಿ ನೋಡಬಹುದು. ವಿಶೇಷವೆಂದರೆ ಪಶುಪಾಲನೆಯನ್ನೇ ಪ್ರಧಾನವಾಗಿರಿಸಿಕೊಂಡಿದ್ದ ಈ ಸಮುದಾಯ ಕೆಲವು ಉಪ್ಪು ತಯಾರಿಸುತ್ತದ್ದರು ಎಂಬುದಕ್ಕೂ ಕೂಡ ನಿದರ್ಶನಗಳು ಸಿಗುತ್ತವೆ. ಹಟ್ಟಿ ಪಕ್ಕದ ಹಳ್ಳದ ದಂಡೆಯಮೇಲೆ ಉಪ್ಪು ತಯಾರಿಸುತ್ತಿದ್ದ ಮಡಿಗಳ ಕುರುಹುಗಳು ನಮಗೆ ನೋಡಸಿಗುತ್ತವೆ.

**ಕೋಟೆಹಟ್ಟಿ**

ಗ್ರಾಮಸ್ಥರ ಹೇಳಿಕೆಯಂತೆ ಈ ಹಟ್ಟಿಯ ಸುತ್ತಲೂ ರಕ್ಷಣೆಗಾಗಿ ಕೋಟೆ ಇದ್ದುದರಿಂದ ಈ ಹಟ್ಟಿಗೆ ಕೋಟೆ ಹಟ್ಟಿ ಎಂದು ಕರೆಯುತ್ತಾರೆ. ಇಂದು ಕೋಟೆ ನಾಶವಾಗಿ ಬಾಗಿಲು, ಕೋಟೆಗೋಡೆ ಇನ್ನಿತರೆ ಕುರುಹುಗಳು ಕಾಣಸಿಗುತ್ತವೆ.

**ಮೂಗಜ್ಜನಹಟ್ಟಿ**

ಮ್ಯಾಸ ಸಮುದಾಯದ ಸಾಂಸ್ಕೃತಿಕ ವೀರ ಮೂಗ ನಾಯಕನಿಂದ ಈ ಹಟ್ಟಿಗೆ ಈ ಹೆಸರು ಬಂದಿದೆ. ಬಹುಶ: ಮೂಗಜ್ಜ ಈ ಹಟ್ಟಿಗೆ ಹುಗ್ಗಿ ಹೊಯ್ದಿದ್ದರಿಂದಾಗಿ ಆತನ ಹೆಸರಿನಲ್ಲಿ ಉಳಿದಿರಬಹುದು.

ಭೂ ಸ್ಥಿತಿಯನ್ನ ಸ್ಥಳ ಸೂಚಕವಾಗಿ ವಿವರಿಸುವ ಕೆಳಗಳಹಟ್ಟಿ, ಮೇಗಳಹಟ್ಟಿ, ಮೇಗಳ ಕರ್ನಾರಹಟ್ಟಿ, ನಡವಲ ಕರ್ನಾರಹಟ್ಟಿ, ಏಣಿಮೇಗಳ ಹಟ್ಟಿ, ಮುಂತಾದ ದಿಕ್ಸೂಚಿ ಸ್ಥಳ ನಾಮಗಳನ್ನು ಕಾಣಬಹುದು.

**ಕಿಲಾರಿಗಳ ಗೂಡು**

ಚಿತ್ರದುರ್ಗ ಪರಿಸರದ ಮ್ಯಾಸನಾಯಕರು ಪಶುಪಾಲನೆಯನ್ನು ಒಂದು ಧಾರ್ಮಿಕ ವೃತ್ತಿಯನ್ನಾಗಿ ಕೈಗೊಂಡವರು. ದೇವರ ಹೆಸರಿನಲ್ಲಿ ಬಿಟ್ಟ ಹಸು, ಎತ್ತುಗಳನ್ನು ಕಾಡಿನಲ್ಲಿ ಪ್ರತ್ಯೇಕವಾಗಿ ಮೇಯಿಸಿ ಅಲ್ಲೇ ಅವುಗಳ ಸಂರಕ್ಷಣೆ ಮಾಡುತ್ತಾರೆ. ಈ ರೀತಿ ದೇವರೆತ್ತುಗಳನ್ನು ಮೇಯಿಸುವ ಪವಿತ್ರ ಕಾಯಕರನ್ನು ಕಿಲಾರಿಗಳೆಂದು ಕರೆಯುತ್ತಾರೆ. ಇವರಿಗೂ ದನಗಳ ಜೊತೆ ಕಾಡಿನಲ್ಲೇ ವಾಸ. ಆ ದನಗಳು ರಾತ್ರಿ ವೇಳೆ ತಂಗಲು ಬೇಕಾದಷ್ಟು ಸ್ಥಳವನ್ನು ಸಗಣಿ ಯಿಂದ ಸಾರಿಸಿ ಕಣದಂತೆ ಮಾಡಿರುತ್ತಾರೆ. ಅದರ ಸುತ್ತಲೂ ಮುಳ್ಳು ಬೇಲಿ ಹಾಕಿರುತ್ತಾರೆ. ಇದಕ್ಕೆ ಗೂಡು ಎಂದು ಹೆಸರು. ಇದಕ್ಕೆ ಮೇಲ್ಚಾವಣಿ ಇರುವುದಿಲ್ಲ. ಕಿಲಾರಿಗಳಿಗೂ ಇಲ್ಲಿಯೇ ವಾಸ. ಇವರು ತಮ್ಮ ಊಟಕ್ಕಾಗಿ ಭಕ್ತಾದಿಗಳಿಂದ ಸಂಗ್ರಹಿಸಿದ ಧವಸ ಧಾನ್ಯವನ್ನು ದಾಸ್ತಾನು ಮಾಡಲು ಅಡಿಗೆ ಮಾಡಲು ಹಾಗೂ ಹಾಲು ಮಜ್ಜಿಗೆ ಶೇಖರಿಸಿದ ಮಡಿಕೆ ಇಡಲು ಆ ಗೂಡಿನಲ್ಲೇ ಒಂದೆಡೆ ಒಂದು ಸಣ್ಣ ಗುಡಿಸಲು ಮಾಡಿಕೊಂಡಿರುತ್ತಾರೆ. ಆ ಗುಡಿಸಲು ತುಂಬಾ ಚಿಕ್ಕದು. ಎಷ್ಟೆಂದರೆ ಅದರಲ್ಲಿ ಒಬ್ಬ ಮಾತ್ರ ನುಸುಳಿ ಹೋಗಿ ಒಳಗೆ ಕೂತುಕೊಳ್ಳಬಹುದೇ ಹೊರತು ಇಬ್ಬರು ಮೂವರು ಏಕಕಾಲಕ್ಕೆ ಒಳಸೇರುವುದಕ್ಕೆ ಅಥವಾ ಮಲಗುವುದಕ್ಕೆ ಆಗುವುದಿಲ್ಲ. ಹೀಗಾಗಿ ಕಿಲಾರಿಗಳು ಹೊರಗೆ ಬಯಲಲ್ಲೇ ಮಲಗಬೇಕು. ಚಳಿಯಾದರೆ ಬೆಂಕಿ ಕಾಯಿಸುವುದು, ಮಳೆಯಾದರೆ ಬಂದರಿಕೆ ಸೊಪ್ಪಿನ ಕಂತೆಯ ಮೇಲೆ ಮಲಗಿ ದಪ್ಪನಾದ ಕರಿಕಂಬಳಿ ಹೊದ್ದುಕೊಳ್ಳುವುದು. ಕಡ್ಡಿಸೊಪ್ಪಿನ ಹಾಸಿನ ಕೆಳಗೆ ನೀರು ಹರಿದು ಹೋಗುತ್ತದೆ. ಮೇಲೆ ಬಿದ್ದ ಮಳೆ ಕಂಬಳಿಯನ್ನು ನೆನೆಸಲಾಗದೆ ಪಕ್ಕಕ್ಕೆ ಜಾರಿ ಹೋಗುತ್ತದೆ.[೧೭]

**ದೊಡ್ಡಿ**

ಅನ್ಯರ ಬೆಳೆ ಮೇಯುವ ದನಗಳನ್ನು ಕೂಡಿ ಹಾಕುವ ಸ್ಥಳ ದೊಡ್ಡಿ. ಇದು ಸಾಮಾನ್ಯವಾಗಿ ಊರ ಹೊರಗೆ ಇರುತ್ತದೆ. ಸುಮಾರು ಏಳೆಂಟು ಅಡಿಗಳಷ್ಟು ಎತ್ತರದ ಬೇಲಿ ಅಥವಾ ಗೋಡೆ ಇದ್ದು ಒಂದು ಪಾರ್ಶ್ವದಲ್ಲಿ ಬಾಗಿಲು ಇರುತ್ತದೆ. ಇದರ ಮೇಲ್ವಿಚಾರಣೆಗಾಗಿ ದನಗಾಹಿಯೊಬ್ಬ ನೇಮಕವಾಗಿರುತ್ತಾನೆ. ತನ್ನ ಹೊಲದಲ್ಲಿ ಮೇಯುತ್ತಿರುವ ಯಾರದೋ ದನವನ್ನು ಹೊಲದ ಮಾಲೀಕನು ಅಟ್ಟಿಕೊಂಡು ಬಂದು ದೊಡ್ಡಿಗೆ ಬಿಡುತ್ತಾನೆ. ದನದ ಮಾಲೀಕರು ಎಲ್ಲ ಕಡೆ ಹುಡುಕಿ ಕೊನೆಗೆ ದೊಡ್ಡಿಯಲ್ಲಿರಬಹುದೆಂದು ಬರುತ್ತಾರೆ. ತನ್ನ ದನವನ್ನು ಬಿಡಿಸಿಕೊಂಡು ಹೋಗಬೇಕಾದರೆ ಅತ ಇಂತಿಷ್ಟು ಹಣವನ್ನು ದಂಡವಾಗಿ ಪಾವತಿ ಮಾಡಬೇಕಾಗುತ್ತದೆ. ಬೆಳೆ ನಾಶವಾಗಿರುವ ಪ್ರಮಾಣವನ್ನು ಪರಿಶೀಲಿಸಿ ದಂಡದ ಮೊತ್ತವನ್ನು ನಿಗದಿಪಡಿಸಲಾಗುತ್ತದೆ. ಈ ಇಡೀ ವ್ಯವಸ್ಥೆಯ ಹೊಣೆ ಊರ ಪಟೇಲನದೋ ಶಾನು ಭೋಗನದೋ ಅಥವಾ ಪಂಚಾಯ್ತಿಯದೋ ಆಗಿರುತ್ತಿತ್ತು. ದನದ ಮಾಲೀಕನು ಬಂದು ಬಿಡಿಸಿಕೊಂಡು ಹೋಗುವುದು

ತಡವಾದರೆ, ಬಹುಶಃ ದನಕ್ಕೆ ಹುಲ್ಲು ನೀರು ಒದಗಿಸಿದ ವೆಚ್ಚಕ್ಕಾಗಿ ದಿನವೊಂದಕ್ಕೆ ಇಂತಿಷ್ಟೆಂದು ಹೆಚ್ಚುವರಿ ದಂಡವನ್ನು ಸಹ ತೆರಬೇಕಾಗುತ್ತಿತ್ತು. ಹಟ್ಟಿ, ಕೇರಿ, ತೊಂಡಿದೊಡ್ಡಿ, ತೊಂಡಿಮನೆ, ತೊಂಡವಾಡಿ, ಕೊಂಡವಾಡೆ ಇತ್ಯಾದಿ ಹೆಸರುಗಳಿಂದಲೂ ಇದನ್ನು ಸಂಬೋಧಿಸಲಾಗುತ್ತದೆ. ಇದು ಊರ ಹೊರಗೆ ಸಾರ್ವಜನಿಕ ಸ್ಥಳದಲ್ಲಿ ನಿರ್ಮಾಣ ವಾಗಿರುವುದರಿಂದ ಇದರ ಸುತ್ತಮುತ್ತಲ ಅಲೆಮಾರಿ ಜನ ಗುಡಿಸಲುಗಳನ್ನು ಕಟ್ಟಿಕೊಂಡು ವಾಸ ಮಾಡತೊಡಗಿದಾಗ ಅಲ್ಲಿ ಪ್ರತ್ಯೇಕ ಊರೊಂದು ರೂಪುಗೊಳ್ಳುತ್ತಾ ಬಂದುದರಿಂದ ದೊಡ್ಡಿಯನ್ನು ಒಳಗೊಂಡಂತೆ ಆ ಗುಡಿಸಲುಗಳ ಸಮೂಹವು ದೊಡ್ಡಿ ಎಂಬ ಹೆಸರನ್ನು ಪಡೆಯುತ್ತಿತ್ತು. ಅಂಥ ದೊಡ್ಡಿಗಳು ಆ ಸಮೂಹದ ಮುಖ್ಯಸ್ಥನ ಹೆಸರಿನಿಂದ ಗುರುತಿಸಲ್ಪಡುತ್ತ ಬಂದುದರಿಂದ ಈಗಲೂ ಅಂಥ ಅನೇಕ ಹಟ್ಟಿಗಳು ಕಂಡುಬರುತ್ತವೆ. ಉದಾಹರಣೆಗೆ ಓದ್ನೋಬಯ್ಯನದಡ್ಡಿ, ಕುಂಟೋಬಯ್ಯನದಡ್ಡಿ ಇತ್ಯಾದಿ. ಇತ್ತೀಚೆಗೆ ಆಡಳಿತ ವ್ಯವಸ್ಥೆಯ ಬದಲಾವಣೆಯಿಂದಾಗಿಯೋ ನಾಗರಿಕತೆಯ ಪ್ರಭಾವದಿಂದಾಗಿಯೋ ದೊಡ್ಡಿಗಳ ಅಸ್ತಿತ್ವ ಕಣ್ಮರೆಯಾಗುತ್ತಿದೆ. ಮೊದಲಿಗೆ ಊರೆಂದು ಊರಿಗೊಂದು ಇಂಥ ದೊಡ್ಡಿ ಇರುತ್ತಿತ್ತು.

ದೊಡ್ಡಿ ಎಂಬ ಪದವನ್ನು ಗ್ರಾಮೀಣ ಪ್ರದೇಶದಲ್ಲಿ ಮಲವಿಸರ್ಜನೆಗೆ ಹೋಗುವಾಗ ಬಳಸುವುದುಂಟು. ಆಫ್ರಿಕಾ ಖಂಡದಲ್ಲಿ ವಿವಿಧ ಬಗೆಯ ಜನರು, ಭಾಷೆಗಳು ಮತ್ತು ಸಂಸ್ಕೃತಿಗಳು ಕಾಣಸಿಗುತ್ತವೆ. ಹೊಮಿನಿಡೆಯ ಅಂದರೆ ಮಾನವ ಕಾಲದ ತೊಟ್ಟಿಲು ಆಫ್ರಿಕಾ ಎಂಬುದು ಈಗ ಎಲ್ಲೆಡೆ ಮಾನ್ಯವಾಗಿದೆ. ಅಂಗ ರಚನಾಶಾಸ್ತ್ರದ ಪ್ರಕಾರ ಆಧುನಿಕ ಮಾನವರು ಆಫ್ರಿಕಾದಲ್ಲಿ ಜನಿಸಿದರು ಎಂದು ನಂಬಲಾಗಿದೆ. ಉತ್ತರ ಆಫ್ರಿಕಾವು ಈಗ ದಕ್ಷಿಣದಲ್ಲಿ ಐರೋಪ್ಯ ಭೌಗೋಳಿಕ ಜನಾಂಗಗಳಿಂದ ಸಮೃದ್ಧವಾಗಿದೆ. ಅವರಲ್ಲಿ ಬಹಳಷ್ಟು ಮಂದಿ ಸಹರಾ ಕೆಳಗಿನ ಜನರು. ಈ ಭೌಗೋಳಿಕ ಜನಾಂಗಗಳನ್ನು ಅವರ ದೈಹಿಕ ಲಕ್ಷಣಗಳ ಆಧಾರದ ಮೇಲೆ ಸ್ಥೂಲವಾಗಿ ವಿಂಗಡಿಸಬಹುದು. ಆದರೆ ಅವರ ನಡುವಿನ ನಿಜವಾದ ವ್ಯತ್ಯಾಸಗಳು ಬಹುಪಾಲು ಜೀವರಸಾಯನಶಾಸ್ತ್ರದ್ದು(ಉದಾಹರಣೆಗೆ ರಕ್ತ ಗುಂಪುಗಳ ಭಿನ್ನತೆ).

ಉತ್ತರದ ತೀರದುದ್ದಕ್ಕೂ ಮತ್ತು ಈಶಾನ್ಯ ಭಾಗದಲ್ಲಿ ಅಟ್ಲಾಸ್ ಗಿರಿಶ್ರೇಣಿಗಳ ಬರ್ಬರದಿಂದ ಹಿಡಿದು ಇಥಿಯೋಪಿಯಾದ ಅಮಹರ್‌ಗಳವರೆಗೆ ಕಾಕಸಾಯಿಡ್ ಜನಾಂಗಗಳನ್ನು ಕಾಣುತ್ತೇವೆ. ಇವರು ಚರ್ಮದ ಬಣ್ಣದಲ್ಲಿ ವೈವಿಧ್ಯವನ್ನು ಹೊಂದಿದ್ದರೂ, ಮೆಟ್ಟಲು ಕೂದಲು ಹಾಗೂ ನೀಗ್ರೋ ಸ್ವರೂಪದ್ದಲ್ಲದ ಮುಖ ಲಕ್ಷಣಗಳನ್ನು ಹೊಂದಿರುತ್ತಾರೆ. ಇನ್ನೊಂದು ತುತ್ತ ತುದಿಯನ್ನು ನೋಡಿದರೆ, ಮೊದಲು ಎಲ್ಲೆಡೆ ಹರಡಿಕೊಂಡಿದ್ದು ಈಗ ನೈರುತ್ಯ ಮರುಭೂಮಿ ಪ್ರದೇಶಕ್ಕೆ ಸೀಮಿತರಾದ ಬುಷ್ ಮನ್ ಹಾಗೂ ಹೊಡೆನ್ ಟಾಡ್‌ಗಳನ್ನು ಕಾಣುತ್ತೇವೆ. ಇವರು ಕುಳ್ಳಗಿದ್ದು ಹಳದಿ ಕಂದು ಮೈಬಣ್ಣ ಹಾಗೂ ವಿಶಿಷ್ಟ ಬಗೆಯ ಕೂದಲು ಹೊಂದಿರುತ್ತಾರೆ. ಈ ಎರಡೂ ತೀರ ವಿಭಿನ್ನ ಬುಡಕಟ್ಟುಗಳ ನಡುವೆ ಅಲ್ಲಲ್ಲಿ ವಿರಳವಾಗಿ ಹರಡಿಕೊಂಡಂತೆ

ವರ್ಷಾರಣ್ಯಗಳಲ್ಲಿ ತುಂಬ ಜನವಿರುವ ಪ್ರದೇಶಗಳಲ್ಲಿ ಬೇರೆಯದೇ ಆದ ಪಿಗ್ಮಿ ಬುಡಕಟ್ಟಿನ ಜನರಿದ್ದಾರೆ. ಸಹರಾ ಕೆಳಗಿನ ಆಫ್ರಿಕಾದಲ್ಲಿ ಮಿಕ್ಕೆಲ್ಲರಿಗಿಂತ ಪ್ರಮುಖವಾಗಿ ನೀಗ್ರೋ ಬುಡಕಟ್ಟಿನ ಜನರಿದ್ದಾರೆ. ಮೈಬಣ್ಣ ಹಾಗೂ ಎತ್ತರದಲ್ಲಿ ಅವರು ಗಣನೀಯ ಪ್ರಮಾಣದಲ್ಲಿ ಭಿನ್ನತೆಯನ್ನು ತೋರುತ್ತಾರೆ. ಒಟ್ಟಾರೆ ಪೂರ್ವ ಆಫ್ರಿಕಾ ಮತ್ತು ನೈಲ್ ನದಿ ಮೇಲಿನ ಪ್ರದೇಶದಲ್ಲಿ ಎತ್ತರವಾದ ನಸುಗಪ್ಪು ಬಣ್ಣದ ಜನಾಂಗ ಕಾಣುತ್ತಾರೆ. ಈ ಖಂಡಕ್ಕೆ ಹೋಲಿಕೆಯಲ್ಲಿ ಇತ್ತೀಚೆಗೆ ವಲಸೆ ಬಂದ ಜನಾಂಗವಾಗಿ ಮಡಗಾಸ್ಕರ್‌ನಲ್ಲಿ ಮಂಗೋಲಿಯನ್ ಬುಡಕಟ್ಟಿನ ಜನ ಕಾಣುತ್ತಾರೆ.

## ನೆಲಸು ವಿನ್ಯಾಸ

ಸಹರಾದ ಉತ್ತರಕ್ಕಿರುವ ಆಫ್ರಿಕಾದಲ್ಲಿ ಆಫ್ರೋ ಏಷಿಯನ್ ಗುಂಪಿನ ಭಾಷೆಗಳನ್ನಾಡುವ ಜನರು ಪ್ರಮುಖವಾಗಿ ನೆಲೆಸಿದ್ದಾರೆ. ಮೊರಾಕ್ಕೊ, ಆಲ್ಜೀರಿಯಾ ಮತ್ತು ಟುನಿಷಿಯಾದ ಬುಡಕಟ್ಟುಗಳು ಇವರಲ್ಲಿ ಪ್ರಮುಖರು. ಇವರಲ್ಲಿ ಅನೇಕರು ನಸುಗಪ್ಪು ಮೈಬಣ್ಣ, ಕಪ್ಪು ತಲೆಗೂದಲು, ತೆಳು ನೀಳನಾಸಿಕ ಮತ್ತು ಮೇಲೆತ್ತಿಕೊಂಡಿರುವ ತುಟಿಗಳನ್ನು ಹೊಂದಿರುತ್ತಾರೆ. ಅನೇಕ ಪ್ರದೇಶಗಳಲ್ಲಿ ಸಾಂಸ್ಕೃತಿಕ ಸಂಪರ್ಕದ ಕಾರಣದಿಂದ ಮತ್ತು ಅಂತರ ವಿವಾಹಗಳಿಂದ ಬುಡಕಟ್ಟುಗಳು, ಅರೇಬಿಯಾದಿಂದ ಉತ್ತರ ಆಫ್ರಿಕಾಕ್ಕೆ ಅನೇಕ ತಂಡಗಳಲ್ಲಿ ವಲಸೆ ಬಂದ ಸೆಮೆಟಿಕ್ ಭಾಷೆ ಮಾತನಾಡುವ ಅರಬ್ಬರೊಂದಿಗೆ ಬಹುಪಾಲು ಕಲೆತು ಹೋಗಿದ್ದಾರೆ. ಪರಿಣಾಮವಾಗಿ ಮಘಾರಿಬ್ ಸಂಸ್ಕೃತಿ ಹುಟ್ಟಿತು. ಸಹರಾದಲ್ಲಿ ಕುವಾ ಎಂಬಂಥ ಅರಬ್ ಜನರು ತಾವುರೆಗ್‌ನಂಥ ಬರ್ಬರರ ಜೊತೆ ಜೊತೆಯಲ್ಲೇ ವಾಸಿಸುತ್ತಿದ್ದಾರೆ. ಪಶ್ಚಿಮ ಆಫ್ರಿಕಾದಲ್ಲಿ ಪಶ್ಚಿಮ ಮತ್ತು ಮಧ್ಯೆ ಸೂಡಾನ್ ಎಂದು ಕರೆಯಲ್ಪಡುವ ಮರುಭೂಮಿಯಿಂದ ದಕ್ಷಿಣದ ಭಾಗದಲ್ಲಿ ಗೋವಳ ಪುಲಾನಿಗಳಿರುವುದು ಕಪ್ಪು ಜನಾಂಗದೊಂದಿಗೆ ನಸುಗಪ್ಪು ಬಣ್ಣದ ಜನರು ಸಮ್ಮಿಲನಗೊಂಡಿರುವುದಕ್ಕೆ ಸಾಕ್ಷಿ. ಪೂರ್ವ ಆಫ್ರಿಕಾದ ತೀರದಲ್ಲಿ ಬಂಟು ಮಾತನಾಡುವ ಜನರು ಅರಬ್ ನೆಲಸಿಗರೊಂದಿಗೆ ಸಂಪರ್ಕ ಬೆಳೆಸಿದರು. ಅಂತರ ವಿವಾಹದ ಕಾರಣದಿಂದಾಗಿ ಒಂದು ವಿಶಿಷ್ಟ ಸ್ವಾಹಿಲಿ ಸಂಸ್ಕೃತಿ ಬೆಳೆಯಿತು. ಇಥಿಯೋಪಿಯಾ ಮತ್ತು ಸೋಮಾಲಿಯಾದಲ್ಲಿ ಕುಶಡಿಕ್ ಕವಲಿನ ಮತ್ತು ಹೆಮೆಡಿಕ್ ಭಾಷೆ ಮಾತನಾಡುವ ಜನರು ವಾಸಿಸುತ್ತಿದ್ದರು. ಕ್ರಿ.ಪೂ. ೭ನೇ ಮತ್ತು ೮ನೇ ಶತಮಾನಗಳಲ್ಲಿ ಸೆಮೆಟಿಕ್ ಭಾಷೆಗಳನ್ನು ಮಾತನಾಡುವ ಜನರು ತಂಡ ತಂಡಗಳಲ್ಲಿ ವಲಸೆ ಬಂದ ಕಾರಣ ಪೂರ್ವದ ಅಕ್ಸುಮೈಟ್ ಸಂಸ್ಕೃತಿ ಒಡಮೂಡಿತು. ಇನ್ನು ಈ ಖಂಡದ ಉಳಿದ ಭಾಗಗಳಲ್ಲಿ ಪ್ರಧಾನವಾಗಿ ಕಪ್ಪು ಬುಡಕಟ್ಟಿನ ಕಂದುವರ್ಣದಿಂದ ಕಡುಗಂದು ವರ್ಣದ ಮತ್ತು ಮುಖ್ಯವಾಗಿ ಗುಂಗುರುಗೂದಲು, ದಪ್ಪ ಮೂಗು ಹಾಗೂ ದಪ್ಪ ಮೇಲೆತ್ತಿದ ತುಟಿಗಳುಳ್ಳ ಜನರು ವಾಸಿಸುತ್ತಾರೆ. ಅವರಲ್ಲಿ ನಾಲ್ಕು ಮುಖ್ಯ ಪಂಗಡಗಳನ್ನು ಗುರುತಿಸಬಹುದು. ಸಹರಾ ಮರುಭೂಮಿಯ ದಕ್ಷಿಣಕ್ಕೆ ಈ ಖಂಡದ ಉದ್ದಕ್ಕೂ ಹರಡಿಕೊಂಡ

ಪ್ರದೇಶದ ಸುಡಾನಿಕ್ ಜನರು ಪಶ್ಚಿಮ ಆಫ್ರಿಕಾದ ಅರಣ್ಯಗಳ ಗಿರಿತೀರದ ಜನರು, ಪೂರ್ವ ಆಫ್ರಿಕಾದ ನೈಲಾಡಿಕ್ ಜನರು ಮತ್ತು ಮಧ್ಯೆ ಹಾಗೂ ದಕ್ಷಿಣ ಆಫ್ರಿಕಾದ ಬಂಟು ಜನರು. ಮಾಲಿಂಕೆ, ಹೌಸಶಾಂಗ್ಯೆ ಮತ್ತು ಬೋರ್ನುನಂಥ ಅನೇಕ ಸುಡಾವಿಕ್ ಜನರು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡಿರುತ್ತಾರೆ. ಕ್ರೈಸ್ತಮತಕ್ಕೆ ಪರಿವರ್ತನೆ ಸಹರಾ ಕೆಳಗಿನ ಆಫ್ರಿಕಾದ ಕರಾವಳಿ ಪ್ರದೇಶಗಳಲ್ಲಿ ಗಣನೀಯವಾಗಿ ಕಂಡುಬರುತ್ತಾರೆ. ಭಾರತೀಯ ಮೂಲದ ಸಣ್ಣಪುಟ್ಟ ಜನಾಂಗಗಳು, ಖೋಯಿಖೋಯಿನ್, ಐರೋಪ್ಯ ಮತ್ತು ಏಷ್ಯಾದ ಬುಡಕಟ್ಟುಗಳ ಸಮ್ಮಿಶ್ರವಾದ ಕೇಪ್ ಕಲರ್ಡ್ ಎಂದು ಕರೆಯಲಾಗುವ ಜನರಿದ್ದಾರೆ. ಮಣ್ಣಿನ ಇಟ್ಟಿಗೆಯಿಂದ ಕಮಾನು ಛಾವಣಿ ಹಾಗೂ ಕಮಾನು ಗೋಡೆಗಳುಳ್ಳ ಮನೆ ಕಟ್ಟುವುದು. ಇವರ ಎರಡು ಬಹುಮುಖ್ಯ ಪ್ರಾಣಿಗಳೆಂದರೆ ಹಸು ಮತ್ತು ಕುದುರೆ. ಇವು ಕೆಲವು ಪ್ರದೇಶಗಳಲ್ಲಿ ಕಳ್ಳ ದನಕರು ಇದ್ದವು. ಉತ್ತರ ನೈಜೀರಿಯಾದಲ್ಲಿ ನೈಜರ್ ಮತ್ತು ಕಮರೋನ್ ಹಾಗೂ ಪ್ರಧಾನವಾಗಿ ಮುಸ್ಲಿಮರಲ್ಲದ ಅನೇಕ ಸಣ್ಣ ಬುಡಕಟ್ಟುಗಳು ಈ ಪ್ರದೇಶದುದ್ದಕ್ಕೂ ಫುಲಾಗಿನಿ ಗುಂಪುಗಳನ್ನು ನೋಡುತ್ತೇವೆ. ಪ್ರಮುಖವಾಗಿ ಇವರು ದನಗಾಹಿ ಮುಸ್ಲಿಂ ಜನರು ಇವರು ದೇಶೀಯ ಜನರನ್ನು(ಹೌಸ್) ಗೆದ್ದು ನೆಲೆಸಿರುವಂತಿದೆ.

ಪೂರ್ವ ಆಫ್ರಿಕಾದಲ್ಲಿ ದನಕರು ಮೇಕೆ, ಕುರಿ, ಕೋಳಿ, ಕತ್ತೆ, ನಾಯಿಗಳು ಕಾಣಬರುತ್ತವೆ. ಸುಡಾನ್, ಸೋಮಾಲಿಯಾ ಮತ್ತು ಕೀನ್ಯಾ ಹಾಗೂ ಟಾಂಜೇನಿಯಾಗಳ ಮಧ್ಯೆ ಮೈದಾನ ಭಾಗಗಳಲ್ಲಿ ಗೋವಳ ಸಮುದಾಯವೂ ಕಾಣಬರುತ್ತದೆ. ಬೇಟೆಗಾರ ಬಕೈಕ್ ಅಥವಾ ಡೋರೋಟೋ, ಹಾಡ್ಜ ಮತ್ತು ಕೆಲವು ಪಿಗ್ಮಿಗಳು ಕಂಡುಬರುತ್ತಾರೆ. ಕಡಲತೀರದಲ್ಲಿ ಒಂದು ಕಾಲದಲ್ಲಿ ಜಾಂಜಿಯಾರ್ ಅನ್ನು ನೆಲೆಯಾಗಿ ಹೊಂದಿದ್ದ ಹಾಗೂ ರಾಜಕೀಯವಾಗಿ ಬಲಿಷ್ಠರಾಗಿದ್ದ ಅರಬ್ಬರಿದ್ದಾರೆ. ಮಧ್ಯೆ ಮತ್ತು ದಕ್ಷಿಣ ಆಫ್ರಿಕಾದಲ್ಲಿ ಸಾನ್(ಬುಷ್‌ಮನ್) ಮತ್ತು ಖೋಯಿ ಖೋಯಿನ್(ಹಾಡೆನ್ ಟಾಟ್‌ಗಳು) ವಾಸಿಸುತ್ತಿದ್ದರು. ಇಬ್ಬರೂ ಬೋಯಿಷನ್ ಮಾತನಾಡುವ ಜನರು. ಬುಷ್‌ಮನ್‌ಗಳು ಬೇಟೆಗಾರರು ಮತ್ತು ಖೋಯಿಖೋಯಿನ್‌ಗಳು ಗೋವಳರು.[೧೮]

**ಕೊಟ್ಟಿಗೆ**

ದನಗಳಿಗಾಗಿ ಬಳಸಲಾಗುವ ಮನೆಯ ಭಾಗ, ಹಿಂದೆಲ್ಲ ಮನೆಯ ಒಳಗೆ ಒಂದು ಪಾರ್ಶ್ವದಲ್ಲಿ ದನಗಳನ್ನು ಕಟ್ಟುವುದು ರೂಢಿಯಲ್ಲಿತ್ತು. ಮನೆಯ ಹೊರಭಾಗದಲ್ಲಿ ಇಳಿಜಾರದ ಸೂರನ್ನು ನಿರ್ಮಿಸಿ ಕೊಟ್ಟಿಗೆಯನ್ನು ರೂಪಿಸಿಕೊಳ್ಳಲಾಗುತ್ತದೆ. ಹಕ್ಕೆ, ದನದ ಹಟ್ಟಿ ಎಂದೂ ಇದಕ್ಕೆ ಕರೆಯಲಾಗುತ್ತದೆ.

ಒಂದು ಹಸು ನಿಂತಾಗ ಅದರ ಹಿಂಭಾಗದಲ್ಲಿ ಜನ ನಡೆದಾಡಲು ಸಾಧ್ಯವಾಗುವಷ್ಟು ಮತ್ತು ಮುಂಭಾಗದಲ್ಲಿ ಮೇವು ಹಾಕಲು ಸಾಧ್ಯವಾಗುವಷ್ಟು ಸ್ಥಳಾವಕಾಶ ಇರುತ್ತದೆ. ಇದು

ಕೊಟ್ಟಿಗೆಯ ಉದ್ದ, ಅಂಥ ಎಷ್ಟು ದನಗಳನ್ನು ಕಟ್ಟಿ ಹಾಕಬೇಕಾಗುತ್ತದೆ ಎಂಬುದರ ಮೇಲೆ ಅದರ ಅಗಲ ನಿರ್ಧಾರವಾಗುತ್ತದೆ. ಕೊಟ್ಟಿಗೆ ಸಾಮಾನ್ಯವಾಗಿ ದನಗಳ ಗಂಜಲ ಹರಿದು ಹೋಗುವಷ್ಟು, ಹಿಂಭಾಗಕ್ಕೆ ಇಳಿಜಾರಾಗಿರುತ್ತದೆ. ದನಗಳ ಮುಂಭಾಗದಲ್ಲಿ ಮೇವು ಹಾಕಲು ಸ್ಥಳಾವಕಾಶವಿರುತ್ತದೆ. ಅದನ್ನು ಗೊಂಡು, ಗ್ವಾದಲಿ, ಚರಣಿಗಾತ್ರದ, ಗುಂಡಿ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ದನಗಳು ಮಲಗುವಾಗ ಅವಕ್ಕೆ ತೊಪ್ಪೆ ಗಂಜಲಗಳಿಂದ ರಕ್ಷಣೆ ಒದಗಿಸುವ ಸಲುವಾಗಿ ನೆಲ್ಲುಹುಲ್ಲನ್ನು ಹಾಸಲಾಗುತ್ತದೆ ಅಥವಾ ಬೆರಣಿಯ ಪುಡಿಯನ್ನು ಹರಡಲಾಗುತ್ತದೆ. ಮೃದುವಾದ ಮಣ್ಣನ್ನು ಹರಡುವುದೂ ಇದೆ. ಈ ಮಣ್ಣನ್ನು ಆಗಾಗ ತೊಪ್ಪೆ ಗಂಜಲಗಳ ಸಹಿತ ಗೋರಿ ತಿಪ್ಪೆಗೆ ಹಾಕಿ ಹೊಸ ಮಣ್ಣನ್ನು ಹರಡುವ ವಿಧಾನವೂ ಇದೆ. ಅಲ್ಲದೆ ಬಳ್ಳಿಗಳಿಂದ ಕೂಡಿದ ಮೃದುವಾದ ಹಸಿರು ಸೊಪ್ಪನ್ನು ದನಗಳು ಮಲಗುವ ಜಾಗಕ್ಕೆ ರಾತ್ರಿ ಹರಡುತ್ತಾರೆ. ಇದರಲ್ಲಿ ಎರಡು ಉದ್ದೇಶಗಳಿವೆ. ಒಂದು ದನಗಳು, ಮೆತ್ತನೆ ಮಲಗಲಿ ಎಂಬುದು ಒಂದಾದರೆ, ಮತ್ತೊಂದು ಕೊಟ್ಟಿಗೆಯಲ್ಲಿ ಬಿದ್ದ ಗಂಜಲ ಮತ್ತು ಸಗಣಿಯಿಂದ ಅದು ತೊಯ್ದು ಚೆನ್ನಾಗಿ ಗೊಬ್ಬರವಾಗುತ್ತದೆ ಎಂಬುದು ಇನ್ನೊಂದು. ಬೆಳಗ್ಗೆ ಅದನ್ನೆಲ್ಲ ಬಳಿದು ತಿಪ್ಪೆಗೆ ಹಾಕುತ್ತಾರೆ. ಹರಿದು ಹೋಗುವ ಗಂಜಲವು ಒಂದು ಕಡೆ ಶೇಖರವಾಗಲೆಂಬ ಉದ್ದೇಶದಿಂದ ಅಲ್ಲಲ್ಲಿ ಕುಳಿಗಳನ್ನು ಮಾಡಿರುತ್ತಾರೆ. ಅವನ್ನು ಗಂಜಲದ ಗುಂಡಿಗಳೆನ್ನುತ್ತಾರೆ. ಗಂಜಲ, ತೊಪ್ಪೆ, ಹಾಸುವ ಹುಲ್ಲು, ಹರಡುವ ಬೆರಣಿಯಪುಡಿ, ಮಣ್ಣು ಇವುಗಳನ್ನೆಲ್ಲ ಒಂದು ಕಡೆ ರಾಶಿ ಹಾಕುವುದರಿಂದ ಅಲ್ಲಿ ತಿಪ್ಪೆ ರೂಪುಗೊಳ್ಳುತ್ತದೆ. ಅವೆಲ್ಲ ಕೊಳೆತು ಸಮೃದ್ಧವಾದ ಗೊಬ್ಬರವಾಗುತ್ತದೆ. ಅದನ್ನು ಹೊಲಗದ್ದೆಗೆ ಹಾಕುವುದರಿಂದ ಬೆಳೆ ಹುಲುಸಾಗುತ್ತದೆ. ಇದನ್ನು ಸಹಜ ಗೊಬ್ಬರ, ಸಾವಯವ ಗೊಬ್ಬರ ಎಂದು ಕರೆಯುತ್ತಾರೆ. ಮನೆಯೊಳಗಿನ ಒಂದು ಭಾಗವನ್ನೇ ಕೊಟ್ಟಿಗೆಯಾಗಿ ಬಳಸುವಲ್ಲಿ ಅದು ಇನ್ನೂ ಅನೇಕ ಉದ್ದೇಶವಾಗಿ ಬಳಕೆಯಾಗುತ್ತಿದೆ. ಕೊಟ್ಟಿಗೆಯ ಭಾಗದಲ್ಲೇ ಸಾಮಾನ್ಯವಾಗಿ ಸ್ನಾನದ ಮನೆ ಇರುತ್ತದೆ. ಮಡಿ ಮೈಲಿಗೆ ಎಂಬ ಭಾವನೆ ದಟ್ಟವಾಗಿರುವ ಮಾಂಸಾಹಾರಿಗಳ ಮನೆಯಾಗಿದ್ದರೆ ಮಾಂಸಾಹಾರದ ಅಡುಗೆಯನ್ನು ಸ್ನಾನದ ಮನೆಯಲ್ಲಿ ಮಾಡುತ್ತಾರೆ. ಕೆಳವರ್ಗದ ಜನ ಮನೆಗೆ ಬಂದರೆ ಅವರಿಗೆ ಕೊಟ್ಟಿಗೆಯಿಂದ ಮುಂದಕ್ಕೆ ಪ್ರವೇಶವಿರುವುದಿಲ್ಲ. ಅವರು ಮನೆಯವರೊಂದಿಗೆ ಮಾತುಕತೆಯಾಡುವ ಹಾಗೂ ಊಟ ಮಾಡುವ ಕೆಲಸಗಳನ್ನು ಕೊಟ್ಟಿಗೆಯಲ್ಲೇ ನಿಂತು ಕುಂತು ನೆರವೇರಿಸಿಕೊಳ್ಳಬೇಕು. ಮುಟ್ಟಾದ ಹೆಣ್ಣುಮಕ್ಕಳು ಹಾಗೂ ಕ್ಷೌರ ಮಾಡಿಸಿಕೊಂಡ ಗಂಡಸರು ಕೊಟ್ಟಿಗೆಯಲ್ಲೇ ಇದ್ದು ಸ್ನಾನ ಆದ ಮೇಲೆ ಜನವಸತಿಯ ಭಾಗವಾದ ಹಜಾರದೆಡೆಗೆ ಪ್ರವೇಶ ಮಾಡಬಹುದು. ಮೈನೆರೆದ ಹೆಣ್ಣುಮಗಳು ಮೂರು ದಿನ ಕೊಟ್ಟಿಗೆಯಲ್ಲೇ ಕಳೆಯಬೇಕಾದುದು ಕಡ್ಡಾಯ ಮತ್ತು ಆಕೆಯ ಗುಡ್ಲು ಕೂಡೋ ಶಾಸ್ತ್ರ ಕೂಡ ಕೊಟ್ಟಿಗೆಯಲ್ಲೇ ನೆರವೇರಬೇಕು. ಹೆರಿಗೆಯಾದರೆ ಮಗು ಮತ್ತು ಬಾಣಂತಿ ಕಡ್ಡಾಯವಾಗಿ ಸೂತಕ ತೆಗೆಯುವವರೆಗೆ ಅಲ್ಲೇ ಇರಬೇಕು. ಶವಕ್ಕೆ

ಹೆಗಲು ಕೊಟ್ಟವರಿದ್ದರೆ ಅವರು ಕೂಡ ಮೂರರಿಂದ ಐದು ದಿನಗಳವರಗೆ ಕೊಟ್ಟಿಗೆಯಲ್ಲೇ ಕಳೆಯಬೇಕು. ಹೀಗೆ ಕೊಟ್ಟಿಗೆಯು ಒಂದು ಬಹೂಪಯೋಗಿ ಆವರಣವಾಗಿ ಬಳಕೆಯಾಗುತ್ತದೆ.

**ವಸತಿ ವ್ಯವಸ್ಥೆ**

ಮಾನವ ಮೂಲತಃ ಅಲೆಮಾರಿ. ಆದಿ ಶಿಲಾಯುಗದಿಂದ ನಾಗರಿಕ ಜೀವನದವರೆಗೆ ಒಂದಲ್ಲಾ ಒಂದು ರೀತಿ ಬೆಳವಣಿಗೆಯನ್ನು ಹೊಂದುತ್ತಾರ ಬಂದಿದ್ದಾನೆ. ಮೊದಲ ಹಂತದಲ್ಲಿ ಇಡೀ ಭೂಮಿಯೇ ಅವನ ವಾಸದ ನೆಲೆಯಾಗಿತ್ತು. ಅಂದರೆ ಅವನು ಕಾಡು, ಮರ, ಪೊದೆ, ಪೊಟರೆ, ಗುಹೆ, ಬಂಡೆಗಳನ್ನು ಆಶ್ರಯಿಸಿ ಬದುಕುತ್ತಿದ್ದನು. ಒಂದು ನಿರ್ದಿಷ್ಟ ವಾಸದ ನೆಲೆಯನ್ನು ಹೊಂದಬೇಕೆಂಬ ವಿಚಾರ ಇವರ ತಲೆಯಲ್ಲಿ ಮೂಡಿರಲಿಲ್ಲ. ಎರಡನೆಯ ಹಂತದಲ್ಲಿ ಬುದ್ಧಿ ವಿಕಾಸವಾಗುತ್ತಾ ತನ್ನ ದೇಹ ರಕ್ಷಣೆಗಾಗಿ ಹಾಗೂ ಪ್ರಕೃತಿ ವಿಕೋಪಗಳಿಂದ, ಕ್ರೂರ ಮೃಗಗಳಿಂದ ರಕ್ಷಣೆ ಪಡೆಯಲು ವಾಸದ ಪರಿಕಲ್ಪನೆಯನ್ನು ಮಾಡಿಕೊಂಡನು. ಈ ಹಂತದಲ್ಲಿಯೇ ನಿರ್ದಿಷ್ಟವಾಗಿ ಬದುಕುವ ಮತ್ತು ಒಂದು ಕಡೆ ನೆಲೆ ನಿಲ್ಲುವ ಪ್ರಯತ್ನ ಮಾಡಿದ. ಜೊತೆಗೆ ತನ್ನ ನೆಲೆಗಳಿಗೆ ಹೆಸರನ್ನು ಕೊಡುವ ಪದ್ಧತಿಯನ್ನು ರೂಢಿಸಿಕೊಂಡನು.

“ವಸತಿ ಎಂದರೆ ವ್ಯಕ್ತಿ ತನ್ನ ಮತ್ತು ತನ್ನ ಕುಟುಂಬದವರಿಗಾಗಿ ನಿರ್ಮಿಸಿಕೊಂಡ ರಕ್ಷಣಾವ್ಯವಸ್ಥೆ”[೧೯]ಎಂಬುದು ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯವಾಗಿದೆ. ಈ ವಸತಿ ವ್ಯವಸ್ಥೆಯ ರಚನೆಯು ಆರಂಭ ಹಂತದಲ್ಲಿ ನೈಸರ್ಗಿಕವಾಗಿ ದೊರೆಯುತ್ತಿದ್ದ ಸೊಪ್ಪು, ಕಟ್ಟಿಗೆ, ಹುಲ್ಲು, ಸೌದೆ ಇತ್ಯಾದಿಗಳಿಂದ ರಚಿಸಲ್ಪಟ್ಟಿತ್ತು. ತದನಂತರದಲ್ಲಿ ಕಲ್ಲು, ಮಣ್ಣು, ಕಬ್ಬಿಣ ಹೀಗೆ ಹಲವಾರು ರೀತಿಯ ಸಲಕರಣೆಗಳು ಆವಿಷ್ಕಾರದ ಬಳಕೆಯನ್ನು ಕಂಡುಕೊಂಡದ್ದು ನಾಗರಿಕತೆಯ ಹಂತ.

ಬುಡಕಟ್ಟು ಸಮುದಾಯಗಳು ತಮ್ಮದೇ ಆದ ವಿಶಿಷ್ಟತೆಯಿಂದ ಕೂಡಿರುವ ಶೈಲಿಯಲ್ಲಿ ದುಂಡಾಕಾರವಾಗಿ, ಚೌಕಾಕಾರವಾಗಿ, ಆಯತಾಕಾರವಾಗಿ ತಮ್ಮ ವಸತಿಗಳನ್ನು ನಿರ್ಮಿಸಿಕೊಂಡು ಕಾಡಿನ ಮಧ್ಯೆ ತಮ್ಮ ಜೀವನವನ್ನು ನಡೆಸುತ್ತಿದ್ದಾನೆ. ಒಂದು ನಿರ್ದಿಷ್ಟವಾದ ಸ್ಥಳದ ಅಗತ್ಯವಿಲ್ಲದೆ ಕಾಡನ್ನು ಮತ್ತು ಅಲ್ಲಿ ದೊರೆಯುವ ನಿಸರ್ಗ ಸಂಪತ್ತನ್ನು ಬಳಸಿಕೊಳ್ಳುವ ಮೂಲಕ ತಮ್ಮದೇ ಆದ ನೆಲೆಯನ್ನು ಕಂಡುಕೊಂಡಿದ್ದಾನೆ. ಆಧುನಿಕತೆಯ ಒತ್ತಡಕ್ಕೆ ಮಣಿಯದೇ ತಮ್ಮ ಮೂಲ ಶೈಲಿಯನ್ನು ಬಿಡದೆ ವಸತಿಗಳನ್ನು ನಿರ್ಮಿಸಿಕೊಂಡು ಜೀವನ ನಡೆಸುತ್ತಿದ್ದಾರೆ. ಆದಿ ಮಾನವನು ಬದುಕುತ್ತಿದ್ದ ಕಾಡಿನ ಜೀವನವನ್ನು ಇಂದು ಬದುಕುತ್ತಿರುವ ಬುಡಕಟ್ಟು ಸಮುದಾಯಗಳ ಜೀವನಕ್ರಮವನ್ನು ಕೆಲವು ಸಾಮ್ಯಗಳಿವೆ. ಹಲವು ಭಿನ್ನತೆಗಳು ಇವೆ.

ಈ ದೃಷ್ಟಿಯಿಂದ ಪ್ರಸ್ತುತ ಮ್ಯಾಸ ಸಮುದಾಯವು ಈ ರೀತಿಯ ವಸತಿ ವ್ಯವಸ್ಥೆಯನ್ನು ಆರಿಸಿಕೊಂಡಿದ್ದರೂ, ತಮ್ಮದೆ ಆದ ವಸತಿ ವಿವರವನ್ನು ಹೊಂದಿದೆ. ಮುಖ್ಯವಾಗಿ ಈ ಸಮುದಾಯ

ಬದುಕುವ ಸ್ಥಳ, ಆರಿಸಿಕೊಳ್ಳುವ ನಿರ್ದಿಷ್ಟ ವಲಯ ಕಟ್ಟಿಕೊಳ್ಳಬೇಕಾದ ಮನೆಯ ಅಥವಾ ಗುಡಿಸಲುಗಳ ರಚನೆಯ ವಿನ್ಯಾಸ, ಈ ರಚನೆಗೆ ಬಳಸಿಕೊಳ್ಳುವ ಸಾಧನ ಸಲಕರಣೆಗಳು ಗೃಹ ಪ್ರವೇಶ ಮತ್ತು ತಮ್ಮ ನೆಲೆಗೆ ಕರೆದುಕೊಳ್ಳುವ ಹೆಸರು, ಹಟ್ಟಿ, ಹಾಡಿ, ಹಳ್ಳಿ, ಗ್ರಾಮ ಈ ಎಲ್ಲಾ ಹೆಸರುಗಳಿಂದ ಭಿನ್ನವಾಗಿವೆ. ಇವು ತಮ್ಮ ಭೂಪ್ರದೇಶಕ್ಕೆ ಕೊಟ್ಟಿರುವ ಹೆಸರು ಮುಂತಾದವಾಗಿವೆ. ಇವು ಅನೇಕ ಹೊಸ ರೀತಿಯ ಚಲನೆಗಳನ್ನು ಅನಾವರಣಗೊಳಿಸುತ್ತವೆ. ಅಂಥವುಗಳನ್ನು ಇಲ್ಲಿ ಗಮನಿಸಬಹುದು.

### ಸ್ಥಳದ ಆಯ್ಕೆ

ಮ್ಯಾಸಬೇಡರು ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವುದರಿಂದ ಕಾಡುಪ್ರಾಣಿಗಳ ಹಾವಳಿಯಿಂದ ತಪ್ಪಿಸಿಕೊಳ್ಳುವ, ನೀರಿನ ಸೌಕರ್ಯವಿರುವ ಕೃಷಿಗೆ ಯೋಗ್ಯವಾದಂತಹ ಭೂಮಿಯು ದೊರೆಯುವ ಪ್ರವೇಶವನ್ನು ತಮ್ಮ ನೆಲೆಗಳಿಗಾಗಿ ಆಯ್ಕೆ ಮಾಡುವರು. ಸ್ಥಳದ ಆಯ್ಕೆಯ ನಂತರ ಸಮುದಾಯದ ಹಿರಿಯರೆಲ್ಲ ಸೇರಿ ಸ್ಥಳ ಪರಿಶೀಲಿಸಿ, ಒಂದು ಒಳ್ಳೆಯ ದಿನವನ್ನು ನೋಡಿ ಪೂಜೆಯನ್ನು ಮಾಡುತ್ತಾರೆ. ಹೆಚ್ಚಾಗಿ ಸೋಮವಾರ ದಿನದಂದು ಪ್ರಶಸ್ತ ದಿನವೆಂದು ನಂಬುತ್ತಾರೆ. ಈ ಮುಂಚೆ ಪುರೋಹಿತರನ್ನು ಕೇಳಿ ವಸತಿಯ ಜಾಗವನ್ನು ನೋಡುವರು. ಸರಳ ಪೂಜೆಯ ನಂತರ ಸ್ಥಳದ ಪರೀಕ್ಷೆಯು ನಡೆಯುತ್ತದೆ.

### ಸ್ಥಳದ ಪರೀಕ್ಷೆ

ಸಮುದಾಯದ ಹಿರಿಯರು, ಮುತ್ತೈದೆಯರು ಸೇರಿ ಹೂ, ಹಣ್ಣುಗಳೊಂದಿಗೆ ಸರಳ ಪೂಜೆಯನ್ನು ಸ್ಥಳದಲ್ಲಿ ನೆರವೇರಿಸುತ್ತಾರೆ. ಸ್ಥಳದ ನಾಲ್ಕು ಕಡೆ ಹಗ್ಗವನ್ನಿಡಿದು ಆಯ ಮಾಡಿ, ನಾಲ್ಕು ಕಡೆಯಲ್ಲಿ ನಾಲ್ಕು ಕಡ್ಡಿ ಕಂಬಗಳನ್ನು ನೆಡುವರು. ಮಾರನೆಯ ದಿನ ಬೆಳಗಿನ ಸಮಯದಲ್ಲಿ ಮನೆಯವರು ಹೊಳೆಯಲ್ಲಿ ಸೂರ್ಯ ಹುಟ್ಟುವ ಮೊದಲು ಮಿಂದು, ಅದೇ ಹೊಳೆಯಲ್ಲಿ ಹದಿನಾರು ಕಲ್ಲುಗಳನ್ನು ತೆಗೆದುಕೊಂಡು, ತೊಳೆದು ತಂದು ದೇವರ ಮನೆಯಲ್ಲಿಡುತ್ತಾನೆ. ನಂತರ ಅದೇ ದಿನ ಸಾಯಂಕಾಲ ಆ ಕಲ್ಲುಗಳನ್ನು ತೆಗೆದುಕೊಂಡು ಸ್ಥಳದಲ್ಲಿ ನೆಟ್ಟ ನಾಲ್ಕು ಕಡ್ಡಿಗಳ ಮೇಲೆ ಒಂದೊಂದು ಕಡ್ಡಿಯ ಮೇಲೆ ನಾಲ್ಕು ಕಲ್ಲುಗಳನ್ನಿಟ್ಟು ಹೋಗುತ್ತಾನೆ. ಮರುದಿನ ಬಂದು ನೋಡಲು ಆ ಕಲ್ಲುಗಳು ಬೀಳದೆ ಹಾಗೆಯೇ ಇದ್ದರೆ, ಮನೆಯನ್ನು ಕಟ್ಟಲು ಪ್ರಶಸ್ತವಾದಂತಹ ಸ್ಥಳವೆಂದು ಈ ಸಮುದಾಯವು ನಂಬುತ್ತದೆ. ಆಕಸ್ಮಿಕವಾಗಿ ಯಾವುದಾದರೂ ಕಲ್ಲುಬಿದ್ದು ಹೋಗಿದ್ದರೆ ಅದು ಮನೆ ನಿರ್ಮಿಸಲು ಉತ್ತಮ ಸ್ಥಳವಲ್ಲವೆಂದೂ ಈ ಸಮುದಾಯ ಬೇರೆ ಸ್ಥಳವನ್ನು ಆಯ್ಕೆ ಮಾಡುತ್ತದೆ. ಬೇರೆ ಸ್ಥಳದಲ್ಲಿಯೂ ಈ ಬಗೆಯ ಪರೀಕ್ಷೆಯೂ ನಡೆಯುತ್ತದೆ.

**ಪೂಜೆ**

ಸ್ಥಳ ಪರೀಕ್ಷೆಯ ನಂತರ ಪೂಜೆಯು ನಡೆಯುತ್ತದೆ. ಉತ್ತಮವೆಂದು ಕಂಡುಬಂದ ಸ್ಥಳದಲ್ಲಿ ಸೋಮವಾರ ಇಲ್ಲವೇ ಶನಿವಾರದ ಶುಭದಿನಗಳೆಂದು ಸಮುದಾಯದ ಐದು ಅಥವಾ ಒಂಬತ್ತು ಮಂದಿ ಹಿರಿಯರು ಸೇರಿ ಪೂಜೆ ಪ್ರಾರಂಭಿಸುತ್ತಾರೆ. ಐದು ಒಂಬತ್ತು ರೀತಿಯ ಧಾನ್ಯಗಳನ್ನು (ಹುರುಳಿ, ಭತ್ತ, ರಾಗಿ, ಅಲಸಂದೆ, ಎಳ್ಳು, ತೊಗರಿ, ಹೆಸರು, ದನಿಯಾ, ಹಣ) ಸೇರಿಸಿ ಅರಿಶಿನದ ಬಟ್ಟೆಯಲ್ಲಿ ಕಟ್ಟಿ ಅದನ್ನು ಮುಹೂರ್ತ ಕಂಬದ ಕೆಳಗಿನ ಕುಣಿಯಲ್ಲಿ ಹಾಕಿ ಮುಚ್ಚಿ ಅದರ ಮೇಲೆ ಮುಹೂರ್ತದ ಕಂಬವನ್ನು ನೆಡುವರು. ಈ ಮುಹೂರ್ತ ಕಂಬಕ್ಕೆ ಸಮುದಾಯದ ಐದು ಇಲ್ಲವೇ ಒಂಬತ್ತು ಮಂದಿ ಸೇರಿ ಅರಿಶಿನದ ದಾರವನ್ನು ಕಟ್ಟಿ ಮುತ್ತೈದೆಯರೊಂದಿಗೆ ಪೂಜೆ ಸಲ್ಲಿಸುತ್ತಾರೆ. ಪೂಜೆಯ ನಂತರ ಎಲ್ಲರಿಗೂ ಸಿಹಿಯನ್ನು ಹಂಚುತ್ತಾರೆ.

**ಮನೆಯ ಮಾದರಿ**

ಪೂಜೆ ನಂತರ ಸಮನಾದ ಏಳು ಕಂಬಗಳನ್ನು ಸುತ್ತಲೂ ನಿಲ್ಲಿಸಿ, ಏಕೆ ಕಂಬ ಕಾಯಕಂಬ, ಹೊಳಕಂಬ, ಕೋನುಕಂಬ, ಮುಹೂರ್ತ ಕಂಬ, ಅಡ್ಡ ಪಟ್ಟಿಯನ್ನಿಟ್ಟು ನಿಲ್ಲಿಸಿ ಮೇಲೆ ಅಚ್ಚೆ ಹಾಕುತ್ತಾರೆ. ಬಿದಿರನ್ನು ಸೀಳಿ ಮೇಲೆ ಅಚ್ಚೆಗೆ ಬಿಗಿಯುವರು. ಅದರ ಮೇಲೆ ಭತ್ತದ ಹುಲ್ಲು ಹಾಕಿ ಸೀಳಿದ ಬಿದಿರಿನೊಳಗೆ ಹೆಣೆದು ಅಂಜರ ಕಟ್ಟಿತ್ತಾರೆ. ಹುಲ್ಲುಗಾಳಿಗೆ ಹೋಗದಂತೆ ಪಟ್ಟಿಗಳನ್ನು ಹಾಕಿ ನಾರಿನಿಂದ ಬಿಗಿಯುವರು. ಈ ಪಟ್ಟಿಗೆ ಭೀಮನಪಟ್ಟಿ ಎಂದು ಕರೆಯುತ್ತಾರೆ. ಈ ಭೀಮನಪಟ್ಟಿಯು ಮಳೆಯಿಂದ ಬರುವ ಸಿಡಿಲು ಹಾಗೂ ಕೆಲವು ಪೀಡೆಗಳಿಂದ ಬರುವ ಶಕ್ತಿಯನ್ನು ತಡೆಗಟ್ಟುತ್ತದೆಂದು ನಂಬುತ್ತಾರೆ. ಸುತ್ತಲೂ ಕಟ್ಟಿದ ಅಂಜರದ ಮೇಲೆ ಮಣ್ಣನ್ನು ಕಲಿಸಿ ನೊರೆದು ಗೋಡೆಯನ್ನು ನಿರ್ಮಿಸುತ್ತಾರೆ. ಮನೆಯು ಒಂದು ಅಡುಗೆ ಮನೆ ಮತ್ತು ಪಡಸಾಲೆಯನ್ನು ಹೊಂದಿರುತ್ತದೆ. ಇದರಲ್ಲಿ ಒಂದು ಕಿಟಕಿಯನ್ನು ಬಿಡುತ್ತಾರೆ. ಅಲ್ಲದೆ ಬೆಳಕಿಗಾಗಿ ಒಂದು ತೂಬುಕಿಂಡಿ(ಬೆಳಕುಕಿಂಡಿ)ಯನ್ನು ಮಾಡಿರುತ್ತಾರೆ. ಇವರ ಮನೆಗಳ ಬಾಗಿಲು ಪೂರ್ವದಿಕ್ಕಿಗೆ ಇರುತ್ತವೆ. ಬಾಗಿಲುಗಳ ಬಿದಿರಿನಿಂದ ಹೆಣೆದು ಕೊಳ್ಳುತ್ತಾರೆ. ನೆಲವನ್ನು ಸೆಗಣಿಯಿಂದ ಸಾರಿಸುತ್ತಾರೆ. ಇತ್ತೀಚೆಗೆ ಕಲ್ಲಿನ ಮನೆಯನ್ನು ಆಧುನಿಕ ವಾಸ್ತು ಪದ್ಧತಿಗೆ ತಕ್ಕಂತೆ ನಿರ್ಮಿಸುತ್ತಿರುವುದು ಕಂಡುಬರುತ್ತದೆ.

**ಗೃಹಪ್ರವೇಶ**

ಮ್ಯಾಸ ಸಮುದಾಯದ ವಸತಿಗಳ ನಿರ್ಮಾಣ ಸರಳವಾಗಿರುವುದರಿಂದ ಒಂದೆರಡು ದಿವಸದಲ್ಲಿ ನಿರ್ಮಾಣ ಕಾರ್ಯ ಮುಗಿಯುತ್ತದೆ. ನಂತರ ಪ್ರವೇಶಕ್ಕಾಗಿ ಸಮುದಾಯದ ಹಿರಿಯರು ಸೇರಿ ಶುಭದಿನವನ್ನು ನಿರ್ಧರಿಸುತ್ತಾರೆ. ಗೃಹಪ್ರವೇಶ ಮಾಡುವುದನ್ನು "ವಕ್ಕಲು

ಹೋಗುವುದು", "ಮನೆ ಸೇರುವುದು" ಎಂದು ಕರೆಯುವರು. ಗೃಹಪ್ರವೇಶ ದಿನದಂದು ತಮ್ಮ ಬಂಧುವರ್ಗದವರು ನೆರೆಯುತ್ತಾರೆ.

ಮನೆಯಲ್ಲಿ ಸಾರಿಸಿ, ಮಾವಿನ ಎಲೆಯಿಂದ ತೋರಣ ಕಟ್ಟಿ, ಬೇವಿನ ಸೊಪ್ಪಿನಿಂದ ಅಲಂಕರಿಸುತ್ತಾರೆ. ಆರಂಭದಲ್ಲಿ ಬಾಗಿಲ ಪೂಜೆ ನಡೆಯುತ್ತದೆ. ಮುತ್ತೈದೆಯರು ಹೊಳೆಯಿಂದ ಐದು ಕೊಡ ನೀರು ತಂದು ದೇವರ ಮನೆಯಲ್ಲಿಟ್ಟು ಕುಲದೈವರ ಚಿತ್ರಪಟಕ್ಕೆ ಪೂಜೆ ಮಾಡುತ್ತಾರೆ. ನಂತರ ಒಲೆಯ ಮೇಲೆ ಹಾಲನ್ನು ಉಕ್ಕಿಸುತ್ತಾರೆ. ಪೂರ್ವದಿಕ್ಕಿಗೆ ಹಾಲು ಉಕ್ಕಿದರೆ ಶುಭವೆಂದು ಈ ಸಮುದಾಯದ ನಂಬಿಕೆ ನಂತರ ಬಂಧುವರ್ಗದವರಿಗೆ ಅವರವರ ಸಾಮರ್ಥ್ಯವಿದ್ದಂತೆ ಅಡುಗೆ ಮಾಡಿಸಿ ಊಟ ಹಾಕಿಸುತ್ತಾರೆ. ಅನ್ನ, ಪಾಯಸ ಮುಂತಾದ ಸಿಹಿ ತಿಂಡಿ ಮಾಡುವರು.

### ದನದ ಕೊಟ್ಟಿಗೆ ನಿರ್ಮಾಣ

ತಮ್ಮೊಂದಿಗೆ ವಾಸಿಸುವ ಪ್ರಾಣಿಗಳಿಗೆ ಪ್ರತ್ಯೇಕವಾದ ಕೊಟ್ಟಿಗೆಯನ್ನು ನಿರ್ಮಿಸುವರು. ನಾಲ್ಕು ಮೂಲೆಗೆ ಕಂಬಗಳನ್ನು ನಿಲ್ಲಿಸಿ, ಅದರ ಮೇಲೆ ಬಿದಿರಿನ ಅಚ್ಚೆಯನ್ನು ಕಟ್ಟಿ ಬಾದೆ ಹುಲ್ಲನ್ನು ಮೇಲೆ ಹೊರಿಸುತ್ತಾರೆ. ಪಶುಗಳು ಮಲಗಲು ಅನುಕೂಲವಾಗುವಂತೆ ಕೆಳಗೆ ಬಿದಿರಿನಿಂದ ಅಂಜರ ಹೆಣೆದು ಹಾಕಿ ಮೇಲೆ ಮಣ್ಣನ್ನು ಹಾಕಿ ಗಟ್ಟಿ ಮಾಡುತ್ತಾರೆ.

ಮ್ಯಾಸ ಸಮುದಾಯವು ಹೀಗೆ ತಮ್ಮ ವಸತಿಯ ಆಯ್ಕೆಯಿಂದ ನಿರ್ಮಾಣದವರೆಗೆ ಹಲವಾರು ಸಂಪ್ರದಾಯ, ನಂಬಿಕೆಗಳನ್ನು ಇಟ್ಟುಕೊಂಡಿದೆ. ಕಾಡಿನಲ್ಲಿ ಇಪ್ಪತ್ತರಿಂದ ಮೂವತ್ತು ಗುಡಿಸಲು ನಿರ್ಮಿಸಿಕೊಂಡು ಇವರು ಗುಂಪು ಗುಂಪಾಗಿ ಜೀವಿಸುವರು. ಇವರು ತಾವು ವಾಸಿಸುವ ಒಂದೊಂದು ಮನೆಯನ್ನು ಊರು ಎಂದೇ ಕರೆಯುತ್ತಾರೆ. ಇದರೊಂದಿಗೆ ವಾಸಿಸುವ ಅನ್ಯ ಸಮುದಾಯಗಳು ಈ ಕಾಡಿನಲ್ಲಿದ್ದಾರೆ. ಕಾಡು ಕುರುಬ ಮತ್ತು ಜೇನುಕುರುಬ, ಎರವರ, ಪಣಿಯರ ಮನೆಗಳ ಮಾದರಿ ಈ ಸಮುದಾಯದ ಮನೆಯ ಮಾದರಿಗಿಂತ ಭಿನ್ನವಾಗಿರುವುದನ್ನು ಗುರುತಿಸಬಹುದು. ಅರಣ್ಯದಲ್ಲಿ ವಾಸಿಸುವಾಗಿನಿಂದ ಇವರು ತಮ್ಮ ನೆಲೆಗಳ ನಿರ್ಮಾಣದಲ್ಲಿ ಸ್ಥಳೀಯ ಭೌಗೋಳಿಕ ಪರಿಸರದ ಪ್ರೇರಣೆಯನ್ನು ಪಡೆದುಕೊಂಡಿದ್ದಾರೆ. ಆಧುನಿಕತೆಯ ಪ್ರಭಾವದಿಂದಾಗಿ ಇಂದು ವ್ಯಾಸರ ವಸತಿಗಳ ನಿರ್ಮಾಣದಲ್ಲಿ ಕೆಲವಾರು ಬದಲಾವಣೆಗಳಾಗಿರುವುದು ಕಂಡುಬರುತ್ತದೆ.

### ಪೋಡು

ಸೋಲಿಗರು ವಾಸ ಮಾಡುವ ಹತ್ತಾರು ಮನೆಗಳ ವಾಸಸ್ಥಾನಕ್ಕೆ ಪೋಡು ಎಂದು ಹೆಸರು. ಪೋಡಿನ ಹೆಸರುಗಳೂ ವಿಶಿಷ್ಟವಾಗಿರುತ್ತದೆ. ಯರಕ ಮರಗಳಿದ್ದ ಸ್ಥಳವಾದ್ದರಿಂದ

ಯರಕನಗದ್ದೆ, ಬಂಗ್ಲೆ ಹತ್ತಿರವಾದ್ದರಿಂದ ಬಂಗ್ಲೆ ಪೋಡು, ಕಲ್ಯಾಣಿಬಳಿಯಾದ್ದರಿಂದ ಕಲ್ಯಾಣಿ ಪೋಡು ಇತ್ಯಾದಿ. ಹಿಂದೆ ಬರಿಯ ಪೋಡು ಹಾಡಿಗಳಿದ್ದವು. ಇತ್ತೀಚೆಗೆ ಅರಣ್ಯ ಇಲಾಖೆ ಅಲ್ಲಲ್ಲಿದ್ದ ಆದಿವಾಸಿಗಳನ್ನು ಸೇರಿಸಿ ಕಾಲೋನಿಗಳನ್ನು ಮಾಡಿದ್ದರಿಂದ ಕೆಲವೆಡೆ ಕಾಲೋನಿಗಳೂ ಉತ್ಪತ್ತಿಯಾಗಿವೆ. ಸಾಮಾನ್ಯವಾಗಿ ಪೋಡಿನ ಹತ್ತಿರವೇ ಅದೇ ಹೆಸರಿನಲ್ಲಿ ಕಾಲೋನಿ ಇರುತ್ತದೆ. ಕಾವ್ಯಮಯ ಹೆಸರಿನ ಕನ್ನೇರಿ ಪೋಡು(ಕನ್ಯೆಯರ ಪೋಡು) ಹತ್ತಿರ ಇರುವುದು ಕನ್ನೇರಿ ಕಾಲೋನಿ.

ಯರಕನಗದ್ದೆಯ ಬಳಿ ಕಾಲೋನಿ ಮಾಡಿದಾಗ ಸೋಲಿಗ ಜನರನ್ನು ಬಲವಂತವಾಗಿ ಹೊಸ ಮನೆಗಳಿಗೆ ಸೇರಿಸಲಾಯಿತು. ಉದ್ಘಾಟನೆ ಆದ ತಕ್ಷಣವೇ ಜನ ವಾಪಸ್ಸು ಪೋಡಿಗೆ ಹೋಗಿ ತಮ್ಮ ಗುಡಿಸಲುಗಳಲ್ಲಿ ತೂರಿಕೊಂಡರೆಂದು ಹಿರಿಯ ಸೋಲಿಗರು ನೆನೆಸುತ್ತಾರೆ.

ಕಾಡಿನ ಮಧ್ಯೆ ಪೋಡು ಅದೆಷ್ಟು ಮನೋಹರವಾಗಿ ಸದ್ದಿಲ್ಲದೆ ಇರುತ್ತದೆಂದರೆ ಹೊಸಬರು ಪೋಡನ್ನು ಗಮನಿಸದೆ ಹಾದು ಹೋಗಲಿಕ್ಕೂ ಸಾಕು. ಪೋಡು ಮಾಡಲು ಸ್ಥಳ ಆರಿಸುವ ಬಗ್ಗೆ ಹಿಂದೆಯೇ ವಿವರಿಸಲಾಗಿದೆ. ಇಲ್ಲಿ ಮುಖ್ಯಾಂಶಗಳೆಂದರೆ ವಾಸ ಇರಲು ಭದ್ರತೆ, ವ್ಯವಸಾಯ ಮಾಡಲು ಅವಕಾಶ, ನೀರಿನ ಸೆಲೆ ತುಂಬಾ ಸನಿಹದಲ್ಲಿರಬಾರದು. ಸ್ವಲ್ಪ ದೂರವಿರಬೇಕು, ಕಾಡು ಪ್ರಾಣಿಗಳನ್ನು ದೂರವಿರುವುದಕ್ಕಾಗಿ ಇಷ್ಟೆಲ್ಲ ಇರುವ ಸ್ಥಳಗಳಲ್ಲಿ ಅಳ್ಳುಶಾಸ್ತ್ರದ ಸಮಯ ಮಲಗಿದಾಗ, ಜಂಗಮಗೊಬ್ಬರ, ಆನೆ ಅಬ್ಬರ, ಒಳ್ಳೆ ಕನಸೆಂದಾದರೆ ಬೆಂಕಿ, ನೀರು ಅಪಶಕುನದ ಕನಸುಗಳೆಂದು ನಂಬುತ್ತಾರೆ.

ಇಂತ ಕಡೆ ಪೋಡು ಮಾಡುವ ಸೋಲಿಗರು ನಿಕಟ ಸಮುದಾಯ ಜೀವನ ನಡೆಸುವವರು. ಪೋಡು ತಮ್ಮದು, ತಾವು ಪೋಡಿನವರು ಎಂಬ ಭಾವನೆಯಿರುವುದು ನಾವು ಎಂದೇ ಹೇಳಿಕೊಳ್ಳುವರು. ಮುಟ್ಟು-ಮೈಲಿಗೆ ಸೂತಕಗಳಾದರೆ ಇಡೀ ಪೋಡು ಅದನ್ನು ಆಚರಿಸುವುದು, ನ್ಯಾಯ ಹಬ್ಬ ಮುಂತಾದುವೆಲ್ಲಾ ಒಟ್ಟೊಟ್ಟಿಗೆ ಆಚರಿಸುವರು.

### ಆರು ಕವ್ವೆಗಳ ಮನೆ

ಸೋಲಿಗರ ಮನೆಯೆಂದರೆ ಆರು ಕವ್ವೆಗಳನ್ನು ಉಪಯೋಗಿಸಿ ಕಟ್ಟುವ ಗುಡಿಸಲು. ನಡುವೆ ಆಳೆತ್ತರ, ಪಕ್ಕಗಳಲ್ಲಿ ಗಿಡ್ಡ, ತಡಿಕೆಗಳಿಗೆ ಮಣ್ಣು ಮೆತ್ತುವುದರ ರೀತಿಯಿಂದ ಕಟ್ಟಿದ ಮಣ್ಣಿನ ಗೋಡೆಗಳು, ಮನೆಯಲ್ಲಿ ಒಂದು ಅಡ್ಡಗೋಡೆ, ಅದೇ ಅಡುಗೆಮನೆ. ಮನೆಗೆ ಹುಲ್ಲಿನ ಚಾವಣಿ, ಒಂದು ಅಟ್ಟ, ಮನೆಯನ್ನು ಕಟ್ಟಲು ಗೆಜ್ಜಲು ತಿನ್ನದಿರುವ ಮರವನ್ನು ಉಪಯೋಗಿಸಬೇಕು. ಮಳೆ ಬಂದ ಹೊರತು ರಾತ್ರಿ ಹೊರಗೆ ಮಲಗುತ್ತಾರೆ. ಅಲ್ಲಿ ಬೆಂಕಿ ಒತ್ತುಕೊರಡಿನ ಸಹಾಯದಿಂದ ಸದಾ ಉರಿಯುತ್ತಿರುವುದು. ಇದು ಶಾಖಕ್ಕಾಗಿ ಮತ್ತು ಕಾಡು ಪ್ರಾಣಿಗಳಿಂದ ರಕ್ಷಣೆಗಾಗಿ.

ಸಾಮಾನ್ಯವಾಗಿ ಹತ್ತಿರದಲ್ಲಿಯೇ ಸಣ್ಣ ವ್ಯವಸಾಯ. ಅಲ್ಲಿ ಕಾವಲು ಗುಡಿಸಲು. ಅದನ್ನು

ಮರದ ಮೇಲೆ ಕಟ್ಟುವರು. ಆನೆ, ಹಂದಿ ಕಾವಲು ಈ ಗುಡಿಸಲಿನ ಉಪಯೋಗ. ಸಮಯ ಬಿದ್ದರೆ ನೆಂಟರೂ ಇದರಲ್ಲಿ ಇರಬಹುದು.

ಪ್ರತಿ ಮನೆಯಲ್ಲಿಯೂ ರಾಗಿ ಬೀಸುವ ಕಲ್ಲು, ಅದು ರಾಯರ ಹಾಡು ಹೇಳುತ್ತಾ ರಾಗಿ ಬೀಸುವರು. ರಾಗಿ ತುಂಬಿಡಲು ಗುಳಿ. ಅಂದರೆ ಕಣಜ, ನೆಲದಲ್ಲಿ ತೋಡಿ, ಸಗಣಿ ಸಾರಿಸಿ, ಇಲಿ ಮುಂತಾದವು ಹೋಗದಂತೆ ಭದ್ರ ಮಾಡಿರುವರು. ರಾಗಿಯನ್ನು ಕದಿಯುವುದು ದೊಡ್ಡ ತಪ್ಪೆಂದು ವ್ಯವಹರಿಸುವರು.

ಬುಟ್ಟಿ, ಮಡಕೆ, ಪಾತ್ರೆ ಪಡಕುಗಳನ್ನು ಓರಣವಾಗಿ ಜೋಡಿಸಿಡುವರು. ಹಳೆಯ ಕಾಲದಲ್ಲಿ ಮಣ್ಣಿನ, ಈಗ ಕೆಲವು ಅಲ್ಯೂಮಿನಿಯಂ ಪಾತ್ರೆಗಳು ಈ ನಡುವೆ ಸ್ಟೀಲ್ ಲೋಟ ಮುಂತಾದವು ಬಂದಿವೆ. ಹಿತ್ತಾಳೆ ಬಿಂದಿಗೆಯಲ್ಲಿ ನೀರು ತುಂಬಿಡುವರು.

ಕೊಳ್ಳೇಗಾಲದ ಸೋಲಿಗರಲ್ಲಿ ಬುಟ್ಟಿ ಹೆಣೆಯುವ ಕಸುಬು ಕೆಲವರಲ್ಲಿದ್ದು, ಕೊಳ್ಳೇಗಾಲದ ಮಾದೇಶ್ವರನ ಬೆಟ್ಟದಲ್ಲಿ ಒಮ್ಮೊಮ್ಮೆ ಇವನ್ನು ಮಾರುವರು. ಸೋಲಿಗರಿಗೆ ಸಿಗುವುದು ಅತ್ಯಲ್ಪ ಬೆಲೆಯೇ.

ಕಾಡಿನಲ್ಲಿ ಕೀಳಲು, ವ್ಯವಸಾಯ ಮಾಡಲು ಬೇಕಾಗುವ ವಸ್ತುಗಳೆಂದರೆ ಕೊಡಲಿ, ದೋಟಿ, ಕುಡುಗೋಲು, ಕಡಕೋಳು, ದಸಿ, ಹಾರೆ ಈ ನಡುವೆ ವ್ಯವಸಾಯಕ್ಕೆ ನೇಗಿಲನ್ನು ಕೆಲವೆಡೆ ಉಪಯೋಗ ಮಾಡುವರು.

## ಮ್ಯಾಸನಾಯಕರ ಹಟ್ಟಿಗಳ ಲಕ್ಷಣಗಳು

ಜಾತಿ ವ್ಯವಸ್ಥೆಯಿಂದ ಹೊರಗಿರುವ, ಗ್ರಾಮ ಮತ್ತು ನಗರ ಸಂಸ್ಕೃತಿಯಿಂದ ಬೇರ್ಪಟ್ಟ, ಗುಡ್ಡಗಾಡುಗಳಲ್ಲಿ ವಾಸಿಸುವ ವಿಶಿಷ್ಟವಾದ ಗುಣಲಕ್ಷಣಗಳನ್ನು ಹೊಂದಿ ಅಸಂಖ್ಯಾತ ಬುಡಕಟ್ಟು ಸಮುದಾಯದವರು ಭಾರತದಲ್ಲಿದ್ದಾರೆ ಅಂಥ ಬುಡಕಟ್ಟುಗಳಲ್ಲಿ ಮ್ಯಾಸಬೇಡ ಸಮುದಾಯವೂ ಒಂದು. ಮ್ಯಾಸನಾಯಕರ ಹಟ್ಟಿಗಳು ಈ ಕೆಳಕಂಡ ಗುಣಲಕ್ಷಣಗಳನ್ನು ಹೊಂದಿರುವುದರ ಜೊತೆಗೆ ಪರಸ್ಪರ ಹೋಲಿಕೆ ಮತ್ತು ಏಕತೆಗಳು ಕಂಡುಬರುತ್ತವೆ. ಅಂಥ ಪ್ರಮುಖ ಗುಣಲಕ್ಷಣಗಳೆಂದರೆ.

### ೧. ನಿರ್ದಿಷ್ಟ ಭೂಪ್ರದೇಶ

ಪ್ರತಿಯೊಂದು ಬುಡಕಟ್ಟುಗಳಿಗೆ ತಮ್ಮದೆ ಆದ ನಿಶ್ಚಿತ ನೆಲೆ ಇರುತ್ತದೆ. ಆಹಾರ ಸಂಗ್ರಹಣೆ ಬೇಟೆ, ಪಶುಪಾಲನೆ, ಕೃಷಿ, ವ್ಯಾಪಾರ ಹಾಗೂ ಉಪಜೀವನಕ್ಕಾಗಿ ಅನೇಕ ಕಡೆ ಸಂಚರಿಸುತ್ತಾರೆ. ಆದರೂ ತಾವು ಹುಟ್ಟಿದ ಸ್ಥಳ ಮತ್ತು ಪ್ರದೇಶದ ಬಗೆಗೆ ಸಾಮುದಾಯಿಕ ಭಾವನೆಗಳು ಸದಾ ಜಾಗೃತವಾಗಿರುತ್ತವೆ. ಇವರು ವಾಸಿಸುವ ಪ್ರದೇಶಗಳಿಗೆ ಹಟ್ಟಿ, ಪಾಳ್ಯ

ಹಾಡಿ, ರೊಪ್ಪ, ದೊಡ್ಡಿ, ವಠಾರ, ದಿನ್ನೆ, ಮೇಡು, ಕೊಂಪೆ ಮೊದಲಾದ ಹೆಸರುಗಳಿಂದ ಕರೆದುಕೊಳ್ಳುತ್ತಾರೆ. ಚಿತ್ರದುರ್ಗ, ದಾವಣಗೆರೆ, ಬಳ್ಳಾರಿ, ರಾಯಚೂರು ಭಾಗದಲ್ಲಿ ಬಹುಸಂಖ್ಯಾತ ಬೇಡ ಮತ್ತು ಕಾಡಗೊಲ್ಲ ಕಾಡುಕುರುಬರು ವಾಸಿಸುತ್ತಿದ್ದಾರೆ. ಇಂಥ ನಿರ್ದಿಷ್ಟ ಭೂ ಪ್ರದೇಶದಲ್ಲಿ ವಾಸಮಾಡುವುದರಿಂದ ಅವರಲ್ಲಿ ಸಹಕಾರ ಒಗ್ಗಟ್ಟು ಮತ್ತು ಸಾಮುದಾಯಕ ಭಾವನೆ ಅಧಿಕವಾಗಿರುತ್ತದೆ. ಒಂದು ಸಮುದಾಯವನ್ನು ನಿಶ್ಚಿತವಾದ ಭೂಪ್ರದೇಶವೊಂದರ ಜೊತೆ ಗುರುತಿಸಬಹುದು. ಏಕೆಂದರೆ ಸಮುದಾಯ ಎನ್ನುವುದು ಮೂಲಭೂತವಾಗಿ ಒಂದು ಪ್ರಾದೇಶಿಕ ಗುಂಪು. ಅನೇಕ ಕುಟುಂಬಗಳಿಗೆ ಸೇರಿದ ಜನರು ಒಂದು ಪ್ರದೇಶವನ್ನು ಅವರಿಗೆ ಈ ಪ್ರದೇಶದೊಡನೆ ಭಾವನಾತ್ಮಕ ಸಂಬಂಧ ಬೆಳೆದುಬರುವುದು. ಪ್ರತಿ ಕುಟುಂಬಕ್ಕೂ ತನ್ನದೇ ಆದ ವಾಸಸ್ಥಾನವಿದ್ದರೂ ಆ ಸಮುದಾಯದ ವ್ಯಾಪ್ತಿಯೂ ಬರುವ ಎಲ್ಲಾ ಸ್ಥಳಗಳೂ ತಮಗೆ ಸೇರಿದ್ದೂ, ಅವನ್ನು ರಕ್ಷಿಸಿ, ಉಳಿಸುವುದು ತಮ್ಮ ಜವಾಬ್ದಾರಿ ಎನ್ನುವ ಭಾವನೆಯಿರುತ್ತದೆ. ಇಂಥ ಸ್ಥಳಗಳಿಗೆ ಪ್ರಮುಖ ನಿದರ್ಶನಗಳೆಂದರೆ ಪೂಜಾ ಸ್ಥಲಗಳು, ಆಟದ ಮೈದಾನಗಳು, ತೋಟಗಳು ಇತ್ಯಾದಿ, ಸರಳ ಸಮಾಜಗಳಲ್ಲಿ ವೈಯಕ್ತಿಕ ಆಸ್ತಿಗಿಂತ ಸಾಮುದಾಯಿಕ ಕಲ್ಪನೆಗಳೇ ಹೆಚ್ಚು ಮಹತ್ವ.ಒಂದು ಸಮುದಾಯದ ನೆಲ, ಜಲ, ಸಸ್ಯ, ಪ್ರಾಣೀ ಸಂಪತ್ತುಗಳೆಲ್ಲವೂ ತಮಗೆ ಸೇರಿದ್ದು ಎಂಬ ಭಾವನೆ ಆ ಸಮುದಾಯದ ಸದಸ್ಯರಲ್ಲಿ ಕಂಡುಬರುತ್ತಿದ್ದು ಇಂದಿಗೂ ಜನಪರ ಸಂಸ್ಕೃತಿಯಲ್ಲಿ ಈ ಭಾವನೆ ಬಹುಮಟ್ಟಿಗೆ ಜಾಗೃತವಾಗಿದೆ. ತಾವು ವಾಸಿಸುವ ಪ್ರದೇಶದ ಸಂಪನ್ಮೂಲಗಳ ಮೇಲೆ ತಮಗೆ ಆದ್ಯ ಹಕ್ಕು ಇರುವುದರಿಂದ ಅವುಗಳ ಬಳಕೆ ಹಾಗೂ ನಿರ್ವಹಣೆಗಳಿಗೆ ತಮಗೆ ಸ್ವಾತಂತ್ರ ನೀಡಬೇಕೆಂದು ಬುಡಕಟ್ಟಿನ ಜನ ಹೋರಾಟ ನಡೆಸುವುದರಿಂದ ಭೌತಿಕ ಆಯಾಮಕ್ಕೆ ಎಷ್ಟು ಮಹತ್ವವಿದೆ ಎಂಬುದನ್ನು ತೋರಿಸುತ್ತದೆ.

**೨. ನಿರ್ದಿಷ್ಟ ಹೆಸರು**

ಭಾರತದಲ್ಲಿ ನೆಲೆಸಿರುವಂಥ ಪ್ರತಿಯೊಂದು ಬುಡಕಟ್ಟುಗಳಿಗೂ ತಮ್ಮದೇ ಆದ ವಿಶಿಷ್ಟ ಅಥವಾ ನಿರ್ದಿಷ್ಟ ಹೆಸರುಗಳಿವೆ ಉದಾಹರಣೆಗೆ ನಾಗಾ, ತೊಡ, ಬಿಲ್ಲ, ಚೆಂಚು, ಬೇಡ, ಬೇಡರ್ , ಗೊಂಡ, ಶಬರ ಕಿರಾತ, ನಾಯಕ, ವಾಲ್ಮೀಕಿ, ನಾಯ್ಕರು, ಪಾಳೇಗಾರ, ತಳವಾರ ಗುರಿಕಾರ, ಮ್ಯಾಸಬೇಡ, ಕಾಡುಗೊಲ್ಲ, ಕಾಡುಕುರುಬ, ಸಂಪಾಲ ಜಿಪ್ಸಿ, ಲಿಂಬು, ಗಾರೋ, ಬಡಗ, ಮುಂಡಾ ಮುಂತಾದವು ಆದಿವಾಸಿಗಳು ಹೆಸರುಗಳಾಗಿವೆ. ಈ ಹೆಸರುಗಳ ಸಹಾಯದಿಂದ ಬೇರೆ ಬೇರೆ ಆದಿವಾಸಿ ಪಂಗಡಗಳ ನಡುವಿನ ವ್ಯತ್ಯಾಸಗಳನ್ನು ಗುರುತಿಸಬಹುದು.

**೩. ಸಾಮಾನ್ಯ ಭಾಷೆ**

ಆದಿವಾಸಿಗಳು ತಮ್ಮದೇ ಆದ ಸ್ವತಂತ್ರ ಭಾಷೆಯನ್ನು ಹೊಂದಿರುತ್ತಾರೆ. ಆ ಭಾಷೆಯನ್ನು ಬೇರೆಯವರು ಅರ್ಥಮಾಡಿಕೊಳ್ಳುವುದು ಕಷ್ಟ, ಆದಿವಾಸಿ ಭಾಷೆಗೆ ಲಿಪಿಯಿಲ್ಲದೆ ಇರುವುದರಿಂದ ಇವರು ಶೈಕ್ಷಣಿಕವಾಗಿ ಹಿಂದುಳಿದ್ದಾರೆ. ಆದಿವಾಸಿ ಭಾಷೆಗಳ ಮೇಲೆ ನೆರೆಹೊರೆಯ ಪ್ರದೇಶಗಳ

ಭಾಷೆಯ ಪ್ರಭಾವವನ್ನು ಕಾಣಬಹುದು. ಉದಾಹರಣೆಗೆ ಕರ್ನಾಟಕದ ಊರಬೇಡರು ಮ್ಯಾಸಬೇಡರು ತೆಲುಗು ಮಿಶ್ರಿತ ಕನ್ನಡವನ್ನು ಮಾತನಾಡುತ್ತಾರೆ. ನೀಲಗಿರಿ ಬೆಟ್ಟಗಳಲ್ಲಿ ವಾಸಿಸುವ ಬಡಗರು ಮತ್ತು ತೋಡರು ಕನ್ನಡ ತೆಲುಗು, ತಮಿಳು, ಮಲೆಯಾಳಿ ಮತ್ತು ಹಿಂದಿ ಮುಂತಾದ ಭಾಷೆಗಳಲ್ಲಿ ಒಂದೊಂದು ಶಬ್ದಗಳನ್ನು ಮಾತನಾಡುವಾಗ ಬಳಸುತ್ತಾರೆ. ಆದ್ದರಿಂದ ಆದಿವಾಸಿಗಳ ಭಾಷೆಗಳನ್ನು ನಾಡಭಾಷೆಗಳೆಂದು ಕರೆಯುತ್ತಾರೆ. ಸಮುದಾಯಕ್ಕೆ ಒಂದು ಅಸ್ತಿತ್ವ ಬರುವುದು ಅದಕ್ಕಿಂತ ವಿಶೇಷ ಅಂಕಿತದಿಂದ ಈ ಅಂಕಿತದಿಂದ ಎಲ್ಲ ಸಮಾಜಗಳಲ್ಲಿ ಒಂದು ಹೆಸರಿನ ಮೂಲಕ ಗುರುತಿಸಲಾಗುತ್ತದೆ. ಉದಾಹರಣೆಗೆ ನಾಯಕನ ಹಟ್ಟಿ ಅಥವಾ ದೊಡ್ಡಕೆರೆ ಈ ಹೆಸರಿನೊಡನೆ ಸಮುದಾಯದ ಚಾರಿತ್ರಿಕ ಸಾಂಸ್ಕೃತಿಕ ಅಥವಾ ಭೌಗೋಳಿಕ ಅಸ್ತಿತ್ವವನ್ನು ಗುರುತಿಸಲು ಸಾಧ್ಯವಾಗುತ್ತದೆ.

### ೪. ಒಂದೇ ರೀತಿಯ ರಾಜಕೀಯ ವ್ಯವಸ್ಥೆ

ಪ್ರತಿಯೊಂದು ಆದಿವಾಸಿ ಪಂಗಡವು ತನ್ನದೇ ಆದ ಸಾಂಪ್ರದಾಯಿಕ ಆಡಳಿತ ಕ್ರಮವನ್ನು ಹೊಂದಿರುತ್ತವೆ. ಪ್ರತಿಯೊಂದು ಸಮುದಾಯಕ್ಕೂ ಒಬ್ಬ ಮುಖ್ಯಸ್ಥನಿದ್ದು, ಈತ ಸದಸ್ಯರ ವರ್ತನೆಗಳ ಮೇಲೆ ನಿಯಂತ್ರಣವನ್ನು ತರುತ್ತಾನೆ. ತಪ್ಪತಸ್ಥರಿಗೆ ದಂಡ ಶಿಕ್ಷೆ ಬಹಿಷ್ಕಾರ ಮುಂತಾದ ಕಠಿಣ ಶಿಕ್ಷೆ ವಿಧಿಸುವ ಅಧಿಕಾರವನ್ನು ಆದಿವಾಸಿ ಸಮುದಾಯ ಮುಖ್ಯಸ್ಥ ಅಥವಾ ನಾಯಕ ಪಡೆದಿರುತ್ತಾರೆ. ನಾಯಕನನ್ನು ಆಯ್ಕೆ ಮಾಡುವ ಪದ್ಧತಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಕೆಲವು ಬುಡಕಟ್ಟುಗಳಲ್ಲಿ ಅನುವಂಶೀಯವಾಗಿ ಪದ್ಧತಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಕರ್ನಾಟಕದ ಬೇಡರಲ್ಲಿ ಗುಡಿಕಟ್ಟೆ ಮತ್ತು ಕಟ್ಟೆಮನೆಯ ದೊರೆ, ಯಜಮಾನ, ಹಟ್ಟಿಗೌಡ, ಪೂಜಾರಿ, ತಳವಾರ ಮೊದಲಾದ ಅಧಿಕಾರಯುತ ಹುದ್ದೆಗಳನ್ನು ಸಾಮಾನ್ಯವಾಗಿ ಅನುವಂಶೀಯವಾಗಿ ಆಯ್ಕೆ ಮಾಡುತ್ತಾರೆ. ಚಿತ್ರದುರ್ಗ ಜಿಲ್ಲೆಯಲ್ಲಿ ಮ್ಯಾಸನಾಯಕರ ಮೂರು ಕಟ್ಟೆಮನೆಗಳನ್ನು ಕಾಣಬಹುದು. ಅವುಗಳೆಂದರೆ ನನ್ನಿವಾಳ, ಗೋನೂರು ಮತ್ತು ನಾಯಕನಹಟ್ಟಿ ಈ ಮೂರು ಹಟ್ಟಿಗಳಲ್ಲಿ ನ್ಯಾಯ ತೀರ್ಮಾನವಾಗದಿದ್ದರೆ, ಆ ನ್ಯಾಯವನ್ನು ಮ್ಯಾಸ ಮಂಡಲದ ಪ್ರಧಾನ ಕಟ್ಟೆಮನೆ ಕಂಪಳದೇವರಹಟ್ಟಿಗೆ ತೆಗೆದುಕೊಂಡು ಹೋಗಲಾಗುತ್ತದೆ. "ಅಸ್ಸಾಮಿನ ನಾಗಾ ಬುಡಕಟ್ಟಿನಲ್ಲಿ ಯಾವ ವ್ಯಕ್ತಿ ತನ್ನ ಮನೆಯಲ್ಲಿ ಹೆಚ್ಚು ಜನರ ತಲೆ ಬುರುಡೆಗಳನ್ನು ಸಂಗ್ರಹಿಸಿಟ್ಟುಕೊಂಡಿರುವನೋ ಅವನನ್ನು ನಾಯಕನೆಂದು ಆಯ್ಕೆ ಮಾಡುತ್ತಾರೆ. ಇನ್ನು ಕೆಲವು ಆದಿವಾಸಿ ಸಮೂಹಗಳಲ್ಲಿ ಪ್ರತಿಯೊಂದು ಪಂಗಡಕ್ಕೂ ಒಂದೊಂದು ಪಂಚಾಯ್ತಿ ವ್ಯವಸ್ಥೆ ಇರುತ್ತದೆ. ಅದು ಒಳಜಗಳಗಳನ್ನು ಬಗೆಹರಿಸುವ ಮತ್ತು ತಪ್ಪಿತಸ್ಥನನ್ನು ಶಿಕ್ಷಿಸುವ ಕಾರ್ಯದಲ್ಲಿ ಮುಖ್ಯಸ್ಥನಿಗೆ ನೆರವು ನೀಡುತ್ತವೆ. ಕಟ್ಟುನಿಟ್ಟಾದ ರಾಜಕೀಯ ಸಂಘಟನೆ ಮತ್ತು ಅನೌಪಚಾರಿಕ ಸಾಮಾಜಿಕ ನಿಯಂತ್ರಣಗಳು ಬುಡಕಟ್ಟು ಜನರ ಚಟುವಟಿಕೆಗಳ ಮೇಲೆ ನಿಯಂತ್ರಣವನ್ನು ತರುತ್ತವೆ.

## ೫. ಸರಳ ಮತ್ತು ಸ್ವತಂತ್ರ ಜೀವನ

ಆದಿವಾಸಿ ಪಂಗಡಗಳು ಬಹಳ ಮಟ್ಟಿಗೆ ಸರಳವೂ ಸ್ವತಂತ್ರವೂ ಮತ್ತು ಸ್ವಯಂ ಪರಿಪೂರ್ಣವೂ ಆಗಿರುತ್ತವೆ. ನಗರದ ಕೃತಕ ಹಾಗೂ ಆಡಂಬರದಿಂದ ಆದಿವಾಸಿಗಳು ಬಹುದೂರವಿರುತ್ತಾರೆ. ಅವರು ಆರ್ಥಿಕ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲೂ ಮುಂದೆ ಬಂದಿಲ್ಲ. ಹಿಂದೆ ಮರದ ತೊಗಟೆ, ಪ್ರಾಣಿಗಳ ಚರ್ಮ, ಕಾಡಿನ ಎಲೆ, ಹುಲ್ಲಿನಿಂದ ಮಾಡಿದ ಉಡುಪುಗಳನ್ನಾಧರಿಸುತ್ತಿದ್ದರು. ಅಂಡಮಾನ್ ದ್ವೀಪದ ಒಂಗೆಗಳು ಇಂದಿಗೂ ಬೇಟೆಯಾಡಿ, ಮೀನು ಹಿಡಿದು ಗೆಡ್ಡೆ ಗೆಣಸುಗಳನ್ನು ತಿಂದು ಬದುಕುತ್ತಾರೆ. ಕೆಲವೊಂದು ಆದಿವಾಸಿಗಳು ಚಕಮಕಿ ಕಲ್ಲನ್ನು ಕುಟ್ಟಿ ಬೆಂಕಿ ಹಚ್ಚಿಸಿಕೊಳ್ಳುವುದು, ಮರದ ಮೇಲೆ ಜೋಲಿ ಕಟ್ಟಿ ಮಲಗುವುದು, ಸರಳ ಆಹಾರ ಪದ್ಧತಿ ಸಾಮೂಹಿಕ ನೃತ್ಯ, ಜಾತ್ರೆ, ಉತ್ಸವ, ಹಬ್ಬಗಳಿಂದ ಅವರು ತಮ್ಮ ಕ್ಷೇತ್ರದಲ್ಲಿಯೇ ಮನೋರಂಜನೆ ಪಡೆಯುತ್ತಾರೆ. ಕಳ್ಳತನ, ಮೋಸ, ಕಪಟ ಇವುಗಳಾವು ತಿಳಿಯುವುದಿಲ್ಲ. ಇಂದಿಗೂ ಕೆಲವೊಂದು ಆದಿವಾಸಿಗಳಲ್ಲಿ "ಅದಲು ಬದಲು" ಪದ್ಧತಿ ಅಸ್ತಿತ್ವದಲ್ಲಿದೆ. ಇವರ ಪ್ರಮುಖ ವೃತ್ತಿ ಬೇಟೆ, ಮೀನು ಹಿಡಿಯುವುದು, ಅರಣ್ಯಗಳಿಂದ ಜೇನು, ಹಣ್ಣು, ಹಂಪಲು, ಗೆಡ್ಡೆಗೆಣಸು, ಕಾಡುಮೆಣಸು, ಔಷಧಿಯ ಗಿಡಮೂಲಿಕೆಗಳು ಮುಂತಾದವನ್ನು ಸಂಗ್ರಹಿಸಿ ಮಾರಾಟ ಮಾಡುತ್ತಾರೆ. ಇತ್ತೀಚಿಗೆ ಪಶುಪಾಲನೆ, ಕೃಷಿ ಮತ್ತು ಕೃಷಿಯೇತರ ಕೆಲಸಗಳು ಪ್ರಧಾನ ವೃತ್ತಿಯಾಗಿವೆ. ಹೀಗಾಗಿ ಜೀವನದ ಕ್ಷೇತ್ರಗಳಲ್ಲಿಯೂ ಅವರು ಸಂಪೂರ್ಣವಾಗಿ ಸ್ವತಂತ್ರರೆಂದು ಹೇಳಬಹುದು.

## ೬. ರಕ್ತ ಸಂಬಂಧದ ಬಾಂಧವ್ಯ

ಬುಡಕಟ್ಟು ಸಮುದಾಯಗಳಲ್ಲಿ ಕಳ್ಳುಬಳ್ಳಿಯ ಸಂಬಂಧ ಅಥವಾ ರಕ್ತ ಸಂಬಂಧಗಳಿಗೆ ಹೆಚ್ಚಿನ ಪ್ರಾಮುಖ್ಯತೆಯಿದೆ. ಕುಟುಂಬ, ವಂಶ, ಕುಲ, ಬಳಿ, ಬೆಡಗು ಮುಂತಾದ ಚಿಕ್ಕ ಸಮೂಹಗಳು ರಕ್ತ ಸಂಬಂಧದ ಆಧಾರದ ಮೇಲೆಯೇ ರಚಿತವಾಗಿವೆ. ಬಂಧು ಪ್ರೇಮದ ತಳಹದಿಯ ಬೇರೆ ಸಹಕಾರ ಮತ್ತು ಸಂಬಂಧಗಳು ಬೆಳೆಯುತ್ತವೆ. ಮದುವೆ ಮಂಗಳ ಕಾರ್ಯಗಳಲ್ಲಿ ಸೋದರಮಾವ ಮತ್ತು ಸೋದರತ್ತೆಗೆ ವಿಶೇಷ ಮಹತ್ವ ಕೊಡುತ್ತಾರೆ. ಯಾವುದೇ ಕೌಟುಂಬಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲಿ ಐಕ್ಯತೆ, ಒಗ್ಗಟ್ಟು ಮತ್ತು ಸಹಕಾರ ಭಾವನೆ ಪ್ರಧಾನವಾಗಿರುತ್ತದೆ. ಕೆಲವೊಂದು ಸಲ ಕುಲ, ಬಳಿ ಬೆಡಗುಗಳು ಬೇರೆ ಬೇರೆಯಿದ್ದರೂ ಸಹೋದರ ಭಾವನೆಯಿಂದ ವರ್ತಿಸುತ್ತಾರೆ. ಉದಾ - ಕರ್ನಾಟಕದಲ್ಲಿ ಊರಬೇಡ, ಮ್ಯಾಸಬೇಡ ನಾವು ಸಹೋದರ ಸಂಬಂಧಿಗಳೆಂದೆ ಹೇಳಿಕೊಳ್ಳುತ್ತಾರೆ. ತಾವೆಲ್ಲರೂ ಒಬ್ಬ ಮೂಲ ಪುರುಷ ಅಥವಾ ಒಂದೇ ಬುಡಕಟ್ಟಿಗೆ ಸೇರಿದವರೆಂದು ಭಾವಿಸುತ್ತಾರೆ. ಆದರೆ ವೈವಾಹಿಕ ಸಂದರ್ಭದಲ್ಲಿ ವಿಭಿನ್ನ ವಿಲುವು ತಾಳುವುದು ಕಂಡುಬರುತ್ತದೆ.

## ೭. ಧರ್ಮ ಮತ್ತು ಸಂಸ್ಕೃತಿ

ಸರ್ವಚೇತನ ಪಂಥವ ಆದಿವಾಸಿಗಳ ಧಾರ್ಮಿಕ ಭಾವನೆಯಾಗಿದೆ. ಧಾರ್ಮಿಕ ನಿಷ್ಠೆ, ಸಂಪ್ರದಾಯ ಶರಣತೆ, ಪ್ರಕೃತಿಪೂಜೆ, ಮೂರ್ತಿಪೂಜೆ ಮತ್ತು ಕುಲದೇವತಾ ಪೂಜೆಗಳನ್ನು ಆಚರಿಸುತ್ತಾರೆ. ಗಿಡ, ಮರ, ಬಳ್ಳಿ, ಪ್ರಾಣಿ, ಪಕ್ಷಿ, ಕಲ್ಲು ಬಂಡೆಗಳನ್ನು ಅವರು ಪೂಜಿಸುತ್ತಾರೆ. ಇಂದಿಗೂ ಭೂತ ಪ್ರೇತ, ಮಾಟ-ಮಂತ್ರಗಳ ಬಗೆಗೆ ನಂಬಿಕೆಯುಳ್ಳವರು ಜೀವನದ ಕಷ್ಟ, ನಷ್ಟ ರೋಗ ರುಜಿನಗಳು ಬಂದಾಗ ಅವರು ವಿಶೇಷವಾಗಿ ಮಾಟ-ಮಂತ್ರಗಳಿಂದಲೇ ಪರಿಹಾರ ಕಂಡುಕೊಳ್ಳುತ್ತಾರೆ. ಪ್ರತಿಯೊಂದು ಚಟುವಟಿಕೆಗಳಲ್ಲಿ ಧಾರ್ಮಿಕ ಮನೋಭಾವನೆಗಳು ಅವರಲ್ಲಿ ಎದ್ದು ಕಾಣುತ್ತೇವೆ. ಭಾರತದ ಜನಗಣತಿಯ ವರದಿಯಲ್ಲಿ ಆದಿವಾಸಿ ಬುಡಕಟ್ಟುಗಳನ್ನು ಸರ್ವಚೇತನವಾದಿಗಳು ಎಂದು ಕರೆದಿದ್ದಾರೆ. ಆದಿವಾಸಿಗಳ ಜೀವನವು ಧರ್ಮದೊಂದಿಗೆ ಲೀನವಾಗಿದೆ. ಅವರ ಇಡೀ ಜೀವನವೂ ಧರ್ಮದಲ್ಲಿ ಅದ್ದಿ ತೆಗೆದಂತಿದೆ ಎಂದು ಸರ್ ಜೇಮ್ಸ್ ಫ್ರೇಜರ್ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.

## ೮. ಒಳಪಂಗಡ ವಿವಾಹ ಪದ್ಧತಿ

ಬುಡಕಟ್ಟುಗಳಲ್ಲಿ ಒಳಪಂಗಡ ಜರುಗುತ್ತವೆ. ಸಮುದಾಯದ ಪವಿತ್ರತೆ ಮತ್ತು ಐಕ್ಯತೆಯ ದೃಷ್ಟಿಯಿಂದ ಈ ಪದ್ಧತಿಗಳು ಅಸ್ಥಿತ್ವಕ್ಕೆ ಬಂದಿವೆ. ವ್ಯಕ್ತಿಯು ತನ್ನ ಬಾಳಸಂಗಾತಿಯನ್ನು ತಾನು ಹುಟ್ಟಿದ ಪಂಗಡದಲ್ಲಿಯೇ ಅರಿಸಿಕೊಳ್ಳಬೇಕು ಅವರವರ ಕುಲಪದ್ಧತಿಗೆ ತಕ್ಕಂತೆ ಗಂಡು ಹೆಣ್ಣುಗಳ ಆಯ್ಕೆ, ವಿವಾಹದ ನಿಯಮಗಳನ್ನು ಪಾಲಿಸುತ್ತಾರೆ. ಬೇಡರಲ್ಲಿ ಬೇಡರಲ್ಲಿ ಸ್ವಾಮೀಜಿ, ಬ್ರಾಹ್ಮಣ, ಪೌರೋಹಿತ್ಯಕ್ಕೆ ಇವರಲ್ಲಿ ಅವಕಾಶವಿದೆ. ರಕ್ತ ಸಂಬಂಧಕ್ಕೆ ಬಹಳ ಮಹತ್ವಕೊಟ್ಟು ವಿವಾಹ ಸಂಬಂಧ ಬೆಳೆಸುತ್ತಾರೆ. ಉದಾಹರಣೆಗೆ ಊರುಬೇಡ ಗಂಡು ಊರಬೇಡರ ಹೆಣ್ಣನ್ನೇ ವಿವಾಹಕ್ಕೆ ಆಯ್ಕೆ ಮಾಡಿದರೂ, ಅವರಿಬ್ಬರ ಕುಲ ಅಥವಾ ಬೆಡಗುಗಳು ಬೇರೆಯಾಗಿರುತ್ತವೆ. ಅರಿತೋ ಅರಿಯದೆಯೋ ಅಂತು ಒಂದೇ ಬೆಡಗಿನಲ್ಲಿ ಮದುವೆಯಾಗ ಬಾರದು. ಇದರಿಂದ ವಂಶಾಭಿವೃದ್ಧಿಗೆ ಹಾನಿ ಎಂಬ ವೈಜ್ಞಾನಿಕ ಸತ್ಯವನ್ನು ಬುಡಕಟ್ಟು ಜನರು ತಿಳಿದುಕೊಂಡಂತೆ ಕಾಣುತ್ತದೆ. ಆದಿವಾಸಿಗಳು ಒಳಪಂಗಡ ವಿವಾಹ ಪದ್ಧತಿ ಅನುಸರಿಸಿದರೂ ಅವರ ವಿವಾಹ ನಿಯಮ ವಿವಾಹದ ವಯಸ್ಸು ಸಂಗಾತಿಗಳ ಆಯ್ಕೆ ಕ್ರಮ, ವಿವಾಹ ವಿಚ್ಛೇಧನ ಲೈಂಗಿಕ ಕಟ್ಟುಪಾಡುಗಳು ಮೊದಲಾದವುಗಳ ವಿಷಯವಾಗಿ ಆದಿವಾಸಿಗಳು ಇತರರಿಗಿಂತ ಭಿನ್ನವಾದ ತಮ್ಮದೇ ಆದ ನಿಯಮವನ್ನು ಪಾಲಿಸುತ್ತಾರೆ.

## ೯. ರಕ್ಷಣೆ ಮತ್ತು ಐಕ್ಯತೆಯ ಭಾವನೆ

ಆದಿವಾಸಿಗಳು ಯಾವಗಳು ರಕ್ಷಣೆ ಮತ್ತು ಭದ್ರೆಗೆ ಹೆಚ್ಚಿನ ಮಹತ್ವ ಕೊಡುತ್ತಾರೆ. ತಮ್ಮ ಸಮುದಾಯದ ಗುಟ್ಟನ್ನು ಕಾಪಾಡಿಕೊಂಡು ಬರುತ್ತಾರೆ. ಹೊರಗಿನ ಜರನ್ನು ಸಂಶಯದಿಂದಲೇ

ಕಾಣುತ್ತಾರೆ. ಕೆಲವೊಂದು ಹಟ್ಟಿ, ಹಾಡು, ಪಾಳ್ಯ, ದೊಡ್ಡಿಗಳ ಸುತ್ತ ಮುಳ್ಳು ಬೇಲಿಯನ್ನು ಹಾಕಿಕೊಳ್ಳುತ್ತಾರೆ. ಈ ಬೇಲಿ ರಕ್ಷಣೆ ಮತ್ತು ಪವಿತ್ರತೆ ಎರಡೂ ದೃಷ್ಟಿಯಿಂದ ಅನುಕೂಲವಾಗುತ್ತದೆ. ಉದಾಹರಣೆಗೆ ಕರ್ನಾಟಕದ ಬಹುತೇಕ ಮ್ಯಾಸನಾಯಕರ ಹಟ್ಟಿಗಳಲ್ಲಿ ಹಟ್ಟಿಯ ಹಾಗೂ ಮನೆಯ ಸುತ್ತ ಬಂದ್ರಿ ಬರುಲುಗಳಿಂದ ಬೇಲಿ ನಿರ್ಮಿಸಿರುವುದನ್ನು ಕಾಣಬಹುದು. ಈ ಹಟ್ಟಿಗಳಲ್ಲಿ ಅಪಾಯ ಮತ್ತು ಸಮಸ್ಯೆಗಳು ಎದುರಾದಾಗ ಸಾಮುದಾಯಿಕ ಭಾವನೆ ಅವರಲ್ಲಿ ತೀವ್ರವಾಗಿರುತ್ತದೆ. ತಮ್ಮ ಸಮೂಹಕ್ಕೋಸ್ಕರ ಪ್ರಾಣ ಕೊಡಲು ಸಿದ್ಧರಾಗುತ್ತಾರೆ. ಉದಾಹರಣೆಗೆ ಹಲಗಲಿಬೇಡರ ದುರಂತ.

ಬುಡಕಟ್ಟುಗಳು ರಕ್ಷಣೆ ಮತ್ತು ಐಕ್ಯತೆಗೆ ಬಹಳ ಮಹತ್ವ ಕೊಡವುದರಿಂದ ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ವಾಸಿಸುವ ಮ್ಯಾಸಬೇಡ, ಬಹಳ ಮಹತ್ವ ಕೊಡುವುದರಿಂದ ಆಂಧ್ರ ಪ್ರದೇಶ ಮತ್ತು ಕರ್ನಾಟಕದಲ್ಲಿ ವಾಸಿಸುವ ಮ್ಯಾಸಬೇಡ, ಊರುಬೇಡ, ಚೆಂಚು ಮೊಂಡಬೇಡರು ಮೊದಲಾದ ಬುಡಕಟ್ಟುಗಳು ತಾವು ವಾಸಿಸುವ ಪ್ರದೇಶದ ಸುತ್ತ ಮುಳ್ಳುಬೇಲಿ ಹಾಕಿಕೊಳ್ಳುತ್ತಾರೆ.

**೧೦. ಸಮುದಾಯದ ನಿರಂತರತೆ**

ಜಗತ್ತು ಎಷ್ಟೇ ಬದಲಾಗಲಿ ಸಮುದಾಯದ ಅಗತ್ಯ ಮತ್ತು ಮಹತ್ವಗಳೆರಡೂ ನಶಿಸಿ ಹೋಗಲಾರವು. ಸರಳ ಹಾಗೂ ಸಂಪ್ರದಾಯಬದ್ಧ ಸಮುದಾಯಗಳಲ್ಲಿ ನಿಯಂತ್ರಣಾ ವ್ಯವಸ್ಥೆ ಇಂದಿಗೂ ಬಿಗಿಯಾಗಿದೆ. ವೈಯಕ್ತಿಕ ಹಿತಾಸಕ್ತಿಗಳಿಗಿಂತ ಸಮುದಾಯದ ಹಿತಾಸಕ್ತಿಗೆ ಸಮಾಜ ಹೆಚ್ಚಿನ ಒತ್ತು ನೀಡುತ್ತ ಬಂದಿದೆ. ಆಧುನಿಕ ಮೌಲ್ಯಚರಣೆಗಳು ವ್ಯಾಪಿಸುತ್ತಾ ಹೋದ ಹಾಗೆಲ್ಲ ಅನೌಪಚಾರಿಕ ನಿಯಂತ್ರಣಾ ವ್ಯವಸ್ಥೆ ಸಡಿಲವಾಗುತ್ತಾ ಹೋಗಿ ಅದರ ಸ್ಥಾನವನ್ನು ಕಾನೂನು, ನ್ಯಾಯಾಲಯ ಹಾಗೂ ಇತರ ಸಂಘ ಸಂಸ್ಥೆಗಳು ಪಡೆದುಕೊಳ್ಳುತ್ತವೆ. ಅದಾಗ್ಯೂ ಸಮುದಾಯದ ಸ್ವೀಕೃತಿ ಹಾಗೂ ಅದರಿಂದ ದೊರೆಯುವ ಮಾನ್ಯತೆ ಅನವಶ್ಯ ಎಂದು ಹೇಳುವ ಹಾಗಿಲ್ಲ. ಮಾನವನ ಬದುಕಿನ ಬಹುಭಾಗ ಅವರು ವಾಸಿಸುವ ಸಮುದಾಯಗಳಲ್ಲಿ ಕಳೆಯುವುದರಿಂದ ಸಮುದಾಯಕ್ಕೆ ಹೆಚ್ಚು ಮಹತ್ವವಿಲ್ಲ, ಅರ್ಥವಿದೆ. ವ್ಯಕ್ತಿಗಳು ಬದಲಾಗಬಹುದು, ಸಮುದಾಯಗಳ ಸ್ವರೂಪ, ಸಂಸ್ಕೃತಿ ಅಥವಾ ವ್ಯಾಪ್ತಿಗಳಲ್ಲಿ ಬದಲಾವಣೆಗಳುಂಟಾಗಬಹುದು. ಆದರೆ ಸಮುದಾಯ ಮಾತ್ರ ಮಾನವ ಬದುಕಿನ ಅವಿಭಾಜ್ಯ ಅಂಗವಾಗಿ ಉಳಿದುಕೊಂಡಿದೆ.[೨]

**ಟಿಪ್ಪಣಿಗಳು**

೧. ಅಂಗಡಿ ಎಸ್.ಎಸ್., ೨೦೦೮, **ಕರ್ನಾಟಕ ಬುಡಕಟ್ಟು ಭಾಷೆ,** ಪು.೧೭೨-೧೭೬

೨. ಸುಂದರ ಅ., ೨೦೦೪

೩. ಜಾಜಿ ದೇವೇಂದ್ರಪ್ಪ, ೨೦೦೪, **ಆಂಧ್ರ-ಕರ್ನಾಟಕ ಗಡಿ ಪ್ರದೇಶದ ಸ್ಥಳನಾಮಗಳು,** ಪು.೧೮

೪. ಕಲಬುರ್ಗಿ ಎಂ.ಎಂ., ೧೯೯೯, **ಕನ್ನಡ ನಾಮ ವಿಜ್ಞಾನ,** ಪು.೫೯

೫. ಅದೇ, ಪು.೬೦

೬. ಅದೇ, ಪು.೪

೭. ಕಲಬುರ್ಗಿ ಎಂ.ಎಂ., ೧೯೯೭, **ಮಾರ್ಗ ೩,** ಪು.೪೩೫

೮. ಅದೇ, ಪು.೪೩೫

೯. ಈಶ್ವರಪ್ಪ ಎಂ.ಜಿ., ೧೯೮೨, **ಮ್ಯಾಸಬೇಡರು,** ಪು.೪

೧೦. ಕೃಷ್ಣಮೂರ್ತಿ ಹನೂರು, ೧೯೯೩, **ಮ್ಯಾಸಬೇಡರು,** ಪು.೩೪-೩೫

೧೧. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೩, **ಮ್ಯಾಸಮಂಡಲ,** ಪು.೨೭-೨೮

೧೨. ಮೈತ್ರಿ ಕೆ.ಎಂ., **ಕೃಷ್ಣಗೊಲ್ಲರ ಕಥನಕಾವ್ಯಗಳು,** ಪು.೩೫

೧೩. ತಿಪ್ಪೇರುದ್ರಸ್ವಾಮಿ ಹೆಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಪು.೧೮೧

೧೪. ಕಲಬುರ್ಗಿ ಎಂ.ಎಂ., ೧೯೮೮, **ಮಾರ್ಗ ೨,** ಪು.೫೩೪

೧೫. ಮಹದೇವ ಸಿ.(ಸಂ), ೨೦೦೨, **ಹೊಸಪೇಟೆ ತಾಲ್ಲೂಕು ದರ್ಶನ,** ಪು.೨೬೭

೧೬. ಮೈಲಾರಪ್ಪ, ೨೦೦೮, **ಮೊಳಕಾಲ್ಮೂರು ತಾಲ್ಲೂಕಿನ ಸ್ಥಳನಾಮಗಳು,** ಅಪ್ರಕಟಿತ ಎಂ.ಫಿಲ್.ಪ್ರಬಂಧ

೧೭. ಕೃಷ್ಣಮೂರ್ತಿ ಹನೂರು, ಪೂರ್ವೋಕ್ತ, ಪು.೨೨೦-೨೨೨

೧೮. ಸರಿತಾ ಡಿ., ೨೦೧೦, **ಆಫ್ರಿಕಾ ಚರಿತ್ರೆ ವಿವಿಧ ಆಯಾಮಗಳು,** *ಸಂಸ್ಕೃತಿ ಮತ್ತು ನಾಗರೀಕತೆ ಬುಡಕಟ್ಟುಗಳು,* ಜೈಕುಮಾರ ಎಂ.(ಅನು), ಪು.೪೫

೧೯. ಕೃಷ್ಣಮೂರ್ತಿ ಎನ್., ೨೦೦೯, **ಒಡಿಗ ಬುಡಕಟ್ಟು ಸಮುದಾಯ,** ಪು.೬೬

೨೦. ಸಣ್ಣೊಬ್ಬಯ್ಯ ಎಸ್.ಕೆ., ೨೦೦೨, **ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ,** ಅಪ್ರಕಟಿತ ಪಿಎಚ್.ಡಿ.ಪ್ರಬಂಧ, ಪು.೧೦

೨೧. ಇಂದಿರಾ ಆರ್., **ಸಮಾಜಶಾಸ್ತ್ರ,** ಪು. ೪೫

ಅಧ್ಯಾಯ ನಾಲ್ಕು

# ಸಾಮಾಜಿಕ ಆಚರಣೆಗಳು

ಕಾಲದಿಂದ ಕಾಲಕ್ಕೆ ತಲೆಮಾರಿನಿಂದ ತಲೆಮಾರಿಗೆ ಸಾಗಿಕೊಂಡು ಬಂದಿರುವ ಆಚರಣೆ ಸಂಪ್ರದಾಯ ಒಂದು ವಿಶಿಷ್ಟ ಉದ್ದೇಶದಿಂದ ಕೂಡಿ ಸಾಮೂಹಿಕವಾಗಿ ಬಹುಕಾಲದಿಂದಲೂ ನಡೆದು ಬರುತ್ತಿರುವ ಒಂದು ರೂಢಿ ಅಥವಾ ಪದ್ಧತಿ. ಅದು ಕಾಲಕಾಲಕ್ಕೆ ಈ ಸಂಪ್ರದಾಯಗಳು ಜನರ ವಿಶ್ವಾಸವನ್ನು ಕಳೆದುಕೊಂಡು ಅರ್ಥಹೀನವಾಗಿ ಡಂಭಾಚಾರಿಗಳಾಗಿ ಬಿಡುವುದೂ ಉಂಟು. ಇವುಗಳಿಂದ ಜನಸಾಮಾನ್ಯರಿಗೆ ಯಾವ ಹಿತವೂ ಆಗದು. ಸಂಪ್ರದಾಯ ಎಂದಾಕ್ಷಣ ಅದರ ಹಿಂದೆ ಅಸಡ್ಡೆಯ ಭಾವನೆ ಇಂದು ಆಧುನಿಕರಲ್ಲಿ ಸರ್ವೇಸಾಮಾನ್ಯವಾಗಿದೆ. ಆದರೆ ಸಂಪ್ರದಾಯ ಯಾವಗಲೂ ತ್ಯಾಜ್ಯವೇ? ಸಂಪೂರ್ಣ ತ್ಯಜಿಸಲು ಸಾಧ್ಯವೇ? ಯಾವ ಸಂಪ್ರದಾಯಗಳಿಂದ ಸಮಜೋತ್ಕರ್ಷ ಸಾಧಿಸುವುದೂ ಅವುಗಳೇ ನಿಜವಾಗಿ ಜೀವಂತವಾದ ಸತ್‌ಸಂಪ್ರದಾಯಗಳು. ಇಂತಹ ರೂಢಿಗಳು ಅಗತ್ಯ ಸಮಾಜಕ್ಕೆ ಇದೆ. ಸಹಕಾರ ಭಾವ ಸಾಮಾಜಿಕ ಪ್ರಜ್ಞೆ ಇತ್ಯಾದಿಗಳನ್ನು ಮೂಡಿಸಲು ಪ್ರಗತಿಯ ಪಥವನ್ನರಿಯಲು ನೆಮ್ಮದಿಯ ಜೀವವನ್ನು ಸಾಧಿಸಲು ಈ ಸಂಪ್ರದಾಯಗಳು ಅಗತ್ಯವಾಗಿರುತ್ತವೆ. ಕಾಲಾನುಸಾರವಾಗಿ ಇವುಗಳು ಬಾಹ್ಯ ಸ್ವರೂಪದಲ್ಲಿ ಬದಲಾವಣೆಯಾದರೂ ಮೂಲತತ್ವ, ಸತ್ವ ಹಾಗೆಯೇ ಉಳಿದಿರುತ್ತದೆ. ಹಲವಾರು ಧಾರ್ಮಿಕ ಮತ್ತು ಸಾಮಾಜಿಕ ಸಂಪ್ರದಾಯಗಳು ಇಂತಹವಾಗಿವೆ.[೧]

## ಜನನ ಸಂದರ್ಭದಲ್ಲಿ ಮಾಡುವ ಆಚರಣೆ

ಜನನ ಸಂದರ್ಭದಲ್ಲಿ ಆಚರಣೆ ಪ್ರತಿಯೊಂದು ಸಮುದಾಯದವರಲ್ಲಿ ಆಚರಿಸುವಂತೆ ಮ್ಯಾಸನಾಯಕ ಸಮುದಾಯದಲ್ಲಿ ಆಚರಿಸುವರು. ಈ ಆಚರಣೆಗೆ ಸಂಬಂಧಿಸಿದಂತೆ ಹಿರಿಯರು ಈ ರೀತಿ ವಿವರ ನೀಡುತ್ತಾರೆ. ಹೆಣ್ಣು ಮಗಳು ಗರ್ಭಿಣಿಯಾಗಿ ಮಗುವನ್ನು ಪಡೆಯುವ

ಸಂದರ್ಭವನ್ನು ಮ್ಯಾಸನಾಯಕರು ಮೈಲಿಗೆ ಸೂತಕ ಎಂದು ಭಾವಿಸಿ ತವರುಮನೆಗೆ ಕಳುಹಿಸುತ್ತಾರೆ. ಹಿಂದಿನ ಕಾಲದಲ್ಲಿ ಗರ್ಭಿಣಿಯನ್ನು ಒಂಬತ್ತು ತಿಂಗಳು ತುಂಬುತ್ತಲೇ ಅಂದರೆ ಹೆರಿಗೆಯ ಸಂದರ್ಭಕ್ಕೆ ಮನೆಯ ಹೊರಗಡೆ ಬೇವಿನ ಸೊಪ್ಪು ಮತ್ತು ಹೊಂಗೆಸೊಪ್ಪು ಬೆರೆಸಿ ಕಟ್ಟಿದ ಗುಡಿಸಿಲಿನಲ್ಲಿ ಕರೆತಂದು ಕೂರಿಸುವರು. ಆಕೆಗೆ ಅಲ್ಲಿಯೇ ಹೆರಿಗೆಯಾಗ ಬೇಕಾಗುತ್ತಿತ್ತು. ಆದರೆ ಆಧುನೀಕರಣದ ಪ್ರಭಾವದಿಂದ ಇಂದು ತವರುಮನೆಗಳಲ್ಲಿ ಜನನವಾಗುತ್ತದೆ. ಹುಟ್ಟಿದ ಮಗುವಿಗೆ ಬಿಸಿನೀರಿನ ಸ್ನಾನ ಮಾಡಿಸುತ್ತಾರೆ. ನಂತರ ಮೂರು ದಿನಗಳವರೆಗೆ ಮೊರದಲ್ಲಿ ಬಟ್ಟೆ ಹಾಸಿ ಮಲಗಿಸುವರು. ಅನಂತರದಲ್ಲಿ ಹಗ್ಗ ಮತ್ತು ತೊಟ್ಟಿಲು ಕಟ್ಟಿ ಅದರಲ್ಲಿ ಹಾಕುತ್ತಾರೆ. ಹುಟ್ಟಿದ ಮಗುವಿಗೆ ಬೇವಿನ ಸೊಪ್ಪನ್ನು ಚೆನ್ನಾಗಿ ಅರೆದು ಮೈ ಮೇಲೆ ಹಚ್ಚುತ್ತಾರೆ. ಅಲ್ಲದೆ ಮಗುವಿಗೆ ಯಾವುದೇ ರೋಗ ಬರದಿರಲೆಂದು ಒಂದು ಹನಿ ಕತ್ತೆಯ ಹಾಲನ್ನು ಕುಡಿಸುತ್ತಾರೆ.[೨] ಈ ಪದ್ಧತಿ ಇತರ ಸಮುದಾಯಗಳಲ್ಲಿಯೂ ರೂಢಿಯಲ್ಲಿದೆ. ಈ ಸಂದರ್ಭದಲ್ಲಿ ಗಂಡನ ಮನೆಗೆ(ಮಗುವಿನ ತಂದೆಯ ಮನೆಗೆ) ತವರು ಮನೆಯ ಸಂಬಂಧಿಕನೇ ಹೋಗಿ ಸುದ್ದಿ ತಿಳಿಸಿ ಬರುತ್ತಾರೆ. ತಂದೆಗೆ ಮಗುವನ್ನು ಮೊರದಲ್ಲಿ ಇಟ್ಟು ಮೊದಲ ಸಲ ಮುಖ ತೋರಿಸುತ್ತಾರೆ.

**ನಾಮಕರಣ**

೧೬ನೇ ದಿನ ಅಥವಾ ಮೂರನೇ ತಿಂಗಳಲ್ಲಿ ಹೆಸರಿಡುವ ಕಾರ್ಯ ನಡೆಯುತ್ತದೆ. ಅಂದು ಇಡೀ ಮನೆಯನ್ನು ಸಾರಣೆ ಮಾಡುತ್ತಾರೆ. ಹಟ್ಟಿಯಲ್ಲಿನ ಜನರು, ಬಂಧುಗಳು ಸೇರುತ್ತಾರೆ. ತೊಟ್ಟಿಲು ಕಟ್ಟಿ ಮಗುವನ್ನು ತೊಟ್ಟಲಲ್ಲಿ ಹಾಕುತ್ತಾ ಜೋಗುಳ ಹಾಡುತ್ತಾರೆ. ತಂದೆಯ ಸಂಬಂಧಿಕರ ಅಪೇಕ್ಷೆಯಂತೆ ಮಗುವಿನ ನಾಮಕರಣ ನಡೆಯುತ್ತದೆ. ತಮ್ಮ ಜನಾಂಗದ ಪುರಾಣ ಪುರುಷರು, ಸಾಂಸ್ಕೃತಿಕ ವೀರರು, ಕುಲದೇವತೆ, ಮನೆಯ ಹಿರಿಯರ ಹೆಸರುಗಳನ್ನಿಡುವುದು ಸಾಮಾನ್ಯವಾಗಿದೆ. ಪಾಲನಾಯಕ, ಮಲ್ಲನಾಯಕ, ಮಲ್ಲಯ್ಯ, ಓಬಯ್ಯ, ಬೊಮ್ಮಯ್ಯ, ಸಣ್ಣಬೊಮ್ಮಯ್ಯ, ಬೋರಯ್ಯ, ಓಬಕ್ಕ, ಬೊಮ್ಮಕ್ಕ, ಬೋರಮ್ಮ, ಪೆದ್ದಕ್ಕ, ಬೋಸಮ್ಮ, ಪಾಪಯ್ಯ ಈ ತೆರನಾದ ಹೆಸರುಗಳನ್ನು ಇಡುತ್ತಾರೆ. ಇಂದು ಆಧುನೀಕರಣದ ಪ್ರಭಾವದಿಂದ ಬುಡಕಟ್ಟಿನ ಹೆಸರು ಇಡುವುದು ಬದಲಾವಣೆಯಾಗಿದೆ. ಸಿನಿಮಾದ ನಾಯಕ-ನಾಯಕಿಯರ ಹೆಸರು ಇಡುವುದು ರೂಢಿಯಾಗಿದೆ. ಉದಾಹರಣೆಗೆ ಸಿಂಹಾದ್ರಿ, ಅಭಿಷೇಕ್, ಐಶ್ವರ್ಯ, ಭೂಮಿಕಾ, ಸುದೀಪ್, ಚಿರಂಜೀವಿ, ಪ್ರಭಾಸ್. ಕುಲದೇವರ ಪೂಜಾವಾರಗಳಾದ ಸೋಮವಾರ ಮಂಗಳವಾರ, ಶುಕ್ರವಾರ ಇವು ಶುಭದಿನಗಳು. ಅಂದು ನಾಮಕರಣ ಕಾರ್ಯ ನಡೆಯುತ್ತದೆ. ಅಂದು ಮಗುವನ್ನು ಹಾಕಿದ ತೊಟ್ಟಿಲ ಸುತ್ತ ಕೆಳಗಡೆ ಗುಗ್ಗರಿಯನ್ನು ಒಂದೊಂದು ಗಂಟುಗಳಲ್ಲಿ ಕಟ್ಟಿ ಇಡುತ್ತಾರೆ. ಇದರ ಜೊತೆಗೆ ಸಣ್ಣ ಸಣ್ಣ ಸಕ್ಕರೆಯ ಗಂಟುಗಳು ಇರುತ್ತವೆ. ಹಾಗೆ ಮಗುವನ್ನು ತೊಟ್ಟಿಲಿಗೆ ಹಾಕಿದಾಗ ಹುರುಳಿಯನ್ನು ಗಂಟುಕಟ್ಟಿ ಮಗುವಿನ ಪಕ್ಕಕ್ಕೆ ಇಡುವುದುಂಟು. ಹೆಣ್ಣು ಮಗುವಾದರೆ ಮೂರು ಗಂಟು ಕಟ್ಟಿ ಅದರ ಎಡಭಾಗಕ್ಕೆ ಇಡುವರು. ಗಂಡು

ಮಗುವಾದರೆ ಐದು ಗಂಟು ತೊಟ್ಟಿಲೊಳಗೆ ಇಟ್ಟು ಈ ಬೆಂದ ಗುಗ್ಗರಿ ಗಂಟನ್ನು ಸೋದರತ್ತೆಯ ಕೈಯಲ್ಲಿ ಮುಟ್ಟದೇ ಬಾಯಲ್ಲೇ ಕಚ್ಚಿಕೊಂಡು ಮಗುವಿನ ಹೆಸರು ಹೇಳುತ್ತಾ ಮೂರು ಸಾರಿ ಹೊರಗೆ ಹೋಗಿ ಒಳಗೆ ಬರುವರು. ಹೀಗೆ ಹೊರಗೆ ಹೋಗಿ ಒಳಗೆ ಬಂದು ಮಾಡುವಾಗ ಮಗುವಿಗೆ ಇಟ್ಟ ಹೆಸರೇ ಮುಂದೆ ಶಾಶ್ವತವಾಗಿ ಸಲ್ಲುವುದು. ಸೋದರತ್ತೆ ಹೆಸರು ಇಡುವಾಗ ಹೊರಗಡೆ ಹೋಗಿ ಒಳಗೆ ಬರುವಾಗ ಅಲ್ಲಿ ಸೇರಿರುವ ಜನರು ಅವಳಿಗೆ ಖುಷಿಗಾಗಿ ಒದೆ ಕೊಡುತ್ತಾರೆ. ನಂತರ ಸಿಹಿ ಊಟ ತಿನ್ನುತ್ತಾರೆ.

**ಋತುಮತಿಶಾಸ್ತ್ರ**

ಮ್ಯಾಸನಾಯಕರಲ್ಲಿ ಹೆಣ್ಣು ಮಕ್ಕಳು ಮೈ ನೆರೆದರೆ ಮನೆಯ ಮುಂದೆಯೇ ಹೊಂಗೆ ಮತ್ತು ಬೇವಿನಸೊಪ್ಪು ಬೆರೆತ ಒಂದು ಚಿಕ್ಕ ಗುಡಿಸಲನ್ನು ಕಟ್ಟುವರು. ಅದರಲ್ಲಿ ಋತುಮತಿಯಾದ ಹೆಣ್ಣು ಹತ್ತು ದಿನಗಳ ಕಾಲ ಕೂತು ಸಮಯ ಕಳೆಯಬೇಕು. ಆ ಹತ್ತು ದಿನದಲ್ಲಿ ಗುಡಿಸಿ ಲೊಳಗೆ ಸೂತಕದ ಹೆಂಗಸಾಗಿ ಇರುತ್ತಾಳೆ. ಆಗ ಅವಳಿಗೆ ಮಕ್ಕಳನ್ನು ಪಡೆಯುವ ಬಯಕೆಯನ್ನು ಬೋಧಿಸುವ ಸಲುವಾಗಿ ಅವಳೊಡನೆ ಮಕ್ಕಳು ಆಟವಾಡುವಂತೆ ಕಟ್ಟೆಮನೆಗೆ ಅವಕಾಶ ಮಾಡಿಕೊಡಲಾಗುತ್ತದೆ. ಅಲ್ಲದೆ ಬಂಧುಬಾಂಧವರು(ಬಳಗ) ಆಕೆಗೆ ಬೇಕಾಗುವ ಆಹಾರ ಪದಾರ್ಥಗಳನ್ನು ತಯಾರಿಸಿ ತಂದುಕೊಡುವುದು ಉಂಟು. ಈ ಆಹಾರ ಪದಾರ್ಥಗಳು ಕೂಡ ಬಹುಪಾಲು ಸಿಹಿ ಪದಾರ್ಥಗಳಾಗಿ ಎಳ್ಳು ಬೆಲ್ಲದಿಂದಲೇ ಮಾಡಿದವಾಗಿದ್ದು, ಅವು ಅಕೆಯ ವೈವಾಹಿಕ ಬಯಕೆಯನ್ನು ಪ್ರಚೋದಿಸುವವೇ ಆಗಿರುತ್ತವೆ. ಇದನ್ನು ಒಸಗೆ ಎಂದು ಕರೆಯುತ್ತಾರೆ.

ಹನ್ನೊಂದನೆಯ ದಿನ ವಾದ್ಯ ಸಮೇತ ಊರ ಹೊರಗೆ ಕರೆದುಕೊಂಡು ಹೋಗಿ ತಂಗಟೆ ಗಿಡ ಮುಟ್ಟಿಸುತ್ತಾರೆ. ಮುಟ್ಟಿಸುವುದಲ್ಲದೆ ಆ ಗಿಡವನ್ನು ಅವಳಿಂದ ಅತ್ತಿಂದಿತ್ತ ಇತ್ತಿಂದತ್ತ ಮೂರು ಬಾರಿ ದಾಟಿಸುವರು. ಆ ತಂಗಟೆ ಗಿಡದ ಸ್ಥಳದಿಂದ ದೇವಸ್ಥಾನಕ್ಕೆ ಕರೆದುಕೊಂಡು ಬಂದು ಪೂಜೆ ಮಾಡಿಸುವರು. ಪೂಜೆಯಿಂದ ಆಕೆಯನ್ನು ಮನೆಗೆ ಕರೆದುಕೊಂಡು ಬರುತ್ತಾರೆ. ಮನೆಯ ಮುಂದೆ ಕುರಿಯ ಒಳ ಸಿಕ್ಕೆಯೊಂದಿಗೆ ಸೌದೆಯಿಟ್ಟು ಬೆಂಕಿ ಹಾಕಲಾಗಿರುತ್ತದೆ. ಈ ಬೆಂಕಿಯಲ್ಲಿಟ್ಟ ಬೇವಿನ ಕಡ್ಡಿಯನ್ನು ಹುಡುಗಿಯ ನಾಲಿಗೆಗಿಟ್ಟು ಸುಡುವರು. ನಾಲಿಗೆಯನ್ನು ಸುಡುವುದು ಮೂರು ಬಾರಿ. ಅಲ್ಲಿಗೆ ಹೆಣ್ಣು ಸೂತಕ ಕಳೆದು ಕೊಂಡು ಮನೆಯ ಒಳಕ್ಕೆ ಸೇರಿಕೊಂಡಂತಾಗುವುದು. ಮನೆಯ ಒಳಗೆ ಬಂದ ಹೆಂಗಸು ಅಲ್ಲಿಂದ ಹಾಲು ವೀಳ್ಯದೆಲೆ ಗಂಧದಕಡ್ಡಿಯನ್ನು ಎಡೆಯಲ್ಲಿಟ್ಟುಕೊಂಡು ನೀರು ಇರುವ ಕಡೆ ಬರುವಳು. ಅಲ್ಲಿ ಗಂಗಾದೇವತೆಗೆ ಪೂಜೆ ಮಾಡಿ ವೀಳ್ಯದೆಲೆಯನ್ನು ನೀರಿನಲ್ಲಿ ತೇಲಿ ಬಿಡಲಾಗುತ್ತದೆ. ಮೈನೆರೆದ ಹೆಣ್ಣು ಮಗಳೊಂದಿಗೆ ಹೋದ ಐದು ಜನ ಮುತ್ತೈದೆಯರು ಕೊಡದಲ್ಲಿ ನೀರು ಹೊತ್ತುಕೊಂಡು ಬರುವರು.

ಬಹಳ ಹಿಂದೆ ಮ್ಯಾಸನಾಯಕರು ಪೂರ್ಣವಾಗಿ ಅಡವಿ ಸಂಸಾರಿಗಳೇ ಆಗಿದ್ದಾಗ ಹೆಣ್ಣು ಮಗಳು ಮೈನೆರೆದಲ್ಲಿ ನೆರವೇರಿಸುತ್ತಿದ್ದ ಆಚರಣೆ ಬೇರೊಂದು ಬಗೆಯಲ್ಲಿ ಇದ್ದುದಾಗಿ ಹಿರಿಯರು ತಿಳಿಸುತ್ತಾರೆ. ಋತುಮತಿಯಾದ ಹೆಣ್ಣನ್ನು ಮನೆಯಿಂದ ಹೊರಗೆ ಬೇವಿನಸೊಪ್ಪಿನ ಗುಡಿಸಲಲ್ಲಿ ಕೂರಿಸಿ ಅವಳ ಮುಂದೆ ಒಂದು ಕಲ್ಲು ಮರಿಗೆಯನ್ನು ಇರಿಸುತ್ತಿದ್ದರು. ಈ ಕಲ್ಲು ಮರಿಗೆ ಊಟ ಮಾಡುವುದಕ್ಕಾಗಿ ಇರುತ್ತಿತ್ತು. ಮನೆಯ ಹಿರಿಯ ಹೆಂಗಸರು ಅನ್ನ ತಂದು ಆ ಕಲ್ಲು ಮರಿಗೆಯ ಮೇಲೆ ಇಟ್ಟರೆ ಋತುಮತಿಯಾದಾಕೆ ಮೊದಲನೆಯ ದಿನ ಕಿರುಬೆರಳಿನಿಂದ ಒಂದೊಂದೆ, ಅಗುಳು ತೆಗೆದುಕೊಂಡು ಬಾಯಿಗಿಟ್ಟುಕೊಳ್ಳಬೇಕು. ಎರಡನೆಯ ದಿನ ಕಿರುಬೆರಳಿನೊಂದಿಗೆ ಇನ್ನೊಂದು ಬೆರಳು ಉಪಯೋಗಿಸಬಹುದು. ಮೂರನೆಯ ದಿನ ಮೂರು ಬೆರಳು, ನಾಲ್ಕನೆಯ ದಿನ ನಾಲ್ಕು, ಐದನೆಯ ದಿನ ಕೈಯನ್ನು ಪೂರ್ಣವಾಗಿ ಉಪಯೋಗಿಸಿ ಊಟ ಮಾಡಬಹುದಿತ್ತು. ಹನ್ನೆರಡನೆಯ ದಿನ ಹುಡುಗಿಯ ಸೋದರಮಾವ ಆಕೆ ಕುಳಿತಿದ್ದ ಬೇವಿನ ಗುಡಿಸಲನ್ನು ಹಟ್ಟಿಯಾಚೆ ತೆಗೆದುಕೊಂಡು ಹೋಗಿ ಒಂದು ತಂಗಟೆಗಿಡ ಸುತ್ತಿಸಿ ತೆಗೆದು ಬೆಂಕಿ ಇಟ್ಟು ಮನೆಯೊಳಕ್ಕೆ ಕರೆದುಕೊಳ್ಳುತ್ತಿದ್ದರು. ಈ ಪದ್ಧತಿ ಈಗ ಇಲ್ಲ. ಊರು ಕೇರಿ ಪಟ್ಟಣಗಳ ಜೀವನಕ್ರಮದ ಪ್ರಭಾವ ಮ್ಯಾಸನಾಯಕರ ಮೇಲೆ ಆಗುತ್ತಿರುವುದರಿಂದ ಅವರ ಅನೇಕ ಆಚರಣೆಗಳು ಕೈಬಿಡಲ್ಪಡುತ್ತಿವೆ.

### ಹಟ್ಟಿಗಳಲ್ಲಿ ಬಂಧುತ್ವ

ಜಗತ್ತಿನ ಎಲ್ಲ ಸಮಾಜಗಳಲ್ಲಿಯೂ ಜನ ಬೇರೆ ಬೇರೆ ರೀತಿಯ ಸಂಬಂಧಗಳಿಂದ ಬೆಸುಗೆಗೊಂಡಿರುವುದು ಸಾಮಾನ್ಯ. ಇವುಗಳಲ್ಲಿ ಪ್ರಮುಖವಾದುದು ರಕ್ತ ಸಂಬಂಧ. ಸರಳ ಜೀವನ ನಡೆಸುವವರಲ್ಲಿ ಇದಕ್ಕೆ ಹೆಚ್ಚು ಪ್ರಾಶಸ್ತ್ಯ.

ಮಾನವನ ಸಂತಾನೋತ್ಪತ್ತಿ ಪ್ರವೃತ್ತಿ ಎರಡು ಬಗೆಯ ಬಂಧುತ್ವಕ್ಕೆ ಅವಕಾಶ ಮಾಡಿಕೊಡುತ್ತದೆ. ೧. ಪತಿಪತ್ನಿಯರ ವೈವಾಹಿಕ ಸಂಬಂಧ ಮತ್ತು ೨. ತಂದೆ ಮಕ್ಕಳ ರಕ್ತ ಸಂಬಂಧ. ಮೊದಲನೆಯ ಸಂಬಂಧ ಸಮಾಜದ ಅಥವಾ ಕಾನೂನಿನ ಅಂಗೀಕಾರ ಪಡೆದು ಅಸ್ತಿತ್ವ ತಾಳಿದರೆ ಎರಡನೆಯ ಸಂಬಂಧಕ್ಕೆ ರಕ್ತಸಂಬಂಧ ಕಾರಣ. ಪತಿಪತ್ನಿಯರ ಕಡೆಯಿಂದ ಹುಟ್ಟಿಕೊಳ್ಳುವ ಬಂಧುಗಳೆಲ್ಲ ವೈವಾಹಿಕ ಹಿನ್ನೆಲೆಯಲ್ಲಿ ಬಂದ ಸಂಬಂಧಿಗಳು. ಹೀಗೆ ವೈವಾಹಿಕ ಬಾಂಧವ್ಯದಿಂದ ಬೆಸೆಯಲ್ಪಡುವ ಜನ, ವಾಸ್ತವವಾಗಿ ರಕ್ತಸಂಬಂಧಿಗಳಾಗಿರುವುದಿಲ್ಲ. ಇನ್ನು ಎರಡನೆಯದು ತಂದೆ ಮಕ್ಕಳ ಸಂಬಂಧ. ಇದು ಪ್ರಾಥಮಿಕವಾದುದು. ನಿಜವಾದ ರಕ್ತಸಂಬಂಧದಿಂದ ಉತ್ಪನ್ನವಾದುದು. ತಂದೆ ತಾಯಿಗಳು ಮಕ್ಕಳ ಜನನಕ್ಕೆ ಕಾರಣರಾಗುತ್ತಾರೆ. ಪರಸ್ಪರ ಅವಲಂಬನೆ, ನೆರವು ಇವು ಈ ಬಗೆಯ ಬಾಂಧವ್ಯದ ಮೇಲೆ ಪ್ರಭಾವ ಬೀರುತ್ತದೆ. ಬೇರೆ ಬೇರೆ ರೀತಿಯ ಸಂಬಂಧಗಳನ್ನು ಗುರುತಿಸಿಕೊಳ್ಳಲು ಅವು ಅವಕಾಶ ಮಾಡಿಕೊಡುತ್ತವೆ.

ತಾತ, ಮೊಮ್ಮಕ್ಕಳು ಮರಿಮಕ್ಕಳು ಹೀಗೆ ಈ ಸಂಬಂಧದ ದೊಡ್ಡ ಕೊಂಡಿಯೇ ಏರ್ಪಡುತ್ತದೆ. ಈ ದೃಷ್ಟಿಯಿಂದ ಬಂಧುತ್ವ ಮಾನವ ವರ್ಗೀಕರಣದ ಒಂದು ಪ್ರಮುಖವಾದ ಅಂಗವಾಗಿ ನಿಲ್ಲುತ್ತದೆ.

ಮಾನವ ಜೀವಿಯ ಯಶಸ್ವಿ ಬದುಕಿಗೆ ಬಂಧುತ್ವ ಹಾಗೂ ವಿವಾಹ ಕಲ್ಪನೆ ಅಗತ್ಯ. ಇವು ನಾಲ್ಕು ಮೂಲಭೂತ ತತ್ತ್ವಗಳಿಗೆ ಬದ್ಧವಾಗಿರುತ್ತವೆ. ೧. ಸ್ತ್ರೀಯರು ಮಕ್ಕಳನ್ನು ಹೆರುವುದು. ೨. ಪುರುಷರು ಸ್ತ್ರೀಯರಿಗೆ ಗರ್ಭದಾನ ಮಾಡುವುದು. ೩. ಪುರುಷರು ಸ್ತ್ರೀ ಮತ್ತು ಮಕ್ಕಳ ಮೇಲೆ ನಿಯಂತ್ರಣ ಸಾಧಿಸುವುದು. ೪. ನಿಕಟ ಸಂಬಂಧಿಗಳ ನಡುವೆ ಲೈಂಗಿಕ ಸಂಬಂಧ ನಿಷಿದ್ಧವಾಗಿರುವುದು.

ಗರ್ಭಧಾರಣೆ, ಗರ್ಭಾದಾನ, ಹತೋಟಿ ಸ್ಥಾಪನೆ ಮತ್ತು ಸ್ವಗೋತ್ರದವರೊಡನೆ ಲೈಂಗಿಕ ಸಂಪರ್ಕ ನಿಷೇಧ. ಇವು ಎಲ್ಲ ಸಾಮಾಜಿಕ ವ್ಯವಸ್ಥೆಗಳ ತಳದಲ್ಲಿ ಬೇರುಬಿಟ್ಟಿವೆ. ಮೊದಲ ಎರಡು ಅಸಾಧಾರಣವೂ ನಿವಾರಿಸಿಕೊಳ್ಳಲಾಗದವು. ಆಗಿದ್ದರೆ ಮೂರನೆಯದು ನಿಸ್ಸಂಶಯವಾಗಿ ವಾದಗ್ರಸ್ತವಾಗಿದೆ. ಏಕೆಂದರೆ ಸ್ತ್ರೀಯರು ಮಕ್ಕಳನ್ನು ಹೆತ್ತು ಅವರನ್ನು ಪೋಷಿಸುವ ಕಾರ್ಯದಲ್ಲಿ ನುರಿತಿದ್ದರೆ, ಪುರುಷರು ಬೇಟೆ ಮತ್ತಿತರ ಸಾಹಸ ಸೆಣಸಾಟಗಳಲ್ಲಿ ಪರಿಣತಿ ಹೊಂದಿರುತ್ತಾರೆ. ಜೈವಿಕ ಕಾರಣಗಳಿಂದಾಗಿ ಸ್ತ್ರೀ ಎರಡನೆಯ ದರ್ಜೆಯವಳಾಗಿ ಪರಿಗಣಿತಳಾಗಿದ್ದಾಳೆ. ನಾಲ್ಕನೆ ಯದು ವ್ಯಕ್ತಿಯ ನಿಕಟ ಸಂಬಂಧಿಗಳಾದ ತಾಯಿತಂದೆ ಸೋದರಸೋದರಿಯರ ಪ್ರಾಥಮಿಕ ಬಾಂಧವ್ಯದೊಡನೆ ಕೆಲವು ಸಮಸ್ಯೆಗಳನ್ನು ಹುಟ್ಟುಹಾಕುತ್ತದೆ. ಈ ತತ್ವಗಳ ಆಶಯ ಏನೇ ಇರಲಿ, ಬಂಧುತ್ವ ಎಂದರೆ ರಕ್ತಸಂಬಂಧಿಗಳ ನಡುವಿನ ಸಂಬಂಧವನ್ನು ಹೇಳುವಂಥದ್ದು. ನೈಜ ರಕ್ತಸಂಬಂಧವನ್ನು ಗುರುತಿಸುವುದು ನಿಜವಾಗಿಯೂ ಕಷ್ಟ. ಎಷ್ಟೋ ಸಂಸ್ಕೃತಿಗಳಲ್ಲಿ ಈ ಜೈವಿಕ ಸಂಬಂಧದ ವೈಜ್ಞಾನಿಕ ಕಲ್ಪನೆಯನ್ನು ಪರಿಪಾಲಿಸುವುದೇ ಇಲ್ಲ. ವಾಸ್ತವವಾಗಿ ರಕ್ತ ಸಂಬಂಧ ಜೈವಿಕವಾಗಿ ಮಾನವನಿಗೆ ಸಂಬಂಧಿಸಿದ್ದಾಗಿದೆ. ಮಗುವಿನ ಜನನಕ್ಕೆ ತಂದೆ ತಾಯಿ ಇಬ್ಬರೂ ಕಾರಣರು. ಸಹಜವಾಗಿ ಮಗುವು ತಂದೆ ಮತ್ತು ತಾಯಿಯ ಸಮೀಪ ಬಂಧುಗಳಿಗೂ ಹತ್ತಿರವಾಗುತ್ತದೆ.

ಬಾಂಧವ್ಯ ಎಂಬುದು ಮುಖ್ಯವಾಗಿ ೧. ವಿಶಿಷ್ಟ ರೀತಿಯ ನಂಬಿಕೆಗಳು, ೨. ವಿಶಿಷ್ಟ ರೀತಿಯ ನಿರೀಕ್ಷೆಗಳು, ೩. ವಿಶಿಷ್ಟ ರೀತಿಯ ಮೌಲ್ಯಗಳು ಎಂದು ಮೂರು ಆಧಾರ ಸೂತ್ರಗಳನ್ನು ಅವಲಂಬಿಸಿರುತ್ತದೆ. ಪ್ರತಿಯೊಂದು ಸಮಾಜದಲ್ಲೂ ಇಂಥ ಸಂಬಂಧಗಳ ಹಿನ್ನೆಲೆಯಲ್ಲಿ ಕೆಲವು ನಂಬಿಕೆಗಳು ಮುಖ್ಯಪಾತ್ರ ವಹಿಸುತ್ತವೆ. ತಂದೆ ತಾಯಿಯರನ್ನು ಗೌರವಿಸಬೇಕು, ಸಲಹಬೇಕು, ಪೋಷಿಸಬೇಕು. ಅವರ ಸಲಹೆ ಸೂಚನೆಯಂತೆ ನಡೆದುಕೊಳ್ಳಬೇಕು. ಎರಡನೆಯದಾಗಿ, ತಂದೆ ತಾಯಿಗಳು ತಮ್ಮ ಮಕ್ಕಳಿಂದ ಕೆಲವು ರೀತಿಯ ನಡವಳಿಕೆಗಳನ್ನು ನಿರೀಕ್ಷಿಸುತ್ತಾರೆ. ಅವರನ್ನು

ಯಾವ ರೀತಿ ನೋಡಿಕೊಳ್ಳಬೇಕು, ಗೌರವಿಸಬೇಕು ಎಂಬುದು ಇಲ್ಲಿ ಮುಖ್ಯ. ಮಕ್ಕಳಾದರೆ ತಮ್ಮ ತಂದೆತಾಯಿಯರಿಂದ ಅವರೂ ಕೆಲವು ನಿರೀಕ್ಷೆಗಳನ್ನು ಇಟ್ಟುಕೊಂಡಿರುತ್ತಾರೆ.

ಮಾನವ ಸಂಬಂಧಗಳನ್ನು ಗುರುತಿಸುವಾಗ ದೈಹಿಕ ಸಂಬಂಧದಿಂದ ಏರ್ಪಡುವ ಬಂಧುತ್ವ ಮಹತ್ವದ್ದಾದರೂ ಅದಕ್ಕಿಂತ ಪ್ರಮುಖವಾಗಿ ಸಾಮಾಜಿಕ ಸಂಬಂಧ ನಿಲ್ಲುತ್ತದೆ. ಸಮಾಜದ ಅಂಗೀಕಾರ ಪಡೆದ ವಿಶಿಷ್ಟ ಸಂಬಂಧ ಅದು. ಅನೇಕ ಬುಡಕಟ್ಟು ಸಮೂಹಗಳಲ್ಲಿ ಮಗುವಿನ ಜನನ ವಿಷಯದಲ್ಲಿ ತಂದೆ-ತಾಯಿಗಳ ನೇರವಾದ ಸಂಬಂಧವನ್ನು ಗುರುತಿಸುವುದು ಕಷ್ಟ. ಮಲೇಷಿಯಾದ ಟ್ರಾಬ್ರಿಯಾಂಡ್ ದ್ವೀಪ ನಿವಾಸಿಗಳಲ್ಲಿ ತಾಯಿಯ ಸಂಗಾತಿ ಮಗುವಿನ ತಂದೆ ಎಂಬುದು ನಂಬಿಕೆ. ಆದರೆ ಅವರಲ್ಲಿ ಒಬ್ಬ ಸ್ತ್ರೀ ಅನೇಕ ಮರು ಮದುವೆಗಳನ್ನು ಮಾಡಿಕೊಳ್ಳಲು ಅವಕಾಶಗಳಿವೆ. ಆಕೆಯ ಮೊದಲ ಪತಿಯ ಮಕ್ಕಳು ಮುಂದೆ ತಮ್ಮ ತಾಯಿಗೆ ಯಾವ ಹೊಸ ಪತಿ ಬಂದರೂ ತಂದೆಯೆಂದೇ ಪರಿಗಣಿಸುತ್ತಾರೆ. ಭಾರತದಲ್ಲಿ ಮಲತಾಯಿ, ಮಲಮಕ್ಕಳ ಕಲ್ಪನೆ ಇದೇ ರೀತಿಯ ಸಾಮಾಜಿಕ ಸಂಬಂಧವನ್ನು ಗುರುತಿಸುತ್ತದೆ. ತನ್ನ ತಂದೆ ಬೇರೆ ಬೇರೆ ಕಾರಣಗಳಿಗಾಗಿ ಎಷ್ಟು ಜನ ಪತ್ನಿಯರನ್ನು ಸ್ವೀಕರಿಸಿದರೂ, ಯಾವ ಪತ್ನಿಯ ಮಕ್ಕಳೇ ಆಗಿರಲಿ, ಅವರನ್ನು ತಾಯಿಯೆಂದೇ ಪರಿಗಣಿಸುತ್ತಾರೆ. ಅನೇಕ ಬುಡಕಟ್ಟು ಸಮೂಹಗಳಲ್ಲಿ ಮಕ್ಕಳ ಹುಟ್ಟಿಗೆ ಕಾರಣವಾದ ತಂದೆಯ ಸ್ಥಾನವನ್ನು ನಿಷ್ಕರ್ಷೆ ಮಾಡುವುದು ಕೂಡ ವಿಚಿತ್ರವಾಗಿರುತ್ತದೆ. ಉದಾಹರಣೆಗೆ ಬಹುಪತ್ನಿತ್ವ ಪದ್ಧತಿಯುಳ್ಳ ನೀಲಗಿರಿಯ ತೋಡರಲ್ಲಿ ಒಬ್ಬಳೇ ಪತ್ನಿಯನ್ನು ಅನೇಕ ಮಂದಿ ಸೋದರರು ಹಂಚಿಕೊಳ್ಳುವ ಪದ್ಧತಿಯುಂಟು. ಅವರಲ್ಲಿ ರೂಢಿಯಲ್ಲಿರುವ ಧಾರ್ಮಿಕ ವಿಧಿಯಂತೆ ಸಂಪ್ರದಾಯಕ್ಕನುಗುಣವಾಗಿ ಯಾರು ಆಕೆಗೆ ಬಿಲ್ಲು ಮತ್ತು ಬಾಣವನ್ನು ಕೊಡುಗೆಯಾಗಿ ಅರ್ಪಿಸುತ್ತಾನೋ ಅವನು ಆಕೆಯ ಹೊಟ್ಟೆಯಲ್ಲಿ ಹುಟ್ಟುವ ಎಲ್ಲ ಮಕ್ಕಳಿಗೆ ತಂದೆ ಎನಿಸಿಕೊಳ್ಳುತ್ತಾನೆ. ಅವನು ತೀರಿಕೊಂಡರೆ ಮತ್ತೊಬ್ಬ ಸೋದರ ಆ ರೀತಿ ನಡೆದುಕೊಳ್ಳಬಹುದು. ಬೇರೆ ಸೋದರರಿಗೆ ಹುಟ್ಟಿದ ಮಕ್ಕಳೆಲ್ಲ ಆತನ ಮಕ್ಕಳೆಂದೇ ಪರಿಗಣಿತರಾಗುತ್ತಾರೆ. ಆದ್ದರಿಂದ ತಂದೆಯ ಸ್ಥಾನ ಪಡೆಯಲು ದೈಹಿಕ ಸಂಬಂಧವೇ ಮುಖ್ಯವಲ್ಲ. ಆಫ್ರಿಕದ ಕೆಲವು ಬುಡಕಟ್ಟು ಸಮಾಜಗಳಲ್ಲಿ ಗಂಡ ತೀರಿಕೊಂಡಾಗ ಆ ಸ್ಥಾನಕ್ಕೆ ಹೆಂಡತಿಯೇ ಆಗಮಿಸಿ ಅಧಿಕಾರ ವಹಿಸಿಕೊಳ್ಳುತ್ತಾಳೆ. ಅಂಥ ಸಂದರ್ಭದಲ್ಲಿ ಹುಟ್ಟುವ ಮಗುವಿಗೆ ಆಕೆಯೇ ತಂದೆ ಆಗುತ್ತಾಳೆ. ಮಕ್ಕಳು ಕೂಡ ಆಕೆಯನ್ನು ತಂದೆಯ ಸ್ಥಾನದಲ್ಲೇ ನೋಡುತ್ತಾರೆ.

ಬಂಧುತ್ವದಲ್ಲಿ ರಕ್ತಸಂಬಂಧಕ್ಕಿಂತ ಸಾಮಾಜಿಕ ಸಂಬಂಧವೇ ಮಿಗಿಲಾದುದು ಎನ್ನಲು ದತ್ತು ಸ್ವೀಕಾರ ಪದ್ಧತಿ ಉತ್ತಮ ನಿದರ್ಶನ. ದತ್ತು ಸ್ವೀಕಾರಕ್ಕೆ ಒಳಗಾಗುವ ಮಗು ರಕ್ತ ಸಂಬಂಧದ ದೃಷ್ಟಿಯಿಂದ ಸಂಬಂಧ ಸಾಧಿಸದಿದ್ದರೂ, ತಂದೆತಾಯಿ ಹಾಗೂ ಬಂಧುಗಳೊಡನೆ ಅವನನ್ನು ಮಗನನ್ನಾಗಿ ಸ್ವೀಕರಿಸುವ ಸಂದರ್ಭಗಳಿರುತ್ತವೆ. ಈ ಘಳಿಗೆಯಿಂದ ಮಗು

ಯಶೋವಂತರ ಸಾಲಿಗೆ ಸೇರುವ ಅರ್ಹತೆ ಸಂಪಾದಿಸುತ್ತದೆ. ಈ ಗೌರವವನ್ನು ಅವನು ಶಾಸನಸಮ್ಮತ ತಂದೆಯ ಮಗನಂತೆ ಸ್ವೀಕರಿಸುತ್ತಾನೆ. ಮುಂದೆ ಎಲ್ಲ ಹಕ್ಕು ಬಾಧ್ಯತೆಗಳಿಗೂ ಒಡೆಯನಾಗುತ್ತಾನೆ. ಸಾಮಾನ್ಯವಾಗಿ ತಮ್ಮ ಆಸ್ತಿಯ ಹಕ್ಕುದಾರರಿಲ್ಲದಾಗ ಒಬ್ಬ ಸಾಮಾನ್ಯ ಬಾಲಕನನ್ನು ಆ ಸ್ಥಾನಕ್ಕೆ ದತ್ತುಪುತ್ರನನ್ನಾಗಿ ಪಡೆಯಲಾಗುತ್ತದೆ. ದತ್ತುಪುತ್ರರನ್ನು ಹೊಂದುವ ವಿಚಿತ್ರ ಪದ್ಧತಿಗಳಲ್ಲಿ ಯುಗೋಸ್ಲಾವಿಯಾದ ಒಂದು ಪದ್ಧತಿಯನ್ನು ಮಾನವಶಾಸ್ತ್ರಜ್ಞರು ಉಲ್ಲೇಖಿಸುತ್ತಾರೆ. ಯಗೋಸ್ಲಾವಿಯಾದ ಬ್ಯಿಸಿಲಸ್ ಚಕ್ರವರ್ತಿ ದತ್ತು ಸ್ವೀಕರಿಸುವ ಸಂದರ್ಭದಲ್ಲಿ ತನ್ನ ಹಾಗೂ ದತ್ತುಪುತ್ರನಾಗುವ ಹುಡುಗನ ಕೈಯಲ್ಲಿ ಸಣ್ಣ ಗಾಯಗಳನ್ನು ಮಾಡಿ ತಮ್ಮ ಇಬ್ಬರ ರಕ್ತವನ್ನೂ ನೀರಿನಲ್ಲಿ ಬೆರೆಸಿ ಸ್ವೀಕರಿಸಿದ್ದರಿಂದ ತಮ್ಮಿಬ್ಬರ ನಡುವೆ, ರಕ್ತಸಂಬಂಧ ಏರ್ಪಟ್ಟಿತು ಎಂದು ತಿಳಿದಿದ್ದನಂತೆ. ಆದ್ದರಿಂದ ಬಂಧುತ್ವ ಸಾಮಾಜಿಕ ಮನ್ನಣೆ ಪ್ರಧಾನವಾಗುತ್ತದೆ. ಕೆಲವು ಸಮಾಜಗಳಲ್ಲಿ ಮಗುವಿನ ಪಾಲನೆ ಪೋಷಣೆಗಾಗಿ ಸಾಕುತಾಯಿಯನ್ನು ನೇಮಿಸಿಕೊಳ್ಳುವ ಪರಿಪಾಟವುಂಟು. ಈಗಂತೂ ಹೆಚ್ಚು ಸ್ತ್ರೀಯರು ತಾವು ಹೆತ್ತ ಮಕ್ಕಳ ಪಾಲನೆ ಪೋಷಣೆಯಲ್ಲಿ ತೊಡಗುವುದೇ ಇಲ್ಲ. ಇದು ಕಲ್ಪಿತ ಬಾಂಧವ್ಯಗಳಿಗೆ ಎಡೆ ಮಾಡಿಕೊಡುತ್ತದೆ. ಇದೆಲ್ಲವನ್ನು ಗಮನಿಸಿದರೆ ರಕ್ತಸಂಬಂಧಕ್ಕಿಂತ ಸಾಮಾಜಿಕ ಸಂಬಂಧವೇ ಮೇಲು ಎನ್ನಬಹುದು. ಸಾಮಾನ್ಯವಾಗಿ ತುಳುವ ಸಂಸ್ಕೃತಿ ಎಂದ ಕೂಡಲೇ ಅಲ್ಲಿಯ ವಿಶಿಷ್ಟವಾದ ಪದ್ಧತಿ ಅಳಿಯ ಸಂತಾನ ನೆನಪಿಗೆ ಬರುತ್ತದೆ. ಸೋದರಿಯ ಮಗ ಅಥವಾ ಸೋದರಮಾವನ ಮಗ ಎನ್ನುವಲ್ಲಿ ಜೈವಿಕ ಸಂಬಂಧ ಮುಖ್ಯವಲ್ಲ. ಇಲ್ಲಿ ಕಲ್ಪಿತ ಬಾಂಧವ್ಯ ಕೆಲಸ ಮಾಡುತ್ತದೆ. ಆದರೆ ಅದು ಯಾವುದೇ ರೀತಿಯ ಸಾಮಾಜಿಕ ಸಂಬಂಧವನ್ನು ತಿಳಿಸುವುದಿಲ್ಲ. ಸಮಾಜ ವಿಜ್ಞಾನಿಗಳು ಈ ಬಗೆಯ ಸಂಬಂಧವನ್ನು ನಿರ್ದಿಷ್ಟವಾಗಿ ಹಿನ್ನೆಲೆಯಲ್ಲಿ ಗಮನಿಸುತ್ತಾರೆ. ೧. ಹಕ್ಕು ಬಾಧ್ಯತೆಗೆ ಸಂಬಂಧಿಸಿದ ಬಾಂಧವ್ಯ, ೨. ಅಧೀನತೆಗೆ ಸಂಬಂಧಿಸಿದ ಅಣ್ಣ, ತಮ್ಮ, ಅಕ್ಕ, ತಂಗಿ, ತಂದೆ, ತಾಯಿ ಈ ಮಾತುಗಳ ಅರ್ಥವ್ಯಾಪ್ತಿಯನ್ನು ನಿರ್ಧರಿಸುವಾಗ ಈ ಹಿನ್ನೆಲೆಯಲ್ಲಿ ಲಕ್ಷಿಸಬೇಕಾಗುತ್ತದೆ. ಮಿತ್ರರ ಜೊತೆಗೆ ಸಂಬಂಧದಲ್ಲಿ ಬಾಂಧವ್ಯದ ಪಾತ್ರ ಏನೂ ಇರುವುದಿಲ್ಲ. ಕಾರ್ಮಿಕರು, ಶಿಕ್ಷಕರು, ಸಹಪಾಠಿಗಳು, ಸಹೋದ್ಯೋಗಿಗಳೂ ಈ ಯಾರೊಡನೆಯೂ ಬಂಧುತ್ವದ ಪ್ರಶ್ನೆ ಉದ್ಭವವಾಗದು. ವ್ಯಕ್ತಿಯೊಬ್ಬ ರಾಜಕೀಯ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸಂಸ್ಥೆಗಳೊಡನೆ ಇರಿಸಿಕೊಳ್ಳುವ ಸಂಬಂಧವೇ ಬೇರೆ, ನಿಜವಾದ ಬಾಂಧವ್ಯವೇ ಬೇರೆ. ಒಟ್ಟಿನಲ್ಲಿ ಬಾಂಧವ್ಯ ಎನ್ನುವುದು ನಿರ್ದಿಷ್ಟ ಸಾಮಾಜಿಕ ಉದ್ದೇಶಗಳಿಗಾಗಿ ಬಳಸಲ್ಪಟ್ಟ ಒಂದು ಸೂತ್ರ.

ಸಾಮಾಜಿಕ ಜೀವನದಲ್ಲಿ ವೈವಾಹಿಕ ಸಂಬಂಧಕ್ಕೆ ವಿಶೇಷ ಪ್ರಾಶಸ್ತ್ಯವಿದೆ. ಅನೇಕ ಪತ್ನಿಯರ ಸಂಬಂಧ ಏರ್ಪಡುತ್ತಿದ್ದುದು ತಮ್ಮ ಗುಂಪನ್ನು ಬಲಪಡಿಸಿಕೊಳ್ಳುವ ದೃಷ್ಟಿಯಿಂದಲೇ. ಗ್ರಾಮಾಂತರ ಪ್ರದೇಶಗಳಲ್ಲಿ ಬುಡಕಟ್ಟು ಸಮಾಜಗಳಲ್ಲಿ ಇಂಥ ಸಂಬಂಧ ಅಗತ್ಯ. ಒಂಟಿ ಜೀವನ ಇಲ್ಲಿ ಅಸಾಧ್ಯ. ಇಂಥ ಸಮಾಜಗಳಲ್ಲಿ ಆ ಜೀವನ ಕಷ್ಟಕರವಾದುದಾಗಿ,

ದುರ್ಭರವಾದುದಾಗಿ, ವಿನಾಶಕಾರಿಯಾಗಿ ಪರಿಣಮಿಸುತ್ತದೆ. ಈ ಕಾರಣಕ್ಕಾಗಿ ಇಡಿಯ ಗುಂಪನ್ನು ತನ್ನ ಬಾಂಧವ್ಯದ ವ್ಯಾಪ್ತಿಯಲ್ಲಿಟ್ಟುಕೊಳ್ಳುವುದು ಪ್ರತಿಯೊಬ್ಬನಿಗೂ ಅವಶ್ಯಕ. ತನಗೆ ಬೇಕಾದ ಸೌಕರ್ಯಗಳನ್ನು ಕಲ್ಪಿಸಿಕೊಳ್ಳಲು ಬುಡಕಟ್ಟು ಸಮಾಜಗಳಲ್ಲಿ ಬಂಧುಗಳ ಮೊರೆ ಹೋದಾಗ ಬಂಧುತ್ವದ ಅವಶ್ಯಕತೆ ಇದ್ದೇ ಇರುತ್ತದೆ. ಗಂಡಾಂತರದ ಸಂದರ್ಭದಲ್ಲಿ ಜನನ ಮರಣಗಳ ಸಂದರ್ಭದಲ್ಲಿ ಬಂಧುಗಳ ಆಶ್ರಯ ಅಥವಾ ನೆರವು ಅಗತ್ಯ. ಆದ್ದರಿಂದ ಬಾಂಧವ್ಯ ನಾಗರಿಕ ಸಮಾಜಕ್ಕಿಂತ ಹೆಚ್ಚಾಗಿ ಬುಡಕಟ್ಟು ಸಮಾಜಗಳಲ್ಲಿ ಬದುಕಿನ ಅತ್ಯಂತ ಅನಿವಾರ್ಯವಾದ ಅಗತ್ಯಗಳಲ್ಲಿ ಒಂದು.

ಸಾಮಾಜಿಕ ವ್ಯವಸ್ಥೆ ಏನೇ ಇರಲಿ, ಪ್ರಥಮ ಸಾಮಾಜಿಕ ಗುಂಪುಗಳು ಬಾಂಧವ್ಯದಿಂದ ಬೆಸೆಯಲ್ಪಟ್ಟಿರುತ್ತವೆ. ಅದರ ವಯಸ್ಸು ಹಾಗೂ ಸಾಮಾಜಿಕ ವರ್ತನೆಗಳ ಮೇಲೆ ಬಾಂಧವ್ಯ ನಿರ್ಧರಿಸಲ್ಪಡುತ್ತದೆ. ಪಿತೃ ಎಲ್ಲರಿಗೂ ಸಾಮಾನ್ಯನಾಗಿದ್ದಾಗ ಸೋದರನೆಂಬ ಭಾವನೆ ಒಡ ಮೂಡುತ್ತದೆ. ಒಂದೇ ಮೂಲದ ರಕ್ತಸಂಬಂಧಿಗಳಾಗಿ ಅವರು ಕಂಡುಬರುತ್ತಾರೆ. ಜೈವಿಕ ಸಂಬಂಧ ಈ ರೀತಿಯ ಅಧಿಕಾರ ವರ್ಗಾವಣೆಯಲ್ಲಿ ತಾನೇ ಪ್ರಮುಖವಾಗಿರುವುದಿಲ್ಲ. ೧. ವ್ಯವಸಾಯಕ್ಕೆ ಭೂಮಿ, ೨. ಇತರ ಆಸ್ತಿಗಳು, ೩. ಇತರರ ಮೇಲೆ ಚಲಾಯಿಸಬಹುದಾದ ಅಧಿಕಾರ.

ಈ ಹಿನ್ನೆಲೆಯಲ್ಲಿ, ಒಬ್ಬನೇ ಮೂಲಪುರುಷನ ವಂಶಕ್ಕೆ ಆರೋಪಿಸಲ್ಪಡುವ ಎಲ್ಲರನ್ನು, ಬಂಧು ಎಂದು ಕರೆಯಬೇಕಾಗಿಲ್ಲ. ಏಕೆಂದರೆ ಕಾಲಕ್ರಮದಲ್ಲಿ ಇದರ ವ್ಯಾಪ್ತಿ ಬೆಳೆದು ಬಂಧುತ್ವ ಚೆದರುತ್ತದೆ. ಹೀಗೆ ಚೆದುರಿದರೂ ಅಧಿಕಾರ ಒಬ್ಬ ವ್ಯಕ್ತಿಯಲ್ಲಿ ಉಳಿದರೂ ಕೆಲವು ಸಂದರ್ಭಗಳಲ್ಲಿ ಇವರೆಲ್ಲಾ ಒಟ್ಟುಗೂಡುತ್ತಾರೆ. ಅದು ಯಾವುದೇ ಸೇಡು ತೀರಿಸುವ ಸಂದರ್ಭ ವಾಗಬಹುದು. ತಮ್ಮ ಗುಂಪಿನ ಮೇಲೆ ಅಗಬಹುದಾದ ದಾಳಿಯನ್ನು ನಿವಾರಿಸಿಕೊಳ್ಳಬಹುದು. ಹೀಗೆ ಕೆಲವು ಅನಿವಾರ್ಯ ಸನ್ನಿವೇಶಗಳಲ್ಲಿ ಮಾತ್ರ ಈ ಗುಂಪುಗಳು ಬಂಧುತ್ವದ ಗುಂಪುಗಳೆಂಬ ಹೆಸರಿನಲ್ಲಿ ರಕ್ತ ಸಂಬಂಧಿಗಳ ಗುಂಪುಗಳಿಗೆ ಸೇರುತ್ತದೆ. ಉಳಿದ ಸಂದರ್ಭದಲ್ಲಿ ಇವೆಲ್ಲ ಬೇರೆ ಬೇರೆಯಾಗಿ ವರ್ತಿಸುತ್ತವೆ.[೩]

## ಬಂಧುತ್ವ ಪದದ ಬಳಕೆ

ಸಾಮಾನ್ಯವಾಗಿ ಮ್ಯಾಸನಾಯಕರು ತಂದೆ-ತಾಯಿಯನ್ನು, ಅಪ್ಪ, ಅಮ್ಮ, ಅಪ್ಪ-ಅವ್ವ, ಅಯ್ಯಾ-ಅಮ್ಮ, ಅಯ್ಯಾ-ಅವ್ವ, ಕೆಲವು ಸಾರಿ ತಂದೆಯನ್ನು ಅಣ್ಣ ಎಂದೂ ತಾಯಿಯನ್ನು ಅಕ್ಕ ಎಂದು ಸಂಬೋಧಿಸುತ್ತಾರೆ. ತಂದೆಯ ಅಣ್ಣ ಮತ್ತು ತಮ್ಮಂದಿರನ್ನು ದೊಡ್ಡಪ್ಪ ಮತ್ತು ಚಿಕ್ಕಪ್ಪ ಎಂದು ಕರೆಯುತ್ತಾರೆ. ಅದೇ ರೀತಿ ತಾಯಿಯ ಅಕ್ಕ ಮತ್ತು ತಂಗಿಯರನ್ನು ದೊಡ್ಡಮ್ಮ-ಚಿಕ್ಕಮ್ಮ ಎಂದು ಕರೆಯುತ್ತಾರೆ. ವ್ಯಕ್ತಿಯು ತನ್ನ ತಂದೆಯ ಅಕ್ಕ ಅಥವಾ ತಂಗಿ ಮಗಳನ್ನು ಸೋದರತ್ತೆಯ

ಮಗಳು ಎಂದು ಸಂಬೋಧಿಸುತ್ತಾನೆ. ಅದೇ ರೀತಿ ಸ್ತ್ರೀಯು ತನ್ನ ತಾಯಿಯ ಅಣ್ಣನ ಅಥವಾ ತಮ್ಮನ ಮಗನನ್ನು ಸೋದರಮಾವ ಎಂದು ಕರೆಯುವ ವಾಡಿಕೆಯುಂಟು. ಸಾಮಾನ್ಯವಾಗಿ ವ್ಯಕ್ತಿಯ ಅಣ್ಣನ ಗಂಡು ಮಕ್ಕಳು ಸಹೋದರರಾಗುತ್ತಾರೆ. ಮಹಿಳೆಯ ಅಕ್ಕ ಅಥವಾ ತಂಗಿಯ ಮಕ್ಕಳು ಸಹೋದರಿಯರಾಗುತ್ತಾರೆ. ಇವರ ನಡುವೆ ಮದುವೆ ಸಂಬಂಧಗಳು ನಿಷಿದ್ಧ. ಆದರೆ ಒಬ್ಬ ವ್ಯಕ್ತಿಯು ತನ್ನ ಅಕ್ಕನ ಮಗಳನ್ನು ಇಲ್ಲವೆ ತನ್ನ ತಂದೆಯ ಅಕ್ಕನ ಅಥವಾ ತಂಗಿಯ ಮಗಳನ್ನು ಮದುವೆಯಾಗಬಹುದು. ಅದೇ ರೀತಿ ಸ್ತ್ರೀಯು ತನ್ನ ತಾಯಿಯ ಅಣ್ಣನ ಮಗನನ್ನು ಇಲ್ಲವೆ ತಮ್ಮನ ಮಗನನ್ನು ಮದುವೆಯಾಗಬಹುದು. ಮ್ಯಾಸನಾಯಕರು ಸಾಮಾನ್ಯವಾಗಿ ಹೆಚ್ಚಿಗೆ ತನ್ನ ಸೋದರತ್ತೆಯ ಮಗಳನ್ನೇ ಅಥವಾ ಮಗನನ್ನೇ ಇಲ್ಲವೇ ಪುರುಷರಾದರೆ ಅಕ್ಕನ ಮಕ್ಕಳನ್ನೇ ವಿವಾಹವಾಗುತ್ತಾರೆ. ಬಹುಶಃ ಆಸ್ತಿ ಪಾಲಾಗುವುದನ್ನು ತಡೆಯಲು, ರಕ್ತ ಪರಿಶುದ್ಧತೆಯನ್ನು ಕಾಪಾಡಲು ಮತ್ತು ಭದ್ರತೆಯ ದೃಷ್ಟಿಯಿಂದಲೂ ಈ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬರುತ್ತಿರಬಹುದು.

ಮ್ಯಾಸನಾಯಕರಲ್ಲಿ ಈಗಾಗಲೇ ಹೇಳಿದ ಹಾಗೆ ಮುಖ್ಯವಾಗಿ ಮಂದಲಾರು ಮತ್ತು ಎನಮಲಾರರು ಎಂಬ ಮುಖ್ಯ ಕುಲ(ಬಳಿ/ಪಂಗಡ)ಗಳಿದ್ದು ಇವುಗಳಲ್ಲಿ ಮತ್ತೆ ಉಪಪಂಗಡಗಳು ಕಂಡುಬರುತ್ತವೆ. ಉದಾಹರಣೆಗೆ ಮಂದಲಾರು ಮತ್ತು ಎನಮಲಾರು ಮುಂತಾದ ಹಲವಾರು ಗುಂಪುಗಳಿವೆ.

**ಮದುವೆ**

ಸಾಮಾನ್ಯವಾಗಿ ಮ್ಯಾಸನಾಯಕ ಜನಾಂಗದ ಉಪಪಂಗಡಗಳ ಮದುವೆ ಪದ್ಧತಿಗೆ ಸಾಮ್ಯತೆ ಕಂಡುಬಂದರೂ ಮ್ಯಾಸನಾಯಕರಲ್ಲಿ ಕೆಲ ವಿಶಿಷ್ಟ ಆಚರಣೆಗಳನ್ನು ಗುರುತಿಸ ಬಹುದಾಗಿದೆ. ಮೊದಮೊದಲು ಮ್ಯಾಸನಾಯಕರ ಮದುವೆ ಪದ್ಧತಿ ಸರಳವಾಗಿದ್ದು, ಕ್ರಮೇಣ ಕೆಲ ಆಚರಣೆಗಳನ್ನು ರೂಢಿಸಿಕೊಂಡು ಬೆಳೆದಿರಬಹುದು. ಕಾರಣಾಂತರದಲ್ಲಿ ನಾಗರಿಕತೆ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣುತ್ತೇವೆ.

ಒಂದು ಕಾಲಕ್ಕೆ ವಧು-ವರರ ತಂದೆ ತಾಯಿಗಳೇ ಮದುವೆಯನ್ನು ನಿರ್ಧರಿಸುತ್ತಿದ್ದರು. ಮದುವೆಯ ಪೂರ್ವದಲ್ಲಿ ವಧು-ವರರು ಪರಸ್ಪರ ನೋಡುವುದು ಭೇಟಿಯಾಗುವುದು ನಿಷಿದ್ಧವಿತ್ತು. ಒಂದೇ ಬೆಡಗಿಗೆ ಸಂಬಂಧಿಸಿದವರಲ್ಲಿ ವೈವಾಹಿಕ ಸಂಬಂಧಗಳು ನಡೆಯುವುದಿಲ್ಲ. ಇದನ್ನು ಕಟ್ಟುನಿಟ್ಟಾಗಿ ಪಾಲಿಸಲಾಗುತ್ತಿದೆ. ಉದಾಹರಣೆಗೆ ಮಲ್ಲನಾಯಕರ ಬೆಡಗು ಮತ್ತು ಮಂದ್ಲಾರು ಬೆಡಗುಗಳ ನಡುವೆ ಸಂಬಂಧ ಏರ್ಪಡುತ್ತದೆ. ಆದರೆ ಮಲ್ಲನಾಯಕರಲ್ಲಿನ ಉಪಪಂಗಡಗಳಾದ ಗಾದನಾರು, ದಡ್ಡಿನಾಯಕರು, ಓಬನಾಯಕರು ಮುಂತಾದ ಉಪಪಂಗಡ ದವರು ಸೋದರ ಸಂಬಂಧವಾದ್ದರಿಂದ ಇವರ ನಡುವೆ ವಿವಾಹ ಸಂಬಂಧ ನಡೆಯುವುದಿಲ್ಲ.

ಸಾಂಪ್ರದಾಯಿಕವಾಗಿ ನಡೆಯುವ ಮದುವೆಗಳು ಅವರವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ಒಂದು ದಿನ, ಮೂರು ದಿನ, ಐದು ದಿನಗಳ ಕಾಲ ನಡೆಯುತ್ತವೆ. ಮದುವೆ ಸಂದರ್ಭದಲ್ಲಿ ನಿಶ್ಚಿತಾರ್ಥ, ಹಿರಿಯರ ಹಬ್ಬ, ವೀಳ್ಯಶಾಸ್ತ್ರ, ಮುಹೂರ್ತ, ಗಂಗೆಶಾಸ್ತ್ರ ಇವು ಅತ್ಯಂತ ಮಹತ್ವದ ಆಚರಣೆಗಳಾಗಿವೆ.

ಸುಮಾರು ೨೦-೨೨ ವರ್ಷದ ಯುವಕನಿಗೆ ಮನೆಯ ಹಿರಿಯರು ಮದುವೆ ಮಾಡಬೇಕೆಂದು ಯೋಚಿಸಿ ಸಂಬಂಧ ಬೆಳೆಸಬಹುದಾದ ಬೆಡಗಿನ ಹೆಣ್ಣಿನ ಹಟ್ಟಿಗಳನ್ನು ಗುರುತಿಸುತ್ತಾರೆ. ಯಾವುದಾದರೂ ಒಂದು ದಿನ ನಿಗದಿಗೊಳಿಸಿ ಒಬ್ಬ ಮಹಿಳೆಯೊಂದಿಗೆ(ಸೋದರಿ, ಸೋದರತ್ತೆ ಅಥವಾ ಕುಲದ ಮುತ್ತೈದೆ) ಐದಾರು ಜನ ಹೊರಡುತ್ತಾರೆ. ಹೋಗುವ ಹಾದಿಯಲ್ಲಿ ಬೆಕ್ಕು, ಕಟ್ಟಿಗೆಹೊರೆ, ರಂಡೆಮುಂಡೆ ಅಡ್ಡಬಂದರೆ ಅಪಶಕುನವೆಂದು ಭಾವಿಸುತ್ತಾರೆ.

ಹೆಣ್ಣಿನ ಮನೆಗೆ ಹೋದ ಸಂದರ್ಭದಲ್ಲಿ ಆತಿಥ್ಯ ನಡೆಯುತ್ತದೆ(ನಿಶ್ಚಿತಾರ್ಥವಾಗುವವರೆಗೆ ಅಲ್ಲಿ ಊಟ ಮಾಡುವಂತಿಲ್ಲ). ಹಾಲು, ಮೊಸರು, ಮಜ್ಜಿಗೆ ಸೇರಿಸಿ ವಧುವನ್ನು ನೋಡಿ ಮರಳಿ ಹೋಗುತ್ತಾರೆ. ಒಪ್ಪಿಗೆಯಾದಲ್ಲಿ ನಂತರ ಒಪ್ಪಿದ್ದೇವೆಂದು ಹೇಳಿ ಕಳಿಸುತ್ತಾರೆ.

### ನಿಶ್ಚಿತಾರ್ಥ(ಉಡಿ ತುಂಬುವ ಕಾರ್ಯ)

ವಿವಾಹದ ನಿರ್ದಿಷ್ಟ ಕ್ರಿಯೆ ಉಡಿ ತುಂಬುವ ಕಾರ್ಯದಿಂದ ಪ್ರಾರಂಭವಾಗುತ್ತದೆ. ಒಳ್ಳೆಯ ಮುಹೂರ್ತದ ದಿನಾಂಕದಂದು ಗಂಡಿನ ಮನೆಯವರು ಹೆಣ್ಣಿನ ಮನೆಗೆ ಬಂದು ಉಡಿ ತುಂಬುವ ಕಾರ್ಯ ಮಾಡುವುದರೊಂದಿಗೆ ಹೆಣ್ಣನ್ನು ತಮ್ಮದೆಂದು ನಿಶ್ಚಯಗೊಳಿಸಿಕೊಳ್ಳುತ್ತಾರೆ. ಗಂಡಿನ ಕಡೆಯವರು ಅಂದು ಒಂದು ಸೀರೆ ಎರಡು ಕುಪ್ಪಸ(ಒಂದು ಬಿಳಿ, ಒಂದು ಹಸಿರು) ಎರಡು ತೆಂಗಿನಕಾಯಿ ಹಣ್ಣು ಹೂಗಳನ್ನು ತೆಗೆದುಕೊಂಡು ಬರುತ್ತಾರೆ. ಕರಿಕಂಬಳಿಯನ್ನು ಹಾಸಿ ವಧುವನ್ನು ಗದ್ದುಗೆಯ ಮೇಲೆ ಕುಳ್ಳಿರಿಸಿ ಆರತಿ ಬೆಳಗಿ ಕಾಯಿ ಕುಪ್ಪಸ ಉಡಿ ತುಂಬುತ್ತಾರೆ. ಈ ಮೂಲಕ ಹೆಣ್ಣನ್ನು ತಮ್ಮದೆಂದು ಖಾಯಂ ಮಾಡಿಕೊಳ್ಳುತ್ತಾರೆ. ಅಂದೇ ಮದುವೆಯ ದಿನವನ್ನು ನಿರ್ಧರಿಸುತ್ತಾರೆ.

### ವೀಳ್ಯಶಾಸ್ತ್ರ

ನಿಶ್ಚಯಶಾಸ್ತ್ರದ ಒಂದು ಅಂಗವಾಗಿ ಇದು ನಡೆಯುತ್ತದೆ. ನೆಲದ ಮೇಲೆ ಹಾಸಿದ ಕಂಬಳಿಯ ಗದ್ದಿಗೆಯ ಮೇಲೆ ಮೂರು ವೀಳ್ಯೆಗಳನ್ನು ಇಡುತ್ತಾರೆ. ಈ ಕಂಬಳಿಯನ್ನು ಹಾಸುವವನು ಮಳೇಲೋರ ಗೋತ್ರದವನಾಗಿರಬೇಕು. ಈ ಮೂರು ವೀಳ್ಯಗಳಿಗೆ ಮಂದ್ಲಾರು ವೀಳ್ಯ ಮಲ್ಲನಾಯಕರ ವೀಳ್ಯೆ ಮಳೆಲೋರು ವೀಳ್ಯ ಎಂದು ಕರೆಯುತ್ತಾರೆ. ಇವು ಆಯಾ ಒಳಪಂಗಡಗಳ ಹಿರಿಯರ ಹೆಸರಿನಲ್ಲಿದ್ದು ಅವರಿಗೆ ಗೌರವ ಕೊಡುವುದರ ಸಂಕೇತವಾಗಿ

ಇಡಲಾಗುತ್ತದೆ. ಆಯಾ ಪಂಗಡಗಳ ವಂಶಸ್ಥರು ಈ ವೀಳ್ಯಗಳನ್ನು ಪಡೆಯುವುದರ ಮೂಲಕ ನಿಶ್ಚಿತಾರ್ಥಕ್ಕೆ ತಮ್ಮ ಸಮ್ಮತಿ ಸೂಚಿಸುತ್ತಾರೆ.

## ಹಿರಿಯರ ಹಬ್ಬ

ಮದುವೆಯ ಮೊದಲನೆಯ ದಿನ ಇದನ್ನು ಆಚರಿಸುವರು. ಗಂಡಿನವರು ಮತ್ತು ಹೆಣ್ಣಿನವರು ತಮ್ಮ ತಮ್ಮ ಮನೆಗಳನ್ನು ಸ್ವಚ್ಚಗೊಳಿಸಿದ ನಂತರ ಒಂದು ಸೇರು ಅಕ್ಕಿ, ಎಲೆ ಅಡಿಕೆ ದಕ್ಷಿಣೆ ತೆಗೆದುಕೊಂಡು ಎತ್ತುಗಳ ಹಟ್ಟಿಗೆ ಹೋಗುತ್ತಾರೆ. ಅಲ್ಲಿರುವ ಕೀಲಾರಿಗಳಿಗೆ ಅವುಗಳನ್ನು ಒಪ್ಪಿಸಿ ಅಲ್ಲಿಂದ ತೀರ್ಥ ಪಡೆದುಕೊಂಡು ಬರುತ್ತಾರೆ. ಅಲ್ಲದೆ ಅಂದು ರೊಪ್ಪದಲ್ಲಿಯೇ ಪ್ರಸಾದ ಸ್ವೀಕರಿಸಿ ಹಟ್ಟಿಗಳಿಗೆ ಮರಳಿ ಬರುತ್ತಾರೆ. ಅಂದು ಹಟ್ಟಿಯಲ್ಲಿ ತಮ್ಮ ಪಿತೃಗಳಿಗೆ(ದಿವಂಗತ ಹಿರಿಯರಿಗೆ) ಪೂಜೆ ಸಲ್ಲಿಸುತ್ತಾರೆ. ಬೇಟೆಯ ಆಯುಧಗಳಿಗೆ ಅಂದು ಪೂಜೆ ನಡೆಯುತ್ತದೆ. ಆ ದಿನ ಮ್ಯಾಸಮಂಡಲಕ್ಕೆ ಸಿಹಿ ಊಟದ ವ್ಯವಸ್ಥೆ ಇರುತ್ತದೆ. ಮಾಡಿದ ಅಡಿಗೆಯನ್ನು ಮದ್ಲಿಂಗನು ಪೂಜೆ ಮಾಡುತ್ತಾನೆ. ಈ ಸ್ಥಳದಲ್ಲಿ ದಾಸಯ್ಯನೂ ಇರುತ್ತಾನೆ. ದಾಸಯ್ಯನು ಶಂಖ, ಜಾಗಟೆ ಸದ್ದು ಮಾಡಿ ಗೋವಿಂದ ಗೋವಿಂದ ಗೋವಿಂದ ಎಂದು ಕೂಗುತ್ತಾನೆ. ನಂತರ ಊಟ ಪ್ರಾರಂಭವಾಗುತ್ತದೆ. ಮ್ಯಾಸಮಂಡಲಕ್ಕೆ ಕಡ್ಡಾಯವಾಗಿ ಮೊದಲ ಪಂಕ್ತಿಯ ಊಟ ಮಾಡಿಸಬೇಕಾಗುತ್ತದೆ. ಉಳಿದವರಿಗೆ ನಂತರ ಊಟ ಬಡಿಸುತ್ತಾರೆ. ಇದಕ್ಕೆ ಪೆದ್ದಲು ಹಿರೇರಹಬ್ಬ ಎಂದು ಕರೆಯುತ್ತಾರೆ. ಈ ಹಿರೇರಹಬ್ಬವು ವಧು-ವರರ ಎರಡೂ ಹಟ್ಟಿಗಳಲ್ಲಿ ನಡೆದು ಅಂದಿನ ರಾತ್ರಿಯೇ ಮದುವೆಯ ಸ್ಥಳಕ್ಕೆ ಪ್ರಯಾಣ ಬೆಳೆಸುತ್ತಾರೆ.

## ಮದ್ಲಿಂಗನ ಶಾಸ್ತ್ರ

ಮದುವೆಯ ಗಂಡನ್ನು ಸಾಮಾನ್ಯವಾಗಿ ಎತ್ತುಗಳ ಹಟ್ಟಿಯಲ್ಲಿ ಮದ್ಲಿಂಗನನ್ನಾಗಿ ಮಾಡುತ್ತಾರೆ. ಅಲ್ಲದೆ ಅವರವರ ಮನೆದೇವರ ಸಮ್ಮುಖದಲ್ಲಿ ಮಾಡುತ್ತಾರೆ. ಅಲ್ಲಿರುವ ಕೀಲಾರಿಗಳು ಎತ್ತುಗಳ ಸಮ್ಮುಖದಲ್ಲಿ ಮದುಮಗನನ್ನು ನಿಲ್ಲಿಸಿ ಮದುವೆ ಮನೆಯವರು ತಂದ ಅರಿಷಿಣ ಹಾಗೂ ರೊಪ್ಪದಲ್ಲಿನ ವಿಭೂತಿಯಿಂದ ಮದ್ಲಿಂಗನನ್ನಾಗಿ ಮಾಡುತ್ತಾರೆ. ಅಲ್ಲಿ ಉಣ್ಣೆಯ ಕಂಕಣವನ್ನು ಮದ್ಲಿಂಗನ ಕೈಗೆ ಕಟ್ಟಲಾಗುತ್ತದೆ. ಕೆಲವು ಕಡೆಗಳಲ್ಲಿ ಮನೆಯಲ್ಲಿಯೇ ಮುತ್ತೈದೆ ಸೋದರಿಯರು ವರನಿಂದ ಮೈತುಂಬ ಅರಿಷಿಣ ಹಚ್ಚಿ ಆರತಿ ಬೆಳಗಿ ಮದ್ಲಿಂಗನನ್ನು ಮಾಡುತ್ತಾರೆ.

ಮದ್ಲಿಂಗನು ಕೊರಳಿನಲ್ಲಿ ವೀರದಾಳಿ(ಬೆಳ್ಳಿಸರ) ಧರಿಸಿರುತ್ತಾನೆ. ಕೈಯಲ್ಲಿ ಬೆಳ್ಳಿ ಕಡಗದೊಂದಿಗೆ ಚಿಲ್ಲಣ(ಬಾಕು) ಹಿಡಿದಿರುತ್ತಾನೆ. ಈ ಬಾಕಿನ ಮಧ್ಯ ವೀಳ್ಯದೆಲೆ ತುದಿಗೆ ಲಿಂಬೆಹಣ್ಣನ್ನು ಚುಚ್ಚಿ ಅದಕ್ಕೆ ಕೆಂಪು ವಸ್ತ್ರ ಸುತ್ತಿರುತ್ತಾರೆ. ಮದ್ಲಿಂಗನು ಕಿವಿಯಲ್ಲಿ ಕಂಟಿ(ಆಭರಣ) ಧರಿಸಿರುತ್ತಾನೆ. ಕಿವಿಯ ಮೇಲ್ಭಾಗಕ್ಕೆ ಒಂದು ಮುರ, ಸೊಂಟಕ್ಕೆ ಬೆಳ್ಳಿಯ ಉಡುದಾರ ಧರಿಸಿರುತ್ತಾನೆ.

ಮೊದಲು ಅಸಿನ ನಾರಿನ ಉಡದಾರವನ್ನು ಕಟ್ಟಿಕೊಳ್ಳುತ್ತಿದ್ದರು. ಇತ್ತೀಚೆಗೆ ಸಾಮರ್ಥ್ಯಕ್ಕೆ ತಕ್ಕಂತೆ ಬೆಳ್ಳಿಯ ಉಡದಾರ ಹಾಗೂ ನೂಲಿನ ಉಡದಾರ ಧರಿಸುತ್ತಾರೆ.

**ತಾಳಿಶಾಸ್ತ್ರ**

ಮ್ಯಾಸನಾಯಕ ಸಮುದಾಯದಲ್ಲಿ ಮದುವೆಯು ಹೆಣ್ಣಿನ ಮನೆಯ ಮುಂದೆ ಜರುಗುತ್ತದೆ. ಕೆಲ ಸಂದರ್ಭದಲ್ಲಿ ದೇವರಗುಡಿಯ ಮುಂದೆಯೂ ನಡೆಯುವುದುಂಟು. ಮುಹೂರ್ತದ ಹಿಂದಿನ ದಿನವೇ ಗಂಡಿನ ಕಡೆಯವರು ವಧುವಿನ ಹಟ್ಟಿಗೆ ಬಂದು ವಾಸ್ತವ್ಯ ಮಾಡುತ್ತಾರೆ. ಮುಹೂರ್ತದ ದಿನದ ಪ್ರಾತಃಕಾಲ ಅನೇಕ ಕ್ರಿಯೆಗಳು ನಡೆಯುತ್ತವೆ. ಮನೆದೇವರ ಪೂಜಾರಿಯು ವಧೂವರರ ತಲೆಗೆ ಹಾಲು ತುಪ್ಪ ಎರೆಯುತ್ತಾರೆ. ನಂತರ ಐದು ಜನರು ನೀರು ಹಾಕುತ್ತಾರೆ. ಇದಕ್ಕೆ ತೋಡನಿಲ್ಲು(ಮಲೆ ನೀರು) ಎಂದು ಕರೆಯುತ್ತಾರೆ. ನಂತರ ಮದುಮಕ್ಕಳಿಗೆ ಹೊಸಬಟ್ಟೆ ತೊಡಿಸಿ ಕರಿ ಕಂಬಳಿ ಗದ್ದಿಗೆ ಹಾಕಿ ಅವರನ್ನು ಕುಳ್ಳಿರಿಸಿ ಕಳಸ ಹೂಡುತ್ತಾರೆ. ಆಗ ಒಡೇರ ಗದ್ದಿಗೆಯ ಮೇಲೆ ಮತ್ತೊಮ್ಮೆ ಕುಳ್ಳಿರಿಸಿ ಕಳಸ ಹೂಡುತ್ತಾರೆ. ಈಗ ಮಾಡುವ ಈ ವೀಳ್ಯ ಶಾಸ್ತ್ರಕ್ಕೆ ಹಿರೆವೀಳ್ಯ ಎಂದು ಹೆಸರು. ಮಳೇಲೋರು ಗೋತ್ರದವರು ಗುರುಸ್ಥಾನದವರಿಗೆ ಕಟ್ಟೆಮನೆಯವರಿಗೆ ಸಮಾಜದ ಹಿರಿಯರಿಗೆ ವೀಳ್ಯಗಳನ್ನು ಸಲ್ಲತಕ್ಕವರಿಗೆ ಕೊಡುತ್ತಾರೆ. ಒಂದು ಕಾಯಿ ಮತ್ತು ಒಂದು ವೀಳ್ಯ, ಕಂಬಳಿ ರೀತಿ ಹಾಗೇ ಇರುತ್ತದೆ. ಅದನ್ನು ಕೊನೆಗೆ ತಾನು ತೆಗೆದುಕೊಳ್ಳುತ್ತಾನೆ.

ವಧುವಿಗೆ ಹದಿನಾಲ್ಕು ರೂಪಾಯಿ ಮತ್ತು ಎರಡು ತೆರವನ್ನು ವರನ ಬಂಧುಗಳು ಕೊಡುತ್ತಾರೆ. ಈ ಹಣದಲ್ಲಿ ಒಂದು ದುಡ್ಡನ್ನು ವರನ ಬಂಧುಗಳಿಗೆ ಮರಳಿ ಕೊಡುತ್ತಾರೆ. ಇದಾದ ನಂತರ ಮತ್ತೊಂದು ಕಂಬಳಿಯ ಮೇಲೆ ಕಂಚಿನ ತಟ್ಟೆಯಲ್ಲಿ ವಧುವಿನ ಕೈಯನ್ನಿರಿಸುತ್ತಾರೆ. ಮೇಲ್ಗಡೆಯಲ್ಲಿರುವ ವರನ ಕೈಯಲ್ಲಿ ಎಲೆಯ ಕೊಳವೆಯನ್ನು ಕೊಟ್ಟು ಹಾಲೆರೆಸುತ್ತಾರೆ. ನಂತರ ವಧುವಿನ ಕೈ ಮೇಲಿಟ್ಟು ಹಾಲೆರೆಸುವರು. ತಟ್ಟೆಯಲ್ಲಿನ ಹಾಲು ಮುಟ್ಟಿಸಿ 'ನನಗೆ ನೀನೇ ಗತಿ, ನಿನಗೆ ನಾನೇ ಗತಿ' ಎಂಬುದಾಗಿ ಪ್ರಮಾಣ ಮಾಡಿಸುತ್ತಾರೆ. ಮುಹೂರ್ತಕ್ಕೆ ಸರಿಯಾಗಿ ಮಾಂಗಲ್ಯವನ್ನು ಗುರುಹಿರಿಯರು ಮುಟ್ಟುತ್ತಾರೆ. ನಂತರ ಅದನ್ನು ವರನು-ವಧುವಿನ ಕೊರಳಿಗೆ ಕಟ್ಟುತ್ತಾನೆ. ಆಗ ಅಲ್ಲಿನ ಸಮಸ್ತ ಜನ ಅಕ್ಷತೆ ಹಾಕುತ್ತಾರೆ. ಹಿಂದಿನ ಕಾಲದಲ್ಲಿ ಅಕ್ಷತೆಗಾಗಿ ಜೋಳವನ್ನು ಬಳಸುತ್ತಿದ್ದರು. ಮೊದಲು ಇಂದು ಬಳಸುವ ಚಿನ್ನದ ತಾಳಿಗೆ ಬದಲಾಗಿ ಕೇವಲ ಅರಿಷಿಣ ಕೊಂಬನ್ನು ಬಳಸುತ್ತಿದ್ದರು. ಪಾಮುಡ್ಲ ಗೋತ್ರದವರು ಇತ್ತೀಚಿನವರೆಗೂ ಅರಿಷಿಣ ಕೊಂಬನ್ನೇ ತಾಳಿಯಾಗಿ ಬಳಸುತ್ತಿರುವುದು ಕಂಡುಬಂದಿದೆ. ಮರಿಕುಂಟ್ಲಾನು ಗೋತ್ರದವರಲ್ಲಿ ಕರಿಮಣಿಯೇ ತಾಳಿಯೆಂದು ಭಾವಿಸಿ ಕಟ್ಟುವ ಪದ್ಧತಿ ಇದೆ.

ಕೆಲವು ವರ್ಷಗಳ ಹಿಂದೆ ಪಾಮುಡ್ಲ ಗೋತ್ರದಲ್ಲಿ ಮದುವೆಯ ವರನು ಮದುವೆಯ

ಸ್ಥಳಕ್ಕೆ ಹೋಗದೆ ಕೇವಲ ತನ್ನ ಆಯುಧ ಬಾಕು ಕಳುಹಿಸುತ್ತಿದ್ದನು. ವಧುವಿನ ಕೈಯಿಂದ ಬಾಕುವಿಗೆ ಕಂಕಣ ಕಟ್ಟಿಸುತ್ತಿದ್ದರು. ಇದೇ ತಾಳಿ ಎಂದು ಗ್ರಹಿಸಲಾಗುತ್ತಿತ್ತು. ಆ ಕೋಲಿನ ಆಯುಧಕ್ಕೆ ಕಂಕಣ ಕಟ್ಟುವುದರ ಮೂಲಕ ಮದುವೆ ನಡೆಯುತ್ತದೆ. ಮಂದ್ಲಾರು ಪಂಗಡದಲ್ಲಿನ ಬುಲ್ಲುಡ್ಲು ಗೋತ್ರದವರು ಎತ್ತಿನ ಕೀಲಾರಿಗಳಾಗಿರುವುದರಿಂದ ಎಲ್ಲಾ ಸಮಯದಲ್ಲಿ ಮದ್ಲಿಂಗನು ಎತ್ತುಗಳ ಹಟ್ಟಿಯ ರೊಪ್ಪದಲ್ಲಿಯೇ ಇರಬೇಕಾಗುತ್ತದೆ. ಮದುವೆ ಮಂಟಪಕ್ಕೆ ಹೋಗಲು ಸಾಧ್ಯವಾಗದಿರುವುದರಿಂದ ಕೋಲಿನ ಆಯುಧವನ್ನು ತೆಗೆದುಕೊಂಡು ಹೋಗಿ ಮದ್ಲಿಂಗನನ್ನಾಗಿ ಮಾಡಿ ಮದುವೆ ಕಾರ್ಯ ಜರುಗಿಸಲಾಗುತ್ತದೆ. ಅಕ್ಷತೆಯ ನಂತರ ಕಾಲ್ನಡಿಗೆಯಲ್ಲಿ ಮೆರವಣಿಗೆ ನಡೆಯುತ್ತದೆ. ಮದುವೆಯ ದಿನವೇ ಸಾಯಂಕಾಲ ದೇವಸ್ಥಾನದ ಮುಂದೆ ಹೆಣ್ಣನ್ನು ಒಪ್ಪಿಸುವ ಕಾರ್ಯ ನಡೆಯುತ್ತದೆ. ಊರ ಮುಂದಿನ ಬುಡ್ಡೆ ಕಲ್ಲಿಗೆ ಹೋಗಿ ಕಾಯಿ ಹೊಡೆದು ಸೂರ್ಯ ನಮಸ್ಕಾರ ಮಾಡಿ ದೇವಾಲಯಗಳಿಗೆ ತೆರಳಿ ನಮಸ್ಕರಿಸುವರು. ಮನೆಗೆ ಬಂದಾಗ ವಧು-ವರರ ಹಿಂದೆ ಬಂಧುಬಳಗದವರನ್ನು ತಡೆದು ಗಂಡನ ಹೆಸರೇನು ನಿನ್ನ ಹೆಂಡತಿಯ ಹೆಸರೇನು ಎಂದು ಕೇಳುತ್ತಾರೆ. ಈ ಸಮಯದಲ್ಲಿ ಜನಪದರಲ್ಲಿ ಕಾವ್ಯಮಯವಾಗಿ ವರ್ಣಿಸಿ ಹೆಸರನ್ನೂ ಹೇಳುತ್ತಾರೆ. ಸಂಜೆ ಮೆರವಣಿಗೆ ನಡೆಯುತ್ತದೆ.

### ಗಂಗೆಶಾಸ್ತ್ರ

ಮದುವೆಯ ಮೂರನೇ ದಿನ ವಧುವನ್ನು ವರನ ಮನೆಗೆ ಕರೆದುಕೊಂಡು ಹೋಗುತ್ತಾರೆ. ಊರ ಸಮೀಪದ ಕೆರೆ ಅಥವಾ ಬಾವಿ ಇಲ್ಲವೆ ಹೊಳೆಗೆ ಹೋಗಿ ಪೂಜೆಯ ನಂತರ ತುಂಬಿದ ಕೊಡವನ್ನು ವಧುವಿನ ತಲೆಯ ಮೇಲೆ ಹೊರಿಸಿಕೊಂಡು ಬರಲಾಗುತ್ತದೆ. ಆಗ ವರನು ತನ್ನ ಮನೆಯ ಬಾಗಿಲ ಒಳಗಡೆ ನಿಂತು 'ಯಾರು ಯಾರು ಬಂದೀರಿ ಎಂದು ವಧುವನ್ನು ಕೇಳುತ್ತಾನೆ. ಆಗ 'ಗಂಗಮ್ಮ ನಾನು ಬಂದೀನಿ' ಎಂದು ವಧು ಹೇಳುತ್ತಾಳೆ. ಕೊಡವನ್ನು ಪೂಜಿಸಿ ಅವಳನ್ನು ಒಳಗಡೆಗೆ ಕರೆದುಕೊಳ್ಳುತ್ತಾರೆ.

### ನಾಗೋಲಿಶಾಸ್ತ್ರ

ಮದುವೆಯ ಕೊನೆಯ ಕಾರ್ಯವಾಗಿರುವ ಇದನ್ನು ಮದುವೆಯ ಮರುದಿನ ನೆರವೇರಿಸುತ್ತಾರೆ. ಈ ದಿನದಂದು ವಧು-ವರರ ಕಂಕಣಗಳನ್ನು ಬಿಚ್ಚುತ್ತಾರೆ. ಮದುವೆ ಮಂಟಪವನ್ನು ಪೂಜೆ ಮಾಡಿ ಎಲ್ಲರಿಗೂ ತಾಂಬೂಲ ಹಂಚಲಾಗುವುದು. ತಾಂಬೂಲ ಹಂಚುವಾಗ ಒಂದು ವಿಶೇಷ ಕ್ರಮವನ್ನು ಅನುಸರಿಸುತ್ತಾರೆ. ತಮ್ಮ ಸಾಂಸ್ಕೃತಿಕ ನಾಯಕರಿಗೆ ಮನೆದೇವರಿಗೆ ಪ್ರತ್ಯೇಕವಾಗಿ ತಾಂಬೂಲ ತೆಗೆದಿರಿಸಲಾಗುತ್ತದೆ. ನಂತರದಲ್ಲಿ ಸ್ಥಳೀಯ ಕಟ್ಟೆಮನೆ ಯಜಮಾನರಿಗೆ ಮುಖಂಡರಿಗೆ ಮತ್ತು ಉಳಿದವರಿಗೆ ಹಂಚಲಾಗುವುದು.

ಆ ದಿನವೇ ಮದುವೆ ಚಪ್ಪರದಲ್ಲಿ ವಧುವನ್ನು ಕುಳ್ಳಿರಿಸಿ ವರನು ಅವಳ ಮೇಲೆ ಬಾಗಿ ನಿಂತಾಗ ಅವನ ಮೇಲೆ ನೀರು ಹಾಕುತ್ತಾರೆ. ಅದೇ ರೀತಿ ವರನನ್ನು ಕುಳ್ಳಿರಿಸಿ ವಧು ಬಾಗಿ ನಿಂತಾಗ ಅವಳ ಮೇಲೆ ಹಾಕಿದ ನೀರು ವರನ ತಲೆ ಮೈಮೇಲೆ ಬೀಳುವ ಹಾಗೆ ನೀರೆರೆಯುತ್ತಾರೆ. ಅಂದಿನ ದಿನವೇ ರಾತ್ರಿ ನಿಷೇಕ ಕಾರ್ಯ ನಡೆಯುವುದು. ಮುಂದಿನ ದಿನಗಳಲ್ಲಿ ದಂಪತಿಗಳು ಬಂಧುಗಳ ಮನೆಗೆ ಪ್ರಯಾಣ ಮಾಡುತ್ತಾರೆ. ಒಂದು ಕಾಲಕ್ಕೆ ಮ್ಯಾಸನಾಯಕರಲ್ಲಿ ಬಹುಪತ್ನಿತ್ವವು ಜಾರಿಯಲ್ಲಿತ್ತು.[೪] ಆದರೆ ಬಹುಪತಿತ್ವವಾಗಲಿ ವಿಧವಾ ವಿವಾಹವಾಗಲಿ ಇವರಲ್ಲಿಲ್ಲ. ನಾಗರಿಕತೆಯ ಪ್ರಭಾವವು ಮ್ಯಾಸನಾಯಕರ ಮೇಲೆ ಗಾಢವಾದ್ದರಿಂದ ತೆರವೂ ಸೇರಿದಂತೆ ಅನೇಕ ಮೂಲ ಆಚರಣೆಗಳಲ್ಲಿ ಬದಲಾವಣೆ ಆಗುತ್ತಿರುವುದು ಕಂಡುಬರುತ್ತಿದೆ.

**ಶವಸಂಸ್ಕಾರ**

ಮ್ಯಾಸನಾಯಕರ ಶವಸಂಸ್ಕಾರ ಪದ್ಧತಿಯು ವೈಶಿಷ್ಟಪೂರ್ಣವಾಗಿದೆ. ಯಾವುದಾದರೂ ತೀವ್ರ ರೋಗದಿಂದ ಬಳಲುತ್ತಿರುವವನನ್ನು ಅಥವಾ ಮತ್ತಾವುದೋ ಕಾರಣದಿಂದ ಸಾವಿನಂಚಿನಲ್ಲಿರುವ ವ್ಯಕ್ತಿಯನ್ನು ಮನೆಯ ಹೊರಭಾಗಕ್ಕೆ ತಂದು ಮಲಗಿಸುತ್ತಾರೆ. ಜೀವ ಹೋಗುವಾಗ ಕುಟುಂಬದವರು, ಸಂಬಂಧಿಕರು ಆ ವ್ಯಕ್ತಿಗೆ ನೀರು ಬಿಡುತ್ತಾರೆ. ಜೀವ ಹೋದ ತಕ್ಷಣ ಓಣಿಯ ಹಾಗೂ ಹಟ್ಟಿಯ ಹಿರಿಯರೆಲ್ಲರು ಸೇರಿ ಮುಂದಿನ ಕಾರ್ಯದ ವ್ಯವಸ್ಥೆ ಮಾಡುತ್ತಾರೆ.

ಮಣೆಗಾರರ ಮೂಲಕ ಸತ್ತ ಸುದ್ದಿಯನ್ನು ಸಂಬಂಧಿಕರ ಊರುಗಳಿಗೆ ತಲುಪಿಸಲಾಗುತ್ತದೆ. ಶವದ ಮೈ ತೊಳೆದು ನೆಂಟರು ತಂದ ಹೊಸಬಟ್ಟೆಯನ್ನು ತೊಡಿಸಿ ಉದ್ದಕ್ಕೆ ಮಲಗಿಸುತ್ತಾರೆ. ಮನೆಯ ಮುಂದುಗಡೆಯ ಬದಿಯಲ್ಲಿ ಹೊಸ ಗಡಿಗೆಯಲ್ಲಿ ಮೂರು ಪಾವು ಅಕ್ಕಿಯ ಅನ್ನವನ್ನು ಬೇಯಿಸುತ್ತಾರೆ. ಆ ಸಮಯಕ್ಕಾಗಲೇ ಸ್ಮಶಾನದಲ್ಲಿ ಹೂಳುವ ಜಾಗವನ್ನು ಗುರುತಿಸಿ ಕುಣಿ ತೆಗೆಯುವ ಕಾರ್ಯವೂ ಸಾಗಿರುತ್ತದೆ. ಸಂಬಂಧಿಕರೆಲ್ಲ ಬಂದ ನಂತರ ಸಿದ್ಧವಾದ ಚಟ್ಟದಲ್ಲಿ ಶವದ ಮುಖ ಮೇಲೆ ಮಾಡಿ ಉದ್ದಕ್ಕೆ ಮಲಗಿಸುತ್ತಾರೆ. ಇದರ ಮೇಲೆ ಬಿಳಿದಾದ ಹೊಸ ಬಟ್ಟೆಯನ್ನು ಹಾಕಿ ಭದ್ರವಾಗಿ ಕಟ್ಟಿದ ಮೇಲೆ ಶವಯಾತ್ರೆ ಪ್ರಾರಂಭವಾಗುತ್ತದೆ. ಶವದ ಮುಂದೆ ಅನ್ನದ ಗಡಿಗೆಯನ್ನು ತೆಳು ಹಗ್ಗದಿಂದ ಕಟ್ಟಿಕೊಂಡು ಹಿರಿಯ ಮಗ ಇದನ್ನು ಹಿಡಿದುಕೊಂಡು ಮುಂದೆ ಸಾಗುತ್ತಾನೆ. ಇದಕ್ಕೆ ಪಿಂಡವೆಂದು ಕರೆಯುತ್ತಾರೆ. ಮಸಣದ ಅರ್ಧದಾರಿಗೆ ಹೋದ ಮೇಲೆ ದಾರಿಯಲ್ಲಿನ ತಂಗಟೆ ಗಿಡದ ಬುಡ್ಡಕ್ಕೆ ಸಿದಿಗೆ ಇರಿಸುವರು. ಕೂಳು ನೀರು ಹೊತ್ತ ಮಗ ಮತ್ತು ಮೊಮ್ಮಗ ಇಬ್ಬರನ್ನು ತಂಗಟೆಗಿಡ ಮತ್ತು ಸಿದಿಗೆ ಎರಡೂ ಸೇರಿಕೊಂಡು ಮೂರು ಸುತ್ತು ಸುತ್ತಿಸುವರು. ತದನಂತರ ಅದೇ ಗಿಡದ ಬುಡದಲ್ಲಿ ಕೂಳು ನೀರಿನ ಮಡಕೆ ಇರಿಸಿ, ಹೆಣದ ಹಿಂದೆ ಹೋದವರೆಲ್ಲ ಕೈಗೊಂದು ಕಲ್ಲು ತೆಗೆದು ಮಡಕೆ

ಒಡೆದು ಹಾಕುವರು. ಅಲ್ಲಿಂದ ಮುಂದಕ್ಕೆ ಹೆಣವನ್ನು ಹೊತ್ತು ಬಂಧು ಬಳಗದವರು ಮುಂದೆ ನಡೆದರೆ ಕೂಳು ನೀರು ತೆಗೆದುಕೊಂಡು ಹೋದ ಮಗ ಮೊಮ್ಮಗ ಸಿದಿಗೆ ಹೊರುವವರನ್ನು ಹಿಂತಿರುಗಿ ನೋಡದೆ ವಾಪಸ್ಸು ಬರುವರು.

ತಂಗಟೆ ಗಿಡದಿಂದ ಶವದ ತಲೆಯನ್ನು ದಕ್ಷಿಣ ದಿಕ್ಕಿಗೆ ಮಾಡಿಕೊಂಡು ಸಮಾಧಿ ಗುಳಿಯ ಹತ್ತಿರಕ್ಕೆ ತರುವರು. ಗುಳಿಯ ಹತ್ತಿರ ಮಾಡಬೇಕಾದ ಶಾಸ್ತ್ರವೇನೂ ಇರುವುದಿಲ್ಲ. ಒಂದಿಷ್ಟು ಸೊಪ್ಪು ಸೆದೆ ತಂದು ಗುಳಿಯ ಒಳಕ್ಕೆ ಹಾಕಿ ನೆಲವನ್ನು ಮೆತ್ತಗೆ ಮಾಡುವುದುಂಟು. ಅದರ ಮೇಲೆ ಶವವನ್ನು ಇಳಿಸಿ, ಮತ್ತೆ ಮೇಲಷ್ಟು ಸೊಪ್ಪು ಮುಚ್ಚುವರು. ಹೀಗೆ ಶವದ ಬೆನ್ನು ಭಾಗ ಹೊಟ್ಟೆಯ ಭಾಗಕ್ಕೆಲ್ಲ ಸೊಪ್ಪು ಹಾಕಿ ಮುಚ್ಚಿದ ಮೇಲೆ ನೆರೆದವರೆಲ್ಲ ಮೂರು ಹಿಡಿಮಣ್ಣು ಹಾಕುವ ಕೆಲಸ ನಡೆಯುತ್ತದೆ. ಅಲ್ಲಿಗೆ ಶವಸಂಸ್ಕಾರ ಆದಂತೆಯೇ. ದೇಹವಿಟ್ಟ ಗುಂಡಿಯನ್ನು ಆದಷ್ಟೂ ಮಣ್ಣಿನಿಂದ ಮುಚ್ಚಿ ಮೇಲೊಂದು ಕಲ್ಲು, ಕಲ್ಲಿನಸುತ್ತ ಒಂದಿಷ್ಟು ಮುಳ್ಳು ಇಟ್ಟು ಬರುವರು. ಮ್ಯಾಸನಾಯಕರು ಅರಣ್ಯವಾಸಿಗಳಾಗಿದ್ದುದರಿಂದ ನರಿನಾಯಿಗಳು ವಾಸನೆ ಹಿಡಿದು ಬಂದು ಸಮಾಧಿಯನ್ನು ಕೆರೆದು ಹೂಳಿದ್ದ ದೇಹವನ್ನು ತಿಂದು ಹಾಕಬಾರದೆಂದು ಗುಳಿಗೆ ಮಣ್ಣನ್ನು ಬಲವಾಗಿ ಹಾಕಿ ಅದರ ಮೇಲೂ ಕಲ್ಲು ಮುಳ್ಳು ಹಾಕಿಬಿಡುವರು. ಹೆಣ ಹೂಳಿ ಬಂದವರು ಮನೆಯ ಕಡೆ ಬಂದರೆ ಹಾಗೆಯೇ ಒಳಗೆ ನುಗ್ಗುವಂತಿಲ್ಲ. ಅಷ್ಟು ಹೊತ್ತಿಗೆ ಮನೆಯಲ್ಲಿ ಉಳಿದಿದ್ದ ಯಾರಾದರೂ ಗೋವಿನ ಸಗಣಿ ತಂದು ಮನೆಯ ಮುಂದೆ ಇಟ್ಟು ಅದರೊಳಗೆ ಗರಿಕೆ ಹುಲ್ಲು ಇಡುವರು. ಸಮಾಧಿ ಸ್ಥಳದಿಂದ ಬಂದವರು ಆ ಗರಿಕೆಪಾಸೆಯನ್ನು ಕಾಲ ಹೆಬ್ಬೆಟ್ಟಿನಿಂದ ಮುಟ್ಟಿಸಿಕೊಂಡು ಒಳಗೆ ಬರುವರು. ನೆಂಟರಿಗೆ ಹಾಲು ಅನ್ನ ಹಾಕುವರು. ಒಳಗೆ ಬಂದು ಸತ್ತವ್ಯಕ್ತಿಯ ಬಳಗದವರಿಗೆ ವೀಳ್ಯೆ ಕೊಟ್ಟು ಹನ್ನೆರಡನೆಯ ದಿನದ ಕಾರ್ಯಕ್ಕೆ ಬರುವೆನೆಂದು ಹೇಳಿ ಹೋಗುವುದುಂಟು.

ಶವಸಮಾಧಿಯಾದ ಮೂರನೇ ದಿನದಲ್ಲಿ ಒಂದು ಕುರಿಯನ್ನೊ ಮೇಕೆಯನ್ನು ಬೇಟೆ ಕೊಯ್ದು ಹಟ್ಟಿಯಲ್ಲಿ ಅಡುಗೆ ಮಾಡುತ್ತಾರೆ. ಸತ್ತವನ ಹೆಸರಿನಲ್ಲಿ ಪ್ರತ್ಯೇಕ ಎಡೆ ಎತ್ತಿಟ್ಟು ಅದನ್ನು ಒಂದಿಬ್ಬರು ಎತ್ತಿಕೊಂಡು ಸಮಾಧಿಯಲ್ಲಿಗೆ ಬರುವರು. ಶವದ ತಲೆಯ ಕಡೆ ಒಂದು ಗುಂಡಿ ತೋಡಿ ಆ ಗುಂಡಿಯೊಳಗೆ ಎಲೆಯಿಟ್ಟು, ಆ ಎಲೆಯ ಮೇಲೆ ಎಡೆ ಇಡಲಾಗುವುದು. ಹಾಗೆ ಇಟ್ಟು ಎದ್ದು ಸ್ವಲ್ಪ ದೂರದಲ್ಲಿ ಹೋಗಿ ನಿಂತು ಕಾಗೆ ಬಂದು ಅದನ್ನು ತಿನ್ನುವುದೇ ಎಂದು ಕಾಯುವರು. ಬಹಳ ಹೊತ್ತಾದರೂ ಕಾಗೆ ಬಂದು ತಿನ್ನದೆ ಹೋದರೆ ಎಡೆ ತಂದವರಲ್ಲಿ ಒಬ್ಬ ವಾಪಸ್ಸು ಹಟ್ಟಿಗೆ ಬಂದು ಒಂದು ಹಸು ತಂದು ಅದರ ಬಾಯಿಗೆ ಎಡೆ ಇಡಿಸುವನು. ಆ ಹಸು ರುಚಿ ನೋಡಿಟ್ಟ ಅನ್ನವನ್ನು ತಂದು ಎಲ್ಲರ ಎಲೆಗೂ ಸ್ವಲ್ಪ ಸ್ವಲ್ಪ ಹಾಕಲಾಗುವುದು. ಇದೂ ಆದ ನಂತರ ಎಲ್ಲ ಎದ್ದು ನಿಂತು ತೀರಿಕೊಂಡ ವ್ಯಕ್ತಿಯನ್ನು ಉದ್ದೇಶಿಸಿ ಕಾಡಿನ ಯಾವ ಗಿಡ, ಮರ, ಪೊದೆ, ಕಲ್ಲುಬಂಡೆ ಸಂದಿನಲ್ಲಿ ಎಲ್ಲಿ ಅಡಗಿ

ಹೋದಿಯೋ, ಓ ತಂದೆಯೇ ನೀನು ಇವತ್ತು ಬಂದು ನಮ್ಮೊಂದಿಗೆ ಊಟ ಮಾಡು”[೫] ಎಂದು ಕರೆಯುವರು. ಹಾಗೆ ಕರೆದ ನಂತರ ಎಲ್ಲ ಕೂತು ಊಟ ಮಾಡುವರು.

ಈ ಮೂರನೆ ದಿನದ ಊಟದ ನಂತರವೂ ಸತ್ತವನ ತಂಗಿಯರು, ಹೆಣ್ಣುಮಕ್ಕಳಿದ್ದರೆ ಅವರು ಭಾಗವಹಿಸುವಂತಿಲ್ಲ. ಸತ್ತವನು ಗಂಡನಾಗಿದ್ದರೆ ಅವನ ಹೆಂಡತಿಗೆ ಬಳೆ ಒಡೆಸಿ ಮೂಗುತಿ ತೆಗೆಸಿ, ತಾಳಿ ಕೀಳುವುದು ಆವೊತ್ತಿನ ದಿನವೇ. ಹೆಂಗಸನ್ನು ಸಮಾಧಿಯ ಬಳಿ ಕರೆದುಕೊಂಡು ಬಂದು ಅದರ ತಲೆಯ ಕಡೆ ಕೂರಿಸಿ ಎಡಗೈಯಲ್ಲಿ ಒಂದು ಬಳೆ, ಬಲಗೈಯಲ್ಲಿ ಎರಡು ಬಳೆ ಒಡೆದು ಮೂಗುತಿ ತೆಗೆಸಿ ಇಡುವರು.

ಹನ್ನೆರಡನೆಯ ದಿನ ಮೂರನೆಯ ದಿನದಂತೆ ಮಾಂಸದ ಸಮಾರಾಧನೆ ಇರುವುದಿಲ್ಲ. ಬಹುಪಾಲು ಬಂಧುಬಳಗದವರೆಲ್ಲ ಆ ದಿನ ನೆರೆಯವರು, ಹೆಣ್ಣುಮಕ್ಕಳು, ತಂಗಿಯರು ಆ ದಿನ ಬರಲು ಅವಕಾಶವಿದೆ. ಮನೆಯಲ್ಲಿ ಹುಟ್ಟಿದ ಹೆಣ್ಣುಮಗಳಿದ್ದರೆ ತಂದೆಯನ್ನು ಕಳೆದುಕೊಂಡ ಮಗಳೆಂದು ಅವಳಿಗೆ ಸೀರೆ, ವಸ್ತ್ರ ಕೊಡುವ ರೂಢಿಯುಂಟು. ಆ ದಿನ ಕೂಳುಹೊತ್ತ ಹಿರಿಯ ಮಗ, ನೀರು ಹೊತ್ತ ಮೊಮ್ಮಗ ಇಬ್ಬರೂ ಹೊರಟು ಹೆಣ ಹೊತ್ತುಕೊಂಡು ಹೋಗುವ ದಿನ ತಂಗಟೆಗಿಡದ ಬಳಿ ಎಲ್ಲರೂ ಕಲ್ಲು ಹಾಕಿದ ಜಾಗದಲ್ಲಿ ಆರಿಸಿದ ಒಂದು ಕಲ್ಲನ್ನು ತರುವರು. ಅದೇ ಕಲ್ಲನ್ನು ಮನೆಯೊಳಗೆ ತಂದಿರಿಸಿ ತೊಳೆದು ಅರಿಷಿಣ ಕುಂಕುಮ ಇಟ್ಟು ಪೂಜಿಸಿ ನಂತರ ಈ ಕಲ್ಲನ್ನು ತೆಗೆದುಕೊಂಡು ತಮಟೆ ವಾದ್ಯಸಹಿತ ತಮ್ಮ ಪೂರ್ವಜರ ಕಾಲದ ಒಂದು ಪ್ರತ್ಯೇಕ ಸಮಾಧಿಯ ಬಳಿ ಬರುವರು. ಅದು ಹಟ್ಟಿಯಿಂದ ಸ್ವಲ್ಪವೇ ದೂರದಲ್ಲಿ ಇರುತ್ತದೆ. ಮ್ಯಾಸನಾಯಕರ ಒಂದು ಕುಟುಂಬದಲ್ಲಿ ಯಾರೇ ತೀರಿಕೊಳ್ಳಲಿ ಅವರನ್ನು ಎಲ್ಲಿಯೇ ಸಮಾಧಿ ಮಾಡಲಿ, ಅದೇ ದಿನ ತಂಗಟೆ ಗಿಡದ ಬಳಿ ಹೇರಿದ ಕಲ್ಲುಗಳಲ್ಲಿ ಒಂದನ್ನು ಹನ್ನೆರಡನೆಯ ದಿನ ತಂದು ಮತ್ತೊಂದು ಕಡೆ ಎಲ್ಲಿಯಾದರೂ ಇಡುವರು. ಹಾಗೆ ಕುಟುಂಬದಲ್ಲಿ ಹಿಂದಿನಿಂದಲೂ ತೀರಿಕೊಂಡವರೆಲ್ಲರ ನೆನಪಿನಲ್ಲಿ ಒಂದೊಂದು ಕಲ್ಲು ಇಲ್ಲಿ ಸೇರಿ ಒಂದು ಗುಡ್ಡೆಯಾಗಿರುತ್ತದೆ. ಅಂಥ ಗುಡ್ಡೆಯನ್ನು ತಮ್ಮ ಪೂರ್ವಜರ ಸಮಾಧಿ ಎಂದು ನಾಯಕ ಸಮುದಾಯದವರು ಕರೆದುಕೊಳ್ಳುವುದಿದೆ. ಅದಕ್ಕೆ ವಿಶೇಷ ದಿನಗಳಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಮಹಾಲಯ ಅಮಾವಾಸ್ಯೆಯ ಸಂದರ್ಭದಲ್ಲಿ ಎಡೆಯಿಟ್ಟು ಪೂಜಿಸುವರು. ಹನ್ನೆರಡನೆಯ ದಿನ ತಂಗಟೆಗಿಡದ ಬಳಿಯ ಕಲ್ಲನ್ನು ತಂದು ಪೂರ್ವಜರ ಕಲ್ಲುಗುಡ್ಡೆಯ ಬಳಿ ಇಟ್ಟರೆ ಅಲ್ಲಿಗೆ ಸತ್ತವನು ಕುಟುಂಬದ ಹಿರಿಯ ನಾಯಕರು ವಾಸವಾಗಿರುವ ಸ್ವರ್ಗವನ್ನು ಸೇರಿದಂತೆ, ಅಲ್ಲಿಂದ ಬಂದ ಮೇಲೆ ಹಟ್ಟಿಯಲ್ಲಿ ನೆರೆದ ಬಂಧು ಬಳಗವೆಲ್ಲ ಅನ್ನ, ಸಾರು, ಪಾಯಸದ ಊಟ ಮಾಡುವರು. ಅಂದು ಮಾಂಸದೂಟ ನಿಷಿದ್ಧ.

## ಉಡುಪು

ಈ ಬುಡಕಟ್ಟಿನಲ್ಲಿ ಪುರುಷರು ಮೂಲತಃ ಧರಿಸುತ್ತಿದ್ದುದು ಮೊಣಕಾಲು ಮೇಲಕ್ಕಿರುವ ಒಂದು ಬಿಳಿಯ ಒರಟಾದ ಬಟ್ಟೆಯಿಂದ ಹೊಲಿದ ಚಲ್ಲಣ, ತಲೆಗೊಂದು ಬಿಳಿಯ ಬಣ್ಣದ್ದೇ ರುಮಾಲು ಅಥವಾ ಪೇಟ. ಬರಿಮೈಗೆ ಹೊದೆಯಲು ಬಳಿಯ ಹಚ್ಚಡ ಅಥವಾ ಕರಿಕಂಬಳಿ, ಕೈಯಲ್ಲಿ ಕೋಲು, ಕಿವಿಗೆ ಓಲೆ, ಕೆಲವೊಮ್ಮೆ ಹೆಗಲ ಮೇಲೆ ಮಡಚಿದ ಅಥವಾ ಹೊದೆದ ಕಂಬಳಿ, ಈಗಲೂ ಇನ್ನೂ ಆದಷ್ಟು ಮೂಲಸ್ಥಿತಿಯಲ್ಲಿಯೇ ಉಳಿದಿರುವ ಕಂಪಳ ದೇವರ ಹಟ್ಟಿಯಲ್ಲಿ ಇದೇ ದಿರಿಸು ಧರಿಸಿರುವ ಮೈಗೆ ಅಂಗಿಯನ್ನು ತೊಡದೆ ಇರುವವರೂ ಇದ್ದಾರೆ. ಪದ್ಧತಿಯನ್ನು ಕೈ ಬಿಡಲಾಗದು ಎಂಬ ಮನೋಭಾವನೆ ಇಲ್ಲದ ಇತ್ತೀಚಿನ ಜನ ತುಂಬು ಬಟ್ಟೆಯನ್ನು ಧರಿಸುತ್ತಾರೆ. ಆದರೆ ಧಾರ್ಮಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಾಗ ಎಲ್ಲಾ ನೆಲೆಗಳಲ್ಲಿಯೂ ಈಗ ಸಾಕಷ್ಟು ಬದಲಾವಣೆಯಾಗಿದ್ದು, ಈ ದಿರಿಸು ಆರಾಧನೆ ಆಚರಣೆಯ ಸಂದರ್ಭಗಳಲ್ಲಿ ಮಾತ್ರ ಉಳಿದುಬಂದಿದೆ. ಕಂಪಳದೇವರ ಪೂಜಾರಿಯಾಗಿರುವ ಕಾಲೇಜು ಶಿಕ್ಷಣ ಪಡೆದ ಶ್ರೀ ರೇವಣ್ಣನವರು ಸಹ ಸದಾ ಧರಿಸುವುದು ಪಾದ ಮುಚ್ಚುವಂತೆ ಇಟ್ಟಿರುವ ಬಿಳಿಯ ಪಂಚೆ ಹಾಗೂ ತಲೆಗೆ ಬಟ್ಟೆ ಬುಡಕಟ್ಟಿನ ೧೨ ಪೆಟ್ಟಿಗೆ ದೇವರುಗಳ ಪೂಜಾರಿಗಳ ಉಡುಪು ಸಹ ಇದೇ ರೀತಿಯಾಗಿರುತ್ತದೆ. ಬುಡಕಟ್ಟಿನ ನಿಯಮವನ್ನು ನಿಷ್ಠೆಯಿಂದ ಪಾಲಿಸುವ ವಿಧಾನ ಇಲ್ಲಿ ಅಚ್ಚರಿ ಮೂಡಿಸುತ್ತದೆ.

ಮ್ಯಾಸನಾಯಕರ ಹಟ್ಟಿಯ ಮಹಿಳೆಯ ಉಡುಪೆಂದರೆ ಬಿಳಿಯ ಸೀರೆ, ರವಿಕೆ ಇರುವುದಿಲ್ಲ. ಮೈ ತುಂಬಾ ಸೀರೆಯ ಸೆರಗನ್ನು ಹೊದ್ದ ಇವರು ಕೈತುಂಬಾ ದಪ್ಪ ಗಾಜಿನ ಬಳೆಗಳು ಮತ್ತು ಬೆಳ್ಳಿಯ ಕಡಗ, ಕಿವಿಗೆ ಬುಗುಡಿ ಮತ್ತು ಓಲೆಯನ್ನು ಹಾಕಿಕೊಂಡಿರುತ್ತಾರೆ. ಸ್ವಲ್ಪ ಸ್ಥಿತಿವಂತರಾಗಿದ್ದರೆ, ಕೊರಳಿಗೆ ಚಿಂತಾಕು ಎಂದು ಕರೆಯಲ್ಪಡುತ್ತಿದ್ದ ಪಟ್ಟಿಯಂಥ ಆಭರಣ, ಬೆಳ್ಳಿಯ ಚಿಕ್ಕ ವಿನ್ಯಾಸದ ಕಡಗಗಳು, ಬದ್ದು. ಕಾಲಿಗೆ ಗೆಜ್ಜೆ ಧರಿಸುವುದಿಲ್ಲ. ಕಾರಣ ತಮ್ಮ ದೇವರ ಎತ್ತುಗಳಿಗೆ ಕಾಲಿಗೆ ಗಗ್ಗರ ಇತ್ಯಾದಿ ಆಭರಣ ತೊಡಿಸುವುದರಿಂದ ಅದು ದೇವರಿಗೆ ಸಲ್ಲಬೇಕಾದುದೇ ಹೊರತು ತಾವು ಧರಿಸುವಂತಿಲ್ಲ ಎಂದು ಕಾಲಿಗೆ ಕಾಲುಂಗುರ, ಕಾಲು ಚೈನು ಧರಿಸುವುದಿಲ್ಲ. ಕಂಪಳದೇವರಹಟ್ಟಿ ದೇವರಿಗೆ ಸೇರಿದ ಕರಿನಾರು ಬೆಡಗಿನ ಹೆಣ್ಣುಮಕ್ಕಳು ಈಗಲೂ ಇದನ್ನು ಅನುಸರಿಸುವುದು ತಿಳಿದುಬರುತ್ತದೆ. ಕರಿಮಣಿ ಸರ, ತವರಿನವರು ಕೊಟ್ಟ ಬುಡತಾಳಿ ಕಟ್ಟಿ ಕೊಳ್ಳುತ್ತಾರೆ. ಮದುವೆಯಲ್ಲಿ ತಾಳಿ ಇಲ್ಲದೆ ಕರಿಮಣಿ ಮಾತ್ರ ಕಟ್ಟಿಕೊಳ್ಳುತ್ತಾರೆ.

## ವಾರ್ಷಿಕಾವರ್ತನ ಆಚರಣೆಗಳು

ಅರಣ್ಯವಾಸಿಗಳಾಗಿದ್ದ ಮ್ಯಾಸನಾಯಕರಿಗೆ ಹಬ್ಬ ಹರಿದಿನಗಳು ಅಷ್ಟು ಪ್ರಮುಖವಾಗಿ ಕಾಣಿಸಿಲ್ಲ. ಒಂದೊಂದು ಹಟ್ಟಿಯವರೂ ಆಚರಿಸುವ ಊರೊಟ್ಟಿನ ಹಬ್ಬಕ್ಕಿಂತ ಅವರ ಜನಾಂಗದ

ದೇವತೆಗಳ ಹೆಸರಿನಲ್ಲಿ ಆಚರಿಸುವ ಜಾತ್ರೆಗಳೇ ಅವರಿಗೆ ಹಬ್ಬದಂತೆ. ಹೀಗಾಗಿ ಅಲೆಮಾರಿಗಳಾಗಿದ್ದ ಅವರಲ್ಲಿ ದೀಪಾವಳಿ, ಯುಗಾದಿ, ವಿನಾಯಕಚೌತಿ ಇಂಥ ಹಬ್ಬಗಳು ಆಚರಿಸಲ್ಪಡುತ್ತಿರಲಿಲ್ಲ ಎಂದು ಹಿರಿಯ ಮಾಹಿತಿದಾರರು ತಿಳಿಸುತ್ತಾರೆ. ಈಗೀಗ ಹಟ್ಟಿಯೊಳಗಿನ ಮ್ಯಾಸನಾಯಕರು ಗ್ರಾಮಪಟ್ಟಣಗಳ ನಾಗರಿಕತೆಯಿಂದಾಗಿ ಎಲ್ಲರೂ ಆಚರಿಸುವ ಹಬ್ಬಗಳನ್ನೇ ಅಭ್ಯಾಸ ಮಾಡಿಕೊಂಡಿದ್ದಾರೆ. ಹಿಂದಿನ ದಿನಗಳಲ್ಲಿ ಅವರಿಗೆ ಮುಂಗಾರಿಹಬ್ಬ, ಹಿರಿಯರ ಹಬ್ಬ, ನಾಗಪ್ಪನ ಪೂಜೆ ಇವು ಮುಖ್ಯವಾಗಿದ್ದಂತೆ ಆ ಜನಾಂಗದ ಕೆಲವು ಹಿರಿಯ ಮಾಹಿತಿದಾರರು ತಿಳಿಸುತ್ತಾರೆ.

## ಮುಂಗಾರಿಹಬ್ಬ

ಇದು ಹೆಚ್ಚಾಗಿ ಎತ್ತುಗಳಿಗೆ ಸೀಮಿತವಾದ ಹಬ್ಬ. ಕರ್ನಾಟಕದ ಎಲ್ಲ ಪ್ರದೇಶಗಳಲ್ಲಿಯೂ ದನಕರುಗಳನ್ನು ಅಲಂಕರಿಸಿ ಪೂಜಿಸುವ, ಕಿಚ್ಚು ಹಾಯಿಸುವ ಹಬ್ಬ ಬೇರೆ ಬೇರೆ ಹೆಸರುಗಳಲ್ಲಿ ಪ್ರಚಲಿತವಿದೆ. ಉತ್ತರ ಕರ್ನಾಟಕದ ಕಡೆ ಇದನ್ನು ಕಾರಹುಣ್ಣಿಮೆ ಎಂದರೆ ದಕ್ಷಿಣ ಕರ್ನಾಟಕದ ಕಡೆ ಸಂಕ್ರಾಂತಿ ಎನ್ನುವರು. ಈ ಹಬ್ಬವನ್ನು ಮ್ಯಾಸನಾಯಕರು ಮುಂಗಾರಿಹಬ್ಬ(ದುಲಿ) ಎಂದು ಆಚರಿಸುವರು. ಜ್ಯೇಷ್ಠ ಮಾಸದ ಶುದ್ಧ ಹುಣ್ಣಿಮೆಯಂದು ಬೇಡರು ಈ ಹಬ್ಬ ಮಾಡುವುದಿದೆ. ಆ ವರ್ಷ ಬೆಳೆದ ಕಾಳನ್ನೆಲ್ಲ ಕಲೆಸಿ ಬೇಯಿಸಿ ಗುಗ್ಗರಿ ಮಾಡುವರು. ಎತ್ತುಗಳಿಗೆ ಮೈ ತೊಳೆದು ವಿಭೂತಿ, ಕುಂಕುಮ, ಹೂವಿಟ್ಟು ಕೋಡಿಗೆ ಬಣ್ಣ ಹಚ್ಚಿ ಅಲಂಕರಿಸಿ ಪೂಜೆಯಾಗುತ್ತದೆ. ಪೂಜೆಯಾದ ಮೇಲೆ ಬೇಯಿಸಿದ ಗುಗ್ಗರಿಯನ್ನು ದನಗಳ ಮುಂದೆ ಇಡಲಾಗುವುದು. ಅದು ತಿಂದು ಬಿಟ್ಟಿದ್ದನ್ನು ಪ್ರಸಾದವೆಂದು ಎತ್ತಿಕೊಳ್ಳುವರು. ಸಂಜೆ ಎತ್ತುಗಳಿಗೆ ಮತ್ತಷ್ಟು ಅಲಂಕಾರ ಮಾಡಿ ಊರೆಲ್ಲ ಮೆರವಣಿಗೆ ಮಾಡಿ ವಾಪಸಾಗಿ ಮನೆಯ ಕಡೆ ಬರುವಲ್ಲಿ ಹೆಂಗಸರು ಆರತಿಯೆತ್ತುವರು. ಅದೇ ರಾತ್ರಿ ಆ ವರ್ಷದ ವ್ಯವಸಾಯದಿಂದ ಬಂದ ದವಸ ಧಾನ್ಯಗಳನ್ನು ಬೇಯಿಸಿ ಪದಾರ್ಥ ತಯಾರಿಸಿ ಊಟ ಮಾಡಿ ಎತ್ತುಗಳಲ್ಲಿಗೆ ಬಂದು ಅವಕ್ಕೆ ನಮಸ್ಕರಿಸುವರು. ಹಟ್ಟಿಗಳಲ್ಲಿ ಎತ್ತುಗಳನ್ನು ಜೂಜು ಬಿಡುತ್ತಾರೆ. ಮೊದಲು ಬಂದ ಎತ್ತನ್ನು ಮೆರವಣಿಗೆ ಮಾಡಿ ಬಹುಮಾನ ನೀಡುತ್ತಾರೆ.

## ನಾಗರಪಂಚಮಿ

ಇದು ಶ್ರಾವಣಮಾಸದಲ್ಲಿ ಬರುವ ಹಬ್ಬ. ಆ ತಿಂಗಳ ನಾಲ್ಕನೇ ಸೋಮವಾರ ಈ ಹಬ್ಬ ಆಚರಿಸುವುದುಂಟು. ಹೆಂಗಸರು ಬೆಳಗ್ಗೆ ಎದ್ದು ಮಡಿ ಉಟ್ಟು ತಂಬಿಟ್ಟು ಹಾಲು ಕೆಲವು ಹಟ್ಟಿಗಳಲ್ಲಿ ಎರಡನೇ ಮತ್ತು ಮೂರನೇ ಸೋಮವಾರ ಹಬ್ಬವನ್ನು ಆಚರಿಸುತ್ತಾರೆ. ಗಂಧದ ಕಡ್ಡಿ, ಹೂವು ಎಡೆ ಇಟ್ಟುಕೊಂಡು ಊರ ಮುಂದಣ ಹುತ್ತಗಳ ಕಡೆ ಬರುತ್ತಾರೆ. ಹುತ್ತದ ಬಾಯಿಗೆ ಆಗತಾನೆ ಕರೆದು ತಂದ ನೊರೆ ಹಾಲು ಮತ್ತು ತಂಬಿಟ್ಟನ್ನು ಪ್ರಸಾದವೆಂದು

ಪಶುಪಾಲಕರಾದ ಇವರು ಕೃಷಿ ನೀರಾವರಿ ತೋಟಗಳಲ್ಲಿ ನಾಗಪ್ಪನ ಪೂಜೆ, ಬೋರ್‌ವೆಲ್‌ಗೆ ಪೂಜೆ ಸಲ್ಲಿಸಿ ಸಿಹಿಯೂಟ ಮಾಡಿ ಬಂದವರೆಗೆಲ್ಲಾ ಹಂಚುತ್ತಾರೆ. ಮ್ಯಾಸನಾಯಕರು ಮುಂಗಾರಿಹಬ್ಬದಲ್ಲಿ ತಮ್ಮ ಆಸ್ತಿ ಐಶ್ವರ್ಯ ಸಂಪತ್ತೆಂದು ಗೋವುಗಳನ್ನು ಪೂಜಿಸಿದರೆ, ಗೋವುಗಳಿಗೂ ತಮಗೂ ಶತ್ರುವಾಗಿರುವ ನಾಗಪ್ಪನನ್ನು ಶ್ರಾವಣದಲ್ಲಿ ಪೂಜಿಸುತ್ತಾರೆ. ಒಂದು ರಕ್ಷಕ ದೈವವಾದರೆ, ಇನ್ನೊಂದು ಶಿಕ್ಷಕ ದೈವವಾಯಿತು. ಒಂದು ನಾಯಕರ ಪ್ರೀತಿಗೆ ಕಾರಣವಾದ ಪ್ರಾಣಿಯಾದರೆ ಇನ್ನೊಂದು ಭೀತಿಗೆ ಆಸ್ಪದ ಕೊಡುವ, ಅದರಿಂದ ಪೂಜಿಸಿಕೊಳ್ಳುವ ದೈವವಾಯಿತು. ಈ ಎರಡು ಹಬ್ಬಗಳನ್ನು ಬಿಟ್ಟರೆ ಮ್ಯಾಸಬೇಡರು ಆಚರಿಸುವ ಇನ್ನೊಂದು ಮುಖ್ಯ ಹಬ್ಬ ಹಿರಿಯರದು.

**ಹಿರಿಯರ ಹಬ್ಬ**

ಮ್ಯಾಸನಾಯಕರು ತಮ್ಮ ಬುಡಕಟ್ಟಿನ ಸಮುದಾಯದ ಲಕ್ಷಣಗಳನ್ನು ಉಳಿಸಿಕೊಂಡು ಬಂದಿರುವುದರಿಂದ ಆಧುನಿಕ ಮತ್ತು ಪರಂಪರಾಗತ ಸಂಗತಿಗಳ ನಡುವೆ ದ್ವಂದ್ವಗಳು ಏರ್ಪಡುವುದು ಸಹಜ. ತಾನು ಮತ್ತು ತನ್ನ ಸಮುದಾಯದ ನೇತಾರರನ್ನು ಲಿಖಿತ ಮೌಖಿಕ ಪ್ರಕಾರಗಳಲ್ಲಿ ಜೀವಂತಗೊಳಿಸಿಕೊಂಡಿರುವುದನ್ನು ಇಂದಿಗೂ ನೋಡಬಹುದಾಗಿದೆ. ಹಿಂದೂ ಧರ್ಮದ ವ್ಯಾಪ್ತಿಯಲ್ಲಿಯೇ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಪ್ರತ್ಯೇಕತೆಯನ್ನು ಉಳಿಸಿಕೊಂಡಿವೆ. ಅದು ತಮ್ಮ ವೀರರ ಆರಾಧನೆಯಾಗಿರಬಹುದು. ಸತಿಪದ್ಧತಿಯಾಗಿರಬಹುದು. ಇತರೆ ಯಾವುದೇ ಆರಾಧನೆ ಲಕ್ಷಣಗಳಿರುವ ಪದ್ಧತಿ, ರೂಢಿ, ಸಂಪ್ರದಾಯಗಳು ವ್ಯಕ್ತಿ ನೆಲೆಯಲ್ಲಿ ಪೂಜಾರ್ಹಗೊಳ್ಳುತ್ತಿರುವುದು ಮ್ಯಾಸನಾಯಕರ ಸಾಂಸ್ಕೃತಿಕ ಲೋಕದೃಷ್ಟಿಯ ವೈಶಿಷ್ಟವಾಗಿದೆ. ಮ್ಯಾಸನಾಯಕರು ತಮ್ಮ ಪರಂಪರಾನುಗತವಾಗಿ ಬಂದಿರುವ ಬಳುವಳಿಗಳು, ಹುಟ್ಟು ಸಾವಿನ ನಡುವೆ ಇರುವ ಬದುಕಿನ ಸಾಮರಸ್ಯಕ್ಕೊಂದು ಅರ್ಥವನ್ನು ಕಲ್ಪಿಸಿಕೊಂಡಿದ್ದಾರೆ. ಹೀಗೆ ಕಲ್ಪಿಸಿಕೊಂಡಿರುವ ಅಂಶಗಳ ಪೈಕಿ ವೀರರ ಆರಾಧನೆಯು ಒಂದು. ಇಂಥ ವೀರರ ಆರಾಧನೆಯನ್ನು ಹಿರಿಯರ ಹಬ್ಬವೆಂದು ಆಶ್ವಯುಜಮಾಸದಲ್ಲಿ ಮತ್ತು ಯುಗಾದಿಯ ಸಂದರ್ಭದಲ್ಲಿ ಆಚರಿಸುತ್ತಾರೆ.

ಆ ದಿನ ಮ್ಯಾಸನಾಯಕರು ದೇವರ ಪಟ ಇಟ್ಟು ಪೂಜೆ ಮಾಡುವುದರ ಬದಲು, ಆ ಜಾಗದಲ್ಲಿ ಹಿಂದಿನ ಕಾಲದಲ್ಲಿ ತಮ್ಮೊಡನೆ ಬಂದ ಆಯುಧಗಳು, ಬಿಲ್ಲು, ಬಾಣ, ಭರ್ಜಿ, ಕಠಾರಿ, ಕತ್ತಿ ಕೃಷಿಪರಿಕರ ಎಲ್ಲವನ್ನು ಇಡುವರು. ಈ ವಸ್ತುಗಳು ತಮ್ಮ ಹಿರಿಯರಿಗೆ ಬೇಟೆಯಾಡುವುದರಲ್ಲಿ ನೆರವಾಗಿವೆ. ಅವರಿಗೆ ಈ ಆಯುಧಗಳು ತುಂಬ ಬೇಕಾದ ವಸ್ತುಗಳಾಗಿದ್ದವು. ಆದ್ದರಿಂದ ಹಿರಿಯರ ಹೆಸರಿನಲ್ಲಿ ಅವರ ಆಯುಧಗಳನ್ನೇ ಪೂಜಿಸುತ್ತೇವೆ ಎಂದು ಹಿರಿಯರು ಹೇಳುತ್ತಾರೆ.

ಮಣ್ಣಿನ ಮಗೆಗಳಲ್ಲಿ ಹಳ್ಳ-ಕೊಳ್ಳಗಳಿಂದ ತುಂಬಿ ಹರಿಯುವ ಮತ್ತು ಬಾವಿಯಿಂದ

ಹರಿಯುವ, ನೀರನ್ನು ತರುವರು. ಅರಿಶಿಣ ಮತ್ತು ಗಂಧ ಮೆತ್ತಿದ ಅಂಗನೂಲನ್ನು ಎರಡು ಮಗೆಗಳ ಕಂಠಕ್ಕೆ ಸುತ್ತುತ್ತಾರೆ. ಇದರ ಜತೆಗೆ ಅಳತೆ ಮಾಡುವ ಸಾಧನಗಳಾದ ಕೊಳಗ, ಸೇರು, ಪಾವು, ಚಟಾಕು ಇವುಗಳನ್ನು ಇಡುವರು. ಪೂಜೆಗೆ ಎಡೆಯಾಗಿ ಮೂರು ಅನ್ನದ ಉಂಡೆ, ಮೊಸರು ಮತ್ತು ಬೆಲ್ಲದ ಉಂಡೇ ಮೂರು ಎಲೆಚೂರು ಅಡಕೆ ಇಟ್ಟು ಊದಿನ ಕಡ್ಡಿ ಹಚ್ಚಿ ಪೂಜೆ ಮಾಡುವರು. ಆ ಹಬ್ಬದ ದಿನ ಬಂಧುಬಳಗಕ್ಕೆಲ್ಲ ಊಟವಾದ ಮೇಲೆ ವೀಳ್ಯ ಕೊಟ್ಟು ಕಳಿಸುವ ಪದ್ಧತಿ ಇದೆ.

ಮ್ಯಾಸನಾಯಕರು ತಮ್ಮ ಸಾಂಸ್ಕೃತಿಕ ವೀರರನ್ನು ಮತ್ತು ಸಮುದಾಯಕ್ಕಾಗಿ ತ್ಯಾಗ ಮಾಡಿದ ಸ್ತ್ರೀ ಮತ್ತು ಪುರುಷರನ್ನು ವರ್ಷಕ್ಕೆ ಎರಡು ಸಾರಿ ಅವರ ಆಚರಣೆಯನ್ನು ಮಾಡುವುದರ ಮುಖಾಂತರ ಅವರನ್ನು ಜೀವಂತಗೊಳಿಸುತ್ತಾರೆ. ಪುರುಷಪ್ರಧಾನ ಕುಟುಂಬ ಪಶುಪಾಲನೆ, ಬೇಟೆಯ ಸ್ಥಿತ್ಯಂತರಗಳನ್ನು ಮೀರಿ ಅವುಗಳ ನಡುವೆ ತಾನೊಂದು ಸಾಧನೆ ಮಾಡುವ ಕಾಯಕಕ್ಕೆ ಸಿಕ್ಕ ಮರ್ಯಾದೆಯು ಮೇಲಿನಂತಿರುತ್ತದೆ. ಹುಟ್ಟುವುದಕ್ಕೆ ಮಹತ್ವ ಕೊಡದ ಬುಡಕಟ್ಟು ಸಮುದಾಯದ ಜನರು ಬದುಕಿಗೆ, ಸಾಧನೆಗೆ ಮತ್ತು ಮೃತ್ಯುವಿಗೆ ಪ್ರಾಮುಖ್ಯತೆ ಕೊಟ್ಟಿರುವುದಕ್ಕೆ ಮ್ಯಾಸನಾಯಕರೇ ಉದಾಹರಣೆ. ಮ್ಯಾಸನಾಯಕರು ಸ್ಥಳೀಯ ವ್ಯಕ್ತಿಯನ್ನೇ ಆರಾಧಿಸುವುದು ಹೆಚ್ಚು. ಅಭಿಮಾನವೋ ಅಥವಾ ಪ್ರಾದೇಶಿಕ ಭಿನ್ನತೆಯೋ ಗೊತ್ತಿಲ್ಲ. ವಾಲ್ಮೀಕಿ, ಬೇಡರಕಣ್ಣಪ್ಪ, ಶಬರಿ, ಏಕಲವ್ಯ ಮೊದಲಾದವರನ್ನು ಸ್ಮರಿಸುತ್ತಾರೆಯೇ ಹೊರತು ಆರಾಧಿಸುವಲ್ಲಿ ಉದಾಸೀನತೆಯಿದೆ. ಪವಿತ್ರಸ್ಥಳ, ವ್ಯಕ್ತಿ ಪ್ರಸಂಗದಲ್ಲಿ ಪಾಲ್ಗೊಂಡು ರಕ್ಷಿಸಿ ಕಾಪಾಡಿದ ವೀರನ ಮನೋಧರ್ಮವು ಶ್ಲಾಘನೀಯ. ಅದಿಯಲ್ಲಿ ಇದನ್ನು ಧರ್ಮಕೇಂದ್ರಿತ ನೆಲೆಯಲ್ಲಿ ಗ್ರಹಿಸಿದ್ದರಿಂದ ಕ್ರಮೇಣ ಅದು ಆಧ್ಯಾತ್ಮಿಕ ಸ್ವರೂಪಕ್ಕೆ ಬಂದಿತು. ಒಬ್ಬ ವ್ಯಕ್ತಿಯ ತ್ಯಾಗವು ಅವನ ಗುಣ ವಿಶೇಷತೆಯನ್ನು ಇಮ್ಮಡಿಗೊಳಿಸಿದೆ. ಸತ್ಯ, ಪ್ರಾಮಾಣಿಕತೆ, ಭಾಷೆ ತಪ್ಪಿಲ್ಲದವರ ಪಾಡು ಸಹ ವೀರತ್ವದ ಸಂಕೇತ ಹಾಗಾಗಿ ಜನಪದ ವೀರರ ಚಾರಿತ್ರಿಕ ಸಂಗತಿಗಳು ತೀರ ರೋಮಾಂಚನಕಾರಿಯಾಗಿವೆ ಎಂದು ಹೇಳಬಹುದು.

## ಯುಗಾದಿ

ಚೈತ್ರಶುದ್ಧ ಪ್ರತಿಪದ ದಿವಸ ಯುಗಾದಿ ಹಬ್ಬ ಬರುವುದು. ಯುಗ ಎಂದರೆ ನೂತನ ವರ್ಷ. ಆದಿ ಎಂದರೆ ಆರಂಭ. ಯುಗಾದಿ ಹತ್ತು ಹಲವು ಆರಂಭದ ದಿನ ಋತುರಾಜ ವಸಂತನ ಶುಭಾಗಮನದ ದಿನ. ವರ್ಷದ ಹೊಸ ದಿನ. ಪ್ರತಿಪದೆಯ ಹಿಂದಿನ ದಿನ. ಅಮಾವಾಸ್ಯೆಯು ಯುಗಾದಿ ಅಮಾವಾಸ್ಯೆಯ ಹಿಂದಿನ ದಿನವೇ ಇಡೀ ಊರು ಮನೆಮಠಗಳನ್ನು ಸ್ವಚ್ಛಗೊಳಿಸಿ ಸಿಂಗಾರಗೊಳಿಸಿರುತ್ತಾರೆ. ಎಲ್ಲ ಕಡೆಯೂ ಹಬ್ಬದ ವಾತಾವರಣ ಎದ್ದು ಕಾಣುವುದು. ಸಾಮಾನ್ಯವಾಗಿ ಸಂಜೆಗೆ ತಮ್ಮ ಇಷ್ಟಾನುದೇವತೆಗಳಿಗೆ ಪೂಜೆ ಸಲ್ಲಿಸಲು ಸಿದ್ಧಗೊಳಿಸುತ್ತಾರೆ. ಸಜ್ಜಕದ ಹೋಳಿಗೆ ಮಾಡಿ ದೇವರಿಗೆ ಎಡೆ ಇಡುತ್ತಾರೆ. ಅಮಾವಾಸ್ಯೆ ದಿನ ಬೆಳಗ್ಗೆಯೇ ಗ್ರಾಮ

ದೇವತೆಗಳನ್ನು ನದಿ ಸ್ನಾನಕ್ಕೆ ಉತ್ಸವದೊಂದಿಗೆ ತೆಗೆದುಕೊಂಡು ಹೋಗುವ ಪದ್ಧತಿ ಕೆಲವು ಗ್ರಾಮಗಳಲ್ಲಿದೆ. ಮರುದಿನ ಪ್ರತಿಪದೆಯೇ ಯುಗಾದಿ ವರುಷದ ಹೊಸದಿನ. ಅಂದು ಬೆಳಿಗ್ಗೆ ಉಷಃಕಾಲಕ್ಕೆ ಎದ್ದು ಮಂಗಳ ಸ್ನಾನ ಮಾಡಿ ಹೊಸಬಟ್ಟೆ ಧರಿಸಿ ಹಿರಿಯರ ಆಶೀರ್ವಾದ ಪಡೆಯುವರು. ಕುಟುಂಬದ ಪ್ರತಿಯೊಬ್ಬರೂ ತಪ್ಪದೆ ತೈಲಸ್ನಾನ ಮಾಡುವರು. ಸ್ನಾನಕ್ಕೆ ಕಾಯಿಸುವ ನೀರಿಗೆ ಬೇವಿನ ಎಲೆಗಳನ್ನು ಹಾಕಿ ಸ್ನಾನ ಮಾಡುವ ಪದ್ಧತಿ ಇದೆ.

ಮನೆಯನ್ನೆಲ್ಲ ಬೇವು ಹಾಗೂ ಮಾವಿನ ತೋರಣಗಳಿಂದ ಅಲಂಕರಿಸಿ ಮನೆ ಮುಂದೆ ಕೆಲವೆಡೆ ಸ್ವಚ್ಛಗೊಳಿಸುತ್ತಾರೆ. ಯುಗಾದಿ ಹಬ್ಬದ ದಿನ ಬೇವು ಬೆಲ್ಲ ತಿನ್ನಬೇಕು ಎಂದು ಜನಪದರ ವಾಡಿಕೆ. ಬೇವು ಬೆಲ್ಲವನ್ನು ಪರಸ್ಪರ ಒಬ್ಬರನೊಬ್ಬರು ವಿನಿಮಯ ಮಾಡಿಕೊಳ್ಳುತ್ತಾರೆ. ಬೇವು ಬೆಲ್ಲವನ್ನು ಪುಟಾಣಿ ಹಿಟ್ಟಿಗೆ ಬೆರೆಸಿದ ಸಕ್ಕರೆಯನ್ನು ಅಥವಾ ಚೂರು ಮಾಡಿದ ಬೆಲ್ಲವನ್ನು ಮತ್ತು ಬೇವಿನ ಹೂವುಗಳನ್ನು ಸೇರಿಸಿ ಉದುರು ಉದುರಾಗಿರುವ ಮಿಶ್ರಣ ತಯಾರಿಸುತ್ತಾರೆ. ಇನ್ನೂ ಕೆಲವು ಕಡೆಗಳಲ್ಲಿ ಹೊಸ ಮಣ್ಣಿನ ಮಡಿಕೆಯಲ್ಲಿ ಬೆಲ್ಲ, ಬೇವಿನಹೂವು ಹುಣಸೆಯ ಹಣ್ಣು ಕಿವುಚಿ ಹಾಕುವರು. ಇಲ್ಲವೇ ಎಳೆಮಾವಿನಕಾಯಿಯ ಸಣ್ಣ ಹೋಳುಗಳನ್ನು ಹಾಕುವುದು. ಇದನ್ನು ಪಾನಕದ ಹಾಗೆ ಕುಡಿಯುವರು. ಕೆಲವು ಕಡೆಗಳಲ್ಲಿ ಚೂರುಚೂರು ಮಾಡಿದ ಬೆಲ್ಲಕ್ಕೆ ಬೇವಿನ ಹೂಗಳನ್ನು ಸೇರಿಸಿ ತಿನ್ನುವರು. ಮನೆಯವರೆಲ್ಲ ದೇವರಿಗೆ ಪೂಜೆ ಸಲ್ಲಿಸಿ ನಮಸ್ಕರಿಸಿ ಬೇವು ಬೆಲ್ಲ ತಿನ್ನುತ್ತಾರೆ ಮತ್ತು ಎಲ್ಲಾ ಬಂಧು ಬಾಂಧವರಿಗೆ ಹಂಚುತ್ತಾರೆ.

## ಮಾರಮ್ಮನ ಹಬ್ಬ

ಊರೊಟ್ಟಿನ ಹಬ್ಬಗಳಲ್ಲಿ ಮಾರಮ್ಮನ ಹಬ್ಬವನ್ನು ಮ್ಯಾಸನಾಯಕರು ಆಚರಿಸುವುದುಂಟು. ಹೆಂಗಸರು ಬೆಳಗೆದ್ದು ಮಡಿಯಾಗಿ ಬೇವಿನ ಸೊಪ್ಪನ್ನು ಅರಿಶಿಣ ಕುಂಕುಮ ಕಾಯಿ ಕರ್ಪೂರ ತೆಗೆದುಕೊಂಡು ಮಾರಮ್ಮನ ಗುಡಿಯ ಹತ್ತಿರ ಬರುವರು. ಗಂಡುಮಕ್ಕಳು ಬಲಗೈಯಲ್ಲಿ ಕುಡುಗೋಲು ಮತ್ತು ಎಡಗೈಯಲ್ಲಿ ಕುರಿಯೊಂದನ್ನು ಹಿಡಿದುಕೊಂಡು ಹೋಗುವುದುಂಟು. ಹೆಂಗಸರು ಮಾರಮ್ಮನ ಪೂಜಾರಿಗೆ ಎಡೆ ಕೊಟ್ಟು ಪೂಜೆ ಮಾಡಿಸಿದರೆ ಗಂಡಸರು ದೇವತೆಗೆ ಅಲ್ಲೇ ರಕ್ತ ಬಲಿಕೊಟ್ಟು ಬೇಟೆಯನ್ನು ಮನೆಗೆ ತರುವರು. ಆ ಹೊತ್ತಿನ ಹಬ್ಬದಲ್ಲಿ ಮಾಂಸದೂಟ ಮುಖ್ಯ.

## ಗುಗ್ಗರಿಹಬ್ಬ

ದೇವಾಲಯಗಳಲ್ಲಿ ನಡೆಯುವ ಪ್ರಮುಖ ಹಬ್ಬವಿದು. ವರ್ಷಗಳ ವಿಶೇಷ ಪೂಜೆ ಇದಾಗಿದೆ. ಇಲ್ಲಿಯೂ ಇದು ಪ್ರಮುಖ ಹಬ್ಬ. ಆ ದಿನ ಊರವರೆಲ್ಲಾ ಈ ಆಚರಣೆಯಲ್ಲಿ ಪಾಲ್ಗೊಳ್ಳುವರಲ್ಲದೆ ಸಮುದಾಯದ ಬಹುಮಂದಿ ಬೇರೆ ಬೇರೆ ಊರುಗಳಿಂದಲೂ ಕಾಸು ಮೀಸಲು ಕಾಳಿನೊಂದಿಗೆ ಬಂದು ಇವನ್ನೆಲ್ಲಾ ಭಕ್ತಿಪೂರ್ವಕವಾಗಿ ದೇವಾಲಯಕ್ಕೆ ಅರ್ಪಿಸಿ

ಪೂಜಾ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾರೆ. ಶಿವರಾತ್ರಿ ಸಂದರ್ಭದ ಒಂದು ಸೋಮವಾರ ಗಂಗೆಪೂಜೆಗಾಗಿ ಪೆಟ್ಟಿಗೆ ಬಿಲ್ಲು ಚಿನ್ನಹಗರಿ ನದಿಗೆ ಹೋಗಿ ಅತ್ಯಂತ ವಿಜೃಂಭಣೆಯಿಂದ ತಮಟೆ ಉರುಮೆ ಕಹಳೆ ಭೇರಿ ಈ ವಾದ್ಯಗಳ ಧ್ವನಿಯೊಂದಿಗೆ ಹೊಳೆಗೆ ಹೋಗುತ್ತಾರೆ. ಊರ ಜನಸಮುದಾಯ ದೇವರುಗಳ ಬಗ್ಗೆ ಕಥನಗಳನ್ನು ಹೇಳುತ್ತಾ ಬರುತ್ತಿರುವ ಹೆಂಗಳೆಯರ ಗುಂಪು ಈ ಸಂಭ್ರಮದ ಮಧ್ಯೆ ದೇವರು ಬರುವುದೇ ಒಂದು ವೈಭವ.

"ಬಾಳೆ ಹಣ್ಣಿನಂತೆ ಬಾಗಿರುವ ಗಂಗಮ್ಮ ಬಾಜು ಕೊಡು, ನನ್ನ ದೇವರಿಗೆ ಬಾಜು ಕೊಡು, ನನ್ನ ತಂದೆ ಪಾಲಯ್ಯನಿಗೆ ಬಂಗಾರದ ಪದ ತೊಳಿಯಾಕ ನಿಂಬೆಹಣ್ಣಿನಂಗೆ ತುಂಬಿರುವ ಗಂಗಮ್ಮ ಇಂಬು ಕೊಡು, ನನ್ನ ತಂದೆಗೆ ಇಂಬು ಕೊಡು, ನನ್ನ ತಂದೆ ಪಾಲಯ್ಯಗೆ ಬಂಗಾರದ ಲಿಂಗ ತೊಳಿಯಾಕೆ."[೬] ಹೀಗೆ ಗಂಗೆಯನ್ನು ಕೇಳುತ್ತಲೇ ದಾರಿ ಮಾಡಿಕೊಂಡು ಬೋಸಯ್ಯ ಹಳ್ಳಕ್ಕೆ ಬರುತ್ತಾರೆ. ಹಳ್ಳದಲ್ಲಿ ನೀರಿಲ್ಲದಿದ್ದರೆ ಚಿಲುಮೆ ತೋಡಿ ಆ ನೀರಿನ ದಡದಲ್ಲಿ ದೇವರ ಪೆಟ್ಟಿಗೆ ಹಾಗೂ ಒಡವೆ ಬಿಲ್ಲುಗಳನ್ನು ಚಿಲುಮೆ ನೀರಿನಲ್ಲಿ ತೊಳೆಯುತ್ತಾರೆ. ದೇವರ ಪೆಟ್ಟಿಗೆ ಚಿಕ್ಕದಾಗಿರುವ ಮಗಿ(ಮಣ್ಣಿನ ಕುಡಿಕೆ), ಅದಕ್ಕೊಂದು ಮುಚ್ಚಳವಿದೆಯಂತೆ. ಪೆಟ್ಟಿಗೆಯ ಒಂಬತ್ತು ಒಳಭಾಗಗಳನ್ನು ಹಣ್ಣು, ಎಲೆ, ಅಡಿಕೆ ಉತ್ತತ್ತಿ ಇತರೆ ಕೆಲವು ಪೂಜಾ ಸಾಮಗ್ರಿಗಳನ್ನು ಇಡುತ್ತಾರೆ. ಮಧ್ಯದಲ್ಲಿ ಮುಖ್ಯವಾಗಿ ಚಿಕ್ಕ ಸಂದೂಕಗಳು ಕೆಲವು ವಿಶೇಷ ವಸ್ತುಗಳಿದ್ದು ಇವುಗಳನ್ನು ಕಣ್ಣು ಕಟ್ಟಿಕೊಂಡು ಪೂಜಿಸುವರು. ಪೂಜಾರಿ ಇದನ್ನೆಲ್ಲಾ ಮಾಡುವಾಗ ಬೇರೆ ಯಾರೂ ಇದನ್ನು ನೋಡುವಂತಿಲ್ಲ. ಸುತ್ತಲೂ ಕಂಬಳಿ ತೆರೆಗಳನ್ನು ಕಟ್ಟಿಕೊಂಡು ಒಳಭಾಗದಲ್ಲಿ ಪೂಜಿಸುತ್ತಾನೆ. ಬಾಳೆಹಣ್ಣು, ತೆಂಗಿನಕಾಯಿ, ಚಿಗಳಿ, ತಂಬಿಟ್ಟಿನೊಂದಿಗೆ ಗಂಗೆಪೂಜೆಯನ್ನು ದೇವರಿಗೆ ೧೦೧ ಪೂಜೆಯನ್ನು ಸಲ್ಲಿಸಲಾಗುತ್ತದೆ. ನಂತರ ಬಿಲ್ಲು ತೊಳೆದು ಪೂಜಿಸುತ್ತಾರೆ. ನಂತರ ಸಾಯಂಕಾಲ ಊರಿಗೆ ಬಂದು ಮೆರವಣಿಗೆ ಮಾಡಿ ಗುಡಿ ತುಂಬಿಸುತ್ತಾರೆ. ಆ ದಿನ ಸಂಜೆಯ ವೇಳೆಗಾಗಲೇ ದೇವಸ್ಥಾನಕ್ಕೆ ಅಕ್ಕಿ ಹುರುಳಿ ಮೀಸಲು ಹಾಲು ಮೊಸರನ್ನು ತಂದು ಕೊಟ್ಟಿರುತ್ತಾರೆ. ಸಮುದಾಯಕ್ಕೆ ಸೇರಿದವರು ಮಾತ್ರವಲ್ಲದೆ ಹಟ್ಟಿಯವರು ಕೊಟ್ಟಿರುತ್ತಾರೆ. ಹುರುಳಿ ಕಾಳನ್ನು ಬೇಯಿಸಿ ಗುಗ್ಗರಿ ಮಾಡಿ ನೈವೇದ್ಯಕ್ಕೆ 'ತಳಿಗೆ ಅನ್ನ' ಎಂದು ಮಾಡುತ್ತಾರೆ. ಅಕ್ಕಿ ಬೇಯಿಸಿ ಅದಕ್ಕೆ ಬಾಳೆಹಣ್ಣು, ಹಾಲು, ಮೊಸರು ಬೆಲ್ಲ ಹಾಕಿ ಬೇಯಿಸುವುದೇ ತಳಿಗೆ ಅನ್ನ, ನವಣೆ ಅಕ್ಕಿಯನ್ನು ಕುಟ್ಟಿ ತಂಬಿಟ್ಟು ಮಾಡುತ್ತಾರೆ. ಇವೆಲ್ಲವನ್ನು ದೇವರಿಗೆ ನೈವೇದ್ಯ ಮಾಡುತ್ತಾರೆ. ಹೀಗೆ ರಾತ್ರಿ ಎಲ್ಲಾ ಪೂಜೆ ಮಾಡಿ ಬೆಳಗಿನ ಜಾವದ ವೇಳೆಗೆ ಪೂಜೆ ಮುಗಿಯುತ್ತದೆ. ನಂತರ ಮಣೇವು ಸೇವೆ ಎಂಬ ಆಚರಣೆ ನಡೆಸುತ್ತಾರೆ. ಗುಡಿಯ ಹೊರಗೆ ಕಟ್ಟೆಯ ಮೇಲೆ ದೇವರಪೆಟ್ಟಿಗೆಯನ್ನು ಉಳಿದ ಮೂರು ದೇವರುಗಳೊಂದಿಗೆ ಇಡುತ್ತಾರೆ. ಗುಡಿಯ ಮುಂಭಾಗದಲ್ಲಿ ಮಡಿಬಟ್ಟೆ ಹಾಕಿ ಅದರ ಮೇಲೆ ಬೆಲ್ಲ, ಬಾಳೆಹಣ್ಣು, ತಂಬಿಟ್ಟನ್ನು ಬೆರೆಸಿ ಸಾಲಾಗಿ ಒಂದಿಷ್ಟು ಕುಪ್ಪೆಗಳನ್ನು ಇಡುತ್ತಾರೆ. ಪಕ್ಕದಲ್ಲಿ ದೊಡ್ಡದಾಗಿ ಪಂಜನ್ನು ಹಚ್ಚಿಟ್ಟಿದ್ದು ಅದು ಉರಿಯುತ್ತಿರುತ್ತದೆ. ನಂತರ ಕಲ್ಲುಕಂಬದ ದೀಪವನ್ನು

ಹಚ್ಚುತ್ತಾರೆ. ಆಗ ಮಣೇವು ಪ್ರಾರಂಭವಾಗುತ್ತದೆ. ದಾಸಯ್ಯಗಳು ಕುಣಿಯುತ್ತ ಹೂಂಕರಿಸುತ್ತಾ ಬಂದು ಮಲಗಿ ಬಲಪಕ್ಕಕ್ಕೆ ಹೊರಳಿ ಆ ಬಾಳೆಹಣ್ಣು ಬೆಲ್ಲದ ಕುಪ್ಪೆಗೆ ಬಾಯಿ ಹಾಕಿ ಪ್ರಾಣಿಯಂತೆ ತಿನ್ನುತ್ತಾರೆ. ಈ ರೀತಿ ಮೂರು ಬಾರಿ ಮಣೇವು ಆದ ನಂತರ ಎಲ್ಲರೂ ಸೇರಿ ಸೂರ್ಯನಿಗೆ ನಮಸ್ಕರಿಸಿ ನಂತರ ದೇವರಿಗೆ ನಮಸ್ಕರಿಸುತ್ತಾರೆ. ಮರುದಿನ ಮುಂಜಾನೆ ಸುಮಾರು ೨ ಗಂಟೆ ಸಮಯಕ್ಕೆ ಊರಿನ ಹೆಣ್ಣುಮಕ್ಕಳು ಆರತಿ ತಟ್ಟೆಯನ್ನು ಹಿಡಿದು ಸಾಲಾಗಿ ದೇವಸ್ಥಾನದ ಮುಂದೆ ಬಂದು ನಿಂತುಕೊಳ್ಳುತ್ತಾರೆ. ನಂತರ ಈ ನಾಲ್ಕು ಮಂದಿ ಪೂಜಾರಿಗಳು ಬಂದು ಮಧ್ಯೆ ನಿಲ್ಲುತ್ತಾರೆ. ಸೂರ್ಯನ ಕಡೆಗೆ ಊರ ದೇವರುಗಳಿಗೂ ಆರತಿ ಬೆಳಗುತ್ತಾರೆ. ಇದಾದ ನಂತರ ಭಕ್ತಾದಿಗಳು ತಂದಿದ್ದ ಅಕ್ಕಿಯನ್ನು ಅಳೆಯುತ್ತಾರೆ. ಇದನ್ನು ಅನ್ನ ಮಾಡಿ ಎಲ್ಲಾ ಜನರಿಗೂ ದಾಸೋಹ ಮಾಡಲಾಗುತ್ತಿದೆ. ಅಲ್ಲಿಗೆ ಈ ಹಬ್ಬದ ವಿಧಿಗಳೆಲ್ಲಾ ಮುಗಿಯುತ್ತವೆ. ಬುಧವಾರ ರಾತ್ರಿ ಗಾದರಿಪಾಲನಾಯಕನ ಬಿಲ್ಲನ್ನು ತೆಗೆದುಕೊಂಡು ಹೋಗಿ ಊರ ಹೊರಗಿರುವ ವಾಸೆ ಕೊಯ್ಯುವ ಕಲ್ಲುಗಳ ಬಳಿ ಹೋಗಿ ಕೊಯ್ದು ಊಟ ಮಾಡುತ್ತಾರೆ.

**ಆವುಲಗೂಡಿನ ಹಬ್ಬ(ದೇವರೆತ್ತುಗಳು)**

ಮ್ಯಾಸನಾಯಕರು ತಮ್ಮ ಸಮುದಾಯಕ್ಕೆ ಸೇರಿದ ಆಯಾ ಸಾಂಸ್ಕೃತಿಕ ನಾಯಕನಿಗೆ ಸೇರಿದ ಪಶುಸಂಪತ್ತನ್ನೆಲ್ಲಾ ಕೂಡುವ ಸ್ಥಳಕ್ಕೆ ಗೂಡು ಎನ್ನುತ್ತಾರೆ. ಸಾಮಾನ್ಯವಾಗಿ ಊರ ಹೊರಭಾಗದಲ್ಲಿ ಕಾಡಿನ ಅಂಚಿನಲ್ಲಿ ಈ ಗೂಡುಗಳಿರುತ್ತವೆ. ಹಬ್ಬದ ನಿಮಿತ್ತ ಊರ ಹೊರಭಾಗದಲ್ಲಿ ಚಿಕ್ಕದಾದ ಗೂಡನ್ನು ನಿರ್ಮಿಸುತ್ತಾರೆ. ಬಂದ್ರಿ ತಡಿಕೆಯ ಬೇಲಿಯನ್ನು ಸುತ್ತಲೂ ಹಾಕಿ ಗೂಡನ್ನು ನಿರ್ಮಿಸಲಾಗುತ್ತದೆ. ಇದು ಸು. ೧೦-೧೨ ಅಡಿ ಸುತ್ತಳತೆಯಷ್ಟು ಜಾಗದಿಂದ ಕೂಡ್ದು. ಈ ಗೂಡಿನಲ್ಲಿ ದೇವರೆತ್ತುಗಳನ್ನು ಬಿಡುತ್ತಾರೆ. ಸು. ೧೦-೧೨ ಸೇರು ಅಕ್ಕಿಯನ್ನು ಅಕ್ಷತೆ ಮಾಡಿ ಪೂಜಾರಿ ಗೂಡಿನ ಸುತ್ತಲೂ ಚೆಲ್ಲುತ್ತಾನೆ. ಅಕ್ಷತೆಯ ನಂತರ ದಾಸೋಹ ನಡೆಯುತ್ತದೆ. ನೈವೇದ್ಯ ಇಟ್ಟು ದೇವರುಗಳನ್ನು ಪೂಜೆ ಮಾಡಿ ಮೂರು ಸುತ್ತು ಬಿಡುತ್ತಾರೆ.

**ಟಿಪ್ಪಣಿಗಳು**

೧. ವೀರಣ್ಣದಂಡೆ(ಸಂ), **ಸುವರ್ಣ ಜಾನಪದ ಲೇಖನಗಳು,** ಪು.೩೪೮
೨. ನಂಜಮ್ಮಣ್ಣಿ ಎಂ., **ಅರಸು ಜನಾಂಗ: ಒಂದು ಅಧ್ಯಯನ,** ಪು.೪೫
೩. ಅಂಬಳಿಕೆ ಹಿರಿಯಣ್ಣ, **ಕನ್ನಡ ವಿಶ್ವಕೋಶ,** ಪು.೮೫೮
೪. ಅನಂತಕೃಷ್ಣ ಅಯ್ಯರ್ ಎಲ್.ಕೆ.(ಸಂ), **ಮೈಸೂರು ಟ್ರೈಬ್ಸ್ ಅ್ಯಂಡ್ ಕ್ಯಾಸ್ಟ್ಸ್,** ಪು.೨೩೪
೫. ಸಣ್ಣಬೋರಯ್ಯ, ಮಾಹಿತಿದಾರ, ಉಗ್ಗಿನಿಂಗಯ್ಯನಹಟ್ಟಿ, ಮೊಳಕಾಲ್ಮೂರು ತಾಲ್ಲೂಕು
೬. ವಿರೂಪಾಕ್ಷಿ ಪೂಜಾರಹಳ್ಳಿ, **ಗಾದರಿಪಾಲನಾಯಕ,** ಪು.೮೬

ಅಧ್ಯಾಯ ಐದು

# ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳು

ಹಬ್ಬಗಳು ಎಂದರೆ ಪರ್ವಕಾಲದ ಆಚರಣೆಗಳು. ಇವು ಪ್ರತಿವರ್ಷವು ವಿಶೇಷ ಸಂದರ್ಭಗಳಲ್ಲಿ ಸಾಮಾಜಿಕ ಕ್ಷೇಮಕ್ಕಾಗಿ ಆಚರಿಸಲ್ಪಡುತ್ತವೆ. ಬಂಧು ಬಳಗವು ಸೇರುವ ಸಂದರ್ಭ. ಊರುಕೇರಿಗಳನ್ನು ಹತ್ತಿರ ತರುವ ಸಂದರ್ಭ. ಪುಣ್ಯದ ಸಂದರ್ಭ. ಸಂತೋಷದ ಸಂದರ್ಭ ಎಂದು ನಿರ್ದಿಷ್ಟಪಡಿಸಿದ ದಿನಗಳಲ್ಲಿ ಆಚರಿಸುವ ಶುಭಕಾರ್ಯದ ಸಂಕೇತವಾಗಿ ಹಬ್ಬಗಳು ಮಾನ್ಯವಾಗಿವೆ. ಹಬ್ಬಗಳು ಊರಿನ ಪ್ರತಿಯೊಂದು ಕೋಮಿನವರನ್ನು ಆಚರಿಸುವಂತೆ ಮಾಡುತ್ತದೆ. ಹಬ್ಬದಲ್ಲಿ ಊಟವೇ ಬಹಳ ಮುಖ್ಯ. ಅದಕ್ಕೆಂದೆ ಪ್ರಶಸ್ತವಾದ ಊಟವನ್ನು 'ಹಬ್ಬದೂಟ'ಎಂಬ ನಾಣ್ನುಡಿ ಬಳಸಿ ಕರೆಯುತ್ತಾರೆ. ಆಚರಣೆ ಕೇವಲ ಉಂಡು, ಉಟ್ಟು ತೇಗಿ ನಲಿದಾಡುವುದಷ್ಟೇ ಹಬ್ಬಗಳಲ್ಲ. ವ್ರತ ನಿಯಮಗಳನ್ನು ಎಲ್ಲಾ ದಿನಗಳಲ್ಲಿ ಅಲ್ಲದಿದ್ದರೂ ಕೆಲವೊಂದು ವಿಶೇಷ ದಿನಗಳಲ್ಲಿಯಾದರೂ ಪಾಲಿಸಿ ಕಡ್ಡಾಯವಾಗಿ ದೇಹದಂಡನೆಯ ಮೂಲಕ ಅಥವಾ ಹಬ್ಬಕ್ಕೆ ಕಾರಣವಾದ ಸಂಗತಿಯ ಬಗ್ಗೆ ಗೌರವಭಾವನೆಯನ್ನು ವ್ಯಕ್ತಪಡಿಸಿ ತನಗೆ ತಾನೆ ಆತ್ಮ ಸಂಗಾತಿಯಾಗುವ ನಿಯಮಗಳನ್ನು ಕಲ್ಪಿಸಿಕೊಡುವಂತಹ ಆಚರಣೆಗಳೇ ಹಬ್ಬಗಳು. ಸ್ನಾನ, ವಂದನೆ, ಜಪ, ತಪ, ಪೂಜೆ ಇತ್ಯಾದಿಗಳೊಂದಿಗೆ ಬಾಹ್ಯ ಹಾಗೂ ಅಂತರಂಗ ಶುದ್ಧಿಗೊಳ್ಳದ ಕ್ರಮಗಳನ್ನು ಹಬ್ಬಗಳು ಅರ್ಥೈಸಿಕೊಡುತ್ತವೆ. 'ಹಬ್ಬ' ಎಂಬ ಪದವು ಸಂಸ್ಕೃತದ 'ಪರ್ವನ್' ಎಂಬ ಪದದಿಂದ ಆಧಾರಿತವಾಗಿದೆ. ಪರ್ವನ್ ಅಥವಾ ಪರ್ವ ಪದದ ತದ್ಭವ ರೂಪ ಹಬ್ಬ ಎಂಬುದಾಗಿದೆ. ಹಬ್ಬ ಪರ್ವ ಎಂದರೆ ಬದಲಾವಣೆಯ ಕಾಲ ಇದು ಮಾನವ ಬಯಕೆಯ ಸಂಕಲ್ಪ ಅಥವಾ ವ್ರತ ಕೈಗೊಳ್ಳುವ ಕಾಲ, ಉತ್ಸವ, ಪುಣ್ಯಕಾಲ, ಸಂಕ್ರಮಣದ ಕಾಲ ಆನಂದದ ಹಂಚಿಕೆಯ ಸಂದರ್ಭ ಮೊದಲಾದ ಸಮುಚ್ಚಯ ಅರ್ಥಗಳನ್ನು ಕೊಡುತ್ತದೆ[೧].

ಒಂದು ನಾಡಿನ ಸಂಸ್ಕೃತಿಯನ್ನು ಪರಿಚಯಿಸಿ ಬೆಳಗಿಸುವ ಹಬ್ಬಗಳು ಸಂತೋಷದ ಸಮಾರಂಭವನ್ನು ಸೂಚಿಸುತ್ತವೆ. ಹಬ್ಬಗಳು ಶುಭದಿನದಲ್ಲಿನ ಆಚರಣೆ. ಆ ಸಮೂಹದ ಸದಸ್ಯರೆಲ್ಲರೂ ಸಂತೋಷವನ್ನು ಹಂಚಿಕೊಂಡು ಆ ಒಂದು ದಿನ ಮಹತ್ವವನ್ನು ಸ್ಮರಿಸಿಕೊಳ್ಳುತ್ತಾ ಅದನ್ನು ಅಭಿವ್ಯಕ್ತಿಸುತ್ತಾರೆ. ಅಂದು ಹಾದಿ ಬಡಿದು ವಿವಿಧ ಆಚರಣೆಗಳಿಂದ ಹಬ್ಬಕ್ಕೆ ಕಾರಣವಾದ ಪ್ರಕೃತಿ, ದೈವ ಇಲ್ಲವೆ ಮಾತಾಪಿತೃಗಳ ಋಣವನ್ನು ತೀರಿಸುವ ಸಲುವಾಗಿ ಉತ್ಸಕರಾಗಿರುತ್ತಾರೆ. ಹಬ್ಬಗಳು ಜನ್ಮ ತಳೆದಿರುವುದೇ ಇಂತಹ ಕಾರಣಗಳಿಂದಾಗಿ ಎನ್ನಬಹುದು. ಹಬ್ಬಗಳು ಹರಿದಿನಗಳಾಗಿ, ದೇವರನ್ನು ನೆನೆಯುವ ಕಾರಣವಾಗಿವೆ. ಅದಕ್ಕೆಂದೆ ನಾಣ್ನುಡಿಯಲ್ಲಿ ಜೋಡಿಪದವನ್ನು ಬಳಸಿದ್ದಾರೆ. ಹಬ್ಬ–ಹರಿದಿನ, ಹಬ್ಬದಲ್ಲಿ ಸಂತೋಷವನ್ನು ಹಂಚಿಕೊಂಡು ತಮ್ಮ ಇಷ್ಟ ದೈವದ ಕೃಪೆಯನ್ನು ಸಂಪಾದಿಸಿಕೊಳ್ಳಲು ಅಥವಾ ಸಂಪಾದಿಸಿಕೊಂಡಿದ್ದೇನೆ ಎಂಬ ಸಂತೋಷದಲ್ಲಿ ಬೀಗುವ ಸನ್ನಿವೇಶಗಳೇ ಹೆಚ್ಚು.[೨]

ಬಂಧುಮಿತ್ರರ ಆಗಮನದೊಂದಿಗೆ, ಸಂತೋಷವನ್ನು ಹಂಚಿಕೊಂಡು ದೇವಸ್ಥಾನಗಳಿಗೆ ಹೋಗಿ ಹಣ್ಣುಕಾಯಿ ಅರ್ಪಿಸಿ ಭಗವಂತನ ಅನುಗ್ರಹಕ್ಕೆ ಪಾತ್ರರಾಗುವ ಜನಪದರು ತಾವು ಆಚರಿಸುವ ಹಬ್ಬಗಳಂದು ತಮ್ಮ ಸಾಂಪ್ರದಾಯಿಕ ಪರಂಪರೆಯನ್ನು ಅನುಸರಿಸುತ್ತಾರೆ. ದೇವಾಲಯಗಳಿಗೆ ಹೋಗಿ ತಮ್ಮ ಆಸೆಗಳೊಂದಿಗೆ ಇಷ್ಟ ಸಿದ್ದಿಗಳನ್ನು ಪಡೆಯುವ ತುಂಬ ನಂಬುಗೆಯಲ್ಲಿ ಸಂತೋಷಗೊಳ್ಳುತ್ತಾರೆ. ದೇವರ ಕೃಪೆ ತಮ್ಮ ಮೇಲೆ ಸದಾ ಇರಲಿ ಎಂಬುದಾಗಿ ಅವರು ಆಶಿಸುತ್ತಾರೆ. ಇದೇ ಆಶಾಭಾವನೆಗಳಲ್ಲಿ ಜನಪದಹಬ್ಬ ಪ್ರತಿಯೊಂದು ಜನಾಂಗದಲ್ಲಿಯೂ ಕಂಡುಬರುತ್ತದೆ.

ಮಾನವನ ತನ್ನ ಬದುಕಿನ ಏಕತಾನತೆಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಆತ್ಮೀಯರನ್ನು ಕೂಡಿಕೊಳ್ಳುವುದಕ್ಕಾಗಿ ಮನಸಂತೋಷ ಹೊಂದುವುದಕ್ಕಾಗಿ, ಕೆಲವು ದಿನಗಳಲ್ಲಿ ಗೊತ್ತು ಮಾಡಿಕೊಂಡು ಅದನ್ನು ಹಬ್ಬ ಹರಿದಿನಗಳೆಂದು ಕರೆದುಕೊಂಡಿರಬೇಕು. ಗದ್ದೆ, ತೋಟ, ಮನೆ ಮಾರುಗಳ ಕ್ಷೇಮ ಸಾಧನೆಗೆ ಅಡ್ಡಿ ಆತಂಕಗಳನ್ನೊಡ್ಡುವ ದುಷ್ಟಶಕ್ತಿಗಳನ್ನು ನಿವಾರಿಸಿ ತನ್ನನ್ನು ರಕ್ಷಿಸುವ ದೈವವನ್ನು ಸಂಪ್ರೀತಿಗೊಳಿಸುವ ಉದ್ದೇಶಕ್ಕಾಗಿ ಪ್ರಾರ್ಥನೆ ಸಂಪ್ರದಾಯ ಆಚರಣೆಗಳಿಂದ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಮಾನವ ಹಬ್ಬಗಳನ್ನು ಆಚರಣೆಯಲ್ಲಿ ತಂದುಕೊಂಡಿರಬಹುದು. ಹಬ್ಬಗಳು ಸಾಮಾನ್ಯವಾಗಿ ಜೀವನದ ಏಕತಾನವನ್ನು ತಡೆದು ಸಂಭ್ರಮವನ್ನು ತರುತ್ತವೆ. ಹಬ್ಬಗಳ ದಿನಗಳಲ್ಲಿ ಮಮೂಲಿ ಮಾನವ ಪ್ರತಿದಿನವು ನಿಸರ್ಗದ ಮಡಿಲಲ್ಲಿ ನಿರಂತರವಾಗಿ ಕೆಲಸವನ್ನು ಮಾಡಿ ದಣಿವನ್ನು ಆರಿಸಿಕೊಳ್ಳಲು ಸ್ವಲ್ಪ ವಿರಾಮ ಪಡೆದುಕೊಳ್ಳಲು ಮುಂದಾದಾಗ ಹಬ್ಬ ಉತ್ಸವ ಜಾತ್ರೆ ಮುಂತಾದ ಸಾಮಾಜಿಕ ಆಚರಣೆಗಳ ರೂಢಿಯಲ್ಲಿ ಬಂದವು. ಹಬ್ಬ ಉತ್ಸವ ಜಾತ್ರೆಗಳು ಜನಾಂಗ ನಡೆದು ಬಂದ ಜನವಾಹಿನಿಯ

ಪ್ರತೀಕ ಮತ್ತು ಸಂಸ್ಕೃತಿಯ ಅವಿಭಾಜ್ಯ ಅಂಗ. ಈ ಹಬ್ಬ ಉತ್ಸವಗಳು ಸಂಪ್ರದಾಯವನ್ನು ಉಳಿಸಿ ಬೆಳೆಸಿಕೊಂಡು ಬರುತ್ತವೆ. ಇದರ ಜೊತೆ ಭವ್ಯ ಸಂದೇಶವನ್ನು ಜನತೆಗೆ ನೀಡುತ್ತದೆ. ಹಬ್ಬಗಳು ಆಯಾಭಾಗದ ಜನರ ನಾಗರಿಕತೆ ಮತ್ತು ಸಂಸ್ಕೃತಿಯ ಪ್ರತೀಕಗಳು. ಭಾರತದ ತುಂಬಾ ಎಲ್ಲರೂ ಅತ್ಯಂತ ಸಂತಸ ಸಂಭ್ರಮದಿಂದ ಆಚರಿಸುವ ಹಬ್ಬ. ಕೆಲವು ಹಬ್ಬಗಳ ಆಚರಣೆ ಹೇಗೆ ಪ್ರಾರಂಭವಾಯಿತೆಂಬುದನ್ನು ತಿಳಿಯುವುದು ಕಷ್ಟ. ಏಕೆಂದರೆ ಮಾಹಿತಿ ಮತ್ತು ದಾಖಲೆಗಳ ಅಭಾವದಿಂದ ಹಬ್ಬಗಳ ಉಗಮ ಮತ್ತು ವಿಕಾಸವನ್ನು ಕುರಿತು ನಿರ್ದಿಷ್ಟವಾಗಿ ಯಾವುದನ್ನೇ ಆಗಲಿ ಹೇಳಲು ಬರುವುದಿಲ್ಲ.

ಆದರೆ ಈ ಹಬ್ಬಗಳನ್ನು ಪ್ರಾಚೀನ ಕಾಲದಿಂದಲೂ ಆಚರಿಸುತ್ತಾ ಬಂದಿದ್ದಾರೆ. ಕೆಲವು ಹಬ್ಬಗಳು ಮತ್ತು ಉತ್ಸವಗಳು ವಿವರಣೆಗಳನ್ನು ವೇದ, ಶಾಸ್ತ್ರ, ಪುರಾಣ ಸ್ಮೃತಿ ಮುಂತಾದ ಸಾಹಿತ್ಯ ಕೃತಿಗಳಲ್ಲಿ ಕವಿಗಳು ಹೇಳಿರುವುದುಂಟು ಮತ್ತು ಕೆಲವು ಹಬ್ಬಗಳು ಕೇವಲ ಕತೆ ಆಖ್ಯಾನ ರೂಪಗಳ ಮೂಲಕ ಆಚರಣೆಯಲ್ಲಿ ಉಳಿದುಕೊಂಡು ಬಂದಿರುವುದುಂಟು. ವರ್ಷಕ್ಕೊಮ್ಮೆ ಬರುವ ಈ ಹಬ್ಬಗಳು ಜೀವನದ ರಸ ನಿಮಿಷಗಳು ಬಾಳಿಗೆ ತಂಪೆರೆಯುವ ಅಮೃತ ಬಿಂದುಗಳು ಪ್ರತಿಯೊಂದು ಹಬ್ಬವು ಸಂಪ್ರದಾಯವು ಹೌದು. ಸಂಕೀರ್ಣ ಕಲೆಯು ಹೌದು. ಆತ್ಮೋದ್ಧಾರ ಸಾಧನವಾದ ಮಾಧ್ಯಮವು ಹೌದು. ಹೃದಯ ಹೃದಯಗಳ ಒಟ್ಟುಗೂಡಿಸುವ ಸೇತುಶಕ್ತಿಯು ಹೌದು. ಅದು ಐಕ್ಯದ ಮಹತ್ವವನ್ನು ಪ್ರಕಾಶಿಸುತ್ತದೆ.

## ದೇವರ ಸ್ವರೂಪ

ತಮ್ಮ ದೇವರಿಗೆ ಸಂಬಂಧಿಸಿದ ವಸ್ತು ವಿಶೇಷಗಳನ್ನು ಇಲ್ಲಿ ಪೂಜೆ ಮಾಡುವ ಪದ್ಧತಿ ಇದೆಯೇ ಹೊರತಾಗಿ ವಿಗ್ರಹ ಅಥವಾ ಮೂರ್ತಿಯ ಪೂಜೆ ಇಲ್ಲ. ಶೈವಾರಾಧನೆ ಮೂಲದವರಾದ ಇವರು ಶೈವಸಂಸ್ಕೃತಿ ಪ್ರತೀಕವಾಗಿ ಒಂದು ಕಲ್ಲನ್ನೇ ಲಿಂಗ, ಭೈರವ, ಬೋರುವ ಎಂದು ಪೂಜಿಸುತ್ತಾರೆಯೇ ಹೊರತು ಅದೂ ಕೆತ್ತಿ ಕಟ್ಟಿದ ಸುರೂಪಿ ಲಿಂಗವನ್ನಲ್ಲ. ತಮ್ಮ ಸಾಂಸ್ಕೃತಿಕ ವೀರರ ನೆನಪಿನಲ್ಲಿ ಕೆಲವು ಕಡೆ ಅವರ ಅಲಗು ಅಥವಾ ಬಿಲ್ಲನ್ನು ಪೂಜಿಸುವ ಪರಿಪಾಟವಿದೆ. ಇವರ ದೇವರ ನೆಲೆಗಳು ಗುಡಿಸಲುಗಳು. ಇದರಲ್ಲಿ ಈ ಪೂಜ್ಯನೀಯ ವಸ್ತುವನ್ನು ಇಟ್ಟಿರುತ್ತಾರೆ. ಉಳಿದಂತೆ ಪೆಟ್ಟಿಗೆ ದೇವರು ಎಂದು ಪೂಜಿಸುತ್ತಾರೆ. ಇದನ್ನು ಬಿದಿರಿನ ಕಡ್ಡಿಯನ್ನು ಬಳಸಿ ತಯಾರಿಸಿರುತ್ತಾರೆ. ಬಿದಿರಿನ ಕಡ್ಡಿಯನ್ನು ಒತ್ತಾಗಿ ಜೋಡಿಸಿ ಹೆಣೆದಿರುವ ದುಂಡನೆಯ ಆಕಾರದಲ್ಲಿರುವ ೧.೫ರಿಂದ ೨ ಅಡಿ ಅಗಲವಿರುವ, ಮೇಲೆ ಮುಚ್ಚಳವಿರುವ ಬುಟ್ಟಿಯಿದು. ಇದನ್ನೇ ಪೆಟ್ಟಿ, ಪೆಟ್ಟಿಗೆ ಎಂದು ಕರೆಯುತ್ತಾರೆ. ಇದಕ್ಕೊಂದು ಬಟ್ಟೆಯನ್ನು ಸುತ್ತಿ, ಆಭರಣಗಳನ್ನು ಸಿಕ್ಕಿಸಿದಾಗ ವಿಶಿಷ್ಟವಾದ ರೂಪ ಅದಕ್ಕೆ ಬರುತ್ತದೆ. ಹಿಂದೆ ವಲಸಿಗರಾಗಿದ್ದ ಇವರು ತಮ್ಮ ವಸ್ತು ವಿಶೇಷಗಳನ್ನು ಇಂತಹ ಬುಟ್ಟಿಯಲ್ಲಿಯೇ ಹೊತ್ತು ಒಯ್ಯುತ್ತಿದ್ದ ವಿಧಾನವಿದು. ಹಾಗಾಗಿಯೇ

ತಮ್ಮ ನಾಯಕನಿಗೆ ಸಂಬಂಧಿಸಿದ ವಸ್ತುಗಳನ್ನು ಇಂತಹ ಪೆಟ್ಟಿಗೆಯಲ್ಲಿಯೇ ಇರಿಸಿ ಪೂಜಿಸುವ ವಿಧಾನವಿದೆ. ಅಹೋಬಲಂ ನರಸಿಂಹಸ್ವಾಮಿಯ ಹೆಸರಿನಲ್ಲಿ ಪೂಜಿಸಲಾಗುವ ಓಬಳದೇವರ ಪೆಟ್ಟಿಗೆಗಳಲ್ಲಿ ಸಾಂಕೇತಿಕವಾಗಿ ಸಾಲಿಗ್ರಾಮಗಳಿವೆ ಎಂದು ಹೇಳಲಾಗುತ್ತದೆ. ಇದಲ್ಲದೆ ಕಾಡಿನ ಗೂಡುಗಳಲ್ಲಿರುವ ದೇವರ ಎತ್ತುಗಳೂ ಕೂಡ ಇವರಿಗೆ ದೇವರ ಸಮಾನವೇ. ಅವರು ಇವುಗಳನ್ನು ಪೂಜಿಸುತ್ತಾರೆ. ಈ ಸಮುದಾಯ ಗುಗ್ಗರಿ ಹಬ್ಬದ ದಿನ ಕಾಡಿನಲ್ಲಿರುವ ಗೂಡಿನ ಎತ್ತುಗಳನ್ನು ತಂದು ಹಟ್ಟಿಗಳಲ್ಲಿ ಬೀಡುಬಿಟ್ಟು ಅಲ್ಲಿರುವ ತಮ್ಮ ದೈವಿಕ ನೆಲೆಗಳ ಬಳಿ ಸೇರುವ ಆಚರಣೆ ನಡೆಸುತ್ತಾರೆ.

**ಸೂರ್ಯ ನಮಸ್ಕಾರ**

ಪ್ರತಿ ದೇವಾಲಯದಲ್ಲೂ, ಪ್ರತಿ ಹಬ್ಬದಲ್ಲೂ ತಮ್ಮ ದೈವಕ್ಕೆ ಪೂಜೆ ಸಲ್ಲಿಸಿದ ನಂತರ ಸೂರ್ಯನ ಮೊಕ್ಕು(ಇದು ತೆಲುಗು ಪದ) ಎಂದು ಸಾಮೂಹಿಕವಾಗಿ ಗುಡಿಯ ಅಂಗಳದಲ್ಲಿ ಪೂಜಾರಿಯ ಜೊತೆಯಾಗಿ ನಿಂತು ಸೂರ್ಯನ ಕಡೆ ತಿರುಗಿ ನಮಸ್ಕರಿಸಿ, ನಂತರ ದೇವರ ಗರ್ಭಗುಡಿಯ ಕಡೆ ತಿರುಗಿ ನಮಸ್ಕರಿಸಿ ನಂತರ ಪರಸ್ಪರ ಕೈ ಮೊಕ್ಕು ಎಂದು ಕೈ ಕೈ ಮುಟ್ಟಿ ನಮಸ್ಕರಿಸಿಕೊಳ್ಳುತ್ತಾರೆ. ಹಿರಿಯರ ಹಬ್ಬದ ಸಮಯದಲ್ಲೂ ಇದೊಂದು ವಿಶಿಷ್ಟವಾದ ನಮನ. ಸಮುದಾಯದ ಸಾಮೂಹಿಕ ಬದುಕಿನ ಕ್ರಮದ ಒಂದು ಸ್ವರೂಪವಾಗಿ ಉಳಿದುಬಂದಿದೆ.

**ಮೀಸಲು**

ಹಬ್ಬದ ಆಚರಣೆಯ ಮುನ್ನಾ ದಿನದ ವೇಳೆಗೆ ತಮ್ಮ ನೆಲೆಯನ್ನು ಸುಣ್ಣ ಮಣ್ಣಿನಿಂದ ಬಳಿದು ಮಡಿ ಮಾಡಬೇಕು. ಆ ದಿನ ಸೂತಕದಲ್ಲಿರುವ ಮಹಿಳೆಯರು ಮನೆಯೊಳಗೆ ಇರುವಂತಿಲ್ಲ. ಸಾವಿನ ಸೂತಕದಲ್ಲಿರುವ ಮನೆಯಲ್ಲಿ ಮೀಸಲು ಹಾಕುವುದೇ ಇಲ್ಲ. ತಾವು ಸಾಕಿರುವ ಹಸು ಎಮ್ಮೆಗಳಿಂದ ಮಡಿಯಲ್ಲಿ ಹಾಲು ಕರೆದು ಅದನ್ನು ದೇವಸ್ಥಾನಕ್ಕೆ ಒಪ್ಪಿಸುತ್ತಾರೆ. ಅಲ್ಲಿ ಹೀಗೆ ಎಲ್ಲಾ ಮನೆಯಿಂದ ತಂದ ಹಾಲನ್ನು ಕಾಯಿಸಿ, ಮೊಸರು ಮಾಡಿ ಮರುದಿನ ಬೆಣ್ಣೆ ತೆಗೆದು ದೇವರಿಗೆ ಪೂಜೆಯ ಸಂದರ್ಭದಲ್ಲಿ ದೀಪ ಹಚ್ಚಲು ಬಳಸುತ್ತಾರೆ. ಇದಲ್ಲದೆ ಎತ್ತಿನ ಗೂಡಿನಿಂದಲೂ ಕೀಲಾರಿಗಳು ಮೀಸಲು ಮೊಸರನ್ನು ಪೂಜೆಯ ವೇಳೆಗೆ ಬರಿಗಾಲಲ್ಲಿ ನಡೆದು ಹೊತ್ತು ತರುತ್ತಾರೆ. ಈ ಗೂಡಿನಿಂದ ಬಂದ ನಂತರವೇ ದೇವಾಲಯದಲ್ಲಿ ಕಾರ್ಯಾಚರಣೆ ಪ್ರಾರಂಭವಾಗುವುದು. ಈ ಮೊಸರನ್ನು ಜೋಳದ ಅನ್ನದೊಂದಿಗೆ ನೈವೇದ್ಯ ಮಾಡುತ್ತಾರೆ. ಉಳಿದಂತೆ ಎಲ್ಲವನ್ನು ಸೇರಿಸಿ ದಾಸೋಹಕ್ಕೆ ಬಳಸಲಾಗುತ್ತದೆ.

**ಕಾಸು**

ಹಬ್ಬದ ಆಚರಣೆಯಲ್ಲಿ ಪೂಜೆಯ ನಂತರ ಕರಿಕಂಬಳಿಯ ಗದ್ದುಗೆಯೊಂದನ್ನು ಹಾಸಿ

ಅದರ ಮೇಲೆ ಪ್ರತಿ ಮನೆಗೆ ಒಬ್ಬರಂತೆ ಒಂದು ಕಾಸು ಎಂದು ನಾಣ್ಯವನ್ನು ಇರಿಸಿ ನಮಸ್ಕರಿಸುತ್ತಾರೆ. ಇದು ತಮ್ಮ ಸಾಂಸ್ಕೃತಿಕ ನಾಯಕನಿಗೆ ಸಲ್ಲಿಸುವ ಗೌರವದ ಕಾಣಿಕೆಯಾಗಿದೆ. ಇದನ್ನು ಪೂಜಾರಿ ತೆಗೆದುಕೊಳ್ಳುತ್ತಾರೆ. ಹಾಗೆಯೇ ಎತ್ತಿನಗೂಡಿನ ಬಳಿಹೋದಾಗ ಅಂದರೆ ಶ್ರಾವಣಮಾಸದಲ್ಲಿ ಒಂದು ಬಾರಿ ಹಾಗೂ ದೀಪಾವಳಿಯಲ್ಲಿ ಒಂದು ಬಾರಿ ಎತ್ತಿನಗೂಡಿನ ಬಳಿ ಒಂದು ದಿನ ರಾತ್ರಿ ಕಳೆದು ಬರುವ ಪ್ರತೀತಿ ಇದೆ. ನವದಂಪತಿಗಳು ಬಿಳಿಬಟ್ಟೆ ಧರಿಸಿ ಎತ್ತಿನ ಗೂಡಿಗೆ ಹೋಗಿ ಅಂದು ರಾತ್ರಿ ಅಲ್ಲಿಯೇ ಕಳೆದು, ಬೆಳಗ್ಗೆ ನವಮದುಮಗಳು ಎತ್ತುಗಳು ಹಾಕಿರುವ ಸಗಣಿಯನ್ನು ತನ್ನ ಸೆರಗಿನಲ್ಲಿ ಹಾಕಿಕೊಂಡು ಗುಡ್ಡೆಗೆ ಹಾಕುತ್ತಾಳೆ. ಎತ್ತುಗಳ ಗೂಡಿನ ಬಳಿ ಮುಂಜಾನೆ ಕರಿಕಂಬಳಿ ಗದ್ದುಗೆ ಹಾಕಿ ಹಾಡುತ್ತಾರೆ. ಆ ಸಮಯದಲ್ಲಿ ಮನೆಯಿಂದ ತಂದ ದವಸಧಾನ್ಯ ಹಾಗೂ ಕಾಸು ಇಡಲಾಗುತ್ತದೆ. ಅದನ್ನು ಪಟ್ಟದ ಕಿಲಾರಿಗಳು ತೆಗೆದುಕೊಳ್ಳುತ್ತಾರೆ.

**ಗಣೆ(ಕೊಳಲು)**

ಪಶುಪಾಲಕನಾದ ಶ್ರೀಕೃಷ್ಣನ ಕೈಯಲ್ಲಿರುವ ವಾದ್ಯವೇ ಕೊಳಲು. ಅದೇ ಮೂಲದಿಂದ ಬಂದವರು ತಾವು ಎಂದು ಹೇಳಿಕೊಳ್ಳುವ ಈ ಸಮುದಾಯದಲ್ಲಿಯೂ ಕಾಡುಗೊಲ್ಲರಲ್ಲಿ ಇರುವಂತೆ ಗಣೆಯನ್ನು ನುಡಿಸುವ ಪದ್ಧತಿ ಇದೆ. ಕೊಳಲು ಆಕಾರದಲ್ಲಿಯೇ ಇರುವ ಉದ್ದನೆಯ ಬಿದಿರಿನಿಂದ ಮಾಡಿದ ವಾದ್ಯವಿದು. ಕಂಪಳ ದೇವರಗುಡಿಯಲ್ಲಿ ಯುಗಾದಿ ಮುಂಗಾರಿ ಹಬ್ಬದ ದಿನ ಈ ಗಣೆಯನ್ನು ನುಡಿಸುತ್ತಾ ಬಿದಿರಿನಲ್ಲಿನ ಪದವನ್ನು ಮತ್ತು ಪೆದ್ದೋಬಳೇಶನ ಸ್ತುತಿಯನ್ನು ನುಡಿಸಲಾಗುತ್ತದೆ. ಕಾಡಿನಲ್ಲಿ ಅಲೆಯುತ್ತಾ ಪಶುಪಾಲನೆಯನ್ನು ಮಾಡುತ್ತಿದ್ದ ಇವರು ಏಕತಾನತೆಯನ್ನು ಕಳೆದುಕೊಳ್ಳಲು ತಮ್ಮ ಪಶುಮಂದೆಯನ್ನು ತಮ್ಮ ಬಳಿ ಕರೆಯಲು ತಮ್ಮ ಹಿಂದೆ ಬರುವಂತೆ ಮಾಡಲು ಈ ಗಣೆಯನ್ನು ಬಳಸುತ್ತಿದ್ದು, ಈಗ ಒಂದು ಆಚರಣೆಯ ಸ್ವರೂಪದಲ್ಲಿ ಉಳಿದುಬಂದಿದೆ. ಕಂಪಳದೇವರಹಟ್ಟಿಯಲ್ಲಿ ಬರಗಾಲ ಬಂದಾಗ ಗಣಿ ಬದಲಾಗುತ್ತದೆ. ಸಾಮಾನ್ಯವಾಗಿ ಮಾರಮ್ಮನ ಪೂಜಾರಿಗೆ ತಡವಾಗಿ ಮೈ ಮೇಲೆ ಬರುವಾಗಲೂ ಗಣಿಯನ್ನು ಊದುತ್ತಾರೆ.

**ಅಂಬು ವಾಸೆ ಕೊಯ್ಯುವುದು**

ಬೇಟೆಯ ಮೂಲದಿಂದ ಪಶುಪಾಲನೆಯ ಕಡೆ ಮಾರ್ಪಾಡುಗೊಂಡ ಸಮುದಾಯವಿದು. ಹಾಗಾಗಿ ಈ ಬೇಟೆಯ ಪ್ರವೃತ್ತಿ ಮಾಂಸ ರಕ್ತದ ನೈವೇದ್ಯದಲ್ಲಿರುವುದು ಆಚರಣೆಯ ರೂಪದಲ್ಲಿ ಉಳಿದುಬಂದಿದೆ. ಅಂಬು ಎಂದರೆ ಚೂಪಾದ ಆಯುಧ ಎಂದಾಗುತ್ತದೆ. ವಾಸ್ ಎಂದರೆ ಸಂಸ್ಕೃತದಲ್ಲಿ ಕತ್ತರಿಸು, ಕೊಯ್ಯು, ಚುಚ್ಚು ಎಂದರ್ಥ. ಇಲ್ಲಿ ಕುರಿಯನ್ನು ಕೊಯ್ಯುವ ವಿಧಾನವೇ ಅಂತಹದು. ಅಂಬು ವಾಸ್ ಎಂದರೆ ಚೂಪಾದ ಕತ್ತಿಯಿಂದ ಕುರಿಯ ಕತ್ತನ್ನು

ವಾಸ್ ಗುಂಡಿನ (ನಿರ್ದಿಷ್ಟವಾದ ದೇವಾಲಯದ ಮುಂದಿರುವ ಕಲ್ಲು) ಮೇಲಿರಿಸಿ ಕುರಿಯನ್ನು ಅಂಗಾತ ಮಲಗಿಸಿ ಕತ್ತನ್ನು ಕತ್ತರಿಸಲಾಗುತ್ತದೆ. ಆ ರಕ್ತ ಆ ಗುಂಡಿನ ಮೇಲೆ ಚೆಲ್ಲಿರುತ್ತದೆ. ಉಳಿದದ್ದನ್ನು ಅದರ ಪಕ್ಕದ ಗುಂಡಿಯಲ್ಲಿ ಹಾಕಿ ಮುಚ್ಚಲಾಗುತ್ತದೆ. ಕಾಡುಗೊಲ್ಲರಲ್ಲಿಯೂ ಈ ಪದ್ಧತಿ ಇದೆ; ಇದೊಂದು ಅಪರ ಕ್ರಿಯೆಯಂತೆ ಇದೆ ಎಂದು ಡಾ.ಮೀರಾಸಾಬಿಹಳ್ಳಿ ಶಿವಣ್ಣನವರು ಅಭಿಪ್ರಾಯ ಅಭಿಪ್ರಾಯಪಡುತ್ತಾರೆ.

**ಜನಪದ**

ಬಯಲುಸೀಮೆ ಪರಿಸರದಲ್ಲಿ ಜನಪದ ಸಾಹಿತ್ಯದ ಕವಿ, ಕಾವ್ಯ, ಕಲೆ ಕಲಾವಿದರಿಗೆ ಯಾವ ಬರವಿಲ್ಲ. ಹಲವು ಬಡತನಗಳ ದಾಳಿಗಳನ್ನು ಎದುರಿಸಿಯೂ ಇಲ್ಲಿನ ಕಲಾ ಸಂಪತ್ತು, ಸಾಹಿತ್ಯ ಸಂಪತ್ತು ಉಳಿದುಕೊಂಡು ಬಂದಿದೆ. ಹಿಂದಿನ ಕಸುಬನ್ನು ಉಳಿಸಿಕೊಂಡು ಬಂದ ಆಯಾ ಸಂದರ್ಭ, ಸಂಪ್ರದಾಯ, ಆಚರಣೆಗಳಿಗೆ ತಕ್ಕಂತೆ ಪ್ರದರ್ಶಿಸಲ್ಪಡುತ್ತವೆ. ಅಲ್ಲಿನ ಜಾನಪದದ ಶ್ರೇಷ್ಟತೆಯನ್ನು ಮೆರೆದ ಕವಿ ಕಲಾವಿದರು, ಕಥೆಗಾರರು, ಸಂಪ್ರದಾಯ ಹಾಡುಗಾರರು ಎಲೆಮರೆಯ ಕಾಯಿಯಂತೆ ಇಂದು ಜನಪದ ಸಾಹಿತ್ಯವನ್ನು ಬೆಳೆಸುತ್ತಿದ್ದಾರೆ.

ಈ ಪ್ರದೇಶದ ನೆರೆಯ ಭಾಷೆಗಳ ಪ್ರಭಾವಕ್ಕೆ ಒಳಗಾಗಿ ಇಲ್ಲಿನ ಕಾವ್ಯ ಸೃಷ್ಟಿ ನಡೆದುಕೊಂಡು ಬಂದಿದೆ. ಶಿಷ್ಟ ಸಾಹಿತ್ಯದ ರಚನೆಯ ಜೊತೆಗೆ ಜನಪದ ಸಾಹಿತ್ಯದ ಸೃಷ್ಟಿಯಲ್ಲೂ ಇದು ಮುಂದುವರಿದಿದೆ. ಜನಪದರು ತಮಗಾದ ಸುಖ-ದುಃಖ, ನೋವು-ನಲಿವು, ಆಸೆ-ಆಕಾಂಕ್ಷೆ, ನಂಬಿಕೆ-ಸಂಪ್ರದಾಯ, ಆಟ-ಪಾಠ ಮುಂತಾದವುಗಳನ್ನು ಜನಪದರು ತಮ್ಮ ಹಾಡುಗಳಲ್ಲಿ ಕಥನಗೀತೆಗಳಲ್ಲಿ ಹೆಣೆದುಕೊಂಡು ಬಂದಿದ್ದಾರೆ.

ಗ್ರಾಮೀಣದಲ್ಲಿ ಜನಪದ ಸಾಹಿತ್ಯವನ್ನು ಗದ್ಯ-ಪದ್ಯ ಮತ್ತು ಮಿಶ್ರ ಸಾಹಿತ್ಯವೆಂದು ಮೂರು ಪ್ರಕಾರಗಳಲ್ಲಿ ಗುರುತಿಸಬಹುದು. ಗದ್ಯ ಸಾಹಿತ್ಯದ ಮೂಲಕ ಪ್ರಾಚೀನ ಜನಪದ ಸಮಾಜವು ಸ್ಪಷ್ಟ ಚಿತ್ರಣವನ್ನು ಪಡೆದುಕೊಂಡಿದೆ. ಪ್ರಾಗೈತಿಹಾಸ ಕಾಲದ ಮಾನವನ ಅನೇಕ ಕುರುಹುಗಳು ಇಲ್ಲಿ ಕಂಡುಬರುತ್ತವೆ. ಇದರಲ್ಲಿ ಜನಪದರ ಸಾಂಸ್ಕೃತಿಕ ವಿಕಾಸದ ಬೆಳವಣಿಗೆಯ ಹಂತವನ್ನು ಕಾಣುತ್ತೇವೆ. ಈ ಪ್ರದೇಶದ ನಡೆನುಡಿಗಳು ಇಲ್ಲಿ ಭಾಷಾಸಮೃದ್ಧಿಗೆ ವ್ಯತ್ಯಾಸವೆನ್ನಿಸುತ್ತವೆ. ಈ ಪ್ರದೇಶದ ಹಟ್ಟಿಗಳಲ್ಲಿ ಕಂಪಳದೇವರಹಟ್ಟಿ, ಮಲಿಯಮ್ಮನಹಟ್ಟಿ, ನನ್ನಿವಾಳದ ಅಸುಪಾಸಿನ ಹಟ್ಟಿಗಳಲ್ಲಿ ಒಂದು ರೀತಿಯ ಕನ್ನಡ ಮತ್ತು ತೆಲುಗು ಇವೆರಡರ ಮಿಶ್ರರೂಪ ಕಂತೆಲುಗು ಭಾಷೆ ಬಳಕೆಯಲ್ಲಿದೆ. ಇಲ್ಲಿನ ಜನಪದರ ಭಾಷೆಯ ಮೇಲೆ ತೆಲುಗಿನ ಪ್ರಭಾವವನ್ನು ಸ್ಪಷ್ಟವಾಗಿ ಕಾಣುತ್ತೇವೆ.

ಪದ್ಯ ಸಾಹಿತ್ಯ ಪ್ರಕಾರವಾದ ಕೋಲಾಟ ಮತ್ತು ಭಜನೆಯ ಸಂಪ್ರದಾಯ ಹಾಡುಗಳಿಗೆ ಪ್ರತ್ಯೇಕ ಸ್ಥಾನವಿದೆ. ಸುಮಾರು ಕವಿಗಳು ಈ ಸಾಹಿತ್ಯ ಸೃಷ್ಟಿ ಮಾಡಿದ್ದಾರೆ. ಜನಪದ ಕಲಾ

ಕಾರರು ಇವುಗಳನ್ನು ತಮ್ಮ ಕಂಠದಿಂದ ಸೆರೆಹಿಡಿದ್ದಾರೆ. ಅಂತವರಲ್ಲಿ ಕಪ್ಪಡಬಂಡೆಹಟ್ಟಿ ಪಾಪಣ ಬೆಳವಿನಮರದ ಮಲ್ಲಯ್ಯ ಬೈಯಣ್ಣ(ಕಾರ್ತಿಕೇನಹಟ್ಟಿ), ಸಕ್ರಿ ಓಬಯ್ಯ, ಬೋಸದೇವರ ಹಟ್ಟಿ ಬೋಸಯ್ಯ, ಕುಂಬೋರಯ್ಯ, ಬೋರಯ್ಯ, ಗುಡ್ಡದಬೋರಯ್ಯನಹಟ್ಟಿ ಸಣ್ಣಬೋರಯ್ಯ ಇನ್ನೂ ಮುಂತಾದವರನ್ನು ಕೃಷ್ಣಪ್ಪ ಕುರಿಹಟ್ಟಿ, ಕೋಲಾಟ ಕುಂಬಾರ ರಾಮಪ್ಪ, ಬೋಸೆದೇವರಹಟ್ಟಿ, ಭಜನೆ ಕ್ಷೇತ್ರದಲ್ಲಿ ಕೃಷಿ ಮಾಡಿದ ಪ್ರಮುಖ ಕಲಾವಿದರು. ಇವರು ಕಟ್ಟಿದ ಹಾಡುಗಳು ಜನತೆಯ ತುದಿನಾಲಿಗೆಯ ಮೇಲಿವೆ. ಇವುಗಳನ್ನು ಜನಪ್ರಿಯಗೊಳಿಸಿದ ಕಲಾಮೇಳಗಳಾದ ಬೇಡರ ಕಣ್ಣಪ್ಪ ಗೆಳೆಯರ ಬಳಗ, ವಾಲ್ಮೀಕಿ ಲೋಕ, ಮುತ್ತಿಗಾರಹಳ್ಳಿ, ಮ್ಯಾಸಹಟ್ಟಿ ಬೇಡರ ಪಡೆ ಮುಂತಾದ ಗ್ರಾಮಗಳಲ್ಲಿ ಜೀವಂತವಾಗಿವೆ. ಈ ಕೋಲಾಟ ಮತ್ತು ಭಜನೆ ಮೇಳಗಳು ಈ ಪ್ರದೇಶಕ್ಕೆ ಕೀರ್ತಿಯನ್ನು ತಂದಿವೆ. ಇಲ್ಲಿ ರಚನೆಯಾದ ಹಾಡುಗಳು ಬಯಲುಸೀಮೆಯ ಎಲ್ಲ ಗ್ರಾಮಗಳಲ್ಲಿ ಹರಡಿಕೊಂಡಿವೆ.

ಮ್ಯಾದವನ ನೆನ್ನೆದಾನ ಗಜಮುಖ
ದಾಯಾನ ಸ್ವಾಮಿ ಗಿಣಿ ಶಿವನಾ ಬ್ಯಾನಾದೇನಾ
ಕೋಲನ್ನ ಕೋಲನ್ನ ಕೋಲೆ...
ಸಿರಿಗಂಧದಿ ಕೋಲನ್ನ ಕೋಲೇ...

ಎನ್ನುವಂಥ ಪದ್ಯಗಳು ಕೇಳುಗರಿಗೆ ಚಿರಪರಿಚಿತವಾಗಿವೆ. ಇವುಗಳಲ್ಲಿನ ತತ್ವ, ಧಾಟಿಗಳಿಗೆ ತಲೆದೂಗದವರೇ ಇಲ್ಲ. ಇಂಥ ಪದ್ಯ ಸಾಹಿತ್ಯಕ್ಕೆ ಬಯಲುಸೀಮೆಯ ಜನಪದ ಸಾಹಿತ್ಯ ವಿಶಿಷ್ಟ ಕೊಡುಗೆಯಾಗಿದೆ.

ಜನಪದರ ಬದುಕಿಗೆ ಹಲವು ಹಂತಗಳನ್ನು ತಿಳಿಸುವ ಜನಪದ ಸಾಹಿತ್ಯದ ಪ್ರಕಾರವಾದ 'ಹಂತಿ ಹಾಡುಗಳು' ಶಿವಶರಣರ ಮೇಲೆ ರಚನೆಯಾದ ಜನಪದ ಸಾಹಿತ್ಯದ ಹಾಡುಗಳಾಗಿವೆ. ಇಲ್ಲಿ ಹಂತಿ ಮೇಳಗಳು ಸುಪ್ರಸಿದ್ಧವೆನಿಸಿವೆ. ಹಂತಿ ಪದಗಳು ಇಂದು ಕ್ಷೀಣಿಸುವ ಸ್ಥಿತಿಯಲ್ಲಿವೆ. ಏಕೆಂದರೆ ಹಿಂದಿನ ಕಾಲದಲ್ಲಿ ಕಣದಲ್ಲಿ ಇಡೀ ರಾತ್ರಿ ಹಂತಿ ಹಾಡುತ್ತಿದ್ದರು. ಕ್ಷೇತ್ರಕಾರ್ಯದ ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ ಎಲ್ಲ ಕಡೆಯಲ್ಲಿ ಕಾಳುಗಳನ್ನು ಹಸನು ಮಾಡಲು ಡಾಂಬರು ರಸ್ತೆ ಬಳಸುತ್ತಿರುವುದು ಕಣ್ಣಿಗೆ ಗೋಚರವಾಗುತ್ತದೆ. ಡಾಂಬರು ರಸ್ತೆಯಲ್ಲಿ ಕಾಳನ್ನು ಹಸನು ಮಾಡುವುದರಿಂದ ವಾಹನಗಳ ಕಡೆ ಅವರ ಲಕ್ಷ್ಯ ಇರುತ್ತದೆಯೇ ವಿನಾ ಹಂತಿ ಹಾಡುಗಳ ಕಡೆಯಲ್ಲ.

ಜನಪದ ಗರತಿಯ ಸಂಸ್ಕೃತಿಯನ್ನು ಬಿಂಬಿಸುವ ಹೆಣ್ಣು ಮಕ್ಕಳ ಹಾಡುಗಳು ಬಯಲು ಸೀಮೆಯಲ್ಲಿ ವ್ಯಾಪಕವಾಗಿ ರಚನೆಯಾಗಿವೆ. ಬೀಸುವ, ಕುಟ್ಟುವ, ಸೋಬಾನೆ, ಜೋಗುಳ,

ಗಂಗೆ–ಗೌರಿ ಹಾಡುಗಳೆಂದು ಇವು ವಿವಿಧ ಪ್ರಕಾರಗಳಲ್ಲಿ ದೊರೆಯುತ್ತವೆ. ಅದರಲ್ಲೂ ಮದುವೆಯ ವಿವಿಧ ಛಾಜದ ಹಾಡುಗಳಂತೂ ಕೇಳುಗರ ಮನ ಸೂರೆಗೊಳ್ಳುತ್ತವೆ. ಕುಂಕುಮ ಹಚ್ಚುವುದು, ಒಳಕಲ್ಲು ಪೂಜೆ, ಬೀಗರು ಎದುರುಗೊಳ್ಳುವುದು, ಐರಾಣಿ ಮಾಡುವುದು, ಎಣ್ಣೆ ಹಚ್ಚುವುದು, ಸೂರಿಗೆ ಸುತ್ತುವುದು, ಹಾಲು ಗಂಭ ತರುವುದು, ಭೂಮಿ ಒಪ್ಪಿಸುವುದು ಕೂಸೊಪ್ಪಿಸುವುದು ಹೀಗೆ ಆಯಾ ಹಾಡುಗಳು ಛಾಪಕ್ಕೆ ತಕ್ಕಂತೆ ಹೊರಹೊಮ್ಮುತ್ತವೆ. ಒಂದರ ಧಾಟಿ ಇನ್ನೊಂದಕ್ಕಿಲ್ಲ. ಎಲ್ಲವೂ ಹೊಸತೆಂದು ಗುರುತಿಸಬಹುದು.

ಬಯಲುಸೀಮೆಯಲ್ಲಿ ಒಗಟುಗಳನ್ನು ವ್ಯಕ್ತಿಪರ, ವಸ್ತುಪರ, ಪ್ರಾಣಿಪರವೆಂದೂ, ಸರಳ ಮತ್ತು ಸಂಕೀರ್ಣ ಒಗಟುಗಳೆಂದು ಹಲವು ವಿಧವಾಗಿ ವಿಂಗಡಿಸಬಹುದು. ನಮ್ಮ ಪ್ರದೇಶದ ಜನಪದರು ಇಂದು ಪ್ರತಿ ಒಂದು ಗ್ರಾಮಗಳಲ್ಲಿ ಒಗಟುಗಳನ್ನು ನೋಡಬಹುದು. ಅದರಲ್ಲಿ ಪ್ರಶ್ನೋತ್ತರ ರೂಪದ ಒಗಟುಗಳಲ್ಲಿ ಒಂದು ಬಗೆಯ ಅಪಾರ್ಥ ತುಂಬಿ ಅನರ್ಥ ಬರುವ ರೀತಿಯಲ್ಲಿ ಕಟ್ಟಿರುವ ನಂಬಿಕೆಗಳನ್ನು ಕಾಣುತ್ತೇವೆ. ಹಾಗೆಯೇ ಕೆಲವು ಹಾಸ್ಯವನ್ನೇ ಗುರಿಯಾಗಿಟ್ಟುಕೊಂಡರೂ, ತಾನು ಬಳಸುವ ವಸ್ತುಗಳ ಗುಣ ಸ್ವಭಾವ ಧರ್ಮಗಳು ಎದ್ದು ಕಾಣುವಂತೆ ಅಭಿವ್ಯಕ್ತಿಸುವ ಶಕ್ತಿ ಒಗಟುಗಳು ಇಂದು ಬಯಲುಸೀಮೆಯ ಸುತ್ತಮುತ್ತ ಗ್ರಾಮ ಗಳಲ್ಲಿ ಕಾಣುತ್ತೇವೆ.

ಮ್ಯಾಸನಾಯಕ ಜನಾಂಗದಲ್ಲಿ ಈ ಬಗೆಯ ಅನೇಕ ಒಗಟು ಕಥೆಗಳಿವೆ. ಅವುಗಳಲ್ಲಿ ಒಂದನ್ನು ಇಲ್ಲಿ ಗಮನಿಸಬಹುದು. ಬಯಲು ಸೀಮೆಯಲ್ಲಿರುವ ಪ್ರೇಮಗೀತೆಗಳಿಗೆ ಪ್ರಸಿದ್ಧವಾಗಿದೆ. ಈ ಜಿಲ್ಲೆಯಲ್ಲಿ ದೊರೆಯುವಷ್ಟು ಪ್ರೇಮಗೀತೆಗಳು ಯಾವ ಜಿಲ್ಲೆಯಲ್ಲೂ ಕಂಡುಬರುವುದಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ. ಉತ್ತರ ಕರ್ನಾಟಕದ ಧಾರವಾಡ, ಬಿಜಾಪುರ, ಬೆಳಗಾವಿ ಜಿಲ್ಲೆಗಳ ಲಾವಣಿಗಳಲ್ಲಿ ಶೃಂಗಾರ ಪ್ರಧಾನವಾಗಿದ್ದರೂ ಅವು ಚಿತ್ರದುರ್ಗ ಜಿಲ್ಲೆಯ ಪ್ರೇಮ ಗೀತೆಗಳಂತೆ ಭಾವಗೀತೆಗಳಲ್ಲ. ಲಾವಣಿಗಳು ಸ್ವಲ್ಪ ದೀರ್ಘವಾದ ಕವನಗಳು. ಅವುಗಳಲ್ಲಿ ಶೃಂಗಾರ ವ್ಯಕ್ತವಾದರೂ ನೀತಿಯ ಉಪದೇಶವೇ ಪ್ರಧಾನವಾದ ಅಂಶ. ಚಿತ್ರದುರ್ಗ ಜಿಲ್ಲೆಯ ಪ್ರೇಮಗೀತೆಗಳಲ್ಲಿ ಉಪದೇಶದ ಗೋರಾಜು ಸ್ವಲ್ಪವೂ ಇಲ್ಲ. ಸಭ್ಯತೆಯ ಸೋಗೂ ಇಲ್ಲ ಪ್ರೇಮವೂ ಕಾಮವೂ ಇಲ್ಲಿ ಎಲ್ಲ ಹಸಿ ಹಸಿ ಕಾಣುತ್ತೇವೆ.

ಗೆಣತಿ ಗೆಣಯ ಇಬ್ಬರು ಕೂಡಿ
ನಡಸ್ಯಾರು ಪ್ರೀತೀ-ಬಾಳ
ಮಸಲತ್ತು ಮಾಡಿ
ನಲ್ಲಾ ನಾನೇಳಿರತೀನಿ
ಎಲ್ಲಾರ ಹೋದೀ-ಸಂಜೆಲ್

ಹುಡುಕ್ಹಂಗೆ ಮಾಡೀ

ಕೌದಿಮ್ಯಾಲೆ ಗಾದೀನ್ಹಾಕಿ

ಮಲಗ್ಯಾರು ಜೋಡೀ

ಅವರಿಬ್ರಾಳು ಕೂಡಿ

ಬೆಳ್ಳಿ ಮೂಡಿ ಬೆಳ್ಳಗಾಯ್ತು

ಉಟುಕೊಳ್ಳಿ ಸೀರೀ - ನಾರೀ

ತೊಟುಕೊಳ್ಳೆ ರವಿಕೀ

ಮೂಡಿದ್ರ ಮೂಡ್ಲಿ ಬಿಡುನನ್ ಗೆಣಿಯ

ಅದ್ಕೇನ್ ಧಾಡೀ

ಗಲ್ಲ ಮೆಲ್ಲಕ್ ಕಡಿ

ಹೀಗೆ ಚಿತ್ರದುರ್ಗದ ಪಾಳೆಯಗಾರರನ್ನು ಕುರಿತು ಹಲವು ಜನಪದ ಗೀತೆಗಳು ಇಂದಿಗೂ ಈ ಜಿಲ್ಲೆಯಲ್ಲಿ ಪ್ರಚಾರದಲ್ಲಿವೆ. ಪಾಳೆಯಗಾರರು ನಡೆಸಿದ ಯುದ್ಧಗಳು, ಗೆದ್ದ ರಾಜ್ಯಗಳು, ಸೋಲು ಗೆಲುವಿನ ಸಾವು-ನೋವುಗಳ ಸಂಗತಿ, ಹೀಗೆ ಚಾರಿತ್ರಿಕ ಅಂಶಗಳಿಂದ ಈ ಗೀತೆಗಳು ಚಿತ್ರದುರ್ಗದ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಬೀರುತ್ತವೆ. ವ್ಯಾಪಕವಾಗಿ ಈ ಸಾಹಿತ್ಯದ ಸಂಗ್ರಹ ಕಾರ್ಯ ನಡೆದರೆ ಆ ಪ್ರದೇಶದ ನೈಜ ಇತಿಹಾಸವನ್ನು ಪುನಾರಚಿಸುವಷ್ಟು ಪುರಾವೆಗಳು ದೊರೆಯುತ್ತವೆ.

ಈ ಪ್ರದೇಶದ ಕಥನ ಗೀತೆಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ಈ ತಾಲೂಕು ಮತ್ತು ಜಿಲ್ಲೆ ರಾಜಮನೆತನದ ಆಳ್ವಿಕೆಯನ್ನು ಅನುಸರಿಸಿದ್ದರಿಂದ ಇಲ್ಲಿ ಹೆಚ್ಚು ಕಥನ ಗೀತೆಗಳು ಪ್ರಚಲಿತದಲ್ಲಿವೆ. ಗಾದರಿಪಾಲನಾಯಕನ ಕಥನಗೀತೆ, ಜಗಳೂರು ಕಂಪಳ ರಂಗನ ಕಥನಗೀತೆ, ಹೀಗೆ ಕಥನ ಗೀತೆಗಳು ನಮ್ಮ ಪರಿಸರದಾದ್ಯಂತ ದೊರೆಯುತ್ತವೆ. ಇದು ಇಂದು ಸಂಶೋಧನೆಗೆ ದಾರಿ ಮಾಡಿಕೊಟ್ಟಿದೆ. ಬಯಲುಸೀಮೆಯನ್ನು ಮೂಢನಂಬಿಕೆ, ಧಾರ್ಮಿಕ, ಆಚರಣೆ, ಸಂಪ್ರದಾಯಗಳನ್ನು ಜನಪದರು ಅನುಸರಿಸುತ್ತಾ ಬಂದಿದ್ದಾರೆ. ಅವುಗಳಲ್ಲಿ ಸಿಡಿ ಹಾಕುವುದು, ಊರಿನ ಮಾರಮ್ಮನಿಗೆ ಕುರಿ, ಕೋಳಿ, ಕೋಣ ಬಲಿ ಕೊಡುವುದು, ನಾಯಕನಹಟ್ಟಿನ ಜಾತ್ರೆಯಲ್ಲಿ ಕಳಸ ಹಿಡಿಯವುದು ಮತ್ತು ಮಳೆ ಬರದಿದ್ದಾಗ ಜೋಡು ಕತ್ತೆ/ಕಪ್ಪೆ ಪೂಜೆ ಮಾಡಿ ಊರಿನ ಎಲ್ಲಾ ಓಣಿ ಓಣಿಗಳಲ್ಲಿ ಮೆರವಣಿಗೆ ಮಾಡುವುದು ಹಾಗೂ ಗುಲಕ್ಕಮ್ಮನ ಪೂಜೆ ಇತ್ಯಾದಿಗಳಲ್ಲಿ ಮೂಢನಂಬಿಕೆಗಳು ಇಂದು ನಮ್ಮ ಹಟ್ಟಿಗಳಲ್ಲಿ ಕಂಡುಬರುತ್ತವೆ.

ಮಿಶ್ರ ಸಾಹಿತ್ಯಕ್ಕೆ ಹೆಸರಾದ ಬಯಲಾಟಗಳು ಈ ಪರಿಸರದಲ್ಲಿ ಹಸಿರಾಡುತ್ತವೆ. ಪ್ರತಿಯೊಂದು

ಹಳ್ಳಿಗಳಲ್ಲಿ ಕನಿಷ್ಠ ಒಬ್ಬರಾದರೂ ಬಯಲಾಟಗಳನ್ನು ಹವ್ಯಾಸಿಯಾಗಿ ಪ್ರತಿಬಿಂಬಿಸು ವುದು ಕಾಣುತ್ತೇವೆ. ಹವ್ಯಾಸಿ ಲಿಪಿಕಾರರಿಗೆ ಕಲೆ, ಸಾಹಿತ್ಯದ ಒಲವು ಮುಖ್ಯ ಪ್ರೇರಣೆಯಾಗಿರುತ್ತದೆ. ಶಿಕ್ಷಣದಲ್ಲಿ ಹಿಂದುಳಿದರೂ ಇವರು ಜನರ ಮಧ್ಯದಲ್ಲಿನ ಸಾಹಿತ್ಯವನ್ನು ಜನಸಮ್ಮುಖವಾಗಿ ಸಲ್ಲುವಂತೆ ಬರೆದು ಉಳಿಸಲು ಕಾರಣರಾಗಿದ್ದಾರೆ. ಅಂಥ ಬಯಲಾಟದ ಪ್ರಮುಖ ಕವಿಗಳೆಂದರೆ ಯರ್ರೇನಹಳ್ಳಿ ಕಜ್ಜಿಮಾರಣ್ಣ, ಅಂಚೆ ಮಲ್ಲಯ್ಯ, ಪೆತ್ತಿಮಾರಹಟ್ಟಿ ಪಾಪಣ್ಣ ಮುಂತಾದವರು. ಜೂಗಲಪಾಪಯ್ಯ ಬೋಸೆದೇವರಹಟ್ಟಿ, ಜೂಗಲಯ್ಯ ಬೋಸೆದೇವರಹಟ್ಟಿ, ಬಸವರಾಜ ಕಾತ್ರೀಕೇನಹಳ್ಳಿ, ನೇತ್ರನಹಳ್ಳಿ ಈರಣ್ಣ(ಕ್ಯಾತಬರಹಟ್ಟಿ) ಮುಂತಾದ ಮೇಳಗಾರರನ್ನು ಗುರುತಿಸ ಬಹುದು. ಇಲ್ಲಿನ ಬಯಲಾಟ ಕಥೆಗಳಾದ ದುಶ್ಯಾಸನಕತೆ, ರತಿಕಲ್ಯಾಣ, ಸಂಪೂರ್ಣರಾಮಾಯಣ, ಪಾರ್ಥವಿಜಯ, ಕುರುಕ್ಷೇತ್ರ, ಹರಳಯ್ಯ, ನಾಯಕನಹಟ್ಟಿ ತಿಪ್ಪೇರುದ್ರ, ಸುಂದೋಪಸುಂದರ, ನುಂಕೆಮಲೆ ಸಿದ್ಧೇಶ್ವರ ಮಹಾತ್ಮೆ ಮುಂತಾದ ಬಯಲಾಟಗಳನ್ನು ಗುರುತಿಸಬಹುದು. ಇವು ಇಂದು ಮ್ಯಾಸರಹಟ್ಟಿ, ಕಂಪಳದೇವರಹಟ್ಟಿ, ಬೋಸೆದೇವರಹಟ್ಟಿ, ಕಾತ್ರಿಕೇನಹಟ್ಟಿ ನನ್ನಿವಾಳದ ಸುತ್ತಮುತ್ತಿನ ಹಟ್ಟಿಗಳಿಗೆ ಬಯಲಾಟ ಪ್ರದರ್ಶನ ಇಂದಿಗೂ ಕಾಣುತ್ತೇವೆ. ಬಯಲಾಟ ಹಸ್ತಪ್ರತಿಗಳನ್ನು ಅವಲೋಕಿಸಿದಾಗ ಮೊದಲಿಗೆ ವಿಘ್ನೇಶ ಸ್ತುತಿಯನ್ನೇ ಪ್ರಧಾನವಾಗಿ ಹಾಡುತ್ತಾರೆ. ವಿಘ್ನೇಶನನ್ನು ಕುರಿತು ಹಲವಾರು ಸ್ತುತಿಪದಗಳು ಈ ಜಿಲ್ಲೆಯಲ್ಲಿ ರಚನೆಗೊಂಡಿವೆ. ಈ ಜಿಲ್ಲೆಯ ಬಯಲಾಟ ಹಸ್ತಪ್ರತಿಗಳಲ್ಲಿ ಕಂಡುಬರುವ ಗಣಸ್ತುತಿ ಈ ರೀತಿಯಾಗಿದೆ.

ಶ್ರೀ ವಿಘ್ನರಾಜಾಪಾಹಿಮಾಂ ಗಿರಿಜಾತೆ ನಂದನಾ
ಮಾಡುವೆನು ನಂದನಾ
ಶಿವಾಯ ನಮೋ ಓಂ ಶಿವಾಯ
ಆ ರಾಮ ನಮೋ ಓಂ ಶಿವಾಯ
ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು
ಮ್ಯಾಸರಹಟ್ಟಿ ಗ್ರಾಮದೊಳಗೆ ನಾವು ಪ್ರಾರ್ಥನೆ ಮಾಡುವೆವು
ತಮೋತ ತಜಣ ತಿಮತ ತಜಣ ತಮೋತ ತಜಣತ
ಹೇ ದೇವಿಯೋ ಹೇ ದೇವೆಯೋ ಡಿಸ್ತೈಜಣ ಡಿಸ್ತೈಜಣ ದಿನದಿನದಿತತ

ಹೀಗೆ ಮೇಲಿಂದ ಶ್ಲೋಕ ಸ್ತುತಿಪದ್ಯಗಳು ಬಯಲಾಟ ಹಸ್ತಪ್ರತಿಗಳು ಪ್ರಸಾರಣಿಯ ಮೇಲೆ ಬೆಳಕು ಚೆಲ್ಲುತ್ತವೆ. ಈ ಪ್ರದೇಶದ ಸ್ತುತಿ ಪದಗಳು, ಭಿನ್ನ ಭಿನ್ನ ಕಥೆಗಳು ಮತ್ತು ಸಂಪ್ರದಾಯಗಳನ್ನು ಗುರುತಿಸಲು ಸಾಧ್ಯವಿದೆ.

ಹೀಗೆ ಜನಪದ ಸಾಹಿತ್ಯ ವೈಶಿಷ್ಟ್ಯದ ಹಿನ್ನೆಲೆಯಲ್ಲಿ ಪ್ರತಿನಿಧಿಸುತ್ತದೆ. ಈ ಪ್ರದೇಶದ

ಬಡತನ ರೇಖೆಯಲ್ಲಿದ್ದರೂ ಜನಪದ ಸಾಹಿತ್ಯದಲ್ಲಿ ಗದ್ಯ, ಪದ್ಯ ಮತ್ತು ಮಿಶ್ರಿತ ಸಂಪತ್ತಿನಲ್ಲಿ ಸಂಪೂರ್ಣವಾಗಿ ಗುರುತಿಸಲಾಗುತ್ತದೆ. ಜನರ ಬದುಕಿನ ದಿನನಿತ್ಯ ಕಷ್ಟಸುಖಗಳು ಯಾವ ರೀತಿಯಲ್ಲಿ ಕಾಣುತ್ತವೆ ಎಂಬುದು ಜನಪದ ಹಾಡುಗಳಲ್ಲಿ ಇಂದು ಗುರುತಿಸಬಹುದು.

**ಕೋಲಾಟ**

ಪ್ರದರ್ಶನ ಕಲೆಗಳಲ್ಲಿ ಒಂದಾಗಿರುವ ಕೋಲಾಟವು ಇಲ್ಲಿ ರೂಢಿಯಲ್ಲಿದೆ. ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ, ಸಾಂಸ್ಕೃತಿಕ ನಾಯಕನ ಜಾತ್ರೆ ಇತರೆ ಸಂದರ್ಭಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ ಪದಗಳನ್ನು ಹಾಡುತ್ತ ಕೋಲು ಹಾಕುತ್ತಾರೆ. ಅಲೆಮಾರಿ ಪಶುಪಾಲಕ ಸಮುದಾಯದವರಾದ ಇವರು ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ ಬೇಸರ ಕಳೆಯಲು ಕೋಲಾಟವನ್ನು ರೂಢಿಸಿಕೊಂಡಿರುವ ಸಾಧ್ಯತೆಗಳಿವೆ. ಇಲ್ಲಿ ಸಾಂಸ್ಕೃತಿಕ ನಾಯಕರಿಗೆ ಸಂಬಂಧಿಸಿದ, ಎತ್ತುಗಳ ಮೇಲಾಟಕ್ಕೆ ಸಂಬಂಧಿಸಿದ ಹಾಡುಗಳೇ ಹೆಚ್ಚು. ಮತ್ತೊಂದು ವಿಶೇಷವೆಂದರೆ ತಮ್ಮ ಪ್ರೇಯಸಿಯನ್ನು ಕುರಿತು ಕಟ್ಟಿ ಹಾಡುವ ಕೋಲಾಟದ ಪದಗಳು ಸಮುದಾಯದ ಚಿಕ್ಕ ಹುಡುಗಿಯರಿಗೂ ಕೋಲಾಟ ಕಲಿಸಿ ಆಡಿಸುವ ವಿಧಾನಗಳಿವೆ. ಕೋಲಾಟದಲ್ಲಿ ಪೌರಾಣಿಕ, ಚಾರಿತ್ರಿಕ, ಲೌಕಿಕ ಪದಗಳನ್ನು ಹಾಡುತ್ತಾರೆ. ಕಲಾವಿದರು ಕೋಲಾಟದೊಂದಿಗೆ ಈ ಹಾಡುಗಳನ್ನು ಪುನರಾವರ್ತಿಸುತ್ತಾರೆ. ಹಾಡಿನ ಮಧ್ಯೆ ಥಯ್ಯ ಉಡುದಯ್ಯ ಎನ್ನುವ ನುಡಿಗಟ್ಟುಗಳು ಕೇಳಿ ಬರುತ್ತವೆ. ಪ್ರತಿಯೊಂದು ಪದ ಮತ್ತು ಕೋಲಾಟದ ಗತ್ತು ಮುಗಿಯುತ್ತಿದ್ದಂತೆಯೇ ತಾಕಿತ್ತು ತದಲಿತು ಯಾಕಿಂಗಾಯಿತು ಥಯ್ಯ ಥಯ್ಯ ಥಗಡದತ್ತಯ್ಯ ಎಂದು ಕೋಲಾಟವು ಮೇಲು ನೋಟಕ್ಕೆ ಲೌಕಿಕ ಕಲೆಯಾಗಿ ಗೋಚರಿಸಿದರೂ ಒಳಹೊಕ್ಕು ನೋಡಿದಾಗ ಇದೊಂದು ಸಾಹಸ ಕಲೆ, ದೊಣ್ಣೆವರಸೆ, ಕತ್ತಿವರಸೆಗಳಂತೆ ಶಾರೀರಿಕ ಬಲ ಮತ್ತು ಬುದ್ಧಿಯ ಕೌಶಲ್ಯಗಳೆರಡೂ ಕೋಲಾಟದಲ್ಲಿ ಅಭಿವ್ಯಕ್ತಿಗೊಳ್ಳುತ್ತವೆ. ಕೋಲಾಟದ ಹೆಜ್ಜೆಯ ಗತ್ತುಗಳು, ಸೊಂಟದ ಬಾಗು–ಬಳಕುಗಳು, ಕೈಚಳಕ, ಹಾಡುವಿಕೆ, ಕುಪ್ಪಳಿಸುವಿಕೆ, ಜಿಗಿತ ಎಲ್ಲವೂ ಸಾಹಸ ಕಲೆಯಲ್ಲಿ ಪ್ರದರ್ಶನಗೊಳ್ಳುವಂಥ ಚಟುವಟಿಕೆಗಳಾಗಿವೆ. ಸರಳ ಮತ್ತು ಸುಂದರ ಕಲೆಯಾಗಿರುವುದರಿಂದ ಇದರ ಜನಪ್ರಿಯತೆ ಅಪಾರ, ವ್ಯಾಪಕತೆ ಸರ್ವತ್ರ ಕೋಲಾಟದಲ್ಲಿ ಗೀರುಕೋಲು, ಜಡೆಕೋಲು, ಉಯ್ಯಾಲೆಕೋಲು, ಕೊರವಂಜಿಕೋಲು, ಸುತ್ತುಕೋಲು, ಹಾರಗಡ್ಡಿ, ಗಿಣ್ಣೆಕೋಲು, ಚಿತ್ತಾರದ ಕೋಲು, ತೇರುಕೋಲು, ಕತ್ತಿಕೋಲು, ನೀರುಕೋಲು ಮುಂತಾದ ಪ್ರಕಾರಗಳಿವೆ.

**ಬಯಲಾಟ**

ಬಹುಶಃ ಕಾಡಿನ ನೆಲೆಯಿಂದ ನಿಶ್ಚಿತವಾಗಿ ಒಂದೆಡೆ ನಿಂತು ಹಟ್ಟಿ ಗ್ರಾಮ ಎಂದು ಬದುಕುವ ಸಂದರ್ಭ ಪ್ರಾರಂಭವಾದಾಗ ಕಲಿತಿರುವ ಕಲಾಪ್ರಕಾರವಿದು ಎನಿಸುತ್ತದೆ. ಅಲ್ಲಿ ಬಳಕೆಯಾಗುವ ತಾಳ, ಹಾರ್ಮೋನಿಯಂ ಮದ್ದಲೆ ಇವೆಲ್ಲಾ ಶಿಷ್ಟ ಸಂಸ್ಕೃತಿಯಲ್ಲಿರುವಂತಹವು.

ಇದು ಬಹುಶಃ ತಾನು ನೆಲೆಗೊಂಡಿರುವ ಅರೆಶಿಷ್ಟ ಸಂಸ್ಕೃತಿಯಿಂದ ರೂಢಿಸಿಕೊಂಡ ಕಲೆ ಎನಿಸುತ್ತದೆ. ಆದರೆ ಇಂದು ಮಧ್ಯ ಕರ್ನಾಟಕದ ಹಟ್ಟಿಗಳಲ್ಲಿ ಬಯಲಾಟ ಆಡುವವರೆಂದರೆ ನಾಯಕರೇ ಆಗಿದ್ದಾರೆ. ಇವರು ಶಿಕ್ಷಣ ಪಡೆಯದಿದ್ದರೂ ಕೂಡ ಕೇಳಿ ಕಲಿತು ಸಂಭಾಷಣೆಯನ್ನು ಒಪ್ಪವಾಗಿ ಒಪ್ಪಿಸುವಂಥ ಪ್ರವೀಣರು. ಈಗ ಈ ಪರಿಸರದಲ್ಲಿ ಜಾತ್ರೆಗಳ ಸಂದರ್ಭದಲ್ಲಿ ನಾಯಕರು ಬಯಲಾಟ ಆಡುತ್ತಾರೆ. ಹೀಗಾಗಿ ಆಧುನಿಕತೆ ಸೊಗಡಿನಿಂದ ಸಾಮಾಜಿಕ ನಾಟಕದ ಕಡೆ ಹೆಚ್ಚು ಗಮನ ಹರಿಸುತ್ತಾರೆ. ಸಾಮಾಜಿಕ ನಾಟಕ ಹಣ ಕೊಟ್ಟು ನೋಡಬೇಕು. ಬಯಲು ನಾಟಕಕ್ಕೆ ಇದರ ಅಗತ್ಯವಿಲ್ಲ ಮನೆಯಿಂದ ತಾವೇ ತಂದ ಚಾಪೆ ಹಾಸಿ ರಗ್ಗು ಹೊದ್ದು ಕುಳಿತರೆ ಆಯಿತು.

**ಸಾಹಿತ್ಯ-ಸಂಗೀತ**

ಮ್ಯಾಸಬೇಡರಲ್ಲಿ ಕಾಡುಗೊಲ್ಲರಲ್ಲಿರುವಂತೆ ಸಮೃದ್ಧವಾದ ಸಾಹಿತ್ಯವಿಲ್ಲ ಎಂಬುದು ಇವೆರಡನ್ನು ಹೋಲಿಸಿ ನೋಡುವ ಅಧ್ಯಯನಕಾರರ ಅಭಿಪ್ರಾಯವಾಗಿದೆ. ಆದರೆ ಸಮುದಾಯದ ಒಳಹೊಕ್ಕು ನೋಡಿದಾಗ ಸಾಕಷ್ಟು ಸಾಹಿತ್ಯವನ್ನು ತಮ್ಮ ಸೃಜನಶೀಲ ಗುಣದಿಂದ ಕಟ್ಟಿ ಸ್ಮರಣೆಯಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಈ ಜನಪದರಲ್ಲಿ ಪ್ರತಿಯೊಬ್ಬ ನಾಯಕನಿಗೆ ಸಂಬಂಧಿಸಿದ ಕಥನಗಳಿವೆ. ಶುಭ ಕಾರ್ಯಗಳಂತೂ ಸೋಬಾನೆ ಪದಗಳಿಲ್ಲದೆ ನಡೆಯುವುದೇ ಇಲ್ಲ. ಸಸಿ ನೆಡುವ, ಬಿತ್ತುವ, ಕೊಯ್ಲು ಮಾಡುವ ಪದಗಳು, ಗಂಗೆ-ಗೌರಿ ಪದಗಳು, ಎತ್ತುಗಳ ಮೇಲೆ ಹಾಡುವ ಪದಗಳು, ಜೊತೆಗೆ ಕಥೆಗಳು, ಒಗಟು, ಗಾದೆ ಹೀಗೆ ಸಮೃದ್ಧವಾದ ಸಾಹಿತ್ಯ ಭಂಡಾರವೇ ಅಲ್ಲದೆ ಪುರುಷರು ಕೂಡ ಸಮುದಾಯದ ಸಾಂಸ್ಕೃತಿಕ ನಾಯಕರನ್ನು ಕುರಿತು ಹಾಡುತ್ತಾರೆ.

ಪದ್ಯ-ಕಥನಗಳಲ್ಲಿ ದಾಖಲಾಗದ ಎಷ್ಟೋ ಸಮುದಾಯಕ್ಕೆ ಸಂಬಂಧಿಸಿದ ಕಥೆಗಳನ್ನು ಪುರುಷರು ಗದ್ಯರೂಪದಲ್ಲಿ ಹೇಳುತ್ತಾರೆ. ಕ್ಷೇತ್ರಕಾರ್ಯದಲ್ಲಿ ನನ್ನ ಗಮನಕ್ಕೆ ಬಂದಿರುವ ಸಂಗತಿಯಿದು. ಎತ್ತುಗಳನ್ನು ಕುರಿತು ಕೋಲು ಪದ ಕಟ್ಟಿ ತೆಲುಗಿನಲ್ಲಿ ಹಾಡುತ್ತಾರೆ. ಇಲ್ಲಿರುವ ಇನ್ನೊಂದು ವಿಶೇಷವೆಂದರೆ ಇವರ ಮೂಲಭಾಷೆ ತೆಲುಗು. ಪರಿಸರದ ಭಾಷೆ ಕನ್ನಡ. ಹೀಗಾಗಿ ಒಂದು ಬಗೆಯ ಗೊಂದಲವು ಸಾಹಿತ್ಯ ಸೃಷ್ಟಿಯಲ್ಲಿ ತಲೆದೋರಿರಬಹುದು. ಕಥನಗಳನ್ನೆಲ್ಲಾ ಕನ್ನಡದಲ್ಲೇ ಹಾಡುತ್ತಾರೆ. ಜಗಳೂರಜ್ಜನ ಕಾವ್ಯ, ಪೆದ್ದೋಬಳೇಶನ ಕಾವ್ಯವನ್ನು ತೆಲುಗಿನಲ್ಲಿ ಹಾಡುತ್ತಾರೆ. ಪರಿಸರದ ಭಾಷೆಯನ್ನು ಕಲಿತು ಅದರಲ್ಲೇ ಕಥನಗಳನ್ನು ಕಟ್ಟಿ ಹಾಡುವ ಇವರಲ್ಲಿ ಕಲಾಸೃಷ್ಟಿಗೆ ಕಾರಣವಾಗುವ ಸೃಜನಶೀಲತೆ ಸಾಕಷ್ಟಿದೆ ಎಂದೇ ಹೇಳಬಹುದು. ಅಷ್ಟೇ ಅಲ್ಲದೆ ಈ ಕಥನಗಳನ್ನು ಹಾಡುವ ಧಾಟಿಯೂ ವೈವಿಧ್ಯಮಯವಾದುದು. ಒಂದು ಕಥನದಲ್ಲಿ ಕನಿಷ್ಠ ಆರೇಳು ಧ್ವನಿಗಳನ್ನು ಹಾಕಿಕೊಳ್ಳುತ್ತಾರೆ. ಹಿಮ್ಮೇಳ ಮುಮ್ಮೇಳ ಮಾಡಿಕೊಂಡು ಹಾಡುವ

ಮಹಿಳೆಯರ ಮೇಳ ರಾತ್ರಿಯಿಡೀ ದಣಿವಿಲ್ಲದೆ ಹಾಡುತ್ತಾರೆ. ಈ ಸಾಹಿತ್ಯದ ಮೂಲಕ ತಮ್ಮ ಬುಡಕಟ್ಟಿನ ಇತಿಹಾಸವನ್ನು, ಸಂಸ್ಕೃತಿಯನ್ನು ದಾಖಲೆಯಲ್ಲಿಟ್ಟುಕೊಂಡು ಬಂದಿದ್ದಾರೆ. ತನ್ನ ಸಮುದಾಯದ ಬದುಕಿನ ವಿವರಗಳನ್ನು ಕೊಡುವುದರೊಂದಿಗೆ ತಾನು ಬದುಕಿ ಬಾಳಬೇಕಾಗಿರುವ ಇತರ ಸಮುದಾಯಗಳ ಸಾಮಾಜಿಕ ಸ್ಥಿತಿಗತಿಗಳನ್ನು ಹೇಳುತ್ತಾರೆ. ಒಟ್ಟಾರೆ ಈ ಕಥನಗಳನ್ನು ಕೇಳಿಸಿಕೊಳ್ಳುವುದರ ಮೂಲಕ ಒಂದು ಸಾಮಾಜಿಕ ಅಧ್ಯಯನ ಮಾಡಲು ಸಾಧ್ಯವಾಗುತ್ತದೆಂಬುದೇ ಈ ಮೌಖಿಕ ಕಥನಗಳ ಮಹತ್ವವನ್ನು ತೋರಿಸುತ್ತದೆ.

ಜನಪದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆ ಪ್ರಮುಖವಾದುದು. ಇವರು ಮಾತಿನ ನಡುವೆಯೇ ಸಹಜವಾಗಿ ತೆಲುಗಿನಲ್ಲಿ ಕಟ್ಟಿಕೊಂಡಿದ್ದಾರೆ. ಉದಾಹರಣೆಗೆ 'ಕುಂಟಿದಿ ಕೂಡಿಪೆಟ್ಟೆ, ಗುಡ್ಡಿದಿ ಪಾವಕಟ್ಟೆ' ಅಂದರೆ ಕುಂಟಿ ಕೂಡಿಟ್ಟರೆ ಕುರುಡಿ ಹಾಳು ಮಾಡಿದಳು ಎಂದರ್ಥ. 'ಗಂಜಿಕೆಲೇದು ಲಂಜಿಕೆ ಬುಲಾಕ್' ಅಂದರೆ ಗಂಜಿಗೆ ಗತಿ ಇಲ್ಲದಿದ್ದರೂ ತನ್ನ ವೇಶ್ಯೆಗೆ ಬುಲಾಕು ಮಾಡಿಸಿಕೊಟ್ಟ ಎಂಬ ಅರ್ಥ. 'ಕೂಲಿಚೇಸ್ತೆ ಕುಂಡಗಾಲೆ ಲ್ಯಾಕಪೋತೆ ಎಂಡಗಾಲೆ' ಕೂಲಿ ಮಾಡಿದರೆ ಮನೆಯಲ್ಲಿ ಮಡಿಕೆ ಕಾಯುತ್ತದೆ. ಇಲ್ಲವಾದರೆ ಬಿಸಿಲಿಗೆ ಒಣಗುವುದೇ ಗತಿ, ಎಂದರ್ಥ. ಹೀಗೆ ಅನೇಕ ಗಾದೆಗಳನ್ನು ಇಲ್ಲಿ ಕಾಣಬಹುದು. ಇಷ್ಟಲ್ಲದೆ ಒಡಪುಗಳ ಸಂಗ್ರಹವೂ ಇಲ್ಲಿ ಸಾಕಷ್ಟಿದೆ. ಉದಾಹರಣೆಗೆ, 'ಬಳ್ಳಾರ್ಲ ಬಾವಿಸೂಡು ಬಾವಿಕೆ ನೀಳ್ಳುಕೊಚ್ಚೆ ಆಡದಿ ಸೂಡು ಆಡದಿ ಸೇತಲಾನೆ ಕಡವು ಸೂಡು, ಕಡವು ಮೀದ ಉನ್ನ ಚೇಯಿ ಸೂಡು, ಚೇತಮೀದ ಪಚ್ಚೆಸೂಡು, ಪಚ್ಚೆಸೂಸಿ ನನ್ನ ಮೆಚ್ಚಿ ಒಚ್ಚಿನಾರು ಮಲ್ಲಯ್ಯ' ಇದರ ಅರ್ಥ ಬಳ್ಳಾರಿಯಲ್ಲಿರುವ ಬಾವಿ ನೋಡು, ಬಾವಿಗೆ ಬರುವ ಹೆಣ್ಣು ನೋಡು, ಆಕೆಯ ಕೈಯಲ್ಲಿರುವ ಬಿಂದಿಗೆ ನೋಡು, ಬಿಂದಿಗೆ ಮೇಲಿರುವ ಕೈ ನೋಡು, ಕೈ ಮೇಲಿನ ಹಚ್ಚೆ ನೋಡು, ಹಚ್ಚೆ ನೋಡಿ ನನ್ನ ಮೆಚ್ಚಿ ಬಂದವರು ಎಂದು ತನ್ನ ಗಂಡನ ಹೆಸರನ್ನು ಕಾವ್ಯಮಯವಾಗಿ ಹೇಳುವ ಜಾಣೆಯರು ಇವರು.

**ಜಾತ್ರೆಯ ಕುಣಿತ**

ಸಾಂಸ್ಕೃತಿಕ ನಾಯಕನ ಆರಾಧನೆ ನಿಮಿತ್ತ ಏರ್ಪಡಿಸುವ ಜಾತ್ರೆಗಳಲ್ಲಿ ಪುರುಷರು ಎತ್ತುಗಳ ಸುತ್ತ ನವಿಲುಗರಿ ಮತ್ತು ಬೆಳ್ಳಿಯ ಹಿಡಿಯಿರುವ ಚವರಿ ಕೋಲುಗಳನ್ನು ಹಿಡಿದು ಲಯಬದ್ಧವಾಗಿ ಉರುಮೆ ವಾದ್ಯದ ಶಬ್ದಗಳಿಗೆ ತಕ್ಕಂತೆ ಲಯಬದ್ಧವಾಗಿ ಕುಣಿಯುತ್ತಾರೆ. ಇವರು ಗುಂಪಾಗಿ ಒಂದೆಡೆ ನಿಂತು ಕುಣಿಯುತ್ತಾರೆ. ಬಂಡಾರವನ್ನು ಎತ್ತುಗಳ ಮೇಲೆ ಎರಚುತ್ತಲೂ ಬಸವಂತಗಳಾಡುವುದು ಎಂದು ಸುತ್ತಲೂ ಕುಣಿಯುತ್ತಾರೆ.

**ಬೇಟೆ**

ಇತಿಹಾಸತಜ್ಞರು ಮಾನವನ ಬದುಕಿನ ವಿಕಾಸವನ್ನು ಮೂರು ಹಂತಗಳಲ್ಲಿ ಗುರುತಿಸು

ತ್ತಾರೆ. ಆಹಾರ ಸಂಗ್ರಹಣೆಯ ಹಂತ, ಆಹಾರ ಉತ್ಪಾದನೆಯ ಹಂತ. ಇವೆರಡರ ಮಧ್ಯೆ ಇದ್ದದ್ದು ಪಶುಪಾಲನೆ ಹಂತ. ಉತ್ಪಾದನೆಯ ಹಂತ ಎಂದಾಗ ಅಲ್ಲಾಗಲೆ ಕೃಷಿಯನ್ನು ಕಲಿತಿದ್ದ ಮಾನವ ಒಂದರ ನಂತರ ಮತ್ತೊಂದು ಎಂದು ವಿಭಾಗಿಸಿದರೂ ಒಂದನೇ ಹಂತ. ಎರಡನೇ, ಮೂರನೇ ಹಂತದಲ್ಲೂ ಸ್ವಲ್ಪಮಟ್ಟಿಗಾದರೂ ಜೊತೆಗೂಡಿಯೇ ಇರುತ್ತದೆ. ಕೊನೆಗೆ ಆಚರಣೆ ರೂಪದಲ್ಲಾದರೂ ಉಳಿದಿರುತ್ತದೆ. ಇದು ಸಮುದಾಯ ಒಂದರ ಯಾವುದೇ ಸಾಂಸ್ಕೃತಿಕ ವಿವರಕ್ಕೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಆಹಾರದ ಕ್ರಮ ಬದಲಾದರೂ ಬೇಟೆಯು ಹಬ್ಬ ಹರಿದಿನಗಳಲ್ಲಿ ಒಂದು ಆಚರಣೆ ನಿಮಿತ್ತವಾಗಿಯಾದರೂ ಮರುಬಳಕೆಯಾಗುತ್ತದೆ. ಉಡುಗೆ ತೊಡುಗೆಗಳಲ್ಲಿ ಎಷ್ಟೇ ಆಧುನಿಕತೆಯನ್ನೂ ರೂಢಿಸಿಕೊಂಡಿದ್ದರೂ ಒಂದು ಆಚರಣೆಯಾಗಿ ಹಬ್ಬ ಹರಿದಿನ ವಿವಾಹ ಇತರ ಕಾರ್ಯಗಳಲ್ಲಿ ಹಳೆಯ ರೂಪ, ದಿರಿಸುಗಳು ಬಳಸಲ್ಪಡುತ್ತವೆ.

ಮೂಲದಲ್ಲಿ ಬೇಟೆಗಾರರಾಗಿದ್ದ ಮ್ಯಾಸಬೇಡರು ಅರಸರ ಪಡೆಗಳಲ್ಲಿ ಮುಂದಾಳುಗಳಾಗಿ ಸೇವೆ ಸಲ್ಲಿಸಿ ಪಾಳೆಯಪಟ್ಟುಗಳನ್ನು ಕಟ್ಟಿ ಆಳಿದ ನಂತರ ಇವರ ನಾಯಕತ್ವ ಗುಣವೇ ಕಾರಣವಾಗಿ ನಾಯಕರೆನಿಸಿದರು. ವಿಶೇಷವೆಂದರೆ ವಾರ್ಷಿಕವಾಗಿ ಬೇಟೆಗೆಂದು ಸಮುದಾಯದ ಯುವಕರು ಜೊತೆಗೆ ಒಂದಿಷ್ಟು ಹಿರಿಯರು ಹಂದಿಬೇಟೆಗೆ ಹೋಗುವುದು ಸಾಮಾನ್ಯವಾಗಿದೆ. ಏಕೆಂದರೆ ವಿರಳವಾಗಿರುವ ಕಾಡುಗಳಲ್ಲಿ ಇವರಿಗೆ ಸಿಗುವ ಬೇಟೆಯಾದರೂ ಯಾವುದು? ಕಾಡುಹಂದಿ ಬಿಟ್ಟರೆ ಬೇರೆ ಇಲ್ಲ. ಸಂರಕ್ಷಿತ ಪವಿತ್ರ ಅರಣ್ಯಗಳಲ್ಲಿ ಬೇಟೆ ನಿಷಿದ್ಧ. ಹಾಗಾಗಿ ಊರ ಹೊಲಗಳ ಮತ್ತು ಕಾಡಿನ ಮಧ್ಯೆ ಇರುವ ಅಂಚಿನಲ್ಲಿಯೇ ಈ ಬೇಟೆಯ ಕಾರ್ಯಾಚರಣೆ ಜರುಗಬೇಕು. ಬೇಟೆಗೆ ಹೋಗುವ ದಿನವನ್ನು ಮೊದಲೇ ಎಲ್ಲರೂ ಕಲೆತು ನಿಶ್ಚಯಿಸುತ್ತಾರೆ. ಕೆಲವು ಹಟ್ಟಿಗಳಲ್ಲಿ ಯುಗಾದಿ ಕಳೆದ ಮೂರನೇ ದಿನ ಹೋಗುತ್ತಾರೆ. ಇದಾಗಲೇ ಪೂರ್ವ ನಿಶ್ಚಿತ. ಎಲ್ಲರೂ ಒಂದೆಡೆ ಕಲೆತು ಮನೆಯ ಮೂಲೆಯಲ್ಲಿರುವ ಭರ್ಚಿ, ಈಟಿ, ಕತ್ತಿ, ಕುಡುಗೋಲು, ಕೊಡಲಿ, ಬಡಿಗೆ ಹಿಡಿದು ಊರು ಬುಡ್ಡೆಕಲ್ಲಿನ ಬಳಿ ಸೇರುತ್ತಾರೆ. ಈ ಆಯುಧಗಳನ್ನು ಕೈಯಲ್ಲಿ ಹಿಡಿದು ಕುಣಿಯುತ್ತ ಕೇಕೆ ಹಾಕುತ್ತ ತಮಟೆ ಸದ್ದಿನ ನಡುವೆ ಈ ಬೇಡರಪಡೆ ಬುಡ್ಡೆಕಲ್ಲಿನ ಬಳಿ ಬರುತ್ತದೆ. ಅಲ್ಲಿ ಪೂಜೆ ಸಲ್ಲಿಸಿ ಕಾಡಿನ ಕಡೆ ನಡೆಯುತ್ತಾರೆ. ಬೇಟೆ ಸಿಗುವವರೆಗೆ ಊರಿಗೆ ಹಿಂದಿರುವುದಿಲ್ಲ. ಇತ್ತೀಚೆಗೆ ಒಂದು ಹಂದಿ, ನರಿ, ಮೊಲ ಸಿಗುವುದು ಕಷ್ಟವೇ. ಒಂದೆರಡು ದಿನ ಅಲ್ಲಿಯೇ ಕಳೆಯಬೇಕಾಗಿ ಬಂದು ಊರಿನಿಂದ ಊಟ ಪೂರೈಸುವುದು ಉಂಟು. ಬೇಟೆ ಸಿಕ್ಕ ನಂತರ ಊರಿಗೆ ಹಿಂದಿರುಗುತ್ತಾರೆ. ಆಗಲೂ ಮತ್ತೆ ಅದೇ ಸಂಭ್ರಮ-ವಿಜಯೋತ್ಸವದಿಂದ ಬರುವ ಇವರಿಗೆ ಮಹಿಳೆಯರ ಆರತಿಯ ಸ್ವಾಗತ ಬುಡ್ಡೆಕಲ್ಲಿನ ಬಳಿ ಬೇಟೆ ಮಾಡಿಕೊಂಡು ಬಂದ ಪ್ರಾಣಿಯ ಕಾಲಿನ ಉಗುರು, ಬಾಲ, ಕಿವಿಯನ್ನು 'ಹುಲುಸು' ಎಂದು ಒಂದು ಗುಂಡಿ ತೋಡಿ ಹೂಳುತ್ತಾರೆ. ಆಗ ಯಾರಾದರೂ

ಪರ ಊರಿನವರು ಹೊಂಚು ಹಾಕಿ ಕಾದಿದ್ದು, ಈ ಹುಲುಸನ್ನು ತಮ್ಮ ಊರಿಗೆ ಕೊಂಡೊಯ್ಯುವುದುಂಟು. ಆಗ ಊರ ಹಟ್ಟಿಯ ಸಮೃದ್ಧಿ ತಪ್ಪಿ ಹೋಗುತ್ತದೆ. ಇದು ಅಶುಭ ಎಂಬ ಭಾವನೆ ಇದೆ. ಹಾಗಾಗಿ ಯಾರೂ ನುಸುಳದಂತೆ ಎಚ್ಚರ ವಹಿಸುತ್ತಾರೆ. ನಂತರ ಊರಲ್ಲೆಲ್ಲಾ ತಂದ ಬೇಟೆಯನ್ನು ಮೆರವಣಿಗೆ ಮಾಡಿ ಅದನ್ನು ಆಯಗಾರರಿಗೆ ಕೊಡಲಾಗುತ್ತದೆ. ಇಲ್ಲಿ ತಿನ್ನುವ ಆಸೆಗಿಂತ ಕಾಡಿಗೆ ಹೋಗಿ ಬೇಟೆಯಾಡಬೇಕೆಂಬ ಹುಮ್ಮಸ್ಸೇ ಹೆಚ್ಚು. ಈ ಹುಮಸ್ಸಿನ ಹಿಂದೆ ಸಮುದಾಯದ ಮೂಲ ಪ್ರವೃತ್ತಿ ಕೆಲಸ ಮಾಡುತ್ತದೆ. ಹೀಗೆ ಮೂಲತಃ ಇದ್ದ ಬದುಕಿನ ವಿಧಾನವೂ ಹೊಸ ವ್ಯವಸ್ಥೆಯೊಂದು ಅಲ್ಲಿ ನಿರ್ಮಾಣಗೊಂಡ ನಂತರ ಈ ಹಳೆಯ ವಿಧಾನವನ್ನು ಉಳಿಸಿಕೊಂಡೇ ಕೆಲವು ದಿನ ಸಾಗುತ್ತದೆ. ಮೂಲಸ್ಥಿತಿಯಿಂದ ಬಹುದೂರ ಸಾಗಿಬಂದ ಮೇಲೆ ಆ ಮೂಲಕ್ರಿಯೆ ಕೇವಲ ಸಾಂಪ್ರದಾಯಿಕ ಆಚರಣೆ ರೂಪದಲ್ಲಿಯಾದರೂ ಉಳಿದುಕೊಳ್ಳುತ್ತದೆ. ಇಂದು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವ ಬುಡಕಟ್ಟು ಜನತೆಯ ಬೇಟೆ, ಯುಗಾದಿ ಹಬ್ಬದ ದಿನ ಎಲ್ಲರೂ ಒಟ್ಟಾಗಿ ಹೋಗಿ ಬೇಟೆಯಾಡಿ ಬರುವ ಒಂದು ಸಂಪ್ರದಾಯವಾಗಿದೆ.

## ವೈದ್ಯ

ಈ ಬುಡಕಟ್ಟಿನಲ್ಲಿ ಮನುಷ್ಯರಿಗೂ ಮತ್ತು ದನಕರುಗಳಿಗೂ ವೈದ್ಯಕೀಯ ಮಾಡುವ ಕೆಲವರು ಪಾರಂಪರಿಕ ವೈದ್ಯರಿದ್ದಾರೆ. ಗಿಡಮೂಲಿಕೆಗಳ ಚೂರ್ಣವನ್ನು ಅವರೇ ತಯಾರಿಸಿ ಅನೇಕ ಕಾಯಿಲೆಗಳನ್ನು ಪರಿಹರಿಸುತ್ತಿದ್ದಾರೆ. ಈ ಪರಂಪರೆಯ ಜ್ಞಾನವನ್ನು ಇಂದು ಮುಂದುವರಿಸಿಕೊಂಡು ಬಂದಿದ್ದಾರೆ. ದನಕರುಗಳನ್ನು ಕಾಡುವ ಚಪ್ಪೆರೋಗ, ಕಾಲುಬಾಯಿ, ಜ್ವರ, ಸೆಲೆ ರೋಗಗಳಿಗೆಲ್ಲಾ ಔಷಧಿ ಕೊಡುತ್ತಾರೆ. ಕಾಲು ಮುರಿತಕ್ಕೂ ಕಟ್ಟುಕಟ್ಟಿ ಸರಿಪಡಿಸುವ ವೈದ್ಯರಿದ್ದಾರೆ. ಮನುಷ್ಯರ ಜ್ವರಕ್ಕೆ, ವಿಷಮಶೀತ ಜ್ವರಕ್ಕೆ ಬೇವಿನ ಬಳ್ನಾಲಿನ ಕಷಾಯವನ್ನು, ಸಾಮಾನ್ಯ ಜ್ವರಕ್ಕೆ ಕಾಡು ಜೀರಿಗೆ ಕಷಾಯವನ್ನು, ಹಾವು ಮತ್ತು ಚೇಳಿನ ಕಡಿತಕ್ಕೆ, ಬಂಜೆತನ ನಿವಾರಣೆಗೆ, ಮಾನಸಿಕ ಅಸ್ವಸ್ಥತೆ ಸರಿಹೋಗುವಂಥ ಔಷಧಿಯನ್ನು ಕೊಡುವ ಘನಪಂಡಿತರು ಈ ಸಮುದಾಯದಲ್ಲಿದ್ದಾರೆ. ಕುಮುತಿ ಬೊಂಡೊಬಂಡೆ ಓಬಯ್ಯ ಮೂಳೆ ಮುರಿದರೆ ನಾಟಿ ಔಷಧಿ ಮೂಲಕ ಗುಣಪಡಿಸುತ್ತಾರೆ. ಈ ಭಾಗದಲ್ಲಿ ಇವರು ಖ್ಯಾತರಾಗಿದ್ದಾರೆ.

ಬುಡಕಟ್ಟಿಗೆ ಸಂಬಂಧಿಸಿದ ಈ ಸಾಂಸ್ಕೃತಿಕ ವಿಶಿಷ್ಟತೆಗಳು ಇಂದು ಪೂರ್ಣಪ್ರಮಾಣದಲ್ಲಿ ಉಳಿದಿಲ್ಲ. ತೀರ ಸಾಂಪ್ರದಾಯಿಕವಾಗಿ ಬುಡಕಟ್ಟಿನ ನಿಯಮಗಳನ್ನು ಪಾಲಿಸಿಕೊಂಡು ಬರುತ್ತಿರುವ ಹಟ್ಟಿಗಳಲ್ಲಿ ಈ ನಡವಳಿಕೆಗಳು ಇಂದಿಗೂ ಉಳಿದಿವೆ. ಉಳಿದಂತೆ ಊರು ನಗರವಾಸಿಗಳಾಗಿರುವ ಜನರಲ್ಲಿ ಒಂದು ಆಚರಣೆ ಸ್ವರೂಪದಲ್ಲಿ ಸಾಂಕೇತಿಕವಾಗಿ ಉಳಿದುಬಂದಿರುವುದನ್ನು ಗಮನಿಸಲಾಗಿದೆ. ಕಾಲದ ಮೇರೆಗೆ ಸರಿಯುತ್ತಿರುವ ಇಂಥ ಸಂಗತಿಗಳ ಮೂಲಕವೇ ಆದಿಮ

ಸಂಸ್ಕೃತಿಯ ವಿವರಗಳನ್ನು ಕಟ್ಟಿಕೊಳ್ಳಲು ಸಾಧ್ಯವಾಗುತ್ತದೆ ಮತ್ತು ಇಲ್ಲಿರುವ ಸೂಕ್ಷ್ಮವಾದ ಎಳೆಗಳನ್ನು ಹಿಡಿದು ವರ್ತಮಾನ ಮಾದರಿಯೊಂದನ್ನು ಕಟ್ಟಿಕೊಳ್ಳಬಹುದಾದ ಸಾಧ್ಯತೆಗಳೂ ಇರುತ್ತವೆ.

**ಧಗಮು**

ಇದೊಂದು ವಾದ್ಯ ಕಂಚು ಅಥವಾ ಹಿತ್ತಾಳೆಯಿಂದ ಮಾಡಿದ, ತಳ ಚಿಕ್ಕದಾಗಿದ್ದು ಮೇಲೆ ಅಗಲವಾಗಿರುವ ಸುಮಾರು ೨ರಿಂದ ೪ ಅಡಿ ಎತ್ತರವಾಗಿರುವ, ಮೇಲೆ ಹಸುವಿನ ಚರ್ಮವನ್ನು ಬಿಗಿದು ಕಟ್ಟಿರುವ ವಾದ್ಯವಿದು. ಇದನ್ನು ತಯಾರಿಸಲೂ ನಿಯಮವಿದೆ. ಗೊಡ್ಡು ಹಸುವಿನ ಚರ್ಮವನ್ನು ಅದು ಜೀವಂತವಿರುವಂತೇ ತೆಗೆದು ಆ ಚರ್ಮವನ್ನು ಹದಗೊಳಿಸಿ ಈ ಭೇರಿ ತಯಾರಿಸುತ್ತಾರೆ. ಭೇರಿ ತಯಾರಿಸಿದ ಮೇಲೆ, ಸಂಬಂಧಿಸಿದ ಬೆಡಗಿ ನವರು ದೇವರಿಗೆ ಪೂಜೆ ಸಲ್ಲಿಸಿ ಇದನ್ನು ದೇವರಿಗೆ ಒಪ್ಪಿಸಿ ನಂತರ ಅದು ಪೂಜಾಕಾರ್ಯಗಳಲ್ಲಿ ಬಳಕೆಯಾಗುತ್ತದೆ. ಅದನ್ನು ಬಡಿಯಲು ಚರ್ಮದಿಂದ ಮಾಡಿದ ಕೈಗಳಾಕಾರದ ಜೋಡು ಇರುತ್ತದೆ. ದೇವರು ಹೊರಗೆ ಹೊರಟಾಗ ಮಡಿಚಿದ ಕಂಬಳಿಯನ್ನು ತಲೆಯ ಮೇಲೆ ಹಾಕಿಕೊಂಡು ಒಬ್ಬ ಇದನ್ನು ಹೊತ್ತುಕೊಂಡರೆ ಮತ್ತೊಬ್ಬ ಹಿಂದೆ ಚರ್ಮದ ಪಟ್ಟಿಯಿಂದ ಬಡಿಯುತ್ತಾ ಹೋಗುತ್ತಾನೆ. ಉಳಿದಂತೆ ಗುಡಿಯಲ್ಲಿ ಪೂಜೆ ನಡೆಯುವಾಗ ಗುಡಿಯ ಆವರಣದಲ್ಲಿಯೇ ನೆಲದ ಮೇಲೆ ಇದನ್ನಿರಿಸಿ ಬಡಿಯಲಾಗುತ್ತದೆ. ಇಲ್ಲಿಯ ದೇವರುಗಳು ಸಾಂಸ್ಕೃತಿಕ ನಾಯಕರು, ಹುಟ್ಟು ಹೋರಾಟಗಾರರು. ಭಕ್ತರೂ ಈ ವೀರ ಪರಂಪರೆಯಿಂದ ಬಂದವರೆ. ಹಾಗಾಗಿ ರಣವಾದ್ಯಗಳ ಬಳಕೆಯೇ ಇಲ್ಲಿ ಸಾಮಾನ್ಯ. ಆವರಣದ ಹೊರಗೆ ನಿಂತ ಛಲವಾದಿಗಳು ಉರುಮೆಯನ್ನು, ಮಾದಿಗ ಸಮುದಾಯದವರು ಕಹಳೆ, ತಮಟೆಯ ವಾದ್ಯವನ್ನು ನುಡಿಸುತ್ತಾರೆ. ಇವೆಲ್ಲವೂ ರಣವಾದ್ಯಗಳೆಂಬುದೇ ವಿಶೇಷ. ಕಾಡುಗೊಲ್ಲರಲ್ಲಿಯೂ ಈ ಧಗಮು ವಾದ್ಯ ಬಾರಿಸುತ್ತಾರೆ.

**ಎತ್ತಿನ ಗೂಡುಗಳು**

ಎತ್ತುಗಳನ್ನು ಮುತ್ತೈಗಳು ಎಂದು ಕರೆಯಲಾಗುತ್ತದೆ. ಶ್ರೀಶೈಲದಿಂದ ಬಂದವರು ೧೦ ಜನ ಹಿರಿಯರ ಮಾರ್ಗದರ್ಶನದಲ್ಲಿ ಬಂದರು. ಈ ಹತ್ತುಮಂದಿಗೆ ಪದಿಮುತ್ತಿಗಾರರು(೧೦ ಜನ ಹಿರಿಯರು) ಎಂದು ಕರೆಯಲಾಗುತ್ತದೆ. ಅವರಷ್ಟೇ ಹಿರಿತನದಿಂದ ಎತ್ತುಗಳ ರೂಪದಲ್ಲಿ ಅವರನ್ನು ಸ್ಮರಿಸಲಾಗುತ್ತದೆ. ಹಿಂದೆ ಪಶುಸಂಪತ್ತೇ ಮ್ಯಾಸನಾಯಕರಿಗೆ ಬದುಕುವ ಮಾರ್ಗವು ಆಗಿತ್ತು. ಕ್ರಮೇಣ ಕಾಡಿನ ನೆಲೆಯನ್ನು ಕಳೆದುಕೊಂಡು ಪಶುಸಂಗೋಪನೆಯ ಮೂಲಕ ಬದುಕುವುದು ದುಸ್ತರವಾದಾಗ ಊರುಗಳನ್ನು ಸೇರಿದ ಈ ಪಶುಪಾಲಕರು ಇಂದು ಜೀವನ ನಿರ್ವಹಣೆಗೆ ಕೃಷಿ ಕಾರ್ಮಿಕರಾಗಿ, ಕೃಷಿಕರಾಗಿ ಕೆಲವೆಡೆ ಕುರಿ ಸಾಕಾಣಿಕೆ ಇತರೆ ಉದ್ಯೋಗಗಳಲ್ಲಿ

ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಆ ಮೂಲದ ದನಕರುಗಳನ್ನು ಈಗ ಆಯಾ ಸಾಂಸ್ಕೃತಿಕ ನಾಯಕನ ಹೆಸರಿನಲ್ಲಿ ಸನಿಹದ ರಕ್ಷಿತ ಅರಣ್ಯಗಳಲ್ಲಿ ಗೂಡುಗಳನ್ನಿಟ್ಟುಕೊಂಡು ಆರಾಧನಾ ಸ್ವರೂಪದಲ್ಲಿ ದೈವಿಕ ಎಂಬ ಭಾವನೆಯಿಂದ ಉಳಿಸಿಕೊಂಡು ಬಂದಿದ್ದಾರೆ. ಇವುಗಳ ನೆಲೆಯನ್ನೇ ಎತ್ತಿನಗೂಡು ಎಂದು ಕರೆಯಲಾಗುತ್ತದೆ. ವಿಪರ್ಯಾಸವೆಂದರೆ ಇಲ್ಲಿ ಕೆಲವು ಹಸುಗಳು ಇದ್ದರೂ ಕರೆಯುವುದು ಮಾತ್ರ ಎತ್ತಿನಗೂಡು ಎಂದೇ. ದೇವಸ್ಥಾನದ ಬಳಿ ಕರೆ ತರುವುದೂ ಎತ್ತುಗಳನ್ನು ಮಾತ್ರ. ಪೂಜೆ, ಗೌರವ ಸಲ್ಲುವುದೂ ಎತ್ತುಗಳಿಗೇ.

**ಕಿಲಾರಿ**

ಈ ಪದವೇ ವಿಶೇಷವಾದುದಾಗಿದೆ. ಮ್ಯಾಸಬೇಡರಲ್ಲಿ ಈ ಪದ ಹೇಗೆ ಬಂದಿತು ಎಂಬುದೇ ಅಚ್ಚರಿಯ ಸಂಗತಿ. ಕಿಲಾರಿ ಎಂಬ ಸ್ಥಳ ಮಹಾರಾಷ್ಟ್ರದಲ್ಲಿ ಬರುತ್ತದೆ. ಎತ್ತುಗಳ ಒಂದು ತಳಿಗೆ 'ಕಿಲಾರಿ ತಳಿ' ಎಂದು ಕರೆಯಲಾಗುತ್ತದೆ. ಮಹಾರಾಷ್ಟ್ರ ಮತ್ತು ಬೆಳಗಾಂ ಕಡೆ ಈ ಜಾತಿಯ ಎತ್ತುಗಳು ಹೆಚ್ಚಾಗಿವೆ. ಕುರುಬರಲ್ಲಿ ಈ ಹೆಸರಿನ ಮನೆತನವೊಂದಿದೆ. ತಾವು ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಬಂದವರು, ಹಾಗಾಗಿ ತಮಗೆ ಈ ಹೆಸರು ಜೊತೆಯಾಗಿದೆ ಎಂಬುದು ಅವರ ಅಭಿಪ್ರಾಯ. ಮಲ್ಲಯ್ಯನನ್ನು ಪೂಜಿಸುವ ಇವರು ಮೀಸಲು ಹುಗ್ಗಿ ಮಾಡಿ ಕೈಯಿಂದಲೇ ಅದನ್ನು ತಿರುವಿ ಬೇಯಿಸಿ ನೈವೇದ್ಯ ಮಾಡುತ್ತಾರೆ.

ಕಿಲಾರಿ ಪದ ಸ್ಥಳನಾಮ ಆಗಿರುವಂತೆ ಮರಾಠಿ ಇಂಗ್ಲಿಷ್ ಪದಕೋಶದಲ್ಲಿ(ಅಂತರ್ಜಾಲದಲ್ಲಿ Vchicago, edu) A herd 1. man 2. A Keeper both of herds and floks of buffaloes cows sheep and goats 3. shephared ಎಂಬ ಅರ್ಥಗಳಿದ್ದು, ಇವೆಲ್ಲವೂ ಬಳಕೆಯಾಗಿ ಪಶುಸಂಗೋಪನೆ ಮಾಡುವವರನ್ನು ಸಂಕೇತಿಸುತ್ತವೆ. ಈ ಎಲ್ಲಾ ವಿವರಣೆಗಳು ಮತ್ತು ಪಶುಪಾಲಕರಾದ ಮ್ಯಾಸಬೇಡರಲ್ಲಿರುವ ಕೀಲಾರಿ ಪದಕ್ಕೆ ಸರಿ ಹೊಂದುವಂತಿದ್ದು ಆಂಧ್ರ, ಮಹಾರಾಷ್ಟ್ರದಲ್ಲೆಲ್ಲಾ ಅಲೆದಾಡಿ ಬಂದ ಈ ದನಗಾರರಲ್ಲಿ ಈ ಪದ ಉಳಿದುಬಂದಿರುವುದು ಸಹಜವಾದುದಾಗಿದೆ.

ಮ್ಯಾಸಬೇಡರ ದೇವರ ಎತ್ತುಗಳನ್ನು ಕಾಯುವವರನ್ನು ಕಿಲಾರಿಗಳು ಎಂದು ಕರೆಯಲಾಗುತ್ತದೆ. ಕಿಲಾರಿಗಳಲ್ಲೂ ಒಬ್ಬ ಮುಖ್ಯಸ್ಥನಿರುತ್ತಾನೆ. ಆ ಪದವಿಯೂ ವಂಶಪಾರಂಪರ್ಯವಾಗಿಯೇ ಬರುತ್ತದೆ. ಪಟ್ಟವನ್ನು ಮಾಡುವ ಮೂಲಕ ಈ ಪದವಿಯನ್ನು ಈತನಿಗೆ ವಹಿಸಿಕೊಡಲಾಗುತ್ತದೆ. ಕೀಲಾರಿಗಳ ಉಡುಪು ಮೊಣಕಾಲ ಮೇಲಕ್ಕಿರುವ ಬಿಳಿಯ ಚಲ್ಲಣ, ತಲೆಗೊಂದು ಪೇಟ, ಬರಿಮೈಗೆ ಹೊದೆಯಲು ಒಂದು ಬಿಳಿಯ ಹಚ್ಚಡ, ಕೈಯಲ್ಲಿ ಒಂದು ಕೋಲು. ಹಗಲೆಲ್ಲಾ ದನಕರು ಕಾದು ರಾತ್ರಿ ಈ ಗೂಡಿನ ಬಳಿಯೇ ಮಲಗುತ್ತಾರೆ. ಇವರ ಸಂಸಾರ ಹತ್ತಿರದ ಹಟ್ಟಿಯಲ್ಲಿ ಇರುತ್ತದೆ. ಬಂದರಿಕೆ ಸೊಪ್ಪನ್ನು ಜೋಡಿಸಿ ಹೊಲಿದು ತಡಿಕೆಯನ್ನಾಗಿ ಮಾಡಿಕೊಂಡು

ಇದನ್ನೇ ಮಲಗಲು ಹಾಸಿಗೆಯಂತೆ ಬಳಸುತ್ತಾರೆ. ಸಾಂಪ್ರದಾಯಿಕ ಬದುಕಿನ ಸ್ವರೂಪವನ್ನು ಇವರ ಬದುಕಿನ ಕ್ರಮದಲ್ಲಿ ಕಾಣಲು ಸಾಧ್ಯವಿದೆ. ಇವರು ತಮ್ಮದೇ ಸಮುದಾಯದ ಈಗ ಗ್ರಾಮ್ಯೀಕರಣಗೊಂಡಿರುವವರ ಮನೆಗಳಿಗೆ ಹೋದಾಗ ತಟ್ಟೆಯಲ್ಲಿ ಊಟ ಮಾಡುವುದಿಲ್ಲ. ಕಾಡಿನಿಂದ ತಾವು ಹೋಗುವಾಗಲೇ ಮುತ್ತುಗದ ಎಲೆಗಳನ್ನು ತಮ್ಮ ಕಂಬಳಿ ಮಡಿಕೆಯಲ್ಲಿಟ್ಟು ಕೊಂಡು ತಂದಿರುತ್ತಾರೆ. ಅದನ್ನು ತಟ್ಟೆಯಂತೆ ಹೊಲಿದುಕೊಂಡು ಊಟ ಮಾಡಿ ತಮ್ಮ ಮೀಸಲನ್ನು ಕಾಪಾಡಿಕೊಳ್ಳುತ್ತಾರೆ. ಊರು ನಾಯಕರಿಂದ ಪ್ರತ್ಯೇಕತೆ ಕಾದುಕೊಳ್ಳುವುದರಿಂದಲೂ ಮ್ಯಾಸನಾಯಕರ ಪ್ರತ್ಯೇಕತೆ ಕಾದುಕೊಳ್ಳುವ ಕೀಲಾರಿಗಳ ಈ ನಡವಳಿಕೆ ಗಮನಿಸಿದಾಗ ಊರ ಮಂದಿಯ ಬಗ್ಗೆ ಕಾಡಿನ ಮಂದಿಗಿರುವ ಭಾವನೆಯು ಸ್ಪಷ್ಟವಾಗುತ್ತದೆ. ಹಿಂದೆ ಈ ಕಿಲಾರಿಗಳು ಭತ್ಯೆಕ್ಕಾಗಿ ಅಂದರೆ ಹಿಟ್ಟು ಮತ್ತು ನುಚ್ಚು ಪಡೆಯಲು ತಮ್ಮ ಸಮುದಾಯದವರ ಮನೆಗಳಿಗೆ ಬರುತ್ತಿದ್ದರು. ತಮ್ಮ ಕರ್ತವ್ಯ ಎಂಬಂತೆ ಭಕ್ತಿಯಿಂದಲೇ ಅವರಿಗೆ ಗೌರವಪೂರ್ವಕವಾಗಿ ಜನ ಕೊಟ್ಟು ಕಳಿಸುತ್ತಿದ್ದರು. ಈಗ ಬದಲಾದ ಬದುಕಿನ ಮಾರ್ಗಗಳೇ ಕಾರಣವಾಗಿ ಬರುತ್ತಿಲ್ಲ. ಜಾತ್ರೆಯಲ್ಲಿ ಎತ್ತುಗಳೊಂದಿಗೆ ಬರುತ್ತಾರೆ. ಆಗ ಅವರಿಗೆ ಬಟ್ಟೆ, ಧಾನ್ಯ, ಕಂಬಳಿ, ಹಣ ಕೊಡುವ ವಾಡಿಕೆ ಇದೆ.

**ಒಡಪು ಹಾಕುವುದು**

ಕಾಡಿನಲ್ಲಿರುವ ದನಕರುಗಳ ಗೂಡಿನ ಬಳಿ ರಾತ್ರಿಯ ವೇಳೆ ಸದಾ ಬೆಂಕಿಯನ್ನು ಉರಿಸುತ್ತಾರೆ. ಒಂದು ಮೊಳದಷ್ಟು ಆಳದ ಗುಂಡಿ ತೆಗೆದು ಒಣಗಿದ ತರಗೆಲೆ, ಕಟ್ಟಿಗೆಗಳನ್ನು ಹಾಕಿ ಕಿಲಾರಿಗಳು ಬೆಂಕಿ ಉರಿಸುತ್ತಾರೆ. ಕಾಡುಪ್ರಾಣಿಗಳಿಂದ ರಕ್ಷಣೆ ಪಡೆಯಲು ದನಕರುಗಳ ಗೂಡುಗಳನ್ನು ರಕ್ಷಿಸುವ ಸಲುವಾಗಿ ಬಯಲಿನಲ್ಲಿಯೇ ಮಲಗಬೇಕಾದಾಗ ಚಳಿಯಿಂದ ರಕ್ಷಿಸಿಕೊಳ್ಳಲು ಈ ಬೆಂಕಿಯನ್ನು ಉರಿಸುವ ಸಂಪ್ರದಾಯವಿದೆ. ಇದೇ ಅವರಿಗೆ ರಾತ್ರಿಯ ವೇಳೆ ಬೆಳಕಿನ ಮೂಲವೂ ಹೌದು. ತೆಲುಗು ಪದಕೋಶದ ಪ್ರಕಾರ ಒಡಪು ಎಂದರೆ ಬೆಳಕು ಎಂದು ಅರ್ಥ ಬರುತ್ತದೆ. ಈ ಬೆಳಕಿನಲ್ಲಿಯೇ ಸರಿ ರಾತ್ರಿಯವರೆಗೂ ಕೋಲಾಟ, ಇಲ್ಲವೇ ಪದ ಅಥವಾ ಕತೆ ಹೇಳುತ್ತಾ, ಕೇಳುತ್ತಾ ಕಾಲಹರಣ ಮಾಡುವುದೂ ಉಂಟು. ಹೀಗೆ ರಾತ್ರಿಯಿಡೀ ಬೆಂಕಿ ಉರಿಯುತ್ತಿದ್ದುದನ್ನು ಕಂಡ ಇತರರು ಕೊಳ್ಳಿಮ್ಯಾಸರು ಎಂದು ಕರೆಯುತ್ತಿದ್ದುದೂ ಉಂಟು. ಮ್ಯಾಸರನ್ನು ಕೊಳ್ಳಿಮ್ಯಾಸ, ಕಳ್ಳೇಮ್ಯಾಸ, ಅಡವಿಮ್ಯಾಸ ಎಂದೂ ಕರೆಯುತ್ತಾರೆ ಎಂದು ಎಂ.ಜಿ.ಈಶ್ವರಪ್ಪನವರು ತಮ್ಮ ಮ್ಯಾಸಬೇಡರು ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**ಢಿಕ್ಕಿಹಬ್ಬ**

ನನ್ನಿವಾಳದಲ್ಲಿ ಗಾದರಿಪಾಲನಾಯಕ ಮತ್ತು ಬಂಗಾರುದೇವರ ಜಾತ್ರೆಯಲ್ಲಿ ಪ್ರತಿವರ್ಷ ಗುಗ್ಗರಿ ಹಬ್ಬ ನಡೆಯುತ್ತದೆ. ಆ ಸಂದರ್ಭದಲ್ಲಿ ಈ ಢಿಕ್ಕಿ ಹಬ್ಬ ಆಚರಿಸಲಾಗುತ್ತದೆ. ಇದು

ಮಹಿಳೆಯರು ಪಾಲ್ಗೊಳ್ಳುವ ಆಚರಣೆ. ನನ್ನಿವಾಳದ ದೊರೆಯ ಮನೆತನದ ಹೆಣ್ಣುಮಕ್ಕಳು ಅಂದರೆ ದೊರೆಯ ಸಹೋದರಿಯರು ಮತ್ತು ಬಂಗಾರುದೇವರ ಪೂಜಾರಿಯ ಸಹೋದರಿಯರ ಮಧ್ಯೆ ಈ ಘರ್ಷಣೆ ನಡೆಯುತ್ತದೆ. ಬಂಗಾರುದೇವರು ಎಂದರೆ ಹುಲಿದೇವರು. ಬಂಗಾರದಲ್ಲಿ ಒಂದು ಪುಟ್ಟ ಹುಲಿಯನ್ನು ಮಾಡಿ ಪೆಟ್ಟಿಗೆಯಲ್ಲಿಟ್ಟು ಮ್ಯಾಸಬೇಡರು ಇಲ್ಲಿ ಪೂಜಿಸುತ್ತಾರೆ. ದನಗಾಹಿಯಾಗಿದ್ದ ಗಾದರಿಪಾಲನಾಯಕನ ಬಂಧುಗಳು ಹುಲಿಯ ಮರಿಗಳನ್ನು ಕೊಂದ ಕಾರಣದಿಂದಾಗಿ ರೊಚ್ಚಿಗೆದ್ದ ಹುಲಿಗಳಾದ ತಾಯಿ ಮತ್ತು ತಂದೆ ಹುಲಿ ಇವನೊಂದಿಗೆ ಘರ್ಷಣೆಗಿಳಿಯುತ್ತವೆ. ಮೊದಲು ಗಂಡು ಹುಲಿ ಸಾಯುತ್ತದೆ. ಆ ಸ್ಥಳ ಬಿಟ್ಟು ಈತ ಮಿಂಚೇರಿ ಕಡೆ ಹೋದಾಗ ಅಲ್ಲಿಗೂ ಹಿಂಬಾಲಿಸಿಕೊಂಡು ಹೋದ ಹೆಣ್ಣು ಹುಲಿ ಈತನೊಂದಿಗೆ ಹೋರಾಡಿ ತಾನು ಮಡಿಯುತ್ತದೆ. ಈತನೂ ಸತ್ತು ಹೋಗುತ್ತಾನೆ. ಕಾಡಿನ ವಾಸಿಗಳಾಗಿದ್ದ ಇವರು ನಿರಂತರವಾಗಿ ಇಂಥ ಕ್ರೂರಮೃಗಗಳ ಜೊತೆಗೆ ಘರ್ಷಣೆಯಲ್ಲಿಯೇ ಬದುಕುವ ಅನಿವಾರ್ಯವನ್ನು ಈ ಘಟನೆ ಸ್ಪಷ್ಟಪಡಿಸುತ್ತದೆ. ಅಂದಿನಿಂದ ಹುಲಿಯೊಂದಿಗೆ ಅನುಸಂಧಾನ ಮಾಡಿಕೊಂಡವರಂತೆ ಮ್ಯಾಸಬೇಡರು ವರ್ತಿಸುತ್ತಿದ್ದಾರೆ. ಈ ಬುಡಕಟ್ಟುಗಳಲ್ಲೊಂದಾದ ಕರೆ ಒಕ್ಕಲಿಗರಲ್ಲೂ ಹುಲಿದೇವರನ್ನು ಪೂಜಿಸುವ ಪದ್ಧತಿ ಇದೆ.

ಢಿಕ್ಕಿ ಹಬ್ಬದ ಆಚರಣೆಯ ಹಿನ್ನೆಲೆ ಗಮನಿಸಿದಾಗ ಈ ಗಾದರಿಪಾಲನಾಯಕ ಮತ್ತು ಹುಲಿಯ ಮಧ್ಯ ನಡೆದ ಹೋರಾಟದ ಸಾಂಕೇತಿಕ ಆಚರಣೆ ಇದು ಎಂದು ಸ್ಪಷ್ಟವಾಗುತ್ತದೆ. ಇಲ್ಲಿ ಭಾಗವಹಿಸುವವರು ಮಹಿಳೆಯರು ಎಂಬುದು ವಿಶೇಷ. ಗಾದರಿಪಾಲನಾಯಕ ಅಂದರೆ ಈತನ ಪರಂಪರೆಯವರನ್ನೇ ಇಂದು ನನ್ನಿವಾಳದ ದೊರೆಗಳೂ ಎಂದು ಕರೆಯಲಾಗುತ್ತದೆ. ಈ ಮನೆತನದ ಸಹೋದರಿಯರು ಮತ್ತು ಬಂಗಾರುದೇವರು(ಹುಲಿ) ಪೂಜಾರಿಯ ಸಹೋದರಿಯರು ಇವರೀರ್ವರ ಮಧ್ಯೆಯೇ ಢಿಕ್ಕಿಹಬ್ಬ ನಡೆಯುವುದು. ಈ ಇಬ್ಬರಿಗೂ ಮೊದಲು ಹಣೆಗೆ ಅರಿಷಿಣ(ಭಂಡಾರ) ಹಚ್ಚುತ್ತಾರೆ. ನೂರಾರು ಮಂದಿ ನೆರೆದಿರುತ್ತಾರೆ. ಆಗ ದೊರೆ ಅಲ್ಲಿರುವುದಿಲ್ಲ. ಪರಸ್ಪರ ಎರಡೂ ಬಣದ ಮಹಿಳೆಯರು ಪರಸ್ಪರ ಹೂಂಕರಿಸುತ್ತಾ, ಢಿಕ್ಕಿ ಹಾಕುತ್ತ ಎದುರುಬದುರಾಗಿ ಕುಳಿತು ತಲೆಗೆ ತಲೆ ಘಟ್ಟಿಸಿಕೊಳ್ಳುತ್ತಾರೆ. ಗಾಯವಾಗಿ ರಕ್ತ ಒಸರುವ ಮಟ್ಟಿಗೆ ಇವರು ಢಿಕ್ಕಿ ಹೊಡೆಯುತ್ತಾರೆ. ನೆರೆದ ಜನ ಎರಡೂ ಬಣಗಳವರು ತಮ್ಮವರನ್ನು ಪ್ರೋತ್ಸಾಹಿಸುತ್ತಾರೆ. ಇದೊಂದು ಮನರಂಜನೆಗಾಗಿ ಹೂಡಿದ ಆಟವೇನೋ ಎಂಬಂತಿರುತ್ತದೆ. ಆದರೆ ಇವರ ಹಿನ್ನೆಲೆಯೇ ಬೇರೆಯಾಗಿದೆ. ಹೆಚ್ಚು ಪ್ರಶ್ನೆ ಮಾಡುತ್ತ ಕೆದಕಿದಾಗ ಸತ್ಯಾಂಶ ಹೊರಬೀಳುತ್ತದೆ. ಅಂದು ಗಾದರಿಪಾಲನಾಯಕ ಮತ್ತು ಹುಲಿಯೊಂದಿಗೆ ನಡೆದ ಹೋರಾಟವಿದು. ದೇವತೆಗಳಿಗೆ ಬಲಿ ಕೊಡುವುದು, ಸಾಂಕೇತಿಕ ಬಲಿ ಕೊಡುವುದು (ತೆಂಗಿನಕಾಯಿ, ಕುಂಬಳಕಾಯಿ ಇತ್ಯಾದಿ) ಎಲ್ಲಾ ಮುಂದೆ ಬರಲಿರುವ ವಿಪತ್ತುಗಳನ್ನು ತಡೆಯಲು ಮೊದಲೇ ಆ ದೇವರಿಗೆ ತಮ್ಮ ಬಲಿಯಾಗದಿರಲಿ ಎಂದು. ಇಲ್ಲಿಯೂ ಹುಲಿಯಿಂದ ಗಾದರಿಪಾಲನಾಯಕ ಮರಣ ಹೊಂದಿದಾಗ

ಮತ್ತೆ ಇನ್ನೆಂದೂ ಅಂಥ ಪ್ರಸಂಗ ಜರುಗದೆ ಇರಲಿ ಎಂದು ಮೊದಲೇ ಹೀಗೆ ಸಂಘರ್ಷವೇರ್ಪಡಿಸಿ ಹುಲಿ ಕಡೆಯವರೆ ಸೋತರು ಎಂದು ನಿರ್ಣಯಿಸುತ್ತಾರೆ. ಮತ್ತೊಂದು ವಿಶೇಷವೆಂದರೆ ಇಲ್ಲಿ ಹುಲಿ ಅಂದರೆ ಬಂಗಾರುದೇವರ ಪೂಜಾರಿಯ ಮನೆಯ ಹೆಣ್ಣುಮಗಳು ಗೆದ್ದರೂ ಸಹ ನಿರ್ಣಯ ಕೊಡುವುದು ದೊರೆಯ ಮನೆಯ ಸಹೋದರಿಯರೇ ಗೆದ್ದರು ಎಂಬುದಾಗಿ. ಕಾರಣ ದೊರೆಯ ಕಡೆಯವರು ಸೋತರು ಎಂದರೆ ದೊರೆಯ ಪ್ರತಿಷ್ಠೆಗೆ ಭಂಗವಾಗುತ್ತದೆ ಎಂಬ ಕಾರಣವಲ್ಲ. ಸೋತರು ಎಂದರೆ ದೊರೆ ಹುಲಿಗೆ ಸೋತ ಅರ್ಥಾತ್ ದೊರೆ ಸತ್ತ ಎಂಬ ತೀರ್ಮಾನವಂತೆ. ದೊರೆಗೆ ಸಾವಾಗುತ್ತದೆ ಎಂಬ ಪ್ರತೀತಿ ಬೆಳೆದಿರುವುದರಿಂದ ಗೆಲುವನ್ನು ಅವರಿಗೇ ಬಿಟ್ಟುಕೊಟ್ಟು ದೊರೆಯನ್ನು ಉಳಿಸುವ ಆಶಯ ಇದಾಗಿದೆ. ಹೀಗೆ ವಿಶಿಷ್ಟವಾದ ಆಚರಣೆ ಇದು. ಮಹಿಳೆಯರೇ ಏಕೆ ಇದನ್ನು ನಡೆಸುತ್ತಾರೆ ಎಂದರೆ ತಮ್ಮ ತವರನ್ನು ರಕ್ಷಿಸುವ ಹಂಬಲದಿಂದ.

'ಹಾಲುಂಡ ತವರಿಗೆ ಏನೆಂದು ಹರಸಲಿ, ಹೊಳೆದಂಡೆಲಿರುವ ಗರೀಕೆಯ ಕುಡಿಹಂಗೆ ಹಬ್ಬಲಿ ಅವರ ರಸಬಳ್ಳೀ' ಎಂದು ಹಾರೈಸುವ ಮಹಿಳೆಯರು ತಮ್ಮ ತವರನ್ನು ರಕ್ಷಿಸುವ ಸಲುವಾಗಿ, ಹುಲಿಯ ಶಾಪದಿಂದ ಇವರನ್ನು ಕಾಪಾಡುವ ಸಲುವಾಗಿ ಸಾಂಕೇತಿಕವಾಗಿ ಈ ಆಚರಣೆಯನ್ನು ನಡೆಸಿಕೊಂಡು ಬಂದಿದ್ದಾರೆ. ಮೇಲ್ನೋಟಕ್ಕಂತೂ ಇದೊಂದು ಅಪ್ಪಟ ಮನರಂಜನೆಯಂತೆ ಭಾಸವಾಗುತ್ತದೆ. ಈ ಎರಡೂ ಮನೆತನಗಳ ಮಧ್ಯೆ ಬೀಗತನದ ಸಂಬಂಧವೂ ಇರುವುದರಿಂದ ಈ ಎರಡೂ ಬಣದ ಮಹಿಳೆಯರು ಪರಸ್ಪರ-ಅತ್ತಿಗೆ ನಾದಿನಿಯರೋ ಅಥವಾ ಅತ್ತೆ ಸೊಸೆಯರೋ ಆಗಿರುತ್ತಾರೆ. ಹಾಗಾಗಿ ಒಂದು ಬಗೆಯ ಪೈಪೋಟಿ ಪ್ರಾರಂಭವಾಗಿ ಪರಸ್ಪರ ಢಿಕ್ಕಿ ಹೊಡೆದುಕೊಳ್ಳುವ ವಿಧಾನ ಆಟದ ಸ್ವರೂಪ ಪಡೆದುಬಿಡುತ್ತದೆ. ಕೊನೆಗೆ ಯಾರಾದರೂ ಮಧ್ಯೆ ಹೋಗಿ ಬಿಡಿಸಿಕೊಳ್ಳಬೇಕು. ಇಂಥ ಆವೇಶ ಇಲ್ಲಿರುತ್ತವೆ. ಢಿಕ್ಕಿ ಹಬ್ಬದಲ್ಲಿ ಭಾಗವಹಿಸುವ ಮಹಿಳೆಯರು ಬಿಳಿಬಣ್ಣದ ಸೀರೆಯನ್ನೇ ಉಡಬೇಕೆಂಬ ಪದ್ಧತಿ ಇದ್ದು, ಈಗ ಈ ನಿಯಮ ಸಡಿಲಗೊಳ್ಳುತ್ತಿದೆ. ಇತ್ತೀಚೆಗೆ ಇದನ್ನು ಅತ್ತೆ ಸೊಸೆಯರ ಮಧ್ಯೆ ನಡೆಯುವ ಆಟ, ಅವರ ಸಾಮರಸ್ಯದ ಸಂಕೇತ ಎಂದೆಲ್ಲಾ ತಪ್ಪಾಗಿ ವ್ಯಾಖ್ಯಾನಿಸಲಾಗುತ್ತಿದೆ.

### ಕಲೆ

ಕರ್ನಾಟಕದ ಹಲವು ಬುಡಕಟ್ಟುಗಳಲ್ಲಿ ಶ್ರೀಮಂತ ಕಲೆ ಇರುವುದನ್ನು ಗುರುತಿಸ ಬಹುದಾಗಿದೆ. ಉದಾಹರಣೆಗೆ ಗಾಮೊಕ್ಕಲು, ಹಾಲಕ್ಕಿ ಒಕ್ಕಲಿಗರು ವಿಶೇಷವಾಗಿ ಮಹಿಳೆಯರು ಮನೆಯ ಗೋಡೆಗಳ ಮೇಲೆ ವಿಶೇಷವಾದ ಚಿತ್ರಗಳನ್ನು ಬಿಡಿಸಿರುತ್ತಾರೆ. ಪ್ರಕೃತಿಯ ಮಧ್ಯೆಯೇ ಬದುಕುವ ಇವರು ಸೂರ್ಯ, ಚಂದ್ರ, ನೀರು, ಹಾವು, ಗಿಡ, ಮರ, ಬಳ್ಳಿ ಇವನ್ನೆಲ್ಲಾ ರೇಖೆಗಳ ಮೂಲಕ ಬಿಡಿಸಿ ಗುಡಿಸಲು ಗೋಡೆಗಳನ್ನು ಅಂದವಾಗಿಸುತ್ತಾರೆ. ಮದುವೆ ಇತ್ಯಾದಿ

ಶುಭಕಾರ್ಯಗಳಲ್ಲೂ ಹಸೆ ಬರೆದು ಅಲಂಕಾರಿಕವಾಗಿ ತಮ್ಮ ಕಲಾನಿಪುಣತೆಯನ್ನು ಅಭಿವ್ಯಕ್ತಿ ಮಾಡುತ್ತಾರೆ. ಆದರೆ ಈ ಚಿತ್ರಕಲೆ ಮ್ಯಾಸನಾಯಕರ ಮಹಿಳೆ ಯರಲ್ಲಿ ಇಲ್ಲ. ಕಲೆಗೆ ಪೂರಕವಾಗಿ ಬಳಕೆಯಾಗುವ ಸಾಮಗ್ರಿಯೆಂದರೆ ಅನುಭವ. ಈ ಅನುಭವ ಕಾಡನ್ನೇ ನೆಲೆಯನ್ನಾಗಿ ಮಾಡಿಕೊಂಡಿದ್ದ ಮ್ಯಾಸಬೇಡ ಮಹಿಳೆಯರಿಗೂ ಇರಲೇಬೇಕು. ಆದರೆ ಇದರೊಂದಿಗೆ ಬೇಕಾಗುವ ಇತರ ಪರಿಕರ ಮೂಲತಃ ಚಿತ್ರಕಲೆಯ ಅನಾವರಣಕ್ಕೆ ಬೇಕಾದ ಭಿತ್ತಿಯೇ ಇವರಿಗಿಲ್ಲ. ಪಶುಪಾಲನೆ ಮಾಡುತ್ತ ಒಂದೆಡೆಯಿಂದ ಮತ್ತೊಂದೆಡೆಗೆ ತಮ್ಮ ನೆಲೆಯನ್ನು ಬದಲಾಯಿಸುತ್ತಲೇ ಇದ್ದ ಇವರು ವಾಸ ಮಾಡುತ್ತಿದ್ದುದೇ ಸೊಪ್ಪು-ಹುಲ್ಲಿನಿಂದ ತಯಾರಿಸಿದ ನೆಲ ಗುಡಿಸಲುಗಳಲ್ಲಿ. ಅನಂತರ ಬಂದಿದ್ದು ಗೋಡೆಯ ಮೇಲೆ ಹೊದಿಸಿದ ಹುಲ್ಲಿನ ಗುಡಿಸಲುಗಳು. ಹೀಗಾಗಿ ಇವರಲ್ಲಿ ಚಿತ್ರಕಲೆ ರೂಢಿಯಾಗಿರಲಿಕ್ಕಿಲ್ಲ ಎನಿಸುತ್ತದೆ. ಇಂದಿಗೂ ಸಹ ಈ ಸಮುದಾಯ ಸಂಪ್ರದಾಯಸ್ಥರ ಮನೆಯ ಮುಂದೆ ರಂಗೋಲಿ ಸಹ ಹಾಕುವುದಿಲ್ಲ. ಈ ಕಲೆ ಬಹುಶಃ ಇವರಿಗೆ ತಿಳಿಯದ್ದರಿಂದಲೋ ಅಥವಾ ವೈದಿಕರು ಅನುಸರಿಸುವ ಈ ಪದ್ಧತಿಯನ್ನು ತಾವು ಮಾಡಬಾರದೆಂದೋ ಅಥವಾ ಮಾಟ ಮಂತ್ರ ಮಾಡುವಾಗ ಬರೆಯುವ ರಂಗವನ್ನು ಮನೆಯ ಮುಂದೆ ಬರೆಯಬಾರದು ಎಂಬ ಆಲೋಚನೆ ಕಾರಣವಾಗಿಯೋ ಇದಕ್ಕೆ ನಿಷೇಧವಿದೆ. ಬಾಗಿಲಿಗೆ ಅರಿಷಿಣ ಕುಂಕುಮ ಸಹ ಹಚ್ಚುವುದು ತಮಗೆ ನಿಷೇಧ ಎನ್ನುತ್ತಾರೆ. ಆದರೆ ಒಲೆಯ ಬೂದಿಯನ್ನು ಒದ್ದೆ ಮಾಡಿ ಮೂರು ಬೆರಳಿಗೆ ಹಚ್ಚಿಕೊಂಡು ಹೊಸಲಿಗೆ ವಿಭೂತಿ ಎಂದು ಹಚ್ಚುತ್ತಾರೆ. ಹಾಗೆಂದಾಕ್ಷಣ ಇವರಿಗೆ ಕಲೆಯ ಬಗ್ಗೆ ಆಸಕ್ತಿ ಇಲ್ಲವೆಂದಲ್ಲ. ಏಕೆಂದರೆ ಈ ಮ್ಯಾಸಬೇಡ ಮಹಿಳೆಯರು ಹಚ್ಚೆಯ(ತುಂಬೆಯ ಸೊಪ್ಪಿನ ರಸ ತೆಗೆದು ಅರಿಷಿಣ ಪುಡಿ ಸೇರಿಸಿ ಇದನ್ನು ಒಂದು ತೆಳುವಾದ ಬಟ್ಟೆಗೆ ಲೇಪಿಸಿ ಅದನ್ನು ಹರಳೆಣ್ಣೆ ದೀಪಕ್ಕೆ ಹಿಡಿದು ಕಾಯಿಸಿ ನಂತರ ಇದಕ್ಕೆ ಎದೆಹಾಲು ಬೆರೆಸಿ ರಸ ಮಾಡಿ ಮಣ್ಣಿನ ಚಿಕ್ಕ ಕುಡಿಕೆಯಲ್ಲಿಟ್ಟು ಬಟ್ಟೆ ಮುಚ್ಚಿ ಕಟ್ಟಿಡುತ್ತಾರೆ. ಮೂರು ಸೂಜಿ ಸೇರಿಸಿ ಬಿಗಿಯಾಗಿ ಕಟ್ಟಿ ರಸದಲ್ಲಿ ಬಿಡಿಸಿದ ಚಿತ್ರದ ಮೇಲೆ ಚುಚ್ಚುತ್ತಾ ಬರುತ್ತಾರೆ. ಚುಚ್ಚಿದ ಜಾಗ ಸ್ವಲ್ಪ ಊದಿಕೊಂಡು ಶಾಶ್ವತವಾಗಿ ಉಳಿಯುತ್ತದೆ.

ಕಾಡಿನ ಕಲೆಯಾದ ಇದು ಇತ್ತೀಚೆಗೆ ನಾಡಿನ ಕಲೆಯಾದ ಬಗ್ಗೆ ವಿಶೇಷವಾದ ಪ್ರೀತಿಯನ್ನು ಹೊಂದಿದ್ದು ಅದನ್ನು ಹಣೆ, ಗಲ್ಲ, ಕೈ ಮೇಲೆ ಹಾಕಿಸಿಕೊಳ್ಳುತ್ತಿದ್ದರು. ಇದು ಶುಭ ಸಂಕೇತವೂ ಹೌದು. ಹಾಗೆಯೇ ತಮ್ಮ ಸೌಂದರ್ಯವನ್ನು ಹೆಚ್ಚು ಮಾಡುವ ಒಂದು ವಿಧಾನವೂ ಹೌದು. ಕೈಮೇಲೆ ಗಿಂಡಿಯನ್ನು ಹಾಕಿಸಿಕೊಳ್ಳುವುದು ಇವರಲ್ಲಿ ಕಡ್ಡಾಯವಾಗಿತ್ತು. 'ಹಚ್ಚೆಗಿಂಡಿ ಇಲ್ದೋರು ಗಂಡನ ಕೈಗೆ ನೀರು ಕೊಡಬಾರ್ದು' ಎಂಬ ನಂಬಿಕೆ ಇವರಲ್ಲಿದೆ. ಮುಂಗೈ ಹೆಬ್ಬೆರಳಿನ ಮೇಲ್ಭಾಗದಲ್ಲಿ ಮೂರು ಹಚ್ಚೆಯ ಚುಕ್ಕೆ ಇರಿಸಿಕೊಂಡು ಇದನ್ನು ಒಲೆಗುಂಡು ಎಂದು ಕರೆಯುತ್ತಾರೆ. ಇದನ್ನು ಹಾಕಿಸಿಕೊಂಡರೆ ಅಡಿಗೆ ರುಚಿಯಾಗುತ್ತೆ ಎಂಬುದು ಅವರ ನಂಬಿಕೆ. ಇದರ ಬಗ್ಗೆ ಪ್ರೀತಿ ಆಸೆ ಇದ್ದರೂ ಇದನ್ನು ಹಾಕುವವರು ಈ

ಮಹಿಳೆಯರಲ್ಲ. ಕೊರಚರು ಮತ್ತು ಕಿಳ್ಳೇಕ್ಯಾತರ ಹೆಂಗಸರು ಇದನ್ನು ಹಾಕುತ್ತಾರೆ.

**ಕಂಪಳರಂಗನ ಜಾತ್ರೆ**

ಮೊಳಕಾಲ್ಮೂರು ತಾಲ್ಲೂಕು ಕಂಪಳದೇವರಹಟ್ಟಿಯಲ್ಲಿ ಕಂಪಳರಂಗನ ಜಾತ್ರೆ ವಿಶೇಷತೆ ಪಡೆದಿದೆ. ಇಲ್ಲಿ ಕಾಡು ಸ್ವಲ್ಪಮಟ್ಟಿಗೆ ಉಳಿದಿದೆ. ಕಂಪಳದೇವರಹಟ್ಟಿ ಈಗ ಒಂದು ಚಿಕ್ಕ ಗ್ರಾಮ. ಮ್ಯಾಸನಾಯಕರೇ ಹೆಚ್ಚು ಸಂಖ್ಯೆಯಲ್ಲಿದ್ದಾರೆ. ಈ ಹಟ್ಟಿ ಜನಿಗೆಹಳ್ಳದ ದಡದಲ್ಲಿದೆ. ಈಗ ಅಲ್ಲಿ ನೀರು ಹರಿಯುವುದು ನಿಂತಿದೆ. ಇದೇ ತೊರೆಯೇ ಪ್ರಬಂಧದ ಆರಂಭದಲ್ಲಿ ಪ್ರಸ್ತಾಪಿಸಿದ್ದ ಜನಿಗೇಹಳ್ಳಿಯ ಬಳಿ ಹರಿಯುವಂಥದ್ದು, ಜನಿಗೇನಹಳ್ಳ, ಕಂಪಳದೇವರಹಟ್ಟಿ ಈ ತೊರೆಯ ದಂಡೆಯ ಮೇಲೆ ಬರುತ್ತದೆ. ಈ ಹಳ್ಳವನ್ನು ಚಿಕ್ಕಹಗರಿ. ಚಿನ್ನಹಗರಿ ಹನೆಯ ತೊರೆ ಎಂದು ಕರೆಯಲಾಗುತ್ತದೆ. ಕಂಪಳದೇವರಹಟ್ಟಿಯಿಂದ ದಕ್ಷಿಣ ಭಾಗಕ್ಕೆ ಸಮೃದ್ಧವಾದ ಕಮರದ ಕಾನನ ಇದ್ದಂತೆ ಕಾಣಿಸುತ್ತದೆ. ಈ ಮರದ ಮರಗಳು ತೇಗದಂತೆ ಗಟ್ಟಿಯಾದ ಮತ್ತು ಎತ್ತರಕ್ಕೆ ಬೆಳೆಯುವಂಥ ಮರಗಳು. ವ್ಯವಸಾಯ ಉಪಕರಣಗಳಿಗಾಗಿ ರೈತರು ಈ ಮರವನ್ನು ಬಳಸುತ್ತಾರೆ. ಈ ಕಮರದ ಮರಗಳೆಲ್ಲ ಈಗ ಕತ್ತರಿಸಿ ಹೋಗಿವೆ. ವಾಸ್ತವವಾಗಿ ಬೇಡ ನಾಯಕರ ಮೂಲಕಥೆ ಆರಂಭವಾಗುವುದೇ ಈ ಕಮರದ ಕಾನನದಿಂದ. ಬ್ರಹ್ಮ, ವಿಷ್ಣು, ಮಹೇಶ್ವರರು ಪ್ರಯಾಣ ಮಾಡಿಕೊಳ್ಳುತ್ತ ಬಂದು ಒಂದು ಬೆಳಗು ನಾಮ ಮತ್ತು ವಿಭೂತಿ ಧರಿಸಿಕೊಳ್ಳಲು ಇಳಿದಿದ್ದು ಈ ಕಮರದ ಕಾನಿನ ಸರೋವರದ ಬಳಿಯೇ ಎಂಬುದಾಗಿ ಕಥೆ ಆರಂಭವಾಗುತ್ತದೆ. ಹಸುವಿನ ಗೊರಸಿನಲ್ಲಿ ಹುಟ್ಟಿದ ಚೆಟ್ಲುಗೊಟ್ಲ ಮಲ್ಲನಾಯಕನು ಕೂಡ ಬೆಳೆದದ್ದು ಇದೇ ಕಮರದ ಅರಣ್ಯದಲ್ಲಿ. ಅದರಿಂದಲೇ ಬೇಡ ನಾಯಕರಿಗೆ ಈ ಅರಣ್ಯ ಮುಖ್ಯವಾಗಿ ಕಾಣಿಸಿ, ಕಂಪಳದೇವರ ಜಾತ್ರೆಯನ್ನು ಇಲ್ಲಿಯೇ ನಡೆಸುತ್ತಾರೆ.

ಜಾತ್ರೆಯ ಹಿಂದಿನ ದಿನ ಪೆಟ್ಟಿಗೆ ದೇವರನ್ನು ಪೂಜಾರಿಯಿಂದ ಹೊರಿಸಿಕೊಂಡು ಬಂದು ಊರಿಂದೀಚೆ, ಆ ಮೊದಲೇ ಗುರುತು ಹಾಕಿದ ಸ್ಥಳದಲ್ಲಿ ಕೂತುಕೊಳ್ಳುತ್ತಾರೆ. ಕೆಲವು ವರ್ಷಗಳ ಹಿಂದೆಯಂತೂ ಪೆಟ್ಟಿಗೆ ದೇವರನ್ನು ಮೆರವಣಿಗೆ ಹೊರಡಿಸಿಕೊಂಡು ಬಹುದೂರ ನಡೆದು ಅರಣ್ಯದ ಭಾಗಕ್ಕೆ ಸೇರುತ್ತಿದ್ದುದಾಗಿ ಹಿರಿಯರು ತಿಳಿಸುತ್ತಾರೆ. ಈಗಾಗಿ ದೇವರನ್ನು ಪೂಜಾರಿಯೊಬ್ಬನಿಗೆ ಹೊತ್ತುಕೊಂಡು ಅಷ್ಟು ದೂರ ನಡೆಯುವುದು ಕಷ್ಟವೆಂತಲೋ (ದೇವರ ಪೆಟ್ಟಿಗೆಯನ್ನು ಬೇರೆ ಯಾರೂ ಹೊರುವಂತಿಲ್ಲ, ಪೂಜಾರಿಯೊಬ್ಬನನ್ನು ಬಿಟ್ಟು) ಅರಣ್ಯ ನಾಶವಾದದ್ದರಿಂದಲೋ ಅಥವಾ ನಾಗರಿಕತೆಯ ಪ್ರಭಾವದಿಂದಲೋ ಈಗ ಜಾತ್ರೆಯ ಸ್ಥಳಕ್ಕಾಗಿ ದೇವರು ಅರಣ್ಯ ಹುಡುಕಿಕೊಂಡು ಹೋಗುವುದಿಲ್ಲ. ದೇವರು ಎಲ್ಲಿ ಬಂದು ನೆಲೆಸಬೇಕೆಂದಿರು ತ್ತದೋ ಅಲ್ಲಿ ಒಂದು ತಾತ್ಕಾಲಿಕವಾಗಿ ಗುಡಿಸಿಲ ಗುಡಿಯನ್ನು ಕಟ್ಟಿರುತ್ತಾರೆ. ಈ ಗುಡಿಸಿಲ ಗುಡಿಗಾಗಿ ಅವರು ಬಳಸುವುದು ಲಕ್ಕಿಯ ಬರಲು. ಈ ಲಕ್ಕಿಬರಲು ವಿಷ್ಣುವಿಗೆ ಪ್ರಿಯವಾದ

ಸಸ್ಯವರ್ಗ. ಲಕ್ಷ್ಮಿ ಬರಲಿನ ಗುಡಿಯಲ್ಲಿ ಸ್ಥಾಪನೆಯಾಗುವ ದೇವರು ಕಂಪಳರಂಗ. ತಮ್ಮ ಕುಲದೇವತೆಯಾದ ಪಾಪನಾಯಕನು ತಿರುಪತಿಗೆ ಹೋಗಿ ಈ ದೇವರನ್ನು ಪ್ರತ್ಯಕ್ಷವಾಗಿಸಿಕೊಂಡು ಆಶೀರ್ವಾದ ಪಡೆದು ಬರುವ ಸಂದರ್ಭಕ್ಕೆ ಕಂಪಳದೇವರಹಟ್ಟಿಯಲ್ಲಿ ಈ ದೇವರನ್ನು ಸ್ಥಾಪಿಸಿದನೆಂದು ಹೇಳುತ್ತಾರೆ. ಈ ಮಾತಿನಲ್ಲಿ ಬಹುಮಟ್ಟಿನ ಸತ್ಯವೂ ಅಡಗಿರುವಂತೆ ತೋರುತ್ತದೆ. ಬೇಡನಾಯಕರಲ್ಲಿ ಶರಣ ಸಂತತಿಯವನಾದ ಪಾಪನಾಯಕನು ಆ ಸುತ್ತಿನ ಅನೇಕ ಸ್ಥಳಗಳಲ್ಲಿ ಸಂಚಾರ ಮಾಡಿದಂತೆ ಕಾಣಿಸುತ್ತದೆ. ಅವನು ಸ್ವಲ್ಪ ಕಾಲ ಇಲ್ಲಿ ತಂಗಿದ್ದ ನೆಂದು ಹೇಳುವ ನೆಲೆಗಳನ್ನು ಇಂದು ಬೇಡನಾಯಕರು ಪೂಜಿಸುವರು.

ಹಿಂದಿನ ಕಾಲಕ್ಕೆ ಶರಣರು, ಯೋಗಿಗಳು, ದಾರ್ಶನಿಕರು ಹೋದ ಬಂದ ಸ್ಥಳಗಳೆಲ್ಲ ಈಗ ಪವಿತ್ರ ಸ್ಥಳಗಳಾಗಿವೆ. ಮಲೆ ಮಹದೇಶ್ವರನಾಗಲಿ, ಶರಣ ತಿಪ್ಪೇಸ್ವಾಮಿಯಾಗಲಿ ಅವರು ನೆಲೆಸಿದ್ದ, ಸ್ವಲ್ಪ ಕಾಲವಾದರೂ ತಂಗಿದ್ದ, ತೀರಿಕೊಂಡ ಸ್ಥಳಗಳೆಲ್ಲ ಇಂದು ಪೂಜಾರ್ಹ ಸ್ಥಳಗಳಾಗಿಬಿಟ್ಟಿವೆ. ಕೇವಲ ಜನಪದರಲ್ಲಿಯೇ ಅಲ್ಲದೆ ಶಿಷ್ಟವರ್ಗದಲ್ಲಿಯೂ ಶಿಷ್ಟವರ್ಗದ ಮಹಿಮಾಪುರುಷರಾದ ಶಂಕರಾಚಾರ್ಯ, ಮಧ್ವಾಚಾರ್ಯ, ರಾಮಾನುಜಾಚಾರ್ಯ ಇವರ ಬದುಕಿಗೆ ಸಂಬಂಧಪಟ್ಟಂತೆಯೂ ಈ ಬಗೆಯ ಕುರುಹುಗಳನ್ನು ನೋಡಬಹುದಾಗಿದೆ. ಹಾಗೆಯೇ ಬೇಡನಾಯಕರ ಕುಲದ ಶರಣನಾದ ಜಗಳೂರು ಪಾಪನಾಯಕನು ಜೀವಮಾನದಲ್ಲಿ ಕೆಲವು ಕಾಲ ಕಂಪಳದೇವರಹಟ್ಟಿಯಲ್ಲಿ ತಂಗಿದ್ದು, ಅಲ್ಲಿಯೇ ಒಂದು ವಿಷ್ಣು ಸಾಲಿಗ್ರಾಮವನ್ನು ಸ್ಥಾಪಿಸಿದ್ದಿರಬೇಕು ಎನಿಸುತ್ತದೆ. ಜಗಳೂರಜ್ಜನು ವಿಷ್ಣುದೇವರನ್ನು ಅಲ್ಲಿ ಸ್ಥಾಪಿಸಿದ್ದರಿಂದಲೋ ಏನೋ ಯಾವುದೇ ರೀತಿ ಪ್ರಾಣಿ ಹಿಂಸೆ ಅಥವಾ ಬಲಿ ಇಲ್ಲದೆ ಸಾತ್ವಿಕ ಆಹಾರ ಮತ್ತು ನೈವೇದ್ಯದೊಡನೆ ಈ ಜಾತ್ರೆಯನ್ನು ಬೇಡ ನಾಯಕರು ನೆರವೇರಿಸುತ್ತಾರೆ. ದೇವರಿಗೆ ಭಕ್ತರು ತರುವ ಮೀಸಲು ನೈವೇದ್ಯ ಪದಾರ್ಥಗಳೆಂದರೆ ಹಾಲು, ತುಪ್ಪ ಮತ್ತು ಆ ವರ್ಷ ಬೆಳೆದ ಹೊಸ ಧಾನ್ಯವಾದ ಹುರುಳಿ ಮತ್ತು ಜೋಳ. ಇದರೊಂದಿಗೆ ಬಾಳೆಯ ಹಣ್ಣು ಮತ್ತು ಬೆಲ್ಲ ಸೇರಿರುತ್ತದೆ.

ಮ್ಯಾಸನಾಯಕರ ಹನ್ನೆರಡು ದೇವರುಗಳಿಗೆ ಅರ್ಪಿಸುವ ಹಾಲು, ತುಪ್ಪ ಮತ್ತು ದವಸಧಾನ್ಯ ನೈವೇದ್ಯ ಕ್ರಮವನ್ನು ನೋಡಿದರೆ ವೇದದ ಒಂದೆರಡು ಸಂಗತಿಗಳನ್ನು ಇದು ಹೋಲುವಂತಿದೆ. ವೇದಗಳ ಕಾಲದಲ್ಲಿ ನಾನಾ ವಿಧದ ದೇವತೆಗಳ ಪ್ರಸ್ತಾಪ ಮಾಡಿ, ಈ ದೇವತೆಗಳು ಸಂಖ್ಯೆಯಲ್ಲಿ ಮೂವತ್ತಮೂರು, ಭೂಮಿಯಲ್ಲಿ ಹನ್ನೊಂದು, ಅಂತರಿಕ್ಷದಲ್ಲಿ ಹನ್ನೊಂದು, ಆ ಅಂತರಿಕ್ಷದ ಮೇಲೆ 'ದ್ಯೌ' ಎಂಬ ಸ್ವರ್ಗದಲ್ಲಿ ಹನ್ನೊಂದು ಎಂದಿದ್ದು, ಈ ದೇವತೆಗಳ ಆಚಾರ ವಿಚಾರ ಎಲ್ಲವೂ ಮನುಷ್ಯರಂತೆಯೇ. ಮನುಷ್ಯರಿಗೆ ಪ್ರಿಯವಾದ ತುಪ್ಪ, ಹಾಲು, ದವಸಧಾನ್ಯ ಆ ದೇವತೆಗಳಿಗೂ ಪ್ರಿಯ ಎಂಬ ಮಾತು ಬರುತ್ತದೆ. ಇದನ್ನು ನೋಡಿದರೆ ಋಗ್ವೇದದ ಈ ಅಭಿಪ್ರಾಯಕ್ಕೆ ಮೂಲ ಆಗ ಪ್ರಚಲಿತವಾಗಿದ್ದ ಆಚರಣೆಗಳೇ

ಇದ್ದಿರಬೇಕು ಎನ್ನಿಸುತ್ತದೆ. ಹೀಗೆಯೇ ಗಮನಿಸುತ್ತ ಹೋದಲ್ಲಿ ಜನಪದ ಸಂಸ್ಕೃತಿಗೂ, ಶಿಷ್ಟವರ್ಗದ ಮಾರ್ಗ ಸಂಸ್ಕೃತಿಗೂ ಅನೇಕಾನೇಕ ಸಂಗತಿಗಳಲ್ಲಿ ಅಂತರ್ ಸಂಬಂಧವಿರುವಂತೆ ಕಾಣಿಸುತ್ತದೆ.

ಕಂಪಳದೇವರಹಟ್ಟಿ ಮ್ಯಾಸನಾಯಕರ ವಿಷ್ಣು ದೇವತೆ ಸಂಬಂಧದ ಜಾತ್ರೆಯಲ್ಲಿ ಪ್ರಮುಖ ಪಾತ್ರ ವಹಿಸುವವರು ದಾಸಪಂಥದ ಬೆಡಗಿನವರು. ಕಂಪಳರಂಗದೇವತೆಯಿಂದ ಸುಮಾರು ಅರ್ಧ ಫರ್ಲಾಂಗ್ ದೂರಕ್ಕೆ ಪಾಪನಾಯಕ ದೇವರು ಜಗಳೂರಿನಿಂದ ಬಂದು ನೆಲೆಗೊಂಡಿರುತ್ತದೆ. ಈ ಎರಡು ದೇವತೆಗಳನ್ನು ಬಿಟ್ಟರೆ ಅಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವುದು ದೇವರಿಗೆ ಬಿಟ್ಟ ದೇವರೆತ್ತುಗಳು. ಈ ದೇವರೆತ್ತುಗಳು ಮ್ಯಾಸಮಂಡಲಿಯವರು ಹರಕೆ ಮಾಡಿಕೊಂಡು ಬಿಟ್ಟ ದನಕರುಗಳಾಗಿರುತ್ತವೆ. ಹಾಗೆ ಹರಕೆ ಕಟ್ಟಿಕೊಂಡು ಆಯಾ ಹಟ್ಟಿಯವರೆಲ್ಲ ಬಿಟ್ಟ ರಾಸುಗಳು ಒಂದು ಗುಂಪಾಗಿ ಆ ಗುಂಪನ್ನು ಯಾವುದೋ ಒಂದು ಅರಣ್ಯದಲ್ಲಿ ಬಿಟ್ಟು, ದನದ ಗೂಡು ಹಾಕಿಕೊಂಡು ಮೇಯಿಸಲು ಮೂರ್ನಾಲ್ಕು ಜನ ವ್ಯಕ್ತಿಗಳು ನೇಮಿಸಲ್ಪಡುತ್ತಾರೆ. ಅವರನ್ನು ಮ್ಯಾಸನಾಯಕರು ಎತ್ತಿನ ಕಿಲಾರಿಗಳೆಂದು ಕರೆಯುತ್ತಾರೆ. ಈ ಕಿಲಾರಿ ಎಂಬ ಪದ ಪಶುಸಮೂಹ, ಹಾಲು ಕರೆಯುವಿಕೆ, ಕ್ಷೀರಾಗಾರ, ಗೋಶಾಲೆ, ಗೋವುಗಳನ್ನು ಕಾಯುವವರು ಈ ಅರ್ಥಗಳನ್ನೆಲ್ಲ ಕೊಡುತ್ತದೆ. ಎಚ್.ಎಲ್.ನಾಗೇಗೌಡ ಅವರು ಸೋಬಾನೆ ಚಿಕ್ಕಮ್ಮನ ಪದಗಳು ಕೃತಿಯಲ್ಲಿ

ಕೋಳಿ ಕೂಗಿತು ಮೂಡು ಕೆಂಪೇರಿತು
ಏಳೆ ಈ ಕೋಟಿ ಬೆಳಗಾದೋ ನಿನ್ನಟ್ಟಿ
ಕೀಲಾದವೆಮ್ಮ ಕರ ಉಂಡೋ ಸುವ್ವಿ

ಎಂದು ಬರುತ್ತದೆ. ಈ ಪದ್ಯದ ಮೂರನೇ ಸಾಲಿನ ಕಿಲಾದ ಪದಕ್ಕೆ ಲೇಖಕರು ಹಾಲು ಕರೆಯುವ ಎಮ್ಮೆ ಎಂಬ ಅರ್ಥ ಕೊಟ್ಟಿದ್ದಾರೆ. ಕನ್ನಡ ನಿಘಂಟಿನಲ್ಲಿಯೂ ಸಹ ಕಿಲಾರ ಎಂಬ ಪದಕ್ಕೆ ಹಾಲಿನ ಮನೆ, ಹೈನುಶಾಲೆ, ಗೋವುಗಳ ಶಾಲೆ ಎಂಬ ಅರ್ಥವಿದೆ. ಇದೇ ಪದವನ್ನು ಪ್ರಯೋಗಿಸಿ ತುರು ಕಾಯುವವರನ್ನು ಮ್ಯಾಸನಾಯಕರು ಕಿಲಾರಿ ಎಂದು ಕರೆದಿರುವಂತೆ ಕಾಣಿಸುತ್ತದೆ.

ಮೇಲೆ ಹೆಸರಿಸಿದ ಎತ್ತಿನ ಕಿಲಾರಿಗಳು ಅರಣ್ಯದಲ್ಲಿ ದನಕರುಗಳನ್ನು ಕಾಯಲು ನಿಯಮದಂತೆ ದೀಕ್ಷೆ ಪಡೆಯಬೇಕು. ಹದಿನೈದನೆ ವಯಸ್ಸಿನಲ್ಲಿ ಒಬ್ಬ ಕಿಲಾರಿಯು ತಾನು ದೇವರೆತ್ತುಗಳನ್ನು ಕಾಯುವವನೆಂದು ದೀಕ್ಷೆ ಪಡೆದರೆ ಅವನು ಜೀವನಪರ್ಯಂತ ಕಿಲಾರಿಯಾಗಿಯೇ ಇರಬೇಕಾಗುತ್ತದೆ. ಆದರೆ ಆ ಸಂಪ್ರದಾಯದಂತೆ ವಿವಾಹವಾಗಬಹುದು. ವಿವಾಹವಾದ ಸಂದರ್ಭದಲ್ಲಿಯೂ ಆತ ಅರಣ್ಯದಲ್ಲಿಯೇ ದನಕರುಪಾಲಕನಾಗಿದ್ದು, ಆಗಾಗ್ಗೆ ಮಾತ್ರ ತನ್ನ ಸಂಸಾರ ವಾಸಿಸುವ ಹಟ್ಟಿಯ ಕಡೆ ಬರಲು ಅವಕಾಶವಿರುತ್ತದೆಯೇ ಹೊರತು, ಆತನು ಸಂಪೂರ್ಣವಾಗಿ ಹೆಂಡತಿ ಮಕ್ಕಳು ಇರುವ ಕಡೆಯೇ ನೆಲೆಯಾಗಿ ನಿಲ್ಲುವಂತಿಲ್ಲ.

ಆದರೆ ಅವನು ತನ್ನ ಅರಣ್ಯ ಜೀವನಕ್ಕಾಗಿ, ಹಟ್ಟಿಯಲ್ಲಿ ಅವನನ್ನು ನಂಬಿಕೊಂಡಿರುವ ಸಂಸಾರಕ್ಕಾಗಿ ಪ್ರತಿಯೊಂದು ಹಟ್ಟಿಯ ಮ್ಯಾಸನಾಯಕರೂ ಆತನಿಗೆ ದವಸ ಧಾನ್ಯವನ್ನು ಸಾಕಷ್ಟು ಕೊಡುವುದುಂಟು. ಅತ್ತ ಕಾಡಿನಲ್ಲಿ ಹಸುಗಳು ಕರೆಯುವ ಹಾಲು ಹೈನನ್ನು ಅವನ ಸ್ವಂತಕ್ಕೆ ಉಪಯೋಗಿಸಿಕೊಳ್ಳಬಹುದು. ಹೀಗೆ ದೇವರುಗಳಿಗಾಗಿಯೇ ಬಿಟ್ಟ ಹಸು ಎತ್ತುಗಳನ್ನು ಕಾಯಲು ಕಿಲಾರಿಗಳು ಅಲ್ಲಲ್ಲಿ ಗುಂಪು ಗುಂಪಾಗಿ ವಾಸಿಸುವುದನ್ನು ಈಗಲೂ ಚಳ್ಳಕೆರೆ ಮೊಳಕಾಲ್ಮೂರು ತಾಲ್ಲೂಕುಗಳ ಅಳಿದುಳಿದ ಅರಣ್ಯ ಭಾಗಗಳಲ್ಲಿ ಕಾಣಬಹುದಾಗಿದೆ.

ಒಂದು ಕಾಲಕ್ಕೆ ಇಡೀ ಬುಡಕಟ್ಟೇ ಸಾವಿರಾರು ಸಂಖ್ಯೆಯಲ್ಲಿ ದನಕರುಗಳನ್ನು ಪೋಷಿಸುವ ವೃತ್ತಿಯಲ್ಲಿದ್ದು ಕಾಲಕ್ರಮೇಣ, ಜೀವನಕ್ರಮ ಬದಲಾದಂತೆಲ್ಲ ವೃತ್ತಿ ಮೂಲಗಳು ವ್ಯತ್ಯಾಸ ಗೊಂಡಂತೆಲ್ಲ ಮ್ಯಾಸನಾಯಕರು, ಗೊಲ್ಲರು ತಮ್ಮ ಆಸ್ತಿ ಎಂದು ಭಾವಿಸಿದ್ದ ದನಕರುಗಳ ಗುಂಪು ಕರಗಿ, ಈಗ ಪಶುಪಾಲನೆ ಕೇವಲ ಸಾಂಕೇತಿಕವಾಗಿ ಮಾತ್ರ ಉಳಿದುಕೊಂಡಂತೆ ಕಾಣಿಸುತ್ತದೆ. ನಾಯಕನಹಟ್ಟಿಯ ಬಖೈರಿನಲ್ಲಿ ಆರಂಭಕ್ಕೆ ಉಲ್ಲೇಖವಾಗುವ ಮಾತು ಕಾಟಮಲ್ಲಿನಾಯಕನು ಏಳು ಜನ ತಮ್ಮಂದಿರೊಡನೆ ಐನೂರು ಜನ ಮ್ಯಾಸಬೇಡರೊಡನೆ ಒಂದು ಲಕ್ಷ ಕಂಪಳ ಇಟ್ಟುಕೊಂಡಿದ್ದ ಎಂದು ಬರುತ್ತದೆ. ಇಲ್ಲಿ ಒಂದು ಲಕ್ಷ ಗೋವುಗಳು ಎಂಬುದು ಉತ್ಪ್ರೇಕ್ಷೆಯಾದರೂ ಅಸಂಖ್ಯಾತ ಗೋಸಂಪತ್ತನ್ನು ಹೊಂದಿದ್ದನೆಂದು ಊಹಿಸ ಬಹುದಾಗಿದೆ. ಸಾಮಾನ್ಯವಾಗಿ ಗಾದರಿಪಾಲನಾಯಕನ ಕಥೆ ಹೇಳುವಾಗಲೂ ವಕ್ತೃಗಳು ಒಂದು ಲಕ್ಷ ಬಣ್ಣ ಬಣ್ಣದ ಗೋವು ಇಟ್ಟುಕೊಂಡು ಮಿಂಚೇರಿ ಅರಣ್ಯದಲ್ಲಿ ವಾಸವಾಗಿದ್ದನೆಂದು ಹೇಳುತ್ತಾರೆ. ಹೀಗೆ ಅಪಾರ ಸಂಖ್ಯೆಯಲ್ಲಿ ದನಕರುಗಳನ್ನು ಕಾಯುತ್ತಿದ್ದ ಮ್ಯಾಸನಾಯಕರ ವೃತ್ತಿ ಬೇಟೆಗಿಂತಲೂ ಮುಖ್ಯವಾಗಿ ಪಶುಪಾಲನೆಯೇ ಆಗಿತ್ತು. ಈ ಪಶುಸಂಪತ್ತನ್ನು ಹೆಚ್ಚಿಸಿ ಕೊಳ್ಳಲು ಆಗಾಗ ಹಳ್ಳಿ, ಊರು, ದೊಡ್ಡ ದೊಡ್ಡ ಗ್ರಾಮಗಳ ಕಡೆಯೂ ಹೋಗಿ ದನಕರುಗಳನ್ನು ಕದ್ದಾದರೂ ಹೊಡೆದುಕೊಂಡು ಬರುತ್ತಿದ್ದರೆಂದು ಕಾಣುತ್ತದೆ.

ಅಷ್ಟೊಂದು ಗೋಸಮೃದ್ಧಿಯನ್ನು ಹೊಂದಿರುತ್ತಿದ್ದ ನಾಯಕರು ಈಗ ಆ ಸಂಪತ್ತನ್ನು ಸಂಕೇತ ಮಾತ್ರದಲ್ಲಿ ಉಳಿಸಿಕೊಂಡು ಜಾತ್ರೆ ಉತ್ಸವಗಳಲ್ಲಿ ಅವುಗಳನ್ನು ಕುಲದೇವತೆಯೆಂದು ಪೂಜಿಸಿ ಮೆರವಣಿಗೆ ಮಾಡುತ್ತ, ತಾವೂ ನಾಗರಿಕ ಸಮಾಜಕ್ಕೆ ಹೊಂದಿಕೊಳ್ಳುತ್ತ ಬೇರೆ ಬೇರೆ ವೃತ್ತಿಗಳನ್ನು ಹಿಡಿಯಲು ಪ್ರಯತ್ನಿಸುತ್ತಿದ್ದಾರೆ. ಹಾಗೆ ದೇವರಿಗೆಂದು ಬಿಟ್ಟ ಎತ್ತುಗಳು ಮೊಳಕಾಲ್ಮೂರು ತಾಲ್ಲೂಕು ಬಿ.ಜಿ.ಕೆರೆಯ ಕಮರದ ಕಾನನದಲ್ಲಿ ಮುನ್ನೂರು ಇವೆ. ಕೂಡ್ಲಿಗಿ ತಾಲ್ಲೂಕು ಗುಡೇಕೋಟೆಯ ಅಪ್ಪೇನಹಳ್ಳಿ ಸರಹದ್ದಿನ ಅಡವಿಯಲ್ಲಿ ನೂರು ಎತ್ತುಗಳಿವೆ. ಇವನ್ನು ದೊಡ್ಡಸೂರನಾಯಕನ ಎತ್ತುಗಳೆಂದು ಕಂಪಳದೇವರಹಟ್ಟಿ ಹತ್ತಿರದ ಕಮರದ ಕಾಡಿನಲ್ಲಿ ಪಾಪನಾಯಕನ ಎತ್ತುಗಳೆಂದು ಕರೆಸಿಕೊಳ್ಳುವ ಸುಮಾರು ಐವತ್ತು ಎತ್ತುಗಳು ಇವೆ. ಕೂಡ್ಲಿಗಿ ತಾಲ್ಲೂಕು ತಿಮ್ಮನಹಳ್ಳಿ ಅಡವಿಯಲ್ಲಿ ಕಂಪಳರಂಗಸ್ವಾಮಿ ಎತ್ತುಗಳು ನಲವತ್ತೈದು ಇವೆ.

ಬೋಸೆದೇವರಹಟ್ಟಿಯಲ್ಲಿ ಮೂವತ್ತು ದೇವರೆತ್ತುಗಳಿವೆ. ನಲಗೇತಹಟ್ಟಿಯಲ್ಲಿ ಇನ್ನೂರು ದೇವರೆತ್ತುಗಳಿವೆ.

ಕಂಪಳದೇವರಹಟ್ಟಿಯಲ್ಲಿ ಜಾತ್ರೆ ನಡೆಯುವಾಗ ಈ ದೇವರೆತ್ತುಗಳೆಲ್ಲ ಅಲ್ಲಿಗೆ ಬರಬೇಕು. ಆದರೆ ಸುತ್ತಣ ಪರಿಧಿಯ ಹತ್ತಿಪ್ಪತ್ತು ಮೈಲಿಗಳಿಂದ ದನಕರುಗಳನ್ನು ಸಾಗಿಸಿಕೊಂಡು ಬರುವುದು ಕಷ್ಟವಿರುವುದರಿಂದ ಹತ್ತಿರವೇ ಇರುವ ಬಿ.ಜಿ.ಕೆರೆಯ ಕಮರದ ಕಾನನದಿಂದ ದೇವರೆತ್ತುಗಳನ್ನು ಹೊರಡಿಸಿಕೊಂಡು ಬಂದು ಪಾಪನಾಯಕನ ಗುಡಿಯಿಂದ ಕಂಪಳರಂಗನ ಗುಡಿಯವರೆಗೆ ಮೆರವಣಿಗೆ ಹೊರಡಿಸುವರು. ಜಾತ್ರೆಯ ಮೈದಾನದಲ್ಲಿ ಇವೆರಡೂ ಗುಡಿಗಳು ಪರಸ್ಪರ ಒಂದು ಫರ್ಲಾಂಗು ಅಂತರದಲ್ಲಿರುತ್ತವೆ. ದೇವರೆತ್ತುಗಳನ್ನು ಒಂದು ಗುಡಿಯಿಂದ ಇನ್ನೊಂದು ಗುಡಿಯವರೆಗೆ ಮೆರವಣಿಗೆ ಹೊರಡಿಸುವುದೇ ಜಾತ್ರೆಯ ಮುಖ್ಯ ಅಂಗ. ಎತ್ತುಗಳ ಮೆರವಣಿಗೆ ಮುಗಿದ ಮೇಲೆ ಜಾತ್ರೆಯೇ ಮುಗಿದಂತೆ. ಲೆಕ್ಕದಂತೆ ಕಂಪಳದೇವರ ಜಾತ್ರೆ ನಡೆಯುವುದು ಒಟ್ಟು ಒಂಬತ್ತು ದಿನಗಳ ಕಾಲ. ಜಾತ್ರೆ ನಡೆಯುವ ಕಾಲದಲ್ಲೆಲ್ಲ ದೇವರ ಮುಂದೆ ಬೆಂಕಿಯನ್ನು ಉರಿಸಿ ಬೆಳಕು ಮಾಡುತ್ತಾರೆ. ತಮ್ಮ ದೇವರು 'ಬೆಂಕಿ ಬೆಳಕಿನ ದೇವರು', ಬೇರೆ ಯಾವುದೇ ರೀತಿಯ ಬೆಳಕು ದೇವರ ಮುಂದೆ ಬರಕೂಡದು, ಅದು ನಿಷಿದ್ಧ ಎನ್ನುವರು.

ಜಾತ್ರೆಯಲ್ಲಿ ಇನ್ನೊಂದು ಮುಖ್ಯ ಆಕರ್ಷಣೆ ಎಂದರೆ ದಾಸರಿ ಬೆಡಗಿನ ಜನ ಬೆಂಕಿ ಹೊತ್ತ ಪಂಜುಗಳನ್ನು ಬಾಯಲ್ಲಿ ನುಂಗಿ ಆರಿಸುವುದು. ಈ ಜಾತ್ರೆಯ ಆಚರಣೆಯಲ್ಲಿ ದಾಸರದೇ ಪ್ರಮುಖ ಪಾತ್ರ ಎಂಬ ವಿಚಾರವನ್ನು ಆರಂಭಕ್ಕೆ ಪ್ರಸ್ತಾಪಿಸಲಾಗಿದೆ. ಅವರು ದೇವರೆತ್ತುಗಳು ಮೆರವಣಿಗೆ ಹೊರಡುವ ಹಿಂದಿನ ರಾತ್ರಿ ಸುಮಾರು ಹತ್ತು ಘಂಟೆಯ ಹೊತ್ತಿಗೆ ಈ ಪಂಜಿನ ಕವಾಯತನ್ನು ನಡೆಸುವರು. ದೇವರ ಮುಂದೆ ಉರಿಯುವ ದೀವಟಿಗೆಯಿಂದ ಪಂಜು ಹಚ್ಚಿಕೊಂಡು ಜನಸಮೂಹದತ್ತ ಓಡಿ ಬರುವರು. ಹೀಗೆ ಓಡುತ್ತ ಆವೇಶಭರಿತರಾಗಿ ಉರಿಯುವ ಪಂಜನ್ನು ಬಾಯಿಗಿಟ್ಟುಕೊಳ್ಳಲು ಅದು ಬಾಯೊಳಗೇ ಕೆಟ್ಟುಹೋಗುವುದು. ಕಂಪಳದೇವರಹಟ್ಟಿ ಜಾತ್ರೆಯಲ್ಲಿ ದೇವರೆತ್ತುಗಳ ಮೆರವಣಿಗೆ ಹೊರಡುವುದು, ದಾಸರಿಬೆಡಗಿನವರ ಪಂಜಿನ ಕವಾಯತು ಈ ಎರಡೂ ಮುಖ್ಯ ಪ್ರಸಂಗಗಳು.

### ಮಾರಮ್ಮ

ಸಾಮಾನ್ಯವಾಗಿ ಕರ್ನಾಟಕದ ಎಲ್ಲಾ ಗ್ರಾಮ ಹಾಗೂ ಊರುಗಳಲ್ಲಿ ಕಾಣಬರುವ ಶಕ್ತಿ ದೇವತೆಯ ಅವತಾರ ಎಂದು ನಂಬಲಾದ ಒಂದು ಗ್ರಾಮದೇವತೆ. ಗ್ರಾಮದ ಹೊರಗೆ ನೆಲೆಸಿರುವ ಈ ದೇವತೆ ಆ ಗ್ರಾಮಕ್ಕೆ ಒದಗುವ ಕೆಡಕುಗಳು, ಈತಿ ಬಾಧೆಗಳು, ಸಾಂಕ್ರಾಮಿಕ ಜಾಡ್ಯಗಳು ಮುಂತಾದವುಗಳನ್ನು ಪರಿಹರಿಸಿ ಗ್ರಾಮದಲ್ಲಿ ಶಾಂತಿ ನೆಮ್ಮದಿ ನೆಲೆಸುವಂತೆ ಮಾಡುವಳೆಂಬ ನಂಬಿಕೆ ಜನರಲ್ಲಿದೆ. ಈಕೆ ಮುನಿದರೆ ಗ್ರಾಮಕ್ಕೆ ಕೇಡೆಂದು ತಿಳಿದ ಜನ

ಈಕೆಯನ್ನು ಪ್ರಸನ್ನಳಾಗಿಸಲು ವರ್ಷಕ್ಕೊಮ್ಮೆ ಜಾತ್ರೆ ಮಾಡಿ ಸಂತೃಪ್ತಿಗಾಗಿ ಕುರಿ ಕೋಳಿ ಕೋಣಗಳ ಬಲಿ ಕೊಡುವ ಸಂಪ್ರದಾಯವಿದೆ. ಕಾನೂನಿನ ಆಡಚಣೆಯಿಂದಾಗಿ ಬಲಿ ಕೊಡುವುದು ಇತ್ತೀಚೆಗೆ ಕಡಿಮೆಯಾಗುತ್ತಿದೆ. ಉರಿಮಾರಿ, ಊರುಮಾರಿ, ಮೂಗುಮಾರಿ, ದೊಡ್ಡಮಾರಿ, ಒಳ್ಳೆಮಾರಿ, ಹೆಮ್ಮಾರಿ ಇತ್ಯಾದಿ ಭಿನ್ನರೂಪಗಳಲ್ಲಿಯೂ ಈ ದೇವತೆ ಪೂಜೆಗೊಳ್ಳುವುದುಂಟು. ಮಧ್ಯಕರ್ನಾಟಕದ ಹಳ್ಳಿಗಳಲ್ಲಿ ಮಾರಮ್ಮನ ಬಗ್ಗೆ ಇರುವ ನಂಬಿಕೆಗಳೇ ಈ ದೇವತೆ ಬಗ್ಗೆಯೂ ಪ್ರಚಲಿತವಿದೆ.

ಮಾರಿ ಎಂಬ ಶಬ್ದ ನಿಷ್ಪತ್ತಿಯ ಬಗ್ಗೆ ಅನೇಕ ಚರ್ಚೆಗಳು ನಡೆದಿವೆ. ಮಹೇಶ್ವರಿ ಎಂಬುದೇ ಮಾರಿ ಆಗಿದೆ ಎಂಬುದು ಒಂದು ವಾದ. ಈಕೆ ಶಕ್ತಿ ದೇವತೆಯಾದುದರಿಂದ, ದೇವಾನುದೇವತೆಗಳ ಎಲ್ಲ ರೀತಿಯ ಆಯುಧಗಳಿಂದಲೂ ಶಕ್ತಿಯಿಂದಲೂ ರೌದ್ರಾವತಾರ ಪಡೆದು ಮಹಿಷಾಸುರನನ್ನು ಕೊಂದು ಚಾಮುಂಡೇಶ್ವರಿಯಾದ ಇವಳನ್ನು ಮಹಾಮಾರಿ ಎಂದು ಪರಿಗಣಿಸಿ ಅದರಿಂದಲೇ ಮಾರಿ ಶಬ್ದ ನಿಷ್ಪತ್ತಿಯಾಗಿದೆ ಎಂಬುದು ಇನ್ನೊಂದು ವಾದ. ಚಿತ್ರದುರ್ಗ ಪರಿಸರದಲ್ಲಿ ಗೌರಸಮುದ್ರಮಾರಮ್ಮನ ವಿಗ್ರಹದಲ್ಲಿ ರುಂಡದ ಭಾಗ ಮಾತ್ರ ಕಾಣಬರುವುದಕ್ಕೆ ಒಂದು ಪಾಠಾಂತರ ಹೀಗಿದೆ: ಪರಶುರಾಮ ತಂದೆಯಿಂದ ಆಜ್ಞಪ್ತನಾಗಿ ತಾಯಿಯನ್ನು ಕೊಲ್ಲಲು ಸಿದ್ಧನಾದಾಗ ಮಗನ ಪಿತೃಭಕ್ತಿಯನ್ನು ಅರಿತಿದ್ದ ರೇಣುಕಾದೇವಿ ಈತ ಇತರ ಮಕ್ಕಳಂತಲ್ಲದೆ ತನ್ನನ್ನು ಕೊಂದೇ ಬಿಡುತ್ತಾನೆಂದು ನಂಬುತ್ತಾಳೆ. ಆಗ ಈತನ ಮನಸ್ಸನ್ನು ಕರುಣರಸದ ಕಡೆಗೆ ಒಯ್ಯಲು ಯತ್ನಿಸುತ್ತಾಳೆ. ಇಲ್ಲಿ ಪರಶುರಾಮ ಬಳಸುವುದು ಗಂಡುಗೊಡಲಿಯಲ್ಲ. ಇಬ್ಬಾಯಕತ್ತಿ. ಎರಡು ಅಂಚಿನ ಅಲಗಿನಿಂದ ಕತ್ತರಿಸಬಹುದಾದಂಥ ಕತ್ತಿ ಹಿಡಿದು ನಿಂತ ಮಗನನ್ನು ಪರಿಪರಿಯಾಗಿ ಹಾಗೆ ಮಾಡಬೇಡವೆಂದು ಕೇಳಿಕೊಂಡರೂ ಆತ ಒಪ್ಪುವುದಿಲ್ಲ. ಕೊನೆಯ ಅಸ್ತ್ರವಾಗಿ ರೇಣುಕಾದೇವಿ 'ಲೋ ಮಗು ನಾನು ನಿನ್ನನ್ನು ಹೆತ್ತವಳು. ನಿನ್ನ ಅಮ್ಮ ಕಣೋ' ಎಂದು ಹೇಳಿದಾಗ, ಎಲ್ಲಿ ತನ್ನನ್ನು ವಿಚಲಿತನನ್ನಾಗಿ ಮಾಡಿಬಿಡುತ್ತಾಳೋ ಎಂದು ಭಾವಿಸಿ 'ಅಮ್ಮ? ಎಲ್ಲಿ ಅಮ್ಮ?' ಎಂದು ರೇಗಿ ಕಚಕ್ಕನೆ ತಾಯಿಯ ಶಿರವನ್ನು ಕತ್ತರಿಸುತ್ತಾನೆ. ಈ ಆಘಾತದಿಂದ ಆತ ಎಚ್ಚೆತ್ತುಕೊಳ್ಳುವ ಮೊದಲೇ 'ಇಲ್ಲಿ ಅಮ್ಮ' ಎಂಬ ಕೂಗು ಕೇಳಿಸುತ್ತದೆ–ನೋಡುತ್ತಾನೆ. ಅಮ್ಮ ನಗುತ್ತ ನಿಂತಿದ್ದಾಳೆ. ಒಂದು ತಲೆ ಕೆಳಗೆ ಬಿದ್ದಿದೆ. ಕತ್ತಿಯನ್ನು ಮತ್ತೆ ಹಿಂದಕ್ಕೆ ಮುಂದಕ್ಕೆ ಬೀಸುತ್ತಾನೆ. ಎರಡು ಸಲಕ್ಕೆ ಎರಡು ತಲೆಗಳು ಉರುಳುತ್ತವೆ. ಮತ್ತೆ ತಿರುಗಿ ನೋಡುತ್ತಾನೆ. 'ಇಲ್ಲಿ ಅಮ್ಮ' ಎಂದು ಹೇಳುತ್ತ ರೇಣುಕಾದೇವಿ ನಗುತ್ತ ನಿಂತಿದ್ದಾಳೆ. ಪರಶುರಾಮನಿಗೆ ಪಿತ್ತ ನೆತ್ತಿಗೇರುತ್ತದೆ. ತಂದೆಯ ಆಜ್ಞೆಯನ್ನು ಪಾಲಿಸಲು ಆಗುತ್ತಿಲ್ಲವಲ್ಲ ಎಂಬ ಸಂಕಟ ಬೇರೆ. ಎಲ್ಲಿ ಅಮ್ಮ? ಅಮ್ಮ ಎಲ್ಲಿ? ಎಲ್ಲಿ ಅಮ್ಮ? ಎಂದು ಹೇಳುತ್ತ ಕತ್ತಿಯನ್ನು ಎರಡು ದಿಕ್ಕಿನಲ್ಲಿ ಬೀಸತೊಡಗುತ್ತಾನೆ. ಆ ಇಬ್ಬಾಯಿ ಕತ್ತಿ ಹೋಗುತ್ತಾ ಬರುತ್ತ ಹೀಗೆ ಎರಡು ಅಲಗಿನಿಂದ ತಲೆಗಳು ಉರುಳುತ್ತವೆ. ಹೀಗೆ ನೂರಾರು

ತಲೆಗಳು ಉರುಳಿ ರಾಶಿಯಾಗುತ್ತವೆ. ಸಾಕ್ಷಾತ್ ಆದಿಶಕ್ತಿ ಎನಿಸಿದ ರೇಣುಕಾದೇವಿಯ ತಲೆಗಳೇ ಅವೆಂದು ತಿಳಿದು ಪರಶುರಾಮ ಆ ತಲೆಗಳು ಪ್ರತಿಯೊಂದು ಹಳ್ಳಿಗೂ ಹೋಗಿ ನೆಲೆಸಿ ಪೂಜೆಗೊಳ್ಳುವಂತೆ ವರ ನೀಡುತ್ತಾನೆ. ಆ ತಲೆಗಳೇ ಇಂದು ಎಲ್ಲೆಲ್ಲೂ ಪೂಜೆಗೊಳ್ಳುತ್ತಿರುವ ಮಾರಮ್ಮ ಎಂಬ ಅಭಿದಾನ ಪಡೆದ ಗ್ರಾಮದೇವತೆಗಳು.

ಬ್ರಾಹ್ಮಣ ಕನ್ಯೆಯಾದ ಮಾರಮ್ಮ ಮೋಸ ಹೋಗಿ ಕೀಳು ಜಾತಿಯವನೊಬ್ಬನನ್ನು ಮದುವೆಯಾಗಿ ನಿಜ ಸಂಗತಿ ತಿಳಿದಾಗ ಗಂಡನನ್ನು ಹೊರಹಾಕಿದಳೆಂದು ಹೇಳುವ ಒಂದು ಕಥೆ ಹೀಗಿದೆ. ಕೆರೆಯ ಏರಿಯ ಮೇಲಿನ ಹೊಂಗೆಯ ಮರ ಏರಿ ಕುಳಿತಿದ್ದ ತಲಪಟ್ಟರಾಯ ಎಂಬ ಅಸ್ಪೃಶ್ಯ ಹೈದನೊಬ್ಬ ನೀರು ಮೊಗೆಯಲು ಬಂದ ಹಾರವರ ಮಗಳು ಮಾರಮ್ಮನನ್ನು ಕಂಡು ಮೋಹಿತನಾದ. ಏನಾದರೂ ಮಾಡಿ ಮಾರಮ್ಮನನ್ನು ಮದುವೆಯಾಗಬೇಕೆಂದು ಮನಸ್ಸು ಮಾಡಿದ. ಆ ಹೈದ ನಡೆನುಡಿಯಲ್ಲಿ ಬ್ರಾಹ್ಮಣಿಕೆಯನ್ನು ರೂಢಿಸಿಕೊಂಡು ಮಾರಮ್ಮನ ತಂದೆಯನ್ನು ಮರುಳುಮಾಡಿ ಮದುವೆಗೆ ಒಪ್ಪಿಸಿದ. ಮಾರಮ್ಮನಿಗೂ ತಲಪಟ್ಟರಾಯನಿಗೂ ಮದುವೆ ಆಯಿತು.

ಮಾರಮ್ಮ ದಿನಕ್ಕೊಂದು ಬಗೆಯ ಅಡುಗೆ ಮಾಡಿ ಇಕ್ಕುತ್ತಿದ್ದಳು. ತಲಪಟ್ಟರಾಯ ಉಂಡು ಸುಖವಾಗಿದ್ದ. ಒಂದು ದಿನ ಮಾರಮ್ಮ ನಾಮದಲಗೆ ಎಂಬ ಸಿಹಿ ತಿಂಡಿ ಮಾಡಿದಳು. ಅದನ್ನು ಕಂಡು ಇದು ಎಂಥ ತಿಂಡಿ ಎಂದು ಕೇಳಿದ, ನಾಮದಲಗೆ ಎಂದಳು. 'ಎಂಥಾ ಹಲಗೆ ತಿಂದರೇನು, ಕೋಣನ ನಾಲಗೆ ತಿಂದಂಗಾದತಾ!' ಎಂದ. ಆಕೆಗೆ ಸಂಶಯ ಬಂದು ಈತ ಬ್ರಾಹ್ಮಣನೋ ಅಲ್ಲವೋ ಎಂದು ತಿಳಿಯುವ ಸಲುವಾಗಿ ಒಂದು ಉಪಾಯ ಹೂಡಿದಳು. ಗಂಡನ ಕೈಗೆ ಒಂದು ಕಾಸು ಕೊಟ್ಟು ಅದರಲ್ಲಿ ಎಲೆ, ಕಾಳು, ಹೂವು, ಎಣ್ಣೆ, ಸೌದೆ ಕೊಂಡುಕೊಂಡು ಕಾಸನ್ನು ಹಿಂದಕ್ಕೆ ತರುವಂತೆ ಹೇಳಿದಳು. ಅದು ಅವನಿಂದ ಸಾಧ್ಯವಾಗಲಿಲ್ಲ. ಆಗ ಆಕೆ ಬ್ರಾಹ್ಮಣನಲ್ಲ ಎಂದಳು. ಹೇಗೆ ಎಂದ. ನೀನು ಬ್ರಾಹ್ಮಣನೇ ಆಗಿದ್ದರೆ ಆ ಎಲ್ಲಾ ವಸ್ತುಗಳಿರುವ ಒಂದು ಎಳ್ಳಿನ ಗಿಡವನ್ನು ತರುತ್ತಿದ್ದೆ. ನೀನು ಬ್ರಾಹ್ಮಣನಲ್ಲ. ಮನೆಯೊಳಗೆ ಬರಬೇಡ ಎಂದು ಹೇಳಿ ಅವನನ್ನು ಹೊರಗೆ ಅಟ್ಟಿ ಕದ ಹಾಕಿಕೊಂಡಳು.

ಮನೆಯಾಚೆ ಕುಳಿತ ತಲಪಟ್ಟರಾಯ ಮಾರಮ್ಮ ಮತ್ತೆ ಕದ ತೆರೆಯಬಹುದು ಎಂದು ಕಾದ. ಕಾಯುತ್ತ ಕುಳಿತೇಬಿಟ್ಟ. ವಿಷಯ ತಿಳಿದ ಅವನ ತಾಯಿ ಬಂದು ನೋಡಿದಳು. ಮಗನ ತಲೆ ಬಿಸಿಲಿನ ಝಳದಲ್ಲಿ ಬೇಯುತ್ತಿದ್ದುದನ್ನು ಕಂಡು ಕೈಯೆಣ್ಣೆ ತಂದು ತಲೆಗೆ ಒತ್ತಿದಳು. ಕದ ತೆರೆಯುವಳೆಂದು ಕಾದು ಕಾದು ಸಾಕಾಗಿ ಕೋಪಗೊಂಡ ತಲಪಟ್ಟರಾಯ ಎಮ್ಮೆ, ಕೋಣ, ಕುರಿ, ಕೋಳಿ ಮುಂತಾದ ಪ್ರಾಣಿಗಳನ್ನು ಹಿಡಿದು ತಂದು ಮಾರಮ್ಮನ ಮನೆ ಮುಂದೆ ಕತ್ತರಿಸಿ ಎಸೆಯತೊಡಗಿದ. ಅವನು ಏನು ಮಾಡುತ್ತಿದ್ದಾನೆ ಎಂದು ಇಣಿಕಿ ನೋಡಿದಾಗ ಮಾರಮ್ಮನ

ಹಣೆಗೆ ಕೋಣನ ರಕ್ತ ಹಾರಿತು. ಆಗ ಕೋಪಗೊಂಡ ಮಾರಮ್ಮ ಕಲ್ಲಾಗಿ ಹೋಗು ಎಂದು ಶಾಪ ಕೊಟ್ಟಳು. ಪ್ರತಿ ಮಾರಮ್ಮನ ಗುಡಿ ಮುಂದೆ ಮೋಟಾದ ಒಂದು ಕಲ್ಲುಕಂಬ ಕಾಣಬಹುದು(ಇದನ್ನು ಬಿಸಿಲುಮಾರಿ ಎಂದು ಕರೆಯುವುದುಂಟು) ಮಾರಿಗುಡಿಯ ಮುಂದೆ ಪ್ರಾಣಿಗಳನ್ನು ಬಲಿ ಕೊಡುವ ಜನ ಆ ಕಂಬದ ನೆತ್ತಿಗೆ ಎಣ್ಣೆ ಸುರಿಯುವುದು ರೂಢಿಯಲ್ಲಿದೆ. 'ಮಾರಮ್ಮನಿಗೆ ಗಂಡ ಇಲ್ಲ. ತಲಪಟ್ಟರಾಯನಿಗೆ ಹೆಂಡ್ರಿಲ್ಲ' ಎಂಬ ಮಾತು ಗಾದೆಯ ಮಾತಾಗಿದೆ. ಇದೇ ಮಾತು ಮಾರಮ್ಮನಿಗೆ ಗಂಡ ಇಲ್ಲ, ಬೋರೆದೇವರಿಗೆ ಹೆಂಡ್ರಿಲ್ಲ ಎಂದೂ ಬಳಕೆಯಲ್ಲಿದೆ(ಮಾರಮ್ಮನ ಗುಡಿ ಸಮೀಪದಲ್ಲೇ ಬೋರೆ ದೇವರಗುಡಿ ಇರುವುದನ್ನು ಅಲ್ಲಲ್ಲಿ ಕಾಣಬಹುದು).

ಮಾರಮ್ಮನನ್ನು ಮಕ್ಕಳ ತಾಯಿ ಮಾರಮ್ಮ ಎಂದೂ ಕರೆಯುವುದುಂಟು. ಪ್ರತಿವರ್ಷ ನಡೆಯುವ ಗ್ರಾಮದೇವತೆ ಜಾತ್ರೆಯಲ್ಲಿ ಮಾರಮ್ಮನಿಗೆ ತಂಪು ಕೊಡುವುದು ಅಲ್ಲಲ್ಲಿ ಬಳಕೆಯಲ್ಲಿದೆ. ತಂಬಿಟ್ಟು ನೆನಕ್ಕಿ, ನೆನಗಡಲೆ, ಎಳನೀರು, ಅರಿಶಿನ, ಕುಂಕುಮ, ಪೂಜೆ ಸಾಮಾನು ಮತ್ತು ಕಡ್ಡಾಯವಾಗಿ ಬೇವಿನಸೊಪ್ಪು ಇವುಗಳನ್ನು ಮಾರಮ್ಮನಿಗೆ ಅರ್ಪಿಸುವುದಕ್ಕೆ ತಂಪು ಕೊಡುವುದು ಎನ್ನುತ್ತಾರೆ. ಮಕ್ಕಳಿಗೆ ದಡಾರ, ಸೀತಾಳ ಸಿಡುಬು ಇವು ಆಗದಿರಲಿ ಎಂಬುದು ತಂಪು ಕೊಡುವುದರ ಉದ್ದೇಶ. ಅವು ಆದಾಗಲೂ ವಾಸಿಯಾದ ಮೇಲೆ ಐದನೆಯ ಅಥವಾ ಒಂಬತ್ತನೆಯ ದಿನ ತಂಪು ಕೊಡುವ ಪರಿಪಾಟವಿದೆ. ಸಿಡುಬಾದಾಗ ಮಕ್ಕಳು ಕಣ್ಣು ಬಿಡಲಾರದ ಸ್ಥಿತಿಯಲ್ಲಿದ್ದರೆ ನಿನಗೆ ಕಣ್ಣು ಕೊಡುವೆ ಎಂದು ಮಾರಮ್ಮನಿಗೆ ಹರಕೆ ಹೊರುವುದುಂಟು. ವಾಸಿಯಾದ ಮೇಲೆ ಕಣ್ಣಿನಾಕಾರದ ಬೆಳ್ಳಿಯ ತಗಡುಗಳನ್ನು ಒಯ್ದು ಮಾರಮ್ಮನ ಕಣ್ಣುಗಳ ಭಾಗದಲ್ಲಿ ಅದನ್ನು ಎಣ್ಣೆಯಿಂದ ಅಂಟಿಸಿ ಇಟ್ಟು ಪೂಜೆ ಮಾಡಿಸಿಕೊಂಡು ಬರುತ್ತಾರೆ. ಜಾತ್ರೆ ಸಮಯದಲ್ಲಿ ಮಾರಿಗುಡಿ ಮುಂದೆ ಬೆಂಕಿ ಹಾಕಿ ತಮಟೆ ಬಡಿತದ ಗತ್ತಿಗೆ ವೃತ್ತಾಕಾರವಾಗಿ ಕುಣಿಯುವ ಪದ್ಧತಿ ಅಲ್ಲಲ್ಲಿ ಕಂಡುಬರುತ್ತದೆ. ಕುಣಿಯುವವರ ವಿಶ್ರಾಂತಿ ಕೊಡುವ ಸಲುವಾಗಿ ನಡುನಡುವೆ ವಿವಿಧ ವೇಷ ಹಾಕಿ ಜನಸಮೂಹವನ್ನು ರಂಜಿಸುವ ಕಾರ್ಯಕ್ರಮ ಇರುತ್ತದೆ.

ಮಕ್ಕಳ ಮಾರಮ್ಮ ಎಂದು ಕರ್ನಾಟಕದಲ್ಲಿ ಅಲ್ಲಲ್ಲಿ ಕರೆಯುವ ರೂಢಿ ಬಂದದ್ದು ಮಾರಮ್ಮನನ್ನು ಕುರಿತ ಇನ್ನೊಂದು ಬಗೆಯ ಪದ್ಧತಿಯಿಂದ. ಮಕ್ಕಳ ಮಾರಮ್ಮ ಎಂಬ ದೇವತೆಯ ಮೂಲ ಗುಡಿ ಇರುವುದು ಈಗ ತಮಿಳುನಾಡಿಗೆ ಸೇರಿಹೋಗಿರುವ ಸತ್ಯಮಂಗಲದಲ್ಲಿ. ಅಲ್ಲಿಯ ಕೆಲವು ಕುಟುಂಬಗಳವರು ಪೆಟ್ಟಿಗೆ ಆಕಾರದ ಪುಟ್ಟ ಗುಡಿಯಲ್ಲಿ ಮಾರಮ್ಮನನ್ನು ಹೊತ್ತುಕೊಂಡು ಚಾವಟಿಯಿಂದ ಹೊಡೆದುಕೊಳ್ಳುತ್ತಾ ಉರುಮೆ ಹಾಗೂ ತಮಟೆ ವಾದ್ಯಗಳನ್ನು ಬಾರಿಸುತ್ತ ಕುಟುಂಬ ಸಮೇತ ಊರೂರು ಅಲೆಯುತ್ತ ಹೊರಡುತ್ತಾರೆ.

ಹಟ್ಟಿ ಹಬ್ಬದ ಸಂದರ್ಭದಲ್ಲಿ ಕರ್ನಾಟಕದ ಬಹುತೇಕ ಕಡೆ ಪೂಜಿಸುವ ದೇವತೆಹಟ್ಟಿ ಲಕ್ಕಮ್ಮ. ದನಗಳನ್ನು ಕಟ್ಟುವ ಸ್ಥಳವೇ ಹಟ್ಟಿ. ಎತ್ತು ಎಮ್ಮೆಗಳ ಸಗಣಿಯನ್ನು ಒಂದು ಕಡೆ

ಕೊಟ್ಟಿಗೆಯಲ್ಲೇ ಗುಡ್ಡೆ ಮಾಡಿ ಇಟ್ಟಿರುತ್ತಾರೆ. ಈ ಗುಡ್ಡೆಗೆ ಲಕ್ಕವ್ವನೆಂದು ಕರೆಯುತ್ತಾರೆ. ಇವಳೇ ಆ ಹಟ್ಟಿ ಲಕ್ಕವ್ವಳಾಗಿರುತ್ತಾಳೆ. ದೇವರನ್ನು ಪೂಜಿಸುವಾಗ ಹಟ್ಟಿಲಕ್ಕವ್ವಳನ್ನು ಪೂಜೆ ಮಾಡುತ್ತಾರೆ. ಉದ್ದೇಶ ದನಕರುಗಳಿಗೆ ಯಾವುದೇ ರೋಗರುಜಿನ ಬಾರದಿರಲಿ ಎಂಬುದು. ಅಂದು ಅವುಗಳ ಮೈಕೈಗಳನ್ನು ತೊಳೆದು ಶುದ್ಧಗೊಳಿಸಿ, ಬಣ್ಣ ಹಚ್ಚಿ ಬರೆಹಾಕಿ, ಅಲಂಕರಿಸಿ ಸಂಭ್ರಮದಿಂದ ಇರುವಂತೆ ನೋಡಿಕೊಳ್ಳುತ್ತಾರೆ. ಲಕ್ಕವ್ವನಿಗೆ ದನಕರುಗಳ ಕಾಯಿಲೆಗಳನ್ನು ನಿವಾರಿಸುವ ಶಕ್ತಿ ಇದೆ ಎಂದೇ ಜನಪದರು ಭಾವಿಸುವುದರಿಂದ ಇವಳಿಗೆ ಇಲ್ಲಿ ವಿಶೇಷವಾದ ಸ್ಥಾನಮಾನ ನೀಡಲಾಗಿದೆ.

'ಲಕ್ಕವ್ವನ ಹಬ್ಬಾಗೇ ಹಾಲು ಬೆಣ್ಣೆಗೆ ಬರ' ಲಕ್ಕವ್ವನ ಹಬ್ಬುಕ್ಮುಂಚೆ ಆಕ್ಳು, ಎಮ್ಮೆ ಒದ್ಕಂ ಬಂದ್ಹಂಗೆ' ಎಂಬ ಗಾದೆಗಳು ದಂತಕತೆಗೆ ಪುಷ್ಟಿಕೊಡುವಂತಿವೆ. ಕಳ್ಳಲಕ್ಕವ್ವ ದನಕರ ಮತ್ತು ದನದ ದೇವಿಯಾಗಿ ಗಾದೆಗಳಲ್ಲಿ ಕಂಡುಬರುತ್ತಾಳೆ. ಉದಾಹರಣೆಗೆ 'ಕರಾವು ಇದ್ಮನೆ ಝಣ ಝಣ ಕರಾವು ಇಲ್ಲದ್ಮನೆ ಬಣ ಬಣ, 'ದನ ಹೆಚ್ಚಿದ ಮನೆಯಾಗೆ ಧನಲಕ್ಷ್ಮಿ ದನ ಸತ್ತ ಮನೆಯಾಗೆ ದರಿದ್ರಲಕ್ಷ್ಮಿ'. ಕರಾವು ಇದ್ದ ಮನೆಗಳಲ್ಲೆಲ್ಲಾ ಆಚರಿಸುವ ಕಳ್ಳಲಕ್ಕವ್ವನ ಪೂಜಾಚರಣೆಯನ್ನು ನೋಡಿದಾಗ ಕಾಲ್ನಡೆ ಮತ್ತು ಹಣದ ಅಧಿದೇವತೆಯು ಒಬ್ಬಳೇ ಆಗಿರಬೇಕೆಂದು ಊಹಿಸಬಹುದು. ಹೀಗೆ ಲಕ್ಕವ್ವ, ಕಳ್ಳಲಕ್ಕವ್ವ, ಹಟ್ಟಿ ಲಕ್ಕವ್ವರ ಬಗೆಗಿನ ದಂತಕತೆಗಳನ್ನು ಗಮನಿಸುತ್ತ ಹೋದಂತೆಲ್ಲ ಬಹುತೇಕ ಕಡೆ ಹಲವಾರು ಬಗೆಯಲ್ಲಿರುವ ಆಚರಣೆಗಳ ಅಂಶಗಳು ಕಂಡುಬರುತ್ತವೆ. ಲಕ್ಕವ್ವನ ಹಬ್ಬ ವಿಶಿಷ್ಟವಾಗಿದ್ದು ಜನಪದರ ಒಂದು ಅಪೂರ್ಣ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ನುಂಕೆಮಲೆ ಬೆಟ್ಟದ ಬದಿಯಲ್ಲಿ ಅಣ್ಣೆಬಸಪ್ಪ ಎನ್ನುವ ದೇವಾಲಯವಿದೆ. ಸುತ್ತಮುತ್ತಲಿನ ಜನ ಬಂದು ಈ ದೇವರಿಗೆ ಪೂಜಿಸಿದರೆ ದನಕರುಗಳಿಗೆ ಉಣ್ಣೆ ಬೀಳುವುದಿಲ್ಲ ಎಂಬ ನಂಬಿಕೆಯಿದೆ.

## ಅಗ್ನಿಕುಂಡ ಪ್ರವೇಶ

ಮೊಳಕಾಲ್ಮೂರು ತಾಲ್ಲೂಕು ರಾಯಾಪುರ ಮ್ಯಾಸರಹಟ್ಟಿ ಗ್ರಾಮದ ಕೋಟೆ ಗುಡ್ಡದ ಮಾರಮ್ಮನ ಜಾತ್ರೆಯಲ್ಲಿ ಎರಡು ದೇವಾಲಯಗಳಲ್ಲಿ ಅಗ್ನಿಕುಂಡವನ್ನು ಕಾಣುತ್ತೇವೆ. ಅಗ್ನಿಕುಂಡವನ್ನು ತೆಗೆದು ಸೌದೆ ಉರಿಸಿ ಕೆಂಡ ಮಾಡಿ ಅದರ ಮೇಲೆ ನಡೆಯುತ್ತಾರೆ. ಗಂಗೆಪೂಜೆ ಮುಗಿಸಿಕೊಂಡು ಬಂದು ಹಟ್ಟಿಯ ಹೊರಭಾಗದ ದೇವರು ಕುಳಿತಿರುತ್ತದೆ. ಸಂಜೆ ಏಳು-ಎಂಟು ಗಂಟೆಗೆ ಸರಿಯಾಗಿ ದೇವಸ್ಥಾನದ ಮುಂದೆ ಬಂದು ಕೂರುತ್ತದೆ. ಮಾರಮ್ಮನ ಅಗ್ನಿಕುಂಡದ ನಾಲ್ಕು ದಿಕ್ಕುಗಳಲ್ಲಿ ಬಾಳೆ ಎಲೆ ಹಾಕಿ ಬಲಿ ಅನ್ನದ ನೈವೇದ್ಯ ಮಾಡುವರು. ಆ ಅನ್ನವನ್ನು ಕೆಂಡದ ಮೇಲೂ ಎರಚುವರು. ಅಲ್ಲಿ ನೆರದ ಜನಸಮೂಹದ ದಾಸಯ್ಯಗಳು ಉರುಮೆ ಬಾರಿಸಿದಂತೆ ಆವೇಶಭರಿತರಾಗುವರು. ಅಗ್ನಿಕುಂಡದಿಂದ ತಟ್ಟೆಯಲ್ಲಿ ಕೆಂಡವನ್ನು ತಂದು ಮೂಲ ದೇವರ

ಮಡಿಲಿಗೆ ಕಟ್ಟುವರು. ಸಾಮಾನ್ಯವಾಗಿ ಆ ಕೆಂಡದ ಬಹುಪಾಲು ಕೆಂಪಾಗಿ ಬೂದಿ ಮುಚ್ಚಿರುತ್ತದೆ. ಅಂದರೆ ಬೆಂಬೂದಿಯಾಗಿರುತ್ತದೆ. ನಂತರ ಪೂಜಾರಿ ಚಾಟಿಯಲ್ಲಿ ಹೊಡೆದುಕೊಳ್ಳುತ್ತಾ ಮೂರು ಬಾರಿ ಕೆಂಡದ ಮೇಲೆ ನಡೆದು ಹೋಗುವನು. ಈ ಅಗ್ನಿಕುಂಡ ಪ್ರವೇಶ ನೋಡಲು ಸಾವಿರಾರು ಭಕ್ತಾದಿಗಳು ಸೇರಿರುತ್ತಾರೆ.

ಶಕ್ತಿ ದೇವತೆಯ ಆರಾಧನೆಯಲ್ಲಿ ವೀರಪೋತರಾಜರು ಕರಿಮೇಕೆ ಮರಿಯ ಅಥವಾ ಬಿಳಿಯ ಬಣ್ಣದ ಹೋತ ಮರಿ ಕುತ್ತಿಗೆಯನ್ನು ಕಚ್ಚಿ ರಕ್ತ ಹೀರುವುದಕ್ಕೆ 'ಗಾವು' ಎನ್ನುತ್ತಾರೆ. ಇಡೀ ಆಚರಣೆಗೆ 'ಗಾವು ಸಿಗಿಯುವುದು' ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಹೋತದ ರೀತಿಯಲ್ಲಿ ಮುಖವನ್ನು ಅಲಂಕರಿಸಿಕೊಂಡು ಹೋತವನ್ನೇ ಸಿಗಿಯುವುದರಿಂದ ಇವರಿಗೆ ಪೋತನಾಯಕರು ಎಂಬ ಹೆಸರು ಬಂದಿರಬೇಕು. ಹಿಂದಿನ ಕಾಲದಲ್ಲಿ ಆನೆ, ಒಂಟೆ, ಕೋಣ, ಹಂದಿಗಳನ್ನೇ ಗಾವು ಮರಿಯಾಗಿ ಬಳಸುತ್ತಿದ್ದರಂತೆ. ಮಾರಿಹಬ್ಬದ ಉಳಿದ ಬಲಿ ಪ್ರಕ್ರಿಯೆಗಳನ್ನು ಪೂರೈಸುವವರು ಮ್ಯಾಸನಾಯಕರು. ಹಟ್ಟಿಯ ಗುಂಪುಗಳಿಗೆ ಒಂದೊಂದು ರೀತಿಯ ಕಾರ್ಯವನ್ನು ಕೊಟ್ಟಿರುತ್ತಾರೆ. ಆದರೆ ಈ ಬಲಿ ಪ್ರಕ್ರಿಯೆಗಳೆಲ್ಲ ಕೃಷಿಯ ಫಲವತ್ತತೆಗಾಗಿ, ಪಶುಸಂಪತ್ತಿನ ಅಭಿವೃದ್ಧಿಗಾಗಿ ನಡೆಸುವ ಆಚರಣೆಗಳಂತೆ ಕಾಣುತ್ತದೆ. ಬಲಿಯ ನಂತರ ಚೆಲ್ಲುವ ಸರಗ(ಚರಗ)ದ ರಕ್ತಬೆರತ ಅನ್ನ ಕೃಷಿಮಾತೆ ಭೂತಾಯಿಯ ತಣಿವಿಗೇ ನಡೆಸಿದ ಆಚರಣೆಯಂತೆ ಕಾಣುತ್ತದೆ. ಭೂಕಾಂತಿಯ ಈ ಪ್ರಕ್ರಿಯೆ ಬಹುಶಃ ಪಶುಪಾಲಕರು ಕೃಷಿಯತ್ತ ಹೊರಳಿದಾಗ ರೂಪುಗೊಂಡಿರಬೇಕು.

ಗಾವುಗಳಲ್ಲಿ ಎರಡು ಬಗೆ. ನೆಲಗಾವು ಅಂದರೆ ಗಾವು ಮರಿಯನ್ನು ನೆಲದ ಮೇಲೆ ಅಂಗಾತ ಮಲಗಿಸಿ ಚೂರಿಯಿಂದ ಕತ್ತು ಕೊಯ್ಯುವುದು. ಈ ಬಗೆಯ ಬಲಿ ಅಪರೂಪ. ಇದು ವಾಸೆಯನ್ನು ಹೋಲುತ್ತದೆ. ಎದ್ದಗಾವು ಅಂದರೆ ಈ ಬಲಿಕ್ರಿಯೆಯನ್ನು ನಿಂತುಕೊಂಡೇ ತನ್ನ ಹಲ್ಲುಗಳಿಂದ ಗಾವುಮರಿಯ ಗಂಟಲು ಸಿಗಿಯಬೇಕು. ಇದನ್ನು ನಿಂತಗಾವು ಎಂದು ಕರೆಯುತ್ತಾರೆ.

ವೀರ ಪೋತರಾಜರು ಒಂದೊತ್ತು(ಕೇವಲ ಹಣ್ಣಿನ ಫಲಾಹಾರ ಹಾಲು) ಇದ್ದು, ಹೊಳೆಗೆ ಹೋಗಿ ಗಂಗಾಪೂಜೆ ಮಾಡಿ ಅಲ್ಲಿಯೇ ಪೋತರಾಜರ ವೇಷ ಧರಿಸಿಕೊಳ್ಳುತ್ತಾರೆ. ಈ ದೇವಿ ರಂಗಯ್ಯನದುರ್ಗದ ಜಲಾಶಯ ಹಿನ್ನೀರಿನ ಬಳಿ ಗಂಗಾಪೂಜೆಗೆ ಹೋಗುತ್ತದೆ. ಅಂದರೆ ಚಿನ್ನಹಗರಿ ನದಿಗೆ ಹೋಗುವ ಹೊತ್ತಿಗೆ ಅದರ ಹಿಂದಿನ ದಿನವೇ ಕಾಸು ಮೀಸಲು ತೆಗೆದುಕೊಂಡು ಹೋಗಿದ್ದವರು ಕೋಟೆಗುಡ್ಡದಿಂದ ಕಾಲು ನಡಿಗೆಯಲ್ಲಿಯೇ ಅಲ್ಲಿಗೆ ಬಂದು ಸೇರುತ್ತಾರೆ. ಈ ಹಿಂದೆ ಸೋಮವಾರದಂದು ಕೋಟೆಗುಡ್ಡಕ್ಕೆ ಹೋಗಿ ಬಂದು ಗಂಗೆಪೂಜೆ ನೆರವೇರುತ್ತಿತ್ತು. ಈಗ ಬಹಳ ದೂರವಾಗುವುದರಿಂದ ಕಾಸು ಮೀಸಲು ಮಾತ್ರ ಕಳುಹಿಸುತ್ತಾರೆ. ಒಂಬತ್ತು ಸಂಖ್ಯೆಯಲ್ಲಿರುವ ರುದ್ರಾಕ್ಷಿ ಸರ ಕೊರಳನ್ನು ಅಲಂಕರಿಸಿರುತ್ತದೆ. ಕಾಲಿಗೆ ಸೆಲಿಗೆ

ಗಗ್ಗರ ಹಾಕಿ, ಕಪ್ಪು ಬಣ್ಣದ ಕಾಸಿ ದಟ್ಟಿಯನ್ನು ಸೊಂಟದ ಮುಂಭಾಗಕ್ಕೆ ಇಳಿಬೀಳುವಂತೆ ಧರಿಸಿ, ಸೊಂಟಕ್ಕೆ ಗಂಟೆಯ ಸರದ ಚರ್ಮಪಟ್ಟಿಯನ್ನು ಕಟ್ಟಿ, ಮೈತುಂಬಾ ಅರಿಶಿನವನ್ನು ಪೂಸಿಕೊಂಡು, ಮುಖಕ್ಕೆ ಮಾತ್ರ ಹೋತನ ಆಕಾರ ಕಾಣುವ ರೀತಿಯಲ್ಲಿ ಅರಿಶಿನ ಕುಂಕುಮವನ್ನು ಬಳಿದುಕೊಳ್ಳುತ್ತಾರೆ. ಗಿರಿಜಾ ಕೂದಲು ಬೆನ್ನಿನವರೆಗೂ ಸಿಂಹದ ಅಯಾಲಿನಂತೆ ಇಳಿಬಿದ್ದಾಗ ಗಿರಿಜಾ ಮೀಸೆ ತಿರುವುತ್ತಿದ್ದರೆ ಪೋತರಾಜನ ಕಳೆ ವಿಜೃಂಭಿಸುತ್ತದೆ.

ಉರುಮೆ ವಾದ್ಯದವರೊಂದಿಗೆ ಅಲ್ಲಿಂದಲೇ ಕುಣಿಯುತ್ತಾ, ಕೇಕೆ ಹಾಕುತ್ತಾ ವೀರನಾಟ್ಯ ಮಾಡುತ್ತಾ, ಎರಡೂ ಕೈಯಲ್ಲಿರುವ ಚಾವಟಿಗಳನ್ನು ಝುಳಪಿಸುತ್ತಾ ಮತ್ತೇರಿದವರಂತೆ ಆರ್ಭಟಿಸುತ್ತಾ ಮಾರಿಗುಡಿಯ ಮುಂಭಾಗಕ್ಕೆ ಬಂದು ಗಾವುಸಭೆ ನಡೆಸುತ್ತಾರೆ. ೨೦-೩೦ ಸಂಖ್ಯೆಯಲ್ಲಿರುವ ಪೋತನಾಯಕರ ಮುಖಂಡ ಪೋತರಾಜನಾಗಿ ಕುಳಿತು, ಗಾವು ಸಿಗಿಯಲು ನೆರೆದ ಜನಗಳ ಅಪ್ಪಣೆ ಕೇಳುತ್ತಾನೆ. ಇವನ ಹಿಂದಿರುವ ಪೋತನಾಯಕರ ಪಡೆ ಬೇಗ ಅನುಮತಿ ಕೊಡುವಂತೆ ಬೊಬ್ಬೆ ಹಾಕತೊಡಗುತ್ತದೆ.

ಜನ ಒಪ್ಪಿಗೆ ಕೊಟ್ಟ ನಂತರ ಮಾರಿಗುಡಿಯ ಮುಂದೆ ಗಾವಿನ ಗುಂಡಿ ತೆಗೆಸಿ ಅದಕ್ಕೆ ಶಾಸ್ತ್ರೋಕ್ತವಾದ ರೀತಿಯಲ್ಲಿ ಪೂಜೆ ಮಾಡುತ್ತಾರೆ. ಮರಿ ಹೋತವನ್ನು ಗಾವು ಗುಂಡಿಯ ಬಳಿ ತಂದು ಮಂತ್ರ ಹಾಕುತ್ತಾರೆ. ಅದು ಸತ್ತ ಹಾಗೆ ನಿಶ್ಚೇಷ್ಟಿತವಾಗುತ್ತಿದ್ದಂತೆ, ಜನರ ಸಿಳ್ಳು, ಕೇಕೆ ಮುಗಿಲು ಮುಟ್ಟುತ್ತದೆ. ಪೋತರಾಜ ಗಾವಿನ ಮರಿಯನ್ನು ಎದೆಗೆ ಅವಚಿಕೊಂಡು ಗಾವು ಸಿಗಿಯಲು ಸಿದ್ಧವಾಗುತ್ತಾನೆ. ಇನ್ನಿಬ್ಬರು ಸಹಾಯಕ ಪೋತನಾಯಕರು ಅವನ ಅಕ್ಕಪಕ್ಕ ನಿಂತಿರುತ್ತಾರೆ. ಉಳಿದ ಪೋತನಾಯಕರು ವೀರನಾಟ್ಯ ಮಾಡುತ್ತಾ ಅಬ್ಬರಿಸುತ್ತಿರುವಂತೆ, ಗಾವು ಸಿಗಿದು ಅದರ ರಕ್ತಮಾಂಸಗಳನ್ನು ಗಾವಿನ ಗುಂಡಿಗೆ ಉಗಿಯುತ್ತಾನೆ. ರಕ್ತಸಿಕ್ತವಾದ ಪೋತರಾಜನ ಮುಖ ಭಯಾನಕವಾಗಿರುತ್ತದೆ.

ಕೊನೆಗೆ ಸತ್ತ ಗಾವಿನ ಮರಿಯ ತಲೆ ಕತ್ತರಿಸಿ ಗಾವಿನ ಗುಂಡಿಗೆ ಹಾಕುತ್ತಾರೆ. ಗಾವು ಮರಿಯ ದೇಹವನ್ನು ಉರುಮೆ ಬಡಿಯುವ ಚಲವಾದಿ ಹೊಲೆಯರಿಗೆ ಪೋತರಾಜರೇ ಕೊಟ್ಟುಬಿಡುತ್ತಾರೆ. ತಮ್ಮ ಮೈಗೆ ಮೆತ್ತಿಕೊಂಡ ಅರಿಶಿಣ ಕುಂಕುಮ ತೊಳೆದ ನೀರನ್ನು ಗಾವಿನ ಗುಂಡಿಗೆ ಹರಿಸಿ ಗುಂಡಿ ಮುಚ್ಚಿ ಅನ್ನ ಮೊಸರಿನ ಎಡೆ ಹಾಕಿ ಶಾಂತಿ ಮಾಡುತ್ತಾರೆ. ನಂತರ ತುಂಬು ಉಡುಗೊರೆ ಪಡೆದು ಹೊರಡುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಕಾನೂನಿನ ಕಟ್ಟಳೆಯಿಂದಾಗಿ ಗಾವು ಸಿಗಿಯುವುದನ್ನು ಸಾಂಕೇತಿಕವಾಗಿ ಹೋತದ ಮರಿಯನ್ನು ತೋರಿಸಿ ಹಿಂಭಾಗದಲ್ಲಿ ಸಿಗಿಯುವ ಸಂದರ್ಭಗಳನ್ನು ಕಾಣುತ್ತೇವೆ.

ಈ ಮಾರಮ್ಮನ ಗಾವಿಗೆ ಬರುವ ಪೋತರಾಜರೆಂದರೆ ದಾವಣಗೆರೆ ಜಿಲ್ಲೆಯ ಜಗಳೂರು ತಾಲೂಕಿನ ಅಕನೂರಿನವರು ಹಾಗೂ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ರಾಯದುರ್ಗದ

ತಾಲ್ಲೂಕಿನ ಗಲಗಲ್ಲು ಗ್ರಾಮದವರು. ಅಕನೂರಿನಲ್ಲಿ ಪೋತಲಿಂಗೇಶ್ವರ ದೇವಾಲಯದಲ್ಲಿ ಪೋತರಾಜರಾಗುವವರಿಗೆ ದೀಕ್ಷೆಯನ್ನು ನೀಡಲಾಗುತ್ತದೆ. ಇದು ವಂಶಪಾರಂಪರ್ಯವಾಗಿ ಬರುವ ವೃತ್ತಿಯಾಗಿದ್ದು, ಹಿರಿಯರು ವಯಸ್ಸು ಕಳೆಯುತ್ತಲೇ ತಮ್ಮ ಮಕ್ಕಳನ್ನು ಈ ಕಲೆಯಲ್ಲಿ ತಯಾರು ಮಾಡುತ್ತಾರೆ. ಅವರ ಮದುವೆಗೆ ಮುನ್ನ ಈ ದೀಕ್ಷೆಯನ್ನು ಕೊಡಿಸುತ್ತಾರೆ. ಮದುವೆಯ ನಂತರ ಈ ದೀಕ್ಷೆಯನ್ನು ಕೊಡುವುದಿಲ್ಲ. ಈ ದೀಕ್ಷೆಯನ್ನು ನೀಡುವವರು ಅಶ್ಚರ್ಯಕರವೆಂಬಂತೆ ಐನೋರು. ತಲೆಯ ಮೇಲೆ ಉಕ್ಕಿನ ಚಾವಟಿ ಇಟ್ಟು ಅದರಿಂದಲೇ ಬೆನ್ನಿಗೆ ಮೂರು ಏಟು ಮುಟ್ಟಿಸುತ್ತಲೇ ಮುದ್ರೆಯಾಯಿತು ಎನ್ನುತ್ತಾರೆ. ಕೈಗೆ ಮುದ್ರೆ ಸೆಲಿಗೆ ತೊಡಿಸುತ್ತಾರೆ. ಇದನ್ನು ತೆಗೆಯುವಂತಿಲ್ಲ. ಅದು ದೀಕ್ಷೆಯಾದವರಿಗೆ(ಹೆಣ್ಣಿಗೆ) ತಾಳಿ ಇದ್ದಂತೆ. ಈ ದೀಕ್ಷೆಯಾಗುವಾಗ ಇವರು ನಿರ್ವಾಣದಲ್ಲಿದ್ದು, ಸೊಂಟಕ್ಕೆ ಅರಿಶಿಣ ಬಟ್ಟೆ ಮಾತ್ರ ಧರಿಸಿರುತ್ತಾರೆ. ಇವರು ಕಾಲಿಗೆ ಸುತ್ತು(ಮಿಂಚು) ಧರಿಸುವುದಿಲ್ಲ. ಹೆಣ್ಣು ಮಕ್ಕಳು ಪೋತರಾಜನ ಪೋಷಾಕನ್ನು ಮುಟ್ಟುವಂತಿಲ್ಲ. ಇವರೇ ಮುಟ್ಟಿದರೂ ಕೈ ಕಾಲು ಮುಖ ತೊಳೆದೇ ಮುಟ್ಟಬೇಕು. ಪೋತರಾಜನ ದೀಕ್ಷೆ ಕೊಟ್ಟ ದಿನವೇ ಇವರಿಗೆ ಜೋಳಿಗೆಯನ್ನು ಹಾಕುತ್ತಾರೆ. ಅದೇ ದಿನ ಪೋತಲಿಂಗನ ಭಿಕ್ಷೆ ಎಂದು ಭಿಕ್ಷೆ ಎತ್ತಿ ತಂದು ಗುಂಡಿಯ ಮುಂದೆ ಸುರಿಯಬೇಕು. ಈ ಜೋಳಿಗೆ ಹಾಕಿ ಭಿಕ್ಷೆ ಎತ್ತಿ ಜೀವನವನ್ನು ಮಾಡಬಹುದು. ಹಾಗೆ ಮಾಡುವವರು ವರ್ಷಕ್ಕೆ ಒಮ್ಮೆಯಾದರೂ(ಯುಗಾದಿಯ ದಿನ) ಭಿಕ್ಷಾಟನೆ ಮಾಡಲೇಬೇಕು.

**ಸಿಡಿ ಆಚರಣೆ**

ಜಾತ್ರೆಯ ಮೂರನೇ ದಿನ ಅಂದರೆ ಗುರುವಾರ ಸಂಜೆಗೆ ಸರಿಯಾಗಿ ಸಿಡಿ ಕಾರ್ಯಕ್ರಮ ಆರಂಭವಾಗುತ್ತದೆ. ಸಿಡಿ ಆಡುವವ ಮಧ್ಯಾಹ್ನ ಗಂಗೆ ಪೂಜೆಗೆ ಹೋಗಿ ಮೆರವಣಿಗೆಯ ಮೂಲಕ ಬಂದು ಓಬಳದೇವರ ಗುಡಿಗೆ ಹೋಗಿ ಪೂಜೆ ಸಲ್ಲಿಸಿ ನಂತರ ಮಾರಮ್ಮನ ಗುಡಿಗೆ ಪ್ರದಕ್ಷಿಣೆ ಹಾಕಿ ಬರುವನು. ಸಿಡಿಯಲ್ಲಿ ಎರಡು ಬಗೆಗಳಿವೆ. ಒಂದು ಬೆನ್ನುಸಿಡಿ ಇನ್ನೊಂದು ಬಟ್ಟೆಸಿಡಿ. ಬೆನ್ನುಸಿಡಿ ಉಗ್ರವಾಗಿರುತ್ತದೆ. ಸಿಡಿ ಆಡುವವನ ಬೆನ್ನಿಗೆ ಕಬ್ಬಿಣದ ಸಲಾಕೆಗಳಿಂದ ಕಟ್ಟಿ ಸಿಡಿ ಆಡಿಸುತ್ತಾರೆ. ಮೊಳಕಾಲ್ಮೂರು ತಾಲೂಕಿನ ನುಂಕೆಮಲೆ ಸಿದ್ದೇಶ್ವರ ಜಾತ್ರೆಯಲ್ಲಿ ಈ ತರಹದ ಸಿಡಿಯನ್ನು ಕೊಮ್ಮನಪಟ್ಟಿ ಮ್ಯಾಸರು ಆಡುತ್ತಾರೆ. ಬಟ್ಟೆಸಿಡಿ ಬೆನ್ನಿಗೆ ಬಟ್ಟೆ ಕಟ್ಟಿ ಆಡಿಸುವುದು. ಈ ಸಿಡಿಯನ್ನು ಕ್ಷೇತ್ರವ್ಯಾಪ್ತಿಯ ಹಲವಾರು ಭಾಗಗಳಲ್ಲಿ ಬಳಕೆಯಲ್ಲಿದೆ. ಮ್ಯಾಸರಹಟ್ಟಿ ಜಾತ್ರೆಯಲ್ಲಿ ಬೆನ್ನುಸಿಡಿ ಆಡುತ್ತಾರೆ. ಸಿಡಿ ಆಡುವವರಿಗೆ ಸಿಡಿಗಂಬಕ್ಕೆ ಕಟ್ಟಿ ಆಡಿಸುವ ಮೊದಲು ಆತನ ತಲೆಯ ಮೇಲೆ ಬಾಗಿದ ರೀತಿಯಲ್ಲಿ ಪೇಟವನ್ನು ಕಟ್ಟುವರು. ಆನಂತರ ಆತನ ಕೈಗೆ ಒಂದು ಧೂಪದ ತಟ್ಟೆ ಹಾಗೂ ಒಂದು ಕತ್ತಿಯನ್ನು ಕೊಡುವರು. ಹಣೆಗೆ ಅರಿಶಿಣ ಕುಂಕುಮ ಬಳಿದು, ಹೂವಿನಹಾರ ಹಾಕಿ ಸಿಡಿಗಂಬದ ಮೇಲೇರಿಸುವರು. ಕಂಬದೊಂದಿಗೆ ಆತನನ್ನು ಒಂದು ತುದಿಗೆ ಕಟ್ಟಿ ನಿಧಾನವಾಗಿ ಮೇಲೇರಿಸಿ ಇನ್ನೊಂದು

ತುದಿಯಲ್ಲಿನ ಹಗ್ಗವನ್ನು ಹಿಡಿದು ಜೋರಾಗಿ ತಿರುಗಿಸುವರು. ಇಲ್ಲಿ ಮೇಲುನೋಟಕ್ಕೆ ಹಿಂಸೆಯೇ ಪ್ರಧಾನವಾಗಿ ಕಂಡರೂ ಭಕ್ತರು ಮಾತ್ರ ಅದನ್ನು ಸೇವೆ ಎಂದೇ ಪರಿಗಣಿಸುತ್ತಾರೆ. ಸಿಡಿಯಾಡಿಸುವುದನ್ನು ನೋಡಲು ಸುತ್ತಮುತ್ತ ಸಾವಿರಾರು ಜನ ಕುತೂಹಲದಿಂದ ನೋಡುತ್ತಾರೆ. ಸಿಡಿಯಾಡುವ ಸಂದರ್ಭದಲ್ಲಿ ಚೂರುಬೆಲ್ಲ, ಬಾಳೆಹಣ್ಣು, ಈರುಳ್ಳಿ, ಶೇಂಗಾ ಮುಂತಾದವುಗಳನ್ನು ಎಸೆಯುತ್ತಾರೆ. ಪುಂಡ ಹುಡಗರು ಬೇಕೆಂತಲೇ ಪೊಲೀಸರ ಟೋಪಿಗೆ ಬಾಳೆಹಣ್ಣು ಎಸೆಯು ವುದನ್ನು ಗಮನಿಸಬಹುದು. ಜಾತ್ರೆಗೆ ಬಂದ ಜನ ಸಿಡಿ ಮುಗಿಸಿಕೊಂಡು ಮನೆಗೆ ಬೇಕಾದ ಕೃಷಿ ಉಪಕರಣಗಳು, ಗೃಹ ಬಳಕೆ ವಸ್ತುಗಳು, ಬೆಂಡು ಬತ್ತಾಸು, ಕಾರಮಂಡಕ್ಕಿ ತೆಗೆದು ಕೊಂಡು ತಮ್ಮ ತಮ್ಮ ಊರುಗಳಿಗೆ ಹಿಂದಿರುಗುತ್ತಾರೆ. ಮರುದಿನ ಮಾರಮ್ಮ ದೇವರಗುಡಿ ತುಂಬುತ್ತದೆ.

ಈ ಜಾತ್ರೆಗೆ ಆಂಧ್ರಪ್ರದೇಶದ ಗಡಿಭಾಗದ ಜನ ಚಿತ್ರದುರ್ಗ, ಚಳ್ಳಕೆರೆ, ಮೊಳಕಾಲ್ಮೂರು, ಕೂಡ್ಲಿಗಿ, ಜಗಳೂರು, ಬಳ್ಳಾರಿ, ದಾವಣಗೆರೆ ತಾಲ್ಲೂಕುಗಳಿಂದ ಸಾವಿರಾರು ಜನ ಬಂದು ಪರವು ಮಾಡಿಕೊಂಡು ಹೋಗುತ್ತಾರೆ. ಪ್ರತಿ ಮಂಗಳವಾರ ಮತ್ತು ಶುಕ್ರವಾರ ಹೇಳಿಕೆ(ಕಣಿ) ನಡೆಯುತ್ತದೆ. ಗಾಳಿ ಸೆಡಕು, ರೋಗರುಜಿನ, ದೆವ್ವ, ಮಕ್ಕಳಫಲ ಮುಂತಾದವುಗಳ ನಿವಾರಣೆಗಾಗಿ ದೇವಿಯ ಮೊರೆ ಹೋಗುತ್ತಾರೆ. ಇದರಿಂದ ಸಾಕಷ್ಟು ಜನ ಈ ದೇವಿಯ ಒಕ್ಕಲಾಗಿದ್ದಾರೆ. ದೆವ್ವ ಬಿಡಿಸುವುದು ಅವರಿಗೆ ನೀರು ಹಾಕುವುದು ಇಲ್ಲಿ ಕಂಡುಬರುತ್ತದೆ.

**ಬಾಯಿಬೀಗ**

ಮಾರಮ್ಮನಿಗೆ ಹರಕೆ ಹೊತ್ತವರು ತಾಮ್ರ ಅಥವಾ ಬೆಳ್ಳಿಯ ತಂತಿಯಿಂದ ಎರಡೂ ಕೆನ್ನೆಯನ್ನು ತೂತು ಮಾಡಿಕೊಂಡು ಬಾಯಿಗೆ ಬೀಗ ಹಾಕಿಸಿಕೊಳ್ಳುವರು. ಬಾಯಿಬೀಗ ಚಚ್ಚೌಕವಾಗಿದ್ದು ಒಂದು ಕಡೆಯ ಮೊನೆ ಚೂಪಾಗಿದ್ದು ಇನ್ನೊಂದು ಕಡೆ ಒಂದು ತೂತಿರುವಂತೆ ಗುಂಡಗೆ ಮಡಿಚಿರುತ್ತದೆ. ಮೊನೆ ಚೂಪಾಗಿರುವ ಭಾಗದಿಂದ ಎರಡೂ ಕೆನ್ನೆಗಳಿಗೆ ಚುಚ್ಚಿಕೊಂಡು ಮತ್ತೊಂದು ಕಡೆಯ ತೂತಿಗೆ ಸೇರಿಸಿಕೊಳ್ಳುತ್ತಾರೆ. ಈ ಸೇವೆ ಸಲ್ಲಿಸುವವರು ದೇವಸ್ಥಾನಕ್ಕೆ ಬಂದ ನಂತರ ಪೂಜಾರಿ ಅವರ ಮೇಲೆ ತೀರ್ಥವನ್ನು ಪ್ರೋಕ್ಷಿಸುವರು ಮತ್ತು ಪೂಜೆ ಮಾಡಿದ ನಂತರ ಬೀಗ ತೆಗೆಯುವರು. ಹಾಗೆ ತೆಗೆದ ಮೇಲೆ ಚುಚ್ಚಿದ ಜಾಗಕ್ಕೆ ಅಮ್ಮನ ಭಂಡಾರವನ್ನು ಹಚ್ಚುವರು.

ಈ ಜಾತ್ರೆಯಲ್ಲಿ ಬೇವಿನಸೀರೆ ಆಚರಣೆಯನ್ನು ಕಾಣಬಹುದು. ಇದನ್ನು ಬೆತ್ತಲೆಸೇವೆ, ಹುಟ್ಟುಡುಗೆ, ದಾಂಡುಡಿಗೆ, ಬೆತ್ತಲುಡಿಗೆ ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ಜಾತ್ರೆಯಲ್ಲಿ ಹರಕೆ ಹೊತ್ತವರು ಆ ದಿನ ಸ್ನಾನ ಮಾಡಿ, ಬರೀ ಮೈಯಲ್ಲಿ ಬೇವಿನ ಸೀರೆಯುಟ್ಟು ನಡೆದು ಬಾಯಿಯಲ್ಲಿ ಬೇವಿನ ಸೊಪ್ಪು ಹಿಡಿದು ದೇವಾಲಯದ ಬಳಿ ಬಂದು

ದೇವಸ್ಥಾನವನ್ನು ಮೂರು ಸುತ್ತು ಸುತ್ತಿ ಬರುವರು ಇದನ್ನು ಬೇವಿನಸೀರೆ ಎನ್ನುವರು. ಹೀಗೆ ಮಾಡುವುದರಿಂದ ಆ ದೇವತೆಗೆ ತೃಪ್ತಿಯಾಗಿ, ತಮ್ಮ ಕಷ್ಟಗಳನ್ನೆಲ್ಲ ನಿವಾರಿಸಿ ಸದಾ ತಮ್ಮನ್ನು ರಕ್ಷಿಸುವಳು ಎಂದು ಅವರು ನಂಬುವರು.

ಮಾರಮ್ಮನ ಜಾತ್ರೆಯಲ್ಲಿ ಕುರಿಗಳ ಹಿಂಡನ್ನು ಹಾಗೂ ಎತ್ತುಗಳನ್ನು ದೇವಾಲಯದ ಸುತ್ತ ಮೂರು ಸುತ್ತು ಓಡಾಡಿಸುವ ಒಂದು ಪದ್ಧತಿ ಈ ಪರಿಸರದಾದ್ಯಂತ ಕಂಡುಬರುತ್ತದೆ. ತಮ್ಮ ಕುರಿಗಳನ್ನು ಹಾಗೂ ಎತ್ತುಗಳನ್ನು ಸ್ವಚ್ಛವಾಗಿ ತೊಳೆದು ಮೈಗೆ ನೀಲಿ ಅಥವಾ ಕೆಂಪು ಬಣ್ಣವನ್ನು ಬಳಿದು ಜಾತ್ರೆಯ ದಿನ ಪ್ರದಕ್ಷಿಣೆ ಹಾಕಿಸಲಾಗುತ್ತದೆ. ಕುರಿಗಳಿಗೆ ಹಾಗೂ ಎತ್ತುಗಳಿಗೆ ಯಾವ ರೀತಿಯ ಕಾಯಿಲೆಗಳು ತಗಲದಿರಲಿ ಎಂಬ ಉದ್ದೇಶದಿಂದ ಹೀಗೆ ಮಾಡುತ್ತಾರೆ. ಇನ್ನು ಕೆಲವು ಕಡೆ ದನ ಎಮ್ಮೆಗಳನ್ನು ಹೀಗೆ ಪ್ರದಕ್ಷಿಣೆ ಹಾಕಿಸುವ ಪದ್ಧತಿ ಇದೆ.

## ಬಲಿ

ಬುಡಕಟ್ಟು ಸಮುದಾಯಗಳು ದೈವಗಳಲ್ಲಿ ಅಪಾರವಾದ ನಂಬಿಕೆಯನ್ನು ಹೊಂದಿರುತ್ತವೆ. ದೇವತೆಗಳನ್ನು ತಮ್ಮತ್ತ ಒಲಿಸಿಕೊಳ್ಳಲೂ ಅನೇಕ ವಿಧಿ ಸಂಪ್ರದಾಯಗಳನ್ನು ಆಚರಿಸುತ್ತಾರೆ. ಅದರಲ್ಲಿ ಬಲಿ ಪೂಜೆಯೂ ಒಂದು. ವಸ್ತುವನ್ನು ಪ್ರಾಣಿಯನ್ನು ನರ ಮನುಷ್ಯನನ್ನು ತಮ್ಮ ಇಷ್ಟದೇವರಿಗೆ ಸಮರ್ಪಿಸುವುದರ ಮೂಲಕ ಬಲಿ ನೀಡುತ್ತಾರೆ. ಬುಡಕಟ್ಟುಗಳಲ್ಲಿ ಕಾಣುವ ಬಲಿಯ ಉದ್ದೇಶ, ಸ್ವರೂಪ ಹಾಗೂ ವಿವಿಧ ಸಂಪ್ರದಾಯಗಳ ಕುರಿತು ಸಾಕಷ್ಟು ಬರಹ ಪ್ರಕಟಗೊಂಡಿವೆ. ಮ್ಯಾಸ ಬುಡಕಟ್ಟು ಸಮುದಾಯದಲ್ಲಿಯೂ ಬಲಿ ಪೂಜೆ ಕಂಡುಬರುತ್ತದೆ. ಬಲಿಯನ್ನು ಹೆಚ್ಚಾಗಿ ಸ್ತ್ರೀ ದೇವತೆಗಳು, ಶಕ್ತಿ ದೇವತೆಗಳಿಗೆ ಮಾತ್ರ ಅರ್ಪಿಸುತ್ತಾರೆ. ಇದರಿಂದ ದೇವತೆಗಳು ತೃಪ್ತರಾಗುತ್ತವೆ ಎಂದು ಭಾವಿಸುತ್ತಾರೆ. ಇವರಲ್ಲಿ ಪ್ರಾಣಿಬಲಿಯನ್ನು ಮಾತ್ರ ಕಾಣಬಹುದು. ಬಲಿ ಎಂದರೆ ವಿಧಿಪೂರ್ವಕವಾಗಿ ಪ್ರಾಣಿಗಳ ರಕ್ತವನ್ನು ದೈವಕ್ಕೆ ಸಮರ್ಪಿಸುವುದು. ಇದರಿಂದ ದೇವರನ್ನು ತೃಪ್ತಿಗೊಳಿಸುವುದು ಹಾಗೂ ದೈವವನ್ನು ಒಲಿಸಿಕೊಳ್ಳಲು ಬಲಿ ನೀಡುವುದರ ಮೂಲಕ ಪ್ರಯತ್ನಿಸುತ್ತಾರೆ.

ಮ್ಯಾಸನಾಯಕರು ಬಲಿ ನೀಡುವ ವಿಧಿ-ವಿಧಾನಗಳು ತುಂಬ ಸರಳವಾಗಿವೆ. ಗ್ರಾಮ ದೇವತೆಯ ಹಬ್ಬಗಳಲ್ಲಿ ಬಲಿ ಕೊಡುವುದು ಪ್ರಧಾನವಾದ ಆಚರಣೆ. ದೇವತೆಯನ್ನು ಮೆರೆಸುವಾಗ ಹೆಜ್ಜೆಗೊಂದು ಬಲಿಕೊಡುವ ಸಂಪ್ರದಾಯವಿದೆ. ಕುಂಡ ಹಾಯುವ ಮುನ್ನ ಅಥವಾ ಸಿಡಿ ಆಡುವ ಮುನ್ನ ಕುರಿಗಳನ್ನು ಬಲಿ ಕೊಡುವ ಪದ್ಧತಿ ಸಾಮಾನ್ಯವಾಗಿದೆ. ಬಲಿಯ ಆಚರಣೆಯಲ್ಲಿ ಪ್ರಧಾನವಾದುದು ಕೋಣನ ಬಲಿ. ಇದು ಕಣ್ಮರೆ ಆಗುತ್ತಿರುವ ಆಚರಣೆ. ಮ್ಯಾಸರಹಟ್ಟಿ ಕೊಟ್ಟೆಗುಡ್ಡದ ಮಾರಮ್ಮ, ಗೌರಸಮುದ್ರ ಮಾರಮ್ಮ, ವಡ್ನಳ್ಳಿ ಮಾರಮ್ಮ, ಮಲಿಯಮ್ಮ, ದುರುಗಮ್ಮ,

ದಡ್ಡುಮಾರಮ್ಮ ಇನ್ನೂ ಮುಂತಾದ ದೇವತೆಗಳಿಗೆ ಪ್ರಾಣಿಬಲಿಯನ್ನು ನೀಡುತ್ತಾರೆ. ಉಳಿದ ಅಂದರೆ ಬುಡಕಟ್ಟಿನ ಪುರುಷ ದೇವರುಗಳಿಗೆ ಬಲಿ ಕೊಡುವ ಪದ್ಧತಿ ಇಲ್ಲ. ಇಲ್ಲಿ ವ್ಯಾಸೆ ಕೊಯ್ಯುವ ಪದ್ಧತಿ ಬೋರೆದೇವರಗುಡಿಯಲ್ಲಿ ಪ್ರಚಲಿತದಲ್ಲಿದೆ. ಈ ಸಮುದಾಯದಲ್ಲಿ ಕೇವಲ ಸ್ತ್ರೀ ದೇವತೆಗಳಿಗೆ ಮಾತ್ರ ಬಲಿ ಪೂಜೆ ಇರುವುದು ಕಂಡುಬರುತ್ತದೆ. ಕುರಿ, ಆಡು, ಮುಂತಾದವುಗಳನ್ನು ದೇವತೆಯ ಗುಡಿ ಸುತ್ತ ಮೂರು ಸಲ ಪ್ರದಕ್ಷಿಣೆ ಮಾಡಿ ನಂತರ ಪೂಜಾರಿ ಭಂಡಾರ ಹಾಕಿದಾಗ ಒಂದೇ ತುಂಡಿಗೆ ಕತ್ತನ್ನು ಕಡಿಯಲಾಗುತ್ತದೆ. ನಂತರ ಅದರ ಬಲಗಾಲನ್ನು ಕತ್ತರಿಸಿ ಅದರ ಬಾಯಿಯೊಳಗೆ ಇಟ್ಟು ನೀರು ಬಿಡುತ್ತಾರೆ. ಅಲ್ಲಿಗೆ ಬಲಿ ಆಚರಣೆ ಮುಗಿಯುತ್ತದೆ. ಗೌರಸಮುದ್ರ ಮಾರಮ್ಮನ ಸಮಯದಲ್ಲಿ ಸಾವಿರಾರು ಕುರಿಗಳ ಬಲಿಯಾಗುತ್ತದೆ. ಈ ಹಬ್ಬವನ್ನು ಸಡಗರ ಸಂಭ್ರಮದಿಂದ ಆಚರಿಸುತ್ತಾರೆ.

**ಹಟ್ಟಿ ಜಾತ್ರೆ**

ರಕ್ತಾಕ್ಷಿ ನಾಮ ಸಂವತ್ಸರದ ಫಾಲ್ಗುಣ ಬಹುಳ ತದಿಗೆ ಚಿತ್ತಾ ನಕ್ಷತ್ರದ ಶುಭಯೋಗದಲ್ಲಿ ಆಯಸ್ಸಿನ ಮುಪ್ಪು ಆವರಿಸಿದಾಗ ಭಕ್ತರೊಂದಿಗೆ ಹೊಸ ಮಠಕ್ಕೆ ಬಂದು ತಿಪ್ಪಯ್ಯ ಜೀವೈಕ್ಯ ಸಮಾಧಿಯಾದನು. ಅದರ ಪ್ರತೀಕವಾಗಿ ಕಟ್ಟಿರುವ ದೇವಾಲಯವು ಹಿಂದೂ-ಮುಸ್ಲಿಂ ಶೈಲಿಯನ್ನು ಹೊಂದಿದೆ. ಲಿಂಗಪ್ಪ ಎಂಬ ಹೈದರಾಲಿಯ ನಿಯೋಜಿತ ಅಧಿಕಾರಿ ಇಲ್ಲಿನ ಉಸ್ತುವಾರಿ ನೋಡಿಕೊಳ್ಳುವಾಗ ತನಗೆ ಪುತ್ರಸಂತಾನ ಪ್ರಾಪ್ತಿಸಿದ್ದಕ್ಕಾಗಿ ತಿಪ್ಪೇಸ್ವಾಮಿಗೆ ಗುಮ್ಮಟ ಮತ್ತು ಕಮಾನಿನಾಕಾರದ ಲಕ್ಷಣಗಳಿರುವ ದೇವಾಲಯ ನಿರ್ಮಿಸಿದನೆನ್ನಲಾಗಿದೆ. ಇಲ್ಲಿ ಪ್ರತಿ ಸೋಮವಾರ ವಿಶೇಷ ಪೂಜೆ ನಡೆಯುತ್ತದೆ. ಪ್ರತಿವರ್ಷ ಚಿತ್ತಾನಕ್ಷತ್ರದಲ್ಲಿ ರಥೋತ್ಸವ ಜರುಗಿದಾಗ ಇಲ್ಲಿನ ಸಂಭ್ರಮ, ಭಕ್ತರು ಅಡಿಗೆ ಹರಕೆಗಳನ್ನು ತೀರಿಸುವ ಕ್ರಮ ವೈಭವಯುತವಾದುದು. ಮ್ಯಾಸನಾಯಕರು ಹೊರಮಠದ ಪೂಜಾರಿಗಳು. ಸರ್ಕಾರದ ಸಲಹೆ ಸೂಚನೆಯಂತೆ ಇಲ್ಲಿ ಮಹೋನ್ನತ ಕಾರ್ಯಗಳು ಜರುಗುತ್ತವೆ.

ಹೊರಮಠ ನಿಸರ್ಗದ ಮಡಿಲಲ್ಲಿದೆ. ಇದು ನೋಡಲು ಸುಂದರ ರಮಣೀಯ ಸ್ಥಳ. ಸುತ್ತಲೂ ತೆಂಗು, ಅಡಿಕೆ, ಹುಣಸೆಮರ, ಎಲೆ ತೋಟಗಳಿಂದ ಆವೃತವಾಗಿ ಹಚ್ಚ ಹಸಿರಿನ ನಡುವೆ ಕೆರೆ ಹಿಂಬದಿಯಲ್ಲಿ ಆಕರ್ಷಕವಾಗಿ ಕಂಗೊಳಿಸುತ್ತಿದೆ. ಮೇಲೆ ತಿಳಿಸಿದಂತೆ ಈ ಹಟ್ಟಿಯಲ್ಲಿ ಅನೇಕ ದೇವಾಲಯಗಳಿವೆ.

**ತೆಪ್ಪೋತ್ಸವ**

ಹಿರೇಕೆರೆಯಲ್ಲಿ ಈ ಒಂದು ಪದ್ಧತಿಯನ್ನು ಮಾಡುವುದು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಮಳೆ ಬರಲಿಲ್ಲವೆಂದಾಗ ಶ್ರಾವಣಮಾಸದಲ್ಲಿ ತೆಪ್ಪೋತ್ಸವ ಆಚರಿಸಲು ನಿರ್ಧರಿಸುತ್ತಾರೆ.

ಕೋರಿಕೆಯಂತೆ ಮಳೆಯಾದ ಕೆಲಕಾಲದಲ್ಲಿ ಸಮೃದ್ಧ ಮಳೆ ಬಂದು ಕೆರೆ ಕೋಡಿಬಿದ್ದರೆ ತೆಪೋತ್ಸವ ಮಾಡುವರು. ಬಹುತೇಕ ಕಾರ್ತಿಕ ಮಾಸದಲ್ಲಿ ಈ ಕಾರ್ಯವನ್ನು ಕೈಗೊಳ್ಳುವರು. ೨೨ ಹಳ್ಳಿಯವರು ಸೇರಿ ಲಕ್ಷಾಂತರ ಭಕ್ತಾದಿಗಳ ಮಧ್ಯೆ ತೆಪೋತ್ಸವ ಮಾಡುವುದು ಅದ್ಭುತವೆನಿಸಿದೆ.

## ಜಾತ್ರೆ ಮತ್ತು ರಥೋತ್ಸವ

ರಾಷ್ಟ್ರೀಯ ಭಾವೈಕ್ಯತೆಯ ಸಂಕೇತವಾಗಿ ಎಲ್ಲ ಸಮುದಾಯದವರು ತಮ್ಮ ತಮ್ಮ ಪಾಲಿನ ಕೆಲಸ ಕಾರ್ಯಗಳನ್ನು ಇಲ್ಲಿ ಮಾಡುತ್ತಾರೆ. ಪ್ರತಿವರ್ಷ ಫಾಲ್ಗುಣ ಮಾಸದ ಚಿತ್ತಾ ನಕ್ಷತ್ರದಲ್ಲಿ ರಥೋತ್ಸವ ಜರುಗುವುದು. ಅದಕ್ಕಿಂತ ೫ ದಿನ ಮೊದಲು ರಥಕ್ಕೆ ಕಳಸವಿಡುತ್ತಾರೆ. ಪಲ್ಲಕ್ಕಿಯಲ್ಲಿ ಉತ್ಸವಮೂರ್ತಿಯನ್ನು ಇಟ್ಟು, ಡೊಳ್ಳು, ನಗಾರಿ, ಕರಡಿವಾದ್ಯ, ಓಲಗ ಮುಂತಾದ ವಾದ್ಯಗಳ ಹಾಗೂ ಛತ್ರಚಾಮರ ಸಮೇತ ಹಾಜರಿರುತ್ತಾರೆ. ಇದಕ್ಕೆ ನಾಯಕನಹಟ್ಟಿಯ ಗೊಂಚಗೇರರ ಮನೆಯ ಅನ್ನ, ಜೋಗೇರಹಟ್ಟಿ ಗೊಲ್ಲರ ಮನೆಯ ಮೊಸರು ತಂದು ರಥದ ಗಾಲಿಗೆ ಎಡೆ ಹಾಕಿ ಎಳೆಯುತ್ತಾರೆ. ಪೂಜೆಯ ನಂತರ ತಳವಾರ, ಹರಿಜನರು, ಮಡಿವಾಳರು, ಬಡಿಗೇರರು ಎಡೆಯ ಅನ್ನವನ್ನೂ ತೇರಿಗೆ ಎಸೆಯುವ ಹಣ್ಣು ಹಂಪಲುಗಳನ್ನೂ ತೆಗೆದುಕೊಳ್ಳುವರು. ರಥದ ಮುಂದೆ ಕುಪ್ಪಿನಕೆರೆ ಆಂಜನೇಯನಿಗೆ ಎಡೆ ಹಾಕುತ್ತಾರೆ. ಸುಮಾರು ೯೦ ಅಡಿ ಎತ್ತರದ ತೇರು, ಒಂಬತ್ತು ಅಂತಸ್ತುಗಳನ್ನು ಹೊಂದಿರುತ್ತದೆ. ತುದಿಯಲ್ಲಿ ಕಳಶವಿದೆ.

ತೇರಿಗೆ ಸಾಮಾನ್ಯವಾಗಿ ೪ ಗಾಲಿ(ಚಕ್ರ)ಗಳಿದ್ದರೆ, ಈ ತೇರಿಗೆ ೫ ಗಾಲಿಗಳಿವೆ. ತೇರು ಎಳೆಯುವ ಸಂದರ್ಭದಲ್ಲಿ ದೊಡ್ಡದಾದ ಪಂಜನ್ನು ಬಳಸುತ್ತಾರೆ. ಎಲ್ಲ ವಿಧವಾದ ವಾದ್ಯ ಪ್ರದರ್ಶನಗಳು, ಮನೋರಂಜನ ತಂಡಗಳು ಭಾಗವಹಿಸುತ್ತವೆ. ರಥದ ಮರುದಿನ ಸಂಜೆ ಓಕುಳಿ ಆಡುತ್ತಾರೆ. ಅದೇ ಸಂದರ್ಭ ರಾತ್ರಿ ೮-೯ ಗಂಟೆ ಸುಮಾರಿಗೆ ಒಣಕೊಬ್ಬರಿಯನ್ನು ಸುಡುತ್ತಾರೆ. ಬೇಡರು ಕುರಿ, ಟಗರು, ಮೇಕೆ, ಹೋತ ಮುಂತಾದವುಗಳನ್ನು ಕಡಿದು ಮಾಂಸಾಹಾರಿ ಅಡಿಗೆ ಮಾಡಿ, ಎಡೆ ಹಾಕುತ್ತಾರೆ. ಉಳಿದವರು ಸಸ್ಯಾಹಾರವನ್ನು ಉಪಯೋಗಿಸುವರು.

ಜಾತ್ರೆಯ ನಂತರದ ಸೋಮವಾರದಂದು ಮರುಪರಷೆ ಆಗುತ್ತದೆ. ದೊಡ್ಡ ಪರಷೆಗೆ ಬಾರದಿರುವವರು ಆಕಸ್ಮಿಕವಾಗಿ ತಪ್ಪಿಸಿಕೊಂಡವರು ಇದಕ್ಕೆ ತಪ್ಪದೆ ಬರುತ್ತಾರೆ. ಪ್ರತಿ ಸೋಮವಾರ ಎರಡು ದೇವಾಲಯಗಳಲ್ಲಿ ಪೂಜೆ ನಡೆಯುವುದಕ್ಕೆ ವಾರೋತ್ಸವ ಎನ್ನುವರು. ನವದಂಪತಿಗಳು ತೇರು ನೋಡಲು ಬಂದರೆ, ರೈತರು ತೇರಿನ ದಿನ ಕೃಷಿ ಪ್ರಾರಂಭಿಸಲು ಭೂಮಿಪೂಜೆ ಮಾಡುವುದು ಆ ಭಾಗದ ಬೇಡರ ಇತರ ಸಮುದಾಯಗಳಲ್ಲಿ ಪ್ರಚಲಿತದಲ್ಲಿದೆ. ಈ ನಡುಗಡ್ಡೆಯಲ್ಲಿ ತಿಪ್ಪೇಸ್ವಾಮಿ ಜಾತ್ರೆಯೆಂದರೆ ಸುಗ್ಗಿ ಶಿವರಾತ್ರಿ ಎನ್ನುವರು. ಹುಣ್ಣಿಮೆಯ ಬೆಳದಿಂಗಳಲ್ಲಿ ಎತ್ತಿನಗಾಡಿಗಳನ್ನು ಹೊಡೆದುಕೊಂಡು ಹೋದರೆ ಆ ಮೋಜಿನ ಪಯಣ ವರ್ಣಿಸಲು ಅಸಾಧ್ಯ. ಎತ್ತಿನ ಗೆಜ್ಜೆ, ಗಂಟೆ, ಜೂಲು ಇತರ ವಸ್ತುಗಳ ಶಬ್ದ ಬಂದರೆ ಎತ್ತಿನಗಾಡಿ ಸ್ವರ್ಗ

ಲೋಕದಲ್ಲಿ ವಿಹರಿಸುವಂತೆ ಭಾಸವಾಗುತ್ತದೆ. ಧೂಳಿನಲ್ಲಿ ತಾ ಮುಂದು ನಾ ಮುಂದು ಎಂದು ಗಾಡಿಯನ್ನು ಓಡಿಸಿ ಅನೇಕ ಅನಾಹುತಗಳಾಗಿವೆ. ಆದರೂ ನಮ್ಮ ಜನಪದರು ವ್ಯರ್ಥ ಪಯಣ ಮಾಡುವವರಲ್ಲ. ಗಾಡಿಯಲ್ಲಿ ಬಂಧುಗಳನ್ನು ಹತ್ತಿಸಿಕೊಂಡು ಹೋಗುವಾಗ ಅನೇಕ ಜನಪದ ಗೀತೆಗಳನ್ನು ಹಾಡುತ್ತಾರೆ. ಮೈಮರೆತು ಕೋಲಾಟ ಭಜನೆ ಮುಂತಾದ ಪದಗಳನ್ನು ಹಾಡಿ ಭಕ್ತಾದಿಗಳನ್ನು ಭಾವಪರವಶರಾಗುವಂತೆ ಮಾಡುತ್ತಾರೆ. ಅನೇಕ ಮಂದಿ 'ಬರುತಿರೇನಮ್ಮ ತಂಗಿ ಜಾತ್ರೆಗೆ, ಹಟ್ಟಿ ತಿಪ್ಪಯ್ಯನ ತೇರಿಗೆ' ಎಂಬ ಹಾಡನ್ನು ಹಾಡುವುದು ಈ ಭಾಗದಲ್ಲಿ ಜನಪ್ರಿಯವಾಗಿದೆ. ಹಸುಳೆಯರನ್ನು ಸಹ ಆಕರ್ಷಿಸುವ ಜಾತ್ರೆಗೆ ಕರೆದೊಯ್ಯಲು ಹವಣಿಸುವರು ಕನ್ನಡ ನಾಡಿನ ಅನೇಕ ಜಾತ್ರೆಗಳಲ್ಲಿ ಮತ್ತು ಚಿತ್ರದುರ್ಗ ಜಿಲ್ಲೆಯ ಸುಮಾರು ೧೫ ಜಾತ್ರೆಗಳಲ್ಲಿ ಇದು ಗಣನೀಯ ಪ್ರಮಾಣದಲ್ಲಿ ದೊಡ್ಡದಾಗಿದ್ದು, ಹೆಚ್ಚಿನ ಮಹತ್ವ ಪಡೆದಿದೆ.

**ಅವಧೂತರ ಪರಿಚಯ**

ಆಧ್ಯಾತ್ಮಿಕ ಜೀವನವೇ ಭಾರತದ ಸಹಜ ಪ್ರವೃತ್ತಿ. ಈ ದೇಶದ ಪ್ರತಿಯೊಂದು ಭಾಗ ದಲ್ಲಿಯೂ, ಪ್ರತಿ ತಲೆಮಾರಿನಲ್ಲಿಯೂ, ಅತ್ಯುತ್ತಮರಾದ, ಅತಿಪವಿತ್ರರಾದ, ಅಧ್ಯಾತ್ಮ ಯೋಗಿಗಳು ಇದ್ದರೆಂಬುದು ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ಜನತೆಯ ಅಜ್ಞಾನ, ಅಂಧಕಾರವನ್ನು ಕಳೆದು, ಜ್ಞಾನದ ಬೆಳಕನ್ನು ಬೆಳಗಿದ ಭವರೋಗ ವೈದ್ಯರಾಗಿದ್ದಾರೆ. ಸಮಾಜದ ಎಲ್ಲಾ ವರ್ಗದವರನ್ನು ಸಮಾನರಾಗಿ ನೋಡಿ, ಕಾಪಾಡಿ, ಲೋಕೋಪಕಾರಕ್ಕಾಗಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿದ್ದಾರೆ.

ಬದುಕಿನ ಸಂಘರ್ಷದಿಂದ ದೂರವಾಗಿದ್ದ ಇವರು, ಆಧ್ಯಾತ್ಮಿಕ ಶಕ್ತಿಯನ್ನು, ತಮ್ಮ ಸಾಧನೆಯ ಸಿದ್ಧಿಯಿಂದ ಪಡೆದುಕೊಂಡಿರುತ್ತಾರೆ. ಅಧಿಕಾರ, ಅಹಂಕಾರ, ಐಶ್ವರ್ಯ, ವೈಭವ, ಸಂಸಾರ, ಮೋಹ, ಇವೆಲ್ಲವುಗಳನ್ನು ತ್ಯಜಿಸಿ, ವೈರಾಗ್ಯ, ತಾಳಿ, ಲೌಕಿಕ ಬಂಧನದಿಂದ ಸಂಪೂರ್ಣ ಬಿಡುಗಡೆ ಹೊಂದಿರುತ್ತಾರೆ. ಏಕಾಂಗಿಯಾಗಿ ಊರೂರು ಅಲೆದಾಡುವುದು. ಇವರ ವಿಶೇಷ ಗುಣವಾಗಿದ್ದು, ಬೆಟ್ಟಗುಡ್ಡಗಳಲ್ಲಿ ಯೋಗ ಸಾಧನೆ ಮಾಡಿ ಅವ್ಯಕ್ತ ಶಕ್ತಿಯನ್ನು ಪಡೆದಿರುತ್ತಾರೆ. ಮುಂದೆ ಮೋಕ್ಷ ಕಾಣಲು ಗುರುಗಳನ್ನು ಹುಡುಕುತ್ತಾ, ಗುರು ದೊರೆತ ಮೇಲೆ ಗುರುಕೃಪೆ ಮತ್ತು ಗುರೂಪದೇಶ ಪಡೆದು ಜೀವನ್ಮುಕ್ತ ಸ್ಥಿತಿಯನ್ನು ಪಡೆದಿರುತ್ತಾರೆ. ಆಗ ಜ್ಞಾನಸನ್ಯಾಸಿಗಳಾಗಿ, ಸದ್ಗುರುಗಳಾಗಿ, ವಿಭೂತಿಪುರುಷರಾಗಿ, ಅನೇಕ ಅದ್ಭುತ ಅತ್ಯಾಶ್ಚರ್ಯ ಭರಿತವಾದ, ಊಹಾತೀತವಾದ ಪವಾಡಗಳನ್ನು ಸಹಜವಾಗಿಯೇ ತೋರಿದ್ದಾರೆ. ಇಂಥವರನ್ನು ಜೀವನ್ಮುಕ್ತ, ಪರಬ್ರಹ್ಮ, ಪರಮಹಂಸ, ಪರಮಾರೂಢ, ಅವಧೂತರೆಂದೂ ಕರೆಯಲಾಗಿದೆ.

ಅವಧೂತ ಸ್ಥಿತಿ ತಲುಪಿದವರು ಜಾತಿ, ಮತ, ಪಂಥಗಳೆನ್ನದೆ, ಸರ್ವಜನರಿಂದ, ಸರ್ವವರ್ಗದವರಿಂದ ಸರ್ವಧರ್ಮದವರಿಂದ ಭಕ್ತಿಪೂರ್ವಕ ಗೌರವ ಮನ್ನಣೆ ಪಡೆದು,

ಸಮಾಜಕ್ಕೆ ಕೋಮು ಸೌಹಾರ್ದತೆಯನ್ನು, ಭಾವೈಕ್ಯತೆಯನ್ನು ಸಾರಿದ್ದಾರೆ. ತಮ್ಮನ್ನು ನಂಬಿದ್ದ ಭಕ್ತರ ವೈಯಕ್ತಿಕ ಹಾಗೂ ಸಾಮುದಾಯಿಕ ಜೀವನದಲ್ಲಿ ಎದುರಾಗುವ ಕಷ್ಟ-ನಷ್ಟಗಳಿಗೆ, ಸಮಸ್ಯೆಗಳಿಗೆ ಪರಿಹಾರ ನೀಡಿರುತ್ತಾರೆ.

ಅವಧೂತ ಎಂಬುದು ಸಂಸ್ಕೃತ ಪದವಾಗಿದ್ದು, ಅವ ಮತ್ತು ಧೂತ ಎಂಬ ಎರಡು ಘಟಕಗಳ ಸಂಯುಕ್ತ ರೂಪದಲ್ಲಿದೆ. ಇದರಲ್ಲಿ ಅವ(ರಕ್ಷಣೀ) ಎಂಬ ಧಾತುವಿದೆ. ಇಲ್ಲಿ ಅವ ಎಂದರೆ ರಕ್ಷಣೆ. ಅವ ಎಂಬುದು ಅವ್ಯಯವೆಂದು ಪರಿಗಣಿಸಿದಾಗ ಆಲಂಬನ/ಆಶ್ರಯವೆಂಬರ್ಥ ಹೊರಡುತ್ತದೆ. ಧೂತ ಎಂಬುದು ಧೂ ಞ ಕಂಪನೇ ಎಂಬ ಧಾತುವಿನಿಂದ ಬಂದಿದ್ದು, ಇದಕ್ಕೆ ತ್ಯಜಿಸು ಎಂದರ್ಥವಿದೆ.

(ತ್ಯಕ್ತಂ ಹೀನಂ ವಿಧುತಂ ಸಮುಜ್ಝಿತಂ ಧೂತಮುತ್ಸೃಷ್ಟಂ ಅಮರಕೋಶ)

ಈ ಪದಗಳ ಅರ್ಥ ವೈವಿಧ್ಯದಿಂದಾಗಿ ವಿವಿಧ ವ್ಯಾಖ್ಯಾನಗಳು ಕಂಡುಬರುತ್ತವೆ.

ಅವ ರಕ್ಷಣೀ ಎಂದು ಅರ್ಥವಾದಾಗ

**ವಿಗ್ರಹಾರ್ಥ:** "ಯೇನ ಆತ್ಮನಃ ಆತ್ಮೀಸ್ಯಚ ಅವನಂ ರಕ್ಷಣಂ ಧೂತನಂ ತ್ಯಕ್ತಂ, ಸ ಅವಧೂತ||" (ಅಂದರೆ ಯಾರು ತನ್ನ ತನ್ನವರ ರಕ್ಷಣೆಯ ಪ್ರಯತ್ನವನ್ನು ತೊರೆಯುತ್ತಾನೆಯೋ ಅವನೇ ಅವಧೂತ)

**ಸಮಾಸಾರ್ಥ:** "ಆತ್ಮಾತೀಯ ರಕ್ಷಣ ವಿಷಯೇ ಫಲಮುದ್ಧಿಶ್ಯ ಅಭಿಮಾನಿಕ ಕಾರ್ಯಪ್ರವೃತ್ತಿ ರಹಿತಃ||" (ಅಂದರೆ ತಾನು ತನ್ನವರ ರಕ್ಷಣೆಯ ವಿಷಯದಲ್ಲಿ ಪ್ರಯೋಜನದ ಅಪೇಕ್ಷೆಯಿಂದ ಅಭಿಮಾನಪೂರ್ವಕವಾಗಿ ಕಾರ್ಯದಲ್ಲಿ ತೊಡಗದಿರುವವನೇ ಅವಧೂತ).

ಅವ ಅಲಂಬನ / ಆಶ್ರಯ ಎಂದಾಗ "ಸ್ವಾಭಿಮತಂ ಸ್ವಾಪೇಕ್ಷಿತಂ ವಾ ಅಲಂಬನಂ ಆಶ್ರಯಂ ವಾ ಉದ್ದಿಸ್ಯ ಫಲ, ಫಲ ಪ್ರಯೋಜಕ ಪ್ರಯತ್ನಾದಿ ಪ್ರವೃತ್ತಿ ರಹಿತಃ||" (ಅಂದರೆ ತನಗೆ ಸಮ್ಮತವಾದ, ತಾನೇ ಬಯಸಿದ ಆಶ್ರಯವನ್ನು ಉದ್ದೇಶಿಸಿ, ಫಲಕ್ಕಾಗಿ ಮಾಡುವ ಪ್ರಯತ್ನ ಯಾರಲ್ಲಿ ಇಲ್ಲವೋ ಅವನೇ ಅವಧೂತ).

**ಅರ್ಥ :** ಅವಧೂತ ಪದಕ್ಕೆ ವಿವಿಧ ಅರ್ಥಗಳಿದ್ದು ಅವುಗಳನ್ನು ಹೀಗೆ ಕ್ರೋಡೀರಿಸಲಾಗಿದೆ.

೧. ಸನ್ಯಾಸಿ, ಬೈರಾಗಿ, ಜಗತ್ತಿನ ಸಂಬಂಧವನ್ನು ತ್ಯಜಿಸಿದ ವಿರಕ್ತ. ವರ್ಣಾಶ್ರಮ ಧರ್ಮಗಳನ್ನು ತ್ಯಜಿಸಿ ಪರಮಾತ್ಮ ಧ್ಯಾನಾಸಕ್ತನಾದ ಒಬ್ಬ ಯೋಗಿ.[೬]

೨. ತಳ್ಳಲ್ಪಟ್ಟ ಎಲ್ಲಾ ಬಗೆಯ ಅಭಿಮಾನವನ್ನು ತಳ್ಳಿ ಹಾಕಿದವನು. ವಿರಕ್ತರಲ್ಲಿ ಒಂದು ವಿಶೇಷ ಪ್ರಬೇಧ.[೭]

೩. ಅಪಮಾನಿಸಲ್ಪಟ್ಟ ಅಲ್ಲಾಡಿಸಲ್ಪಟ್ಟ, ಕುಲುಕಲ್ಪಟ್ಟ ವಿರಕ್ತ.[೮]

೪. Separated from worldly feeling and obligations ಎಲ್ಲಾ ಬಿಟ್ಟವನು. A Virakta.[೯]

೫. ಸರ್ವಸ್ವವನ್ನು ಬಿಟ್ಟವ[೧೦]

೬. ಯಾವ ನಿಯಮಗಳೂ ಇಲ್ಲದ ಸನ್ಯಾಸಿಗಳು(ಇವರು ನೈತಿಕ ಪಾಪಗಳನ್ನು ಮಾಡಿದವರನ್ನು ಬಿಟ್ಟು ಉಳಿದವಲ್ಲದರಿಂದಲೂ ಆಹಾರ ಸ್ವೀಕರಿಸುತ್ತಾರೆ. ಸದಾ ಆತ್ಮನಲ್ಲಿಯೇ ಇರುತ್ತಾರೆ. ಅಜಗರದಂತೆ ಆಹಾರ ಸ್ವೀಕರಿಸುತ್ತಾರೆ). ಸಮಸ್ತ ಬಂಧನಗಳನ್ನು ಕೊಡವಿ ಹಾಕಿದವನು. ಅತಿ ವರ್ಣಾಶ್ರಮಿಯಾದ ಸನ್ಯಾಸಿ.[೧೧]

ಅವಧೂತನೆಂದರೆ ಪ್ರಾಪಂಚಿಕ ವಿಷಯ ವಾಸನೆಗಳಿಂದಲೂ, ತನ್ನಿಮ್ಮಿತ್ತಾಗತ ಬಂಧನಗಳಿಂದಲೂ ಮುಕ್ತನಾದವನು ಎಂದು ತಿಳಿಯುತ್ತೇವೆ. ಮುಖ್ಯವಾಗಿ 'ಅವಧೂತ' ಎಂಬುದು ಪಾರಿಭಾಷಿಕ ಪದವಾದರೂ ಇದೇ ಮಾರ್ಗದ ಇತರ ಹಂತಗಳ ಸಾಧಕರಾದ ಮೌನಿ, ಯತಿ, ಪರಿವ್ರಾಜಕ, ಸಂನ್ಯಾಸಿ, ಯೋಗಿ, ಅತಿವರ್ಣಾಶ್ರಮಿ ಮುಂತಾದ ಸಾಧಕರೊಂದಿಗಿನ ಸಾದೃಶ್ಯ ವೈದೃಶ್ಯಗಳನ್ನು ಗುರುತಿಸಬೇಕಾಗುತ್ತದೆ. ಒಟ್ಟಿನಲ್ಲಿ ಆತ್ಮ ಚಿಂತನಾರೂಪವಾದ ಜ್ಞಾನದಿಂದ ಅರಿವಿಲ್ಲದೆ ಎಲ್ಲವನ್ನು ಉಲ್ಲಂಘನೆ ಮಾಡಿದ ಅವಧೂತನು ಯತಿ, ಸನ್ಯಾಸಿ, ಯೋಗಿ, ಮುನಿ, ಪರಿವ್ರಾಜಕ, ಪರಮಹಂಸ, ತುರ್ಯಾತೀತ ಇತ್ಯಾದಿ ಲಕ್ಷಣಗಳನ್ನು ಒಳಗೊಂಡಿರುತ್ತಾನೆ.

## ಅವಧೂತನಾಗಲು ಕಾರಣಗಳು

೧. ಪ್ರಬಲ ಸಂಸ್ಕಾರದಿಂದ : ಇದು ಹುಟ್ಟಿನಿಂದಲೇ ಬಂದಿರುತ್ತದೆ. ಏಕಾಂಗಿತನ, ಮೌನ, ಲೋಕದ ಪರಿವೇ ಇಲ್ಲದಿರುವುದು.

೨. ಅಧ್ಯಯನನಾದಿಗಳಿಂದ : ಆಧ್ಯಾತ್ಮಿಕ ಶಾಸ್ತ್ರ, ಪುರಾಣಗ್ರಂಥಗಳ ಸತತ ಅಧ್ಯಯನದಿಂದ.

೩. ಜೀವನದ ಜುಗುಪ್ಸೆಯಿಂದ : ಬಡತನ, ಸಂಸಾರದ ಹೊಣೆ ಹೊರಲು ಅಸಹಾಯಕತೆ, ನಿಂದನೆಯ ಮಾತುಗಳು, ಇವುಗಳಿಂದ ವೈರಾಗ್ಯ ಜೀವನದಲ್ಲಿ ಜುಗುಪ್ಸೆ ಹೊಂದುವುದು.

೪. ಮೇಲಿನ ಎಲ್ಲಾ ಕಾರಣಗಳಿದ್ದರೂ, ಪ್ರಬಲ ಗುರುವಿನ ಅನುಗ್ರಹ ಮತ್ತು ಗುರೂಪದೇಶವೂ ಅವಧೂತನಾಗಲು ಕಾರಣವಾಗಿರುತ್ತದೆ.

## ಪವಾಡಗಳು

ಅವಧೂತರು ಜನಪ್ರಿಯರಾಗಿರುವುದನ್ನು ತೋರಿಸುವ ಸಂಗತಿಗಳೆಂದರೆ ಅವರು ತೋರಿದರೆನ್ನಲಾದ ಪವಾಡಗಳು ಅಥವಾ ಮಹಿಮೆಗಳು. ಕಾಲದಿಂದ ಕಾಲಕ್ಕೆ ಅವತರಿಸಿದ

ಆಚಾರ್ಯರು ಪ್ರವಾದಿಗಳು, ಸಂತರು ಯೋಗಿಗಳು, ಪವಾಡಗಳನ್ನು ಮಾಡಿದ್ದಾರೆಂಬುದನ್ನು, ಅವರ ಜೀವನ ಚರಿತ್ರೆಗಳು ತಿಳಿಯಪಡಿಸುತ್ತವೆ.

ಪವಾಡವೆಂದರೆ ಅಸಾಮಾನ್ಯ ಘಟನೆ ಅಥವಾ ನಿಸರ್ಗದ ಯಾವುದೇ ನಿಯಮ ನಿಬಂಧನೆಗಳಿಂದ ವಿವರಿಸಲಾಗದ ಕಾರ್ಯ-ಕಾರಣ ಸಂಬಂಧವಿಲ್ಲದ ಮತ್ತು ನಿಸರ್ಗದ ನಿಯಮಗಳಿಗೆ ಮಿಕ್ಕಿದ ಅಲೌಕಿಕ ಶಕ್ತಿಯ ಕಾರ್ಯ.[೧೨] ವಿಚಾರವಾದಿಗಳ ಕಣ್ಣಿಗೆ ಕಟ್ಟುಕತೆಯಾಗಿ ಕಾಣುವ ಈ ಮಿತ್‌ಗಳನ್ನು ಭಕ್ತರು ತಮ್ಮ ದಿನನಿತ್ಯದ ಬಾಳಿನಲ್ಲಿ ಎದುರಾಗುವ ಸಾಮಾಜಿಕ, ಧಾರ್ಮಿಕ, ನೈಸರ್ಗಿಕ ಮತ್ತು ಇತರೆ ತೊಡಕು ತಾಪತ್ರಯಗಳನ್ನು ದೇವರೆಂದು ನಂಬಿದ ಮಹಾತ್ಮರ ಪವಾಡಗಳ ಮೂಲಕ ಎದುರಿಸುತ್ತಾರೆ. ಸಂಭವಿಸುವ ಎಲ್ಲಾ ಸಮಸ್ಯೆಗಳನ್ನು ಪವಾಡಪುರುಷರ ಮಹಿಮೆಯಿಂದ ಮಾನಸಿಕವಾಗಿ ಪರಿಹರಿಸಿಕೊಂಡಂತೆ ನಡೆಯುತ್ತಾರೆ.

ಅವಧೂತರು ಮಾಡಿದರೆನ್ನಲಾದ ಪವಾಡಗಳಲ್ಲಿ ಸ್ವಾರ್ಥವಾಗಲಿ, ಮಂತ್ರ ವಿದ್ಯೆಗಳಲ್ಲಿರುವಂತೆ ಮಾಟದ ಅಂಶವಾಗಲಿ, ವ್ರತಾಚರಣೆಯ ನಿಯಮ ನಿಬಂಧನೆಗಳಾಗಲೀ ಇರುವುದಿಲ್ಲ. ಅವಧೂತರ ಹೆಚ್ಚಿನ ಪವಾಡಗಳೆಲ್ಲಾ ಮಕ್ಕಳಿಲ್ಲದವರಿಗೆ ಸಂತಾನ ಕೊಡುವುದು, ಕಾಯಿಲೆ ವಾಸಿ ಮಾಡುವುದು, ಸಾವಿನಿಂದ ಉಳಿಸುವುದು, ಮಳೆ ತರುವುದು, ಬರಗಾಲ ಓಡಿಸುವುದು. ಬರಡು ಆಕಳು ಮತ್ತು ಎಮ್ಮೆಗಳಲ್ಲಿ ಹಾಲು ತರಿಸುವುದು. ಸಾಂಕ್ರಾಮಿಕ ರೋಗಗಳನ್ನು ಓಡಿಸುವುದು. ದೆವ್ವ, ಪೀಡೆ ಪಿಶಾಚಿಗಳಿಂದ ರಕ್ಷಿಸುವುದು. ನಂಬಿದ ಶುದ್ಧ ಮನಸ್ಸಿನ ಭಕ್ತರ ಬಡತನ ನಿವಾರಿಸುವುದು, ತನ್ನನ್ನು ನಿಂದಿಸಿದವರಿಗೆ ಕಡುಕಷ್ಟ ಕೊಡುವುದು ಇತ್ಯಾದಿ. ಭಕ್ತರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳಿಗೆ ಸಂಬಂಧಿಸಿದವುಗಳಾಗಿವೆ. "ಈ ಪವಾಡಗಳು ಸಮುದಾಯದ ನಂಬಿಕೆಗಳನ್ನು ಆಧರಿಸಿರುವುದರಿಂದ ಈ ತೆರೆದ ನಂಬಿಕೆಗಳಿಗೆ ಧಾರ್ಮಿಕ ಪರಿವೇಷವಿರುವುದರಿಂದ ಅಂತಿಮವಾಗಿ ಅವು ಜೀವಪರ ಧೋರಣೆಯನ್ನು ಹೊಂದುವುದರಿಂದ ಸಮುದಾಯಗಳು ತಾರ್ಕಿಕತೆಯನ್ನು ಬೆಳೆಸದೆ ನಂಬುತ್ತವೆ."[೧೩]

ಪವಾಡಗಳ ಹಾಗೆಯೇ ಅವಧೂತರುಗಳನ್ನು ದೈವತ್ವಕ್ಕೇರಿಸುವ ಇನ್ನೊಂದು ಧಾರ್ಮಿಕ ಪ್ರಕ್ರಿಯೆಯೆಂದರೆ ಭವಿಷ್ಯ ಹೇಳುವುದು. ಮುಂದೆ ಘಟಿಸಬಹುದಾದ ಘಟನೆಯನ್ನು, ವಸ್ತು, ವಿಷಯವನ್ನು ತಮ್ಮ ದಿವ್ಯದೃಷ್ಟಿಯ ಮುಖಾಂತರ ಹೇಳುವುದು. ಹಾಗೆಯೇ ಅವರ ಹುಚ್ಚು ಅಥವಾ ವಿಚಿತ್ರ ವರ್ತನೆಗಳನ್ನು ಮುಂದೆ ಘಟಿಸಬಹುದಾದ ಘಟನೆಗಳ ಸೂಚನೆಯೆಂದು ಭಾವಿಸುತ್ತಾರೆ. ಅವಧೂತನು ಕುಡುಗೋಲು ಹಿಡಿದು ಓಡಾಡಿದರೆ ರೋಗ-ರುಜಿನಗಳು ಬರುತ್ತವೆ ಎಂದೂ, ತನ್ನ ಹೆಗಲ ಮೇಲಿದ್ದ ಕಂಬಳಿಯನ್ನು ಕೊಡವಿದರೆ ಮಳೆ ಬರುತ್ತದೆಂದೂ ತಿಳಿಯುತ್ತಾರೆ. ಭಕ್ತರು ಭಾವಿಸಿದಂತೆ ನಡೆದಿರುವುದರಿಂದ ಯೋಗಿಗಳ ಬಗೆಗಿನ ಗೌರವ ಇನ್ನೂ ಅಧಿಕವಾಗಿರುತ್ತದೆ.

"ಸಂತರ ಪವಾಡಗಳ ಇನ್ನೊಂದು ಭಾಗವೆಂದರೆ ಅವರ ವಿಚಿತ್ರ ವರ್ತನೆಗಳದ್ದು. ತಮ್ಮ ಹುಚ್ಚಿನ ಮೂಲಕ ಅವರು ಮಾಡಿದ ಚಟುವಟಿಕೆಗಳು ಅವರ ಜನಪ್ರಿಯತೆಯನ್ನು ಹೆಚ್ಚಿಸಿವೆ. ವಾಸ್ತವವಾಗಿ ಹುಚ್ಚಿನ ಅಂಶವು ಅನುಭಾವಿ ಪಂಥದಲ್ಲಿ ಸಾಮಾನ್ಯ. ಯೋಗದ ಮೂಲಕ ಪರಾ(Trans) ಸ್ಥಿತಿಗೆ ಹೋಗುವುದು. ಇದಕ್ಕೆ ಉತ್ತೇಜನ ಪಡೆಯಲು ಭಂಗಿಯಂಥ ಮಾದಕಗಳನ್ನು ತೆಗೆದುಕೊಳ್ಳುವುದು. ಇವು ಹುಚ್ಚಿಗೆ ಪೂರಕ ಸಂಗತಿಗಳು. ದೈವಿಕವಾದ ಈ ಹುಚ್ಚಿನ ಸ್ಥಿತಿಯಲ್ಲಿ ಅವರು ಧಾರ್ಮಿಕ ಸಾಮಾಜಿಕ ಶಿಷ್ಟಾಚಾರಗಳನ್ನು ಮೀರಿ ನಿರಂಕುಶಮತಿಗಳಾಗಿ ದಾರ್ಶನಿಕ ಸ್ಥಿತಿ ಪಡೆಯುತ್ತಿದ್ದರು.[೧೪]

ಪವಾಡಗಳಂಥ ಸಿದ್ಧಿಯನ್ನು ಯೋಗಿಗಳು ಹಠಯೋಗದಂಥ ಸಾಧನೆಯಿಂದ ಪಡೆದುಕೊಂಡು ತಮ್ಮ ಅಂತಃಪ್ರೇರಣಾನುಗುಣವಾಗಿ ಎಲ್ಲ ಅವಶ್ಯಕವೆನಿಸುವುದೋ ಅಲ್ಲೆಲ್ಲಾ ಅವುಗಳನ್ನು ಪ್ರಯೋಗಿಸಿರುತ್ತಾರೆ. ಬಾಹ್ಯಾ ಡಂಬರಕ್ಕೆ ಜಂಬಕ್ಕೆ, ಜೋರು, ಅಹಂಕಾರಗಳಿಗೆ, ದೊಡ್ಡಸ್ತಿಕೆಗೆ ಈ ಶಕ್ತಿಯನ್ನು ಅವಧೂತರುಗಳು ಪ್ರಯೋಗಿಸುತ್ತಿರಲಿಲ್ಲ. ಈ ಶಕ್ತಿ ಪರಮಾತ್ಮನಿಂದಲೇ ಪ್ರಾಪ್ತವಾದುದೆಂದು ಲೋಕಕಲ್ಯಾಣಕ್ಕೆ, ಜನಹಿತಕ್ಕೆ ತಮ್ಮ ಕರ್ಮ ಮತ್ತು ದಕ್ಷತೆಗಳಿಗೆ ಅನುಗುಣವಾಗಿ ಉಪಯೋಗಿಸಿ ಮಹಾತ್ಮರಾಗಿದ್ದಾರೆ. ಅಂದರೆ ಪವಾಡ ಮಾಡುವವರೆಲ್ಲಾ ಮಹಾತ್ಮರಲ್ಲ, ಲೋಕ ಕಲ್ಯಾಣಕ್ಕೆ ತಮ್ಮ ಶಕ್ತಿ ಸಾಮರ್ಥ್ಯವನ್ನು ಪವಾಡಗಳ ಮೂಖಾಂತರ ವಿನಿಯೋಗಿಸುವವರು ಮಾತ್ರ ಮಹಾತ್ಮರು.

ಸಂಶೋಧನಾ ಕ್ಷೇತ್ರ ವ್ಯಾಪ್ತಿಯಲ್ಲಿ ಬೋಸೆದೇವರಹಟ್ಟಿ ಬ್ರಹ್ಮಾನಂದ ಅವಧೂತರ ಮಠ ಹಾಗೂ ಕಡಬನಕಟ್ಟೆ ಮ್ಯಾಸರಹಟ್ಟಿಯಲ್ಲಿ ಅವಧೂತರ ಮಠ ಇರುವುದನ್ನು ಕಾಣಬಹುದು. ಬೊಮ್ಮಯ್ಯ ಎಂಬ ಇಬ್ಬರು ಅವಧೂತರು ಮೂಲದಲ್ಲಿ ಶಿಕ್ಷಕ ವೃತ್ತಿಯಿಂದ ನಿವೃತ್ತಿಯಾಗಿ ನಂತರ ಅಧ್ಯಾತ್ಮ ಸ್ವೀಕಾರ ಯೋಗ ಸಾಧನೆಯಿಂದ ಅಣಿಮಾದಿ ಅಷ್ಟೈಶ್ವರ್ಯಗಳನ್ನು, ಪವಾಡಗಳಂಥ ಸಿದ್ಧಿಗಳನ್ನು ಪಡೆದ ಅವಧೂತರು, ಲೋಕಕಲ್ಯಾಣವನ್ನು ಬಯಸಿ, ತನ್ನನ್ನು ನಂಬಿದ ಶುದ್ಧ ಮನಸ್ಸಿನ ಭಕ್ತರ ವೈಯಕ್ತಿಕ ಮತ್ತು ಸಾಮೂಹಿಕ ಸಮಸ್ಯೆಗಳನ್ನು ಪರಿಹರಿಸಿ, ಇಷ್ಟಾರ್ಥವನ್ನು ನೀಡುವ ದೇವರಾಗಿದ್ದಾರೆ. ಇಂಥ ಮಹಾತ್ಮರನ್ನು ನೋಡುವುದೇ ಭಾಗ್ಯ ಹಾಗೂ ಆತನು ನೆಲೆ ನಿಂತ ಕ್ಷೇತ್ರವೂ ಅಷ್ಟೇ ಪವಿತ್ರವೆಂಬ ಭಾವನೆ ಭಕ್ತರ ಮನದಲ್ಲಿ ಮೂಡಿರುತ್ತದೆ. ಸಂಡೂರು ಮತ್ತು ಗಂಗಾವತಿ ಪರಿಸರದಲ್ಲಿ ಸಾಕಷ್ಟು ಪವಾಡಗಳನ್ನು ಮಾಡಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಇಂಥ ಮಹಾತ್ಮರು ತಮ್ಮ ಊರಲ್ಲಿಯೇ ಇರಲೆಂದು ಪರ ಊರಿಗೆ ಕಳಿಸಬಾರದೆಂದು ಭಕ್ತರು ನಿರ್ಧರಿಸಿ ಅವಧೂತನಿಗಾಗಿ ಮಠ ಕಟ್ಟಿಸಿ ಅಲ್ಲಿಯೇ ಸ್ಥಿರವಾಗಿ ನೆಲೆಸುವುದಕ್ಕೆ ವ್ಯವಸ್ಥೆ ಮಾಡುತ್ತಾರೆ. ಮಠವನ್ನು ಕಟ್ಟಿಸಿದ ಮೇಲೆ ಅವಧೂತನಿಗೆ ನಿತ್ಯವೂ ಭಕ್ತರು ಸೇವೆ ಮಾಡುತ್ತಿರುತ್ತಾರೆ. ಎಲ್ಲೆಲ್ಲಿಂದಲೋ ಬಂದ ಭಕ್ತರ ದರ್ಶನಕ್ಕೆ ಅವಧೂತನನ್ನು ಒಂದು ಎತ್ತರದ ಪೀಠದ ಮೇಲೆ ಕೂರಿಸುತ್ತಾರೆ. ಬಂದ ಭಕ್ತರು ಅವಧೂತನ

ದರ್ಶನ ಪಡೆದು ಪಾದಗಳಿಗೆ ನಮಸ್ಕರಿಸಿ, ಆ ಪಾದಗಳನ್ನು ತಮ್ಮ ತಲೆಯ ಮೇಲಿರಿಸಿಕೊಂಡರೆ ತಮ್ಮ ಪಾಪಗಳೆಲ್ಲಾ ಪರಿಹಾರವಾಗುವುದೆಂದು ನಂಬಿದ್ದಾರೆ. ಇದ್ಯಾವುದನ್ನು ತಿಳಿಯದ ಅವಧೂತನು ತನ್ನ ಧ್ಯಾನದಲ್ಲಿ ಮಗ್ನನಾಗಿರುತ್ತಾನೆ. ಯಾರ ಮೇಲೂ ತನ್ನ ನೋಟ ಬೀರದೆ ಯಾವುದೋ ಒಂದು ಅಪೂರ್ವ ವಸ್ತುವನ್ನು ನೋಡುತ್ತಿರುವಂತೆ, ಬಯಲನ್ನು ನೋಡುತ್ತಿರುತ್ತಾನೆ. ಬಂದ ಭಕ್ತರು ಅವಧೂತನು ತಮ್ಮ ಕಡೆ ನೋಡಲೆಂದು ಆತನ ಎಡಬಲಗಳಲ್ಲಿ ನಿಂತಿರುತ್ತಾರೆ. ಆದರೆ ಅವಧೂತನು ಯಾವಾಗಲಾದರೊಮ್ಮೆ ಕೈ ಆಡಿಸುವುದು. ಇಲ್ಲದಿದ್ದರೆ ಇಲ್ಲ. ಯಾವಾಗಲಾದರೊಮ್ಮೆ ಒಂದೆರಡು ಮಾತು ಇಲ್ಲದಿದ್ದರೆ ಸದಾ ಮೌನ. ಹೀಗೆ ಮಠದಲ್ಲಿ ಕುಳಿತ್ತಿದ್ದವನು ಇಲ್ಲವೇ. ಮಲಗಿದ್ದವನು ಇದ್ದಕ್ಕಿದ್ದ ಹಾಗೆ ಎದ್ದು ಬೀದಿಗೆ ನಡೆಯುತ್ತಾನೆ. ಇಲ್ಲವೇ ಸ್ಮಶಾನಕ್ಕೆ ಹೋಗಿರುತ್ತಾನೆ. ಆಗ ಭಕ್ತರು ಎಲ್ಲಾ ಕಡೆ ಹುಡುಕಿ ಮತ್ತೆ ಮಠಕ್ಕೆ ಇಲ್ಲವೇ ತಮ್ಮ ಮನೆಗಳಿಗೆ ಕರೆತರುತ್ತಾರೆ. ಮನೆಗೆ ಬಂದ ಅವಧೂತನಿಗೆ ಭಕ್ತಿಯಿಂದ ಪೂಜೆಸಿ ಸೇವೆ ಮಾಡುತ್ತಾರೆ. ಅದರ ಫಲವಾಗಿ ಪೂಜಿಸಿದವರ ಮನೆಯು ಪವಿತ್ರವಾಗಿ, ಸುಖ ಸಮೃದ್ಧಿ ನೆಲೆಸಿರುತ್ತದೆ. ಇದನ್ನು ಕಂಡ ಅನೇಕ ಭಕ್ತರು ಬಲವಂತವಾಗಿ ಅವಧೂತನನ್ನು ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಸ್ನಾನ ಮಾಡಿಸುತ್ತಾರೆ. ಮಡಿ ವಸ್ತ್ರಗಳನ್ನು ಉಡಿಸಿ, ಪೀಠದಲ್ಲಿ ಕೂರಿಸಿ, ವಿಭೂತಿ, ಗಂಧ ಹಚ್ಚಿ ಫಲತಾಂಬೂಲ ನೀಡುತ್ತಾರೆ. ಇದ್ಯಾವುದೂ ಬೇಕಾಗಿಲ್ಲದ ಅವಧೂತನಿಗೆ ಬಲವಂತದಿಂದ ಸೇವೆ ಮಾಡುತ್ತಾರೆ. ಈ ರೀತಿ ಬಲವಂತದಿಂದ ಸೇವೆ ಮಾಡಿದ ಮನೆಗಳು ಯಥಾಸ್ಥಿತಿಯಲ್ಲಿಯೇ ಇದ್ದು, ಆತನೇ ತಾನಾಗಿ ಹೋದ ಮನೆಗಳು ಉತ್ತಮ ಸ್ಥಿತಿ ಪಡೆದಿವೆ ಎಂಬ ನಂಬಿಕೆ ಭಕ್ತ ಜನತೆಯಲ್ಲಿದೆ.

ಸುತ್ತಮುತ್ತಲಿನ ಗ್ರಾಮಗಳಲ್ಲಿ ಅವಧೂತನ ಮಹಿಮೆ ಪ್ರಚಾರವಾಗಿ, ಆತನ ಮುಖ ದರ್ಶನದಿಂದ ತಮ್ಮೆಲ್ಲಾ ಕಷ್ಟಗಳೂ, ತೊಂದರೆಗಳು ಅಪಾಯಗಳು ಪಾರಾಗಿ, ತಮ್ಮ ಬಯಕೆಗಳನ್ನು ಅವಧೂತನು ಈಡೇರಿಸುತ್ತಾರೆಂಬ ನಂಬಿಕೆಯಿಂದ ಜನ ತಂಡೋಪತಂಡವಾಗಿ ಮಠಗಳಿಗೆ ಬರುತ್ತಾರೆ. ಮುಂದೆ ತಮ್ಮ ಇಷ್ಟಾರ್ಥಗಳು ಕೈಗೂಡಿದಾಗ ಭಕ್ತರು ಕಾಣಿಕೆ ರೂಪದಲ್ಲಿ ಧನ-ಧಾನ್ಯಗಳನ್ನು ಮಠಕ್ಕೆ ತಂದುಕೊಡುತ್ತಾರೆ.

ಅವಧೂತನ ಮುಖದರ್ಶನ ಮಾಡಿದರೆ ಸಾಕ್ಷಾತ್ ಪರಮಾತ್ಮನ ದರ್ಶನ ಮಾಡಿದಂತೆಯೇ ಎಂದು ಭಾವಿಸಿ, ಬರುವ ಭಕ್ತರ ಸಂಖ್ಯೆಯನ್ನು ಕಂಡ ಮಠದವರು ಈ ಮಹಾತ್ಮನು ಇರುವವರೆಗೆ ಮಾತ್ರ ಭಕ್ತರು ಬರುವರು. ಅಮೇಲೆ ಈ ಕಡೆ ಸುಳಿಯುವುದೇ ಇಲ್ಲವೆಂದರಿತು ಬರುವ ಭಕ್ತರಿಗೆ ಮಠದಲ್ಲಿ ಉಳಿದುಕೊಳ್ಳಲು ಕೊಠಡಿ, ಸ್ನಾನ, ಊಟಕ್ಕೆ ವ್ಯವಸ್ಥೆ ಮಾಡಿರುತ್ತಾರೆ. ಮುಂದೆ ಅವಧೂತನು ಮಠದಲ್ಲಿಯೇ ಐಕ್ಯವಾಗಲು ವ್ಯವಸ್ಥೆ ಮಾಡಿ, ಅದರಂತೆ ಐಕ್ಯವಾದ ಮೇಲೆ ಸಮಾಧಿ ಮಾಡಿ ಗದ್ದುಗೆ ನಿರ್ಮಾಣ ಮಾಡಿರುತ್ತಾರೆ. ಕಾಲಾನಂತರ ಮಠಕ್ಕೆ ಬರುವ

ಭಕ್ತರು ನೀಡುವ ಸಹಕಾರದಿಂದ ಮಂಟಪ ನಿರ್ಮಾಣ ಮಾಡಿ, ಅವಧೂತನ ಪ್ರತಿಮೆ ಮಾಡಿ ಪ್ರತಿಷ್ಠಾಪಿಸಿರುತ್ತಾರೆ. ಅವಧೂತನು ಐಕ್ಯನಾದ ದಿನದಂದು, ಪುಣ್ಯತಿಥಿಯ ಅಂಗವಾಗಿ ಪ್ರತಿವರ್ಷವೂ ಜಾತ್ರೆ, ಮಹೋತ್ಸವಗಳನ್ನು ನಡೆಸುತ್ತಾ ಬರುತ್ತಾರೆ.

ಮ್ಯಾಸ ಸಮುದಾಯದಲ್ಲಿ ಪವಾಡಗಳ ಬಗ್ಗೆ ಇತ್ತೀಚೆಗೆ ಯಾವುದೇ ವಿದ್ಯಮಾನಗಳು ಇಲ್ಲದಿದ್ದರೂ, ಸಮುದಾಯದ ಪೌರಾಣಿಕ ಮತ್ತು ಐತಿಹಾಸಿಕ ವಿದ್ಯಮಾನವನ್ನು ಅವಲೋಕಿಸಿದರೆ ಹಿಂದೆ ಸಾಂಸ್ಕೃತಿಕ ವೀರರು ಪವಾಡ ಪುರುಷರಾಗಿದ್ದರು ಎಂಬುದಕ್ಕೆ ಹಲವಾರು ಉಲ್ಲೇಖಗಳಿವೆ. ಪಾಪನಾಯಕ ಒಬ್ಬ ಮಹಾನ್ ಪುರುಷನಾಗಿದ್ದು, ಹುಲ್ಲುಗಾವಲುಗಳಿಗೆ ತನ್ನ ಪಶುಗಳನ್ನು ಮೇಯಿಸಲು ಹೋದಾಗ ಮಾಡುವ ಹೋರಾಟಗಳು ಮ್ಯಾಸ ಸಮುದಾಯದ ವೀರಗಾಥೆಯ ಪವಾಡವನ್ನು ತೋರಿಸುತ್ತದೆ. ಇಲ್ಲಿ ಜಗಳೂರು ಪಾಪನಾಯಕನಂತೆ ಯರಮಂಚನಾಯಕ, ರಪ್ಪಲಸೂರಿ ಮಲಿಯಮ್ಮ ಸೇರಿದಂತೆ ಹಲವಾರು ಸಾಂಸ್ಕೃತಿಕ ವೀರರ ಪವಾಡಗಳನ್ನು ಕಾಣಬಹುದು.

### ಹಬ್ಬ-ಜಾತ್ರೆ(ಕೊಡಗಲ್ಲು ಬೊಮ್ಮಯ್ಯ)

ಪ್ರತಿವರ್ಷ ದೀಪಾವಳಿ ಮತ್ತು ಗುಗ್ಗರಿ ಹಬ್ಬದಲ್ಲಿ ಇವನ ಹಬ್ಬ, ಜಾತ್ರೆಗಳು ಜರುಗುತ್ತವೆ. ಬುಡಕಟ್ಟಿನ ಸಂಪ್ರದಾಯದಂತೆ ಗಂಗೆಸ್ನಾನ, ಗುಗ್ಗರಿ ಹಾಕಿ, ದೇವರೆತ್ತುಗಳ ಸಮ್ಮುಖದಲ್ಲಿ ಕಾರ್ಯಕ್ರಮಗಳನ್ನು ನೆರವೇರಿಸುತ್ತಾರೆ. ಕುರಿಹಟ್ಟಿ ಬೊಮ್ಮದೇವರ ಜಾತ್ರೆ ಭರತ ಹುಣ್ಣಿಮೆಯಾದ ನಂತರ ಆಗುತ್ತದೆ. ಅದೇ ರೀತಿ ಗೌರಸಮುದ್ರದ ಬೊಮ್ಮದೇವರ ಜಾತ್ರೆ ಕಂಪಳದೇವರ ಜಾತ್ರೆ ಆದ ನಂತರ ಜರುಗುವುದು.

ಕೊಡಗಲುಬೊಮ್ಮನಿಗೆ ಸಂಬಂಧಿಸಿದ ಜಾತ್ರೆ, ಹಬ್ಬ ತಲೆಮಾರುಗಳಿಂದ ಆಚರಣೆ ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿದೆ. ಮಕ್ಕಳಿಗೆ ಬೊಮ್ಮಣ್ಣ, ಬೊಮ್ಮಕ್ಕನೆಂದು ನಾಮಕರಣ ಮಾಡುತ್ತಾರೆ. ಕಷ್ಟ ಬಂದಾಗ ಕಾಸುಕಟ್ಟಿಕೊಂಡು ಮೀಸಲು ಹರಕೆ ಹೊರುತ್ತಾರೆ. ಮಕ್ಕಳಿಲ್ಲದವರು ಸಂತಾನಭಾಗ್ಯಕ್ಕಾಗಿ ಹರಕೆ ಹೊತ್ತು ಹುಟ್ಟಿದ ಮಗುವಿಗೆ ಹೆಸರಿಡುವಂತೆ ಕೋರಿಕೊಳ್ಳುವ ಸಂಪ್ರದಾಯವಿದೆ. ಶೈವೀಕರಣಗೊಂಡ ಬೊಮ್ಮನ ಹೆಸರನ್ನು ಇಂದು ಬೊಮ್ಮ ಲಿಂಗೇಶ್ವರನೆಂದು ಜನಪ್ರಿಯಗೊಳಿಸಿದ್ದಾರೆ.

### ಚಳ್ಳಕೇರಮ್ಮ ಜಾತ್ರೆ

ಎಲ್ಲಾ ಗ್ರಾಮದೇವತೆಗಳ ಕತೆಯನ್ನೇ ಚಳ್ಳಕೇರಮ್ಮನ ಕತೆಯೂ ಹೋಲುತ್ತದೆ. ಗ್ರಾಮದೇವತೆ ಮೂಲತಃ ಬ್ರಾಹ್ಮಣ ಹೆಣ್ಣು. ಈಕೆಯ ರೂಪಕ್ಕೆ ಮನಸೋತ ದಲಿತನೊಬ್ಬ ಸುಳ್ಳು ಹೇಳಿ ಮದುವೆಯಾಗಿ, ಸಂಸಾರ ಮಾಡಿ, ನಾಲ್ಕಾರು ಮಕ್ಕಳನ್ನೂ ಪಡೆದ. ಮಗನನ್ನು ಹುಡುಕುತ್ತಾ

ಬಂದ ದಲಿತನ ತಾಯಿಯಿಂದ ಸತ್ಯ ತಿಳಿದು ಹತಾಶಳಾದ ಹೆಣ್ಣು ಅಗ್ನಿಪ್ರವೇಶ ಮಾಡಿ ಸತ್ತು ಶಕ್ತಿಯಾಗಿ ಜನಿಸಿ ತನ್ನ ಗಂಡನನ್ನು ಕೋಣದ ರೂಪದಲ್ಲಿ ಬಲಿ ತೆಗೆದುಕೊಂಡರೆ, ಗಾವುಮರಿ, ಧೂಳುಮರಿ ಮುಂತಾದ ರೂಪದಲ್ಲಿ ಮಕ್ಕಳ ಬಲಿಯನ್ನು ತೆಗೆದುಕೊಳ್ಳುತ್ತಾಳೆ. ಈ ಕತೆಯೇ ಆಚರಣೆಯಲ್ಲಿ ರೂಪುಗೊಂಡಿರುವುದನ್ನು ಗಮನಿಸಬಹುದು.

ಚಳ್ಳಕೇರಮ್ಮನಿಗೆ ಸಮೀಪದಲ್ಲೇ ಬೇರೆ ಹೊಳೆಗಳು ಇದ್ದರೂ ಜಲಧಿಗೆಂದು ಹೋಗುವುದು ದೊಡ್ಡೇರಿಗೆ. ಇದು ಹಿಂದೆ ಅಲ್ಲಿದ್ದ ಪಾಳೆಯಗಾರರ ಸಂಬಂಧವನ್ನು ಸೂಚಿಸುವಂತೆ ಕಾಣುತ್ತದೆ. ಅಲ್ಲಿಂದ ಬಂದ ನಂತರ ಹಿಂದಿನ ಜಾತ್ರೆಯ ವೇಳೆಗೆ ಕೋಣನ ಬಲಿಯ ಮೂಲಕ ಗಂಡನನ್ನು ಕಳೆದುಕೊಂಡು ವಿಧವೆಯಾಗಿದ್ದ ಅಮ್ಮನಿಗೆ ಮಾಂಗಲ್ಯಧಾರಣೆ ಮಾಡುತ್ತಾರೆ. ಅಮ್ಮನಿಗೆ ಈ ಮಾಂಗಲ್ಯ ಬರುವುದು, ಈಗ ಚಳ್ಳಕೆರೆಯ ಕಾಟಪ್ಪನಹಟ್ಟಿಯಲ್ಲಿ ನೆಲೆಸಿರುವ ದೊಡ್ಡಮದಕರಿನಾಯಕರ ವಂಶಸ್ಥರಾದ ಶ್ರೀ ಪಿ.ಆರ್.ವೀರಭದ್ರನಾಯಕ ಅವರ ಮನೆಯಿಂದ. ಇದು ಪಾಳೆಯಗಾರರಿಗೂ ಅಮ್ಮನಿಗೂ ಇದ್ದ ಪ್ರಾಚೀನ ಸಂಬಂಧವನ್ನು ಸೂಚಿಸುತ್ತದೆ. ಇದನ್ನು ತಾಳಿಭಾಗ್ಯ ಕೊಡುವ ಸಂಪ್ರದಾಯವೆಂದು ಕರೆಯಲಾಗುತ್ತದೆ.

ಕೋಣನ ಬಲಿಯ ನಂತರ ತಾಯಿ ಮತ್ತೆ ವಿಧವೆಯಾಗುತ್ತಾಳೆ, ತಾಳಿಯನ್ನು ತೆಗೆಯಲಾಗುತ್ತದೆ. ಈ ತಾಳಿಯನ್ನು ಚಿತ್ರದುರ್ಗದಲ್ಲಿರುವ ಉತ್ಸವಾಂಬೆಯ ಭಂಡಾರಕ್ಕೆ ಕಳಿಸಿ ಕೊಡಲಾಗುತ್ತದೆ. ಈ ನಡಾವಳಿ ಚಳ್ಳಕೇರಮ್ಮನ ಮೂಲವನ್ನು ಉತ್ಸವಾಂಬೆಗೆ ಕೊಂಡೊಯ್ಯುತ್ತದೆ. ಗಂಡನ ರೂಪದ ಕೋಣವನ್ನು ಕಡಿದು, ಅದರ ತಲೆಯನ್ನು ದೇವಿಯ ಮುಂದೆ ಇಟ್ಟು, ಆ ಕೋಣದ ನೆಣದಿಂದಲೇ ಅಮ್ಮನ ಗುಡಿಯ ಮುಂದಿನ ದೀಪಸ್ತಂಭದ ಕೆಳಗಿರುವ ನೇತ್ರಸ್ತಂಭದಲ್ಲಿ ನಂದಾದೀಪ ಉರಿಸುತ್ತಾರೆ.

ಮರುದಿನ ಪೋತರಾಜರು ಗಾವು ಸಭೆ ನಡೆಸಿ, ಗಾವು ಸಿಗಿಯುತ್ತಾರೆ. ಮೇಕೆಯ ಕುತ್ತಿಗೆಗೆ ಬಾಯಿ ಹಾಕಿ ಬಲಿ ತೆಗೆದುಕೊಳ್ಳುವ ರೀತಿ ರೋಚಕವಾಗಿರುತ್ತದೆ. ನಂತರ ಸಿಡಿ ಉತ್ಸವ ನಡೆದು ಜಾತ್ರೆ ಒಂದು ಮುಕ್ತಾಯದ ಹಂತಕ್ಕೆ ಬರುತ್ತದೆ.

ಗತಿಸಿದ ಇತಿಹಾಸದ ಕತೆಯೊಂದನ್ನು ಈ ಬಗೆಯ ಆಚರಣೆಗಳ ಮೂಲಕ ಅನುಸಂಧಾನ ಮಾಡುವ ಪರಿಯೇ ಜಾತ್ರೆಯಾಗಿದೆ. ಮಾನವನ ಸಂಸ್ಕೃತಿಯ ಕತೆಯನ್ನು ತನ್ನ ಗರ್ಭದಲ್ಲಿ ಇರಿಸಿಕೊಂಡಿರುವ ಇಂಥ ಉತ್ಸವಗಳ ಹಿನ್ನೆಲೆ ರೋಚಕವಾಗಿದೆ.

**ಕನ್ನಿಬೋರಯ್ಯಹಟ್ಟಿ ಬಸವಣ್ಣ ದಸರಾಚರಣೆ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಖಾನಾಹೊಸಹಳ್ಳಿ ಹೋಬಳಿಗೆ ಸೇರಿದ ಪೂಜಾರಹಳ್ಳಿ ಎಂಬ ಗ್ರಾಮದ ಕನ್ನಿಬೋರಯ್ಯನಹಟ್ಟಿಯಲ್ಲಿ ಬಸವಣ್ಣನ ದೇವಾಲಯವಿದೆ. ಈ ಗ್ರಾಮದ ಪ್ರಧಾನ ದೇವರು ಬಸವಣ್ಣ ಈ ದೇವರಿಗೆ ಬಸಣ್ಣ, ಬಸವಣ್ಣ, ಕಲ್ಯಾಣ ಬಸವಣ್ಣ

ಮತ್ತು ಗುರುಕರಿಬಸವೇಶ್ವರ ಎಂದೆಲ್ಲ ಕರೆಯುತ್ತಾರೆ. ಈ ಭಾಗದಲ್ಲಿ ಇದು ಎಷ್ಟು ಪ್ರಸಿದ್ಧಿಯೆಂದರೆ ಹುಣ್ಣಿಮೆ, ಅಮಾವಾಸ್ಯೆ ಸೋಮವಾರದಂದು ಭಕ್ತಾದಿಗಳ ಜನಜಂಗುಳಿ ನೆರೆದಿರುತ್ತದೆ.

ಬಸವೇಶ್ವರ ಕಲ್ಯಾಣದ ಪ್ರತಿರೂಪದಂತೆ ಪೂಜಾರಹಳ್ಳಿ ಧಾರ್ಮಿಕ ಕ್ಷೇತ್ರ ಈ ಭಾಗದಲ್ಲಿ ಜನಪ್ರಿಯಗೊಂಡರೂ ಬುಡಕಟ್ಟು ಸಮುದಾಯದ ಸಂವಿಧಾನದ ಪರಿಧಿಯಲ್ಲಿ ಬೆಳಕಿಗೆ ಬರಲು ಕಾತರಿಸುತ್ತಿದೆ. ಈ ಗ್ರಾಮ ವಿಶಾಲವಾದ ಪ್ರದೇಶ, ನದಿ, ಕಾಲುವೆಗಳಿಲ್ಲದಿದ್ದರೂ ಭಕ್ತ ವೃಂದ ಸ್ನಾನಕ್ಕೆ ಕೆರೆ, ಹಳ್ಳ ಬಾವಿಗಳನ್ನು ಅವಲಂಬಿಸುತ್ತಾರೆ. ಪ್ರತಿವರ್ಷ ವಿಜೃಂಭಣೆಯಿಂದ ಜರುಗುವ ದಸರಾಹಬ್ಬ ಅಥವಾ ಬನ್ನಿ ಮುಡಿಯುವ ಹಬ್ಬವನ್ನು ವಿಶಿಷ್ಟಪೂರ್ಣವಾಗಿ ಮಾಡುತ್ತಾರೆ. ಬುಡಕಟ್ಟು ಸಮುದಾಯಕ್ಕೆ ಒಲಿದ ದೇವರು ಇದಾಗಿದ್ದರೂ, ಧಾರ್ಮಿಕ ಹಬ್ಬ, ಆಚರಣೆಗಳಲ್ಲಿ ಎಲ್ಲ ಜನ ವರ್ಗಗಳೂ ಸಮಾನವಾಗಿ ಭಾಗವಹಿಸಿ ಬೆರಗುಗೊಳಿಸುತ್ತಾರೆ. ಭಕ್ತರು ಯಾವುದೇ ಅಂಜಿಕೆ ಅಳುಕು ಇಲ್ಲದೆ ತಮ್ಮ ವೃತ್ತಿ ಯಶಸ್ವಿಯಾಗಿ ಮಾಡುತ್ತಾರೆ. ಕರ್ನಾಟಕ ಮತ್ತು ಆಂಧ್ರಪ್ರದೇಶದಿಂದ ಸಹಸ್ರಾರು ಭಕ್ತರು ಇಲ್ಲಿಗೆ ಧಾವಿಸುವುದು ವಾಡಿಕೆ. ಇವರು ಉದಾರವಾಗಿ ದಾನಕಾರ್ಯಗಳನ್ನು ಮಾಡಿ ದೇವಾಲಯದ ಕಟ್ಟಡದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಇಂದು ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದ ಮತ್ತು ನೆರೆಯ ಆಂಧ್ರದ ಅನಂತಪುರ, ಕಡಪ, ಕರ್ನೂಲುಗಳಲ್ಲದೆ ಕರ್ನಾಟಕದ ರಾಯಚೂರು, ಧಾರಾವಾಡ, ದಾವಣಗೆರೆ, ಶಿವಮೊಗ್ಗ ಮುಂತಾದ ಕಡೆಗಳಿಂದ ಭಕ್ತಾದಿಗಳು ಇಲ್ಲಿಗೆ ಆಗಮಿಸುತ್ತಾರೆ. ಸ್ಥಳೀಯ ಮೊಳಕಾಲ್ಮೂರು, ಚಳ್ಳಕೆರೆ, ನಾಯಕನಹಟ್ಟಿ, ಖಾನಾಹೊಸಹಳ್ಳಿ, ಚಿಕ್ಕಜೋಗಿಹಳ್ಳಿ ಮತ್ತಿತರ ನೆರೆಯ ಗ್ರಾಮಗಳವರು ಧಾವಿಸುತ್ತಾರೆ.

ಪೂಜಾರಹಳ್ಳಿ ಗ್ರಾಮದ ಕನ್ನಿಬೋರಯ್ಯನಹಟ್ಟಿಯಲ್ಲಿ ಬಸವಣ್ಣನ ದೇವಾಲಯವಿದೆ. ಪೂರ್ವದಲ್ಲಿದ್ದ ಗುಡಿಸಲನ್ನು ತೆಗೆದು ಸುಂದರ ದೇವಾಲಯವನ್ನು ಇತ್ತೀಚೆಗೆ ನಿರ್ಮಿಸಿದ್ದಾರೆ. ಇಲ್ಲಿ ಬಸವೇಶ್ವರ ಹೆಸರಿನಲ್ಲಿರುವ ಗೂಳಿಗೆ ಸಮಾಧಿ, ಪೂಜಾರಿಗಳ ಸಮಾಧಿಗಳಿವೆ. ಈ ಬಸವಣ್ಣ ಯಾರು ಎಂಬುದು ದೊಡ್ಡ ಸಮಸ್ಯೆಯಾಗಿದೆ. ಐತಿಹಾಸಿಕ ವ್ಯಕ್ತಿ ಅಥವಾ ಪುರಾಣ ವ್ಯಕ್ತಿ ಎಂಬುದು ತಿಳಿಯುತ್ತಿಲ್ಲ. ಬೇಡರು ಬಸವಣ್ಣನನ್ನು ಉದಾತ್ತೀಕರಿಸಿ ದೇವರ ಅವತಾರವೆಂದು ನಂಬಿ ಪೂಜಿಸಿರಬಹುದು ಅಥವಾ ಬುಡಕಟ್ಟು ಸಮುದಾಯದಲ್ಲಿ ಅಂಥ ಒಬ್ಬ ವೀರ ಹುಟ್ಟಿರಬಹುದು. ಇವರು ಅಕ್ಕಮಹಾದೇವಿಯನ್ನು ಅಕ್ಕಮ್ಮ ದೇವತೆಯೆಂದು ಪೂಜಿಸಿರುವುದರಿಂದ ಬಸವೇಶ್ವರರನ್ನು ಬಸವಣ್ಣ ಎಂದು ಪೂಜಿಸಿರಬಹುದೆನ್ನಬಹುದು. ಬಸವಣ್ಣ ಎನ್ನುವ ಲಿಂಗ ಕಾಮಗೇತಿ ವಂಶದ ಚಿತ್ತಕ್ಕ(ಅಕ್ಕರಾಯಮ್ಮ) ಎಂಬುವಳಿಗೆ ಬಂದಿತ್ತೆಂದು ವಾಡಿಕೆಯಿದೆ.

ಭಕ್ತರು ಲಿಂಗವನ್ನು ಕೆಳಗೆ ಹಾಕಿದಂತೆಲ್ಲಾ ಅದು ಬಂದು ಒಡಲು ತುಂಬಿಕೊಳ್ಳುತ್ತಿತ್ತಂತೆ. ಪುನಃ ಸಾಯಂಕಾಲ ದನಕರುಗಳನ್ನು ಮನೆಗೊಡೆದುಕೊಂಡು ಬರುವಾಗ ತನ್ನ ಒಡಲಿಗೆ ಬಂದು ಸೇರಿಕೊಂಡಿತು. ಮನೆಗೆ ಬಂದು ತಂದೆ ತಾಯಿಗಳಿಗೆ ತಿಳಿಸಿದಾಗ ಅವರೂ ಸಹ ಅದನ್ನು ಮರಳಿ ಅಲ್ಲೆ ಬಿಸಾಡಿ ಬರುತ್ತಾರೆ. ಆದರೂ ಅದು ಆಕೆಯ ಸಂಗಡ ಬಂದಾಗ

ಮನೆಯ ನೆಲವು(ವುತ್ತಿ)ನಲ್ಲಿಟ್ಟು ಪೂಜಿಸಿದರಂತೆ. ಕ್ರಮೇಣ ಪವಾಡ ತೋರಿ ಮರೆಯಾದ ಮಹಾ ವ್ಯಕ್ತಿಯಾದನೆಂದು ಪ್ರತೀತಿಗಳಿವೆ. ಅಂದಿನಿಂದ ಗ್ರಾಮದಲ್ಲಿ ವೃತ್ತಾಕಾರವಾಗಿ ಹುಲ್ಲಿನಿಂದ ದೇವಾಲಯವನ್ನು ನಿರ್ಮಿಸಿದರು. ಬುಡಕಟ್ಟು ಸಮುದಾಯದ ವಾಲ್ಮೀಕಿ ಗೋತ್ರದ ಬೇಡರ ಪಂಗಡದ ಪಾಮುಡ್ಲಾರು(ಕಾಮಗೇತಿ) ವಂಶಸ್ಥರು ಇದರ ಪೂಜಾರಿಗಳು.

ಪಶುಪಾಲನೆಯ ಸಂಕ್ರಮಣ ಸ್ಥಿತಿಯಲ್ಲಿ ಉದ್ಭವಗೊಂಡು ಲಿಂಗವನ್ನು ಶಿವಲಿಂಗವೆಂದು ಪರಿಗಣಿಸಿ ಬಸವ ಎಂದು ಕರೆದರು. ಅಂದಿನಿಂದ ಲಿಂಗಕ್ಕೆ ಗೂಳಿಯನ್ನು ಬಿಡುತ್ತಾ ಬಂದರು. ಆ ಗೂಳಿಗೆ ಮುದ್ರೆ ಹಾಕುತ್ತಾರೆ. ನಂತರ ಸ್ವತಂತ್ರವಾಗಿ ಗ್ರಾಮದಲ್ಲಿ ವಾಸಿಸಲು ಅವಕಾಶ ಕಲ್ಪಿಸುತ್ತಾರೆ. ಈ ಗೂಳಿಯಿಂದ ಮಳೆಯನ್ನು ಕೇಳಿಸುವುದು, ಮಕ್ಕಳಫಲ, ಕಷ್ಟನಷ್ಟಗಳಾದಾಗ ಫಲಾಪೇಕ್ಷೆಯನ್ನು ಅಪೇಕ್ಷಿಸಿ ಬಂದವರಿಗೆ ಅನೇಕ ಸಂದರ್ಭದಲ್ಲಿ ಉತ್ತಮ ಕೆಲಸಗಳಾಗಿವೆ. ಹೀಗಾಗಿ ಇದಕ್ಕೆ ನಡೆದುಕೊಳ್ಳುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಲಿದೆ. ಬಂದು ಹೋದವರ ರೋಚಕ ನೆನಪುಗಳು ಮುದ ನೀಡುತ್ತವೆ. ಸಿಂಧೂ ಬಯಲಿನ ಜನರು ಪೂಜಿಸುವ ಗೂಳಿಯಂತೆ, ಪಶುಪತಿ ಆರಾಧನೆಯಂತೆ ಇಲ್ಲಿ ಸಮೂಹ ದೇವತೆಗಳನ್ನು ಸಹ ಪೂಜಿಸುತ್ತಾರೆ. ದೇವರೆತ್ತುಗಳನ್ನು(ದನಕರುಗಳನ್ನು ದೇವರ ಹೆಸರಿನಲ್ಲಿ) ಬಿಟ್ಟಿರುತ್ತಾರೆ. ರೊಪ್ಪ (ಗೂಡು)ವನ್ನು ಪೂಜಿಸುತ್ತಾರೆ. ದೀಪಾವಳಿಯಲ್ಲಿ ಸೋಮವಾರ, ಮಂಗಳವಾರ ಹಬ್ಬವಾಗುತ್ತದೆ. ಅಂದು ಕಾಸು ಮೀಸಲು ಕಲಿಯುವುದು, ಪರವು ಮಾಡುವುದು, ಎಲ್ಲರಿಗೂ ಅನ್ನ ದಾಸೋಹ ಏರ್ಪಡಿಸುತ್ತಾರೆ. ಅಲ್ಲದೆ ವಿಶೇಷ ಪೂಜೆ, ಮಣಿವು, ದೇವರೆತ್ತು ಓಡಿಸುವುದು ಪದ್ಧತಿಯಾಗಿದೆ.

ಗುಗ್ಗರಿ ಹಬ್ಬ ಮಾಘಮಾಸದಲ್ಲಿ ಪ್ರತಿವರ್ಷ ಜನವರಿ ಅಥವಾ ಫೆಬ್ರವರಿಯಲ್ಲಿ ನಡೆಯುತ್ತದೆ. ಗುಗ್ಗರಿ ಹಬ್ಬದಂದು ದೇವರನ್ನು ಗಂಗೆ ಪೂಜೆಗಾಗಿ ಚಿನ್ನಹಗರಿ ನದಿಗೆ ಒಯ್ಯುತ್ತಾರೆ. ಅಲ್ಲಿ ಪೂಜಾ ಕಾರ್ಯಗಳನ್ನು ಮುಗಿಸಿಕೊಂಡು ರಾತ್ರಿ ಗ್ರಾಮಕ್ಕೆ ಬರುತ್ತಾರೆ. ಬರುವ ಮುನ್ನ ನದಿ ದಂಡೆಯ ಮೇಲೆ ಮಣೇವು ಇಟ್ಟುಕೊಂಡು ಎಲ್ಲರಿಗೂ ನೆನೆಸಿದ ಸಜ್ಜೆ ಮೊಳಕೆಯನ್ನು ಸಿಹಿ ಪದಾರ್ಥವನ್ನು ಹಂಚುತ್ತಾರೆ. ನಂತರ ಮಾಳೇನಹಳ್ಳಿ ಭಕ್ತರು ದೇವರಿಗೆ ಕಾಯಿ ಒಡೆಸಿ ಪೂಜೆ ಮಾಡಿಕೊಳ್ಳುತ್ತಾರೆ.

ಜನ್ನಿಗೆಹಳ್ಳಕ್ಕೆ ಜನ್ನಿಗೆ ಆಕಳುಗಳಿಂದ ಹೆಸರು ಬಂದಿದೆ. ಇಲ್ಲಿಗೆ ಬುಡಕಟ್ಟು ಜನರ ದೇವತೆಗಳು ಹೆಚ್ಚಾಗಿ ಗಂಗೆಸ್ನಾನಕ್ಕೆ ಬರುತ್ತವೆ. ಎಲ್ಲಾ ಸಮುದಾಯದವರು ದೇವರ ದರ್ಶನ ಪಡೆಯಲು ಮುಂದಾಗುತ್ತಾರೆ. ದೇವಸ್ಥಾನದ ಗರ್ಭಗೃಹದಲ್ಲಿ ಬಸವಣ್ಣನ ಜೊತೆ ಓಬಳದೇವರು ಸಹ ಇದೆ. ಒಂದು ಶೈವ ಸಂಪ್ರದಾಯವಾಗಿದ್ದರೆ, ಇನ್ನೊಂದು ವೈಷ್ಣವ ಸಂಪ್ರದಾಯದಂತೆ ಕಂಡುಬರುತ್ತದೆ. ಅದು ಸಾಲಿಗ್ರಾಮ ಹೊಂದಿದ್ದು ಪೆಟ್ಟಿಗೆ ದೇವರಾಗಿದೆ. ಬಸವಣ್ಣನದು ಪೀಠ ದೇವರಾಗಿದ್ದು ಬೆಳ್ಳಿ ಆಭರಣಗಳನ್ನು ದೇವರಿಗೆ ಅಲಂಕರಿಸಲಾಗಿದೆ.

ಸಹಸ್ರಾರು ಜನ ಸೇರುವುದರೊಂದಿಗೆ ಮಹಾಲಯ ಅಮಾವಾಸ್ಯೆ ಆದ ೧೧ ದಿವಸದಲ್ಲಿ ಪ್ರತಿವರ್ಷ ದಸರಾ ಹಬ್ಬವಾಗುತ್ತದೆ. ಆಗ ವಯಸ್ಕರಿಗೆ ಸುಗ್ಗಿಯೇ ಸುಗ್ಗಿ, ಯುವಕ ಯುವತಿಯರಿಗೆ ಮಹಾದಾನಂದ. ಇಲ್ಲಿ ಒಂದು ರಾತ್ರಿಯಲ್ಲಿ ಸಂತೋಷ ಸಂಭ್ರಮದಲ್ಲಿ ಮೈಮರೆತು ಆಚರಿಸುವ ಹಬ್ಬವಿದು. ದೇವರ ಮೆರವಣಿಗೆ ದೇವಾಲಯದಿಂದ ಊರಿನ ಕೇರಿಗಳನ್ನು ಸುತ್ತುವರೆದು ಬನ್ನಿಮರದ ಹತ್ತಿರ ಬರುತ್ತಾರೆ. ಬೆಳಗ್ಗೆ ೬-೭ ಗಂಟೆ ಆಗಬಹುದು. ಮೇಳ, ಉರುಮೆ, ತಮಟೆ ಮುಂತಾದ ಧ್ವನಿವರ್ಧಕಗಳನ್ನು ಕರೆಸುತ್ತಾರೆ. ನಂದಿಕೋಲುಗಳನ್ನು ಕುಣಿಸುವವರಿಗೆ ಲೆಕ್ಕವಿಲ್ಲ. ಕುಣಿದು ಕುಣಿದು ಕುಪ್ಪಳಿಸುವವರೇ ಜಾಸ್ತಿ. ಚೆಂಡೂ ಹೂ, ಹೊಂಬಾಳೆಯಿಂದ ದೇವರ ವಿಗ್ರಹವನ್ನು ಅಲಂಕರಿಸುತ್ತಾರೆ. ಇದಕ್ಕೆ ಎಲ್ಲಾ ಅಯಗಾರರು ಬಂದು ತಮ್ಮ ಪಾಲಿನ ಕೆಲಸ ಕಾರ್ಯಗಳನ್ನು ಮಾಡುತ್ತಾರೆ. ಅವರಲ್ಲಿ ಪ್ರಮುಖರಾದ ಅಸಾದಿ, ಚಲುವಾದಿ, ಅಗಸ, ಪುರೋಹಿತರು ಆಗಮಿಸುತ್ತಾರೆ. ಬನ್ನಿಮರದ ಹತ್ತಿರ ಪೂಜಾಕಾರ್ಯಗಳು ಮುಗಿದಾಗ ದೇವರ ಪಟ, ಹೂವಿನ ಹಾರಗಳ ಹರಾಜು ನಡೆಯುತ್ತದೆ.

ಪ್ರತಿವರ್ಷ ಎರಡು ಬಾರಿ ಹಿರಿಯರ ಹಬ್ಬ ಮಾಡುತ್ತಾರೆ. ಒಂದು ಬಾರಿ ಯುಗಾದಿ ಯಾದರೆ, ಇನ್ನೊಂದು ಬಾರಿ ದಸರಾ ಹಬ್ಬ. ಹೀಗೆ ಈ ಹಬ್ಬಗಳಲ್ಲಿ ಹಿರಿಯರ ಹಬ್ಬವನ್ನು ವೈಭವವಾಗಿ ಆಚರಿಸುತ್ತಾರೆ. ಅಮಾವಾಸ್ಯೆಯಾದ ೧೧ರ ರಾತ್ರಿ ಉರುಮೆ ನಂದಿಕೋಲು, ನಗಾರಿ, ತಮಟೆ ಮುಂತಾದವುಗಳನ್ನು ಸಿದ್ಧತೆ ಮಾಡಿಕೊಳ್ಳುತ್ತಾರೆ. ಜೊತೆಗೆ ಕಳಸ, ಪಂಜು, ಅಲಂಕೃತವಾದ ಛತ್ರಿ ಚಾಮರಗಳ ಸೇವೆಯು ನಡೆಯುತ್ತದೆ.

ಈ ಹಬ್ಬದಲ್ಲಿ ಮಕ್ಕಳ ಗುಲ್ಲೇ ಗುಲ್ಲು. ಹಕ್ಕಿಗಳ ಗೂಡನ್ನು(ಗುಬ್ಬಚ್ಚಿ) ತಂದು ಬೆಂಕಿ ಹಚ್ಚಿ ತಿರುವುತ್ತಾರೆ. ಇದೊಂದು ಮೋಜಿನ ಆಟ. ಹೆಣ್ಣುಮಕ್ಕಳು ವಿವಿಧ ರೀತಿಯ ಆಟಗಳನ್ನು ಆಡುತ್ತಾರೆ. ಸಮಾನ ವಯಸ್ಸಿನ ಯುವತಿಯರು ಅದ್ಭುತ ಕ್ರೀಡೆಗಳನ್ನು ಪ್ರದರ್ಶಿಸುತ್ತಾರೆ. ಹಿರಿಯ ಹೆಣ್ಣುಮಕ್ಕಳು ಸೋಬಾನೆ ಹಾಡುವುದು ಕೇಳಿದರೆ ಮೂಕವಿಸ್ಮಿತರಾಗುತ್ತೇವೆ. ಹೀಗೆ ದೀಪಾವಳಿ, ಗುಗ್ಗರಿ ಹಬ್ಬದಲ್ಲಿ ಆಗುವ ಕಾರ್ಯಕ್ರಮಗಳು ಶೈವ ಸಂಪ್ರದಾಯದಿಂದ ಕೂಡಿವೆ.

ವಿಜಯದಶಮಿಯ ರಾತ್ರಿ ಸುಮಾರು ೧೦ ಗಂಟೆಗೆ ಗುಡಿಯಿಂದ ದೇವರು ಹೊರಟು ಊರಿನ ಕೇರಿಗಳ ಮೂಲಕ ಊರ ಹೊರಗೆ ಪೂರ್ವದಿಕ್ಕಿಗಿರುವ ಬನ್ನಿಮರದ ಬಳಿ ಹೋಗುತ್ತಾರೆ. ಅಲ್ಲಿ ಸುಮಾರು ಹತ್ತು ಸಾವಿರಕ್ಕೂ ಹೆಚ್ಚು ಮಹಾಭಕ್ತಾದಿಗಳು ಭಾಗವಹಿಸುತ್ತಿದ್ದರು. ಕುಳಿತುಕೊಳ್ಳಲು ಜಾಗವಿರುವುದಿಲ್ಲ. ಈಗ ಕಡಿಮೆ ಆಗಿದೆ. ಹೀಗಾಗಿ ೨ ಗಂಟೆಗಳ ಕಾಲ ಕಳೆಯುವುದು ಈ ಕಾರ್ಯಕ್ರಮಗಳಿಂದ ಗೊತ್ತಾಗುವುದಿಲ್ಲ. ಪೂಜಾಕಾರ್ಯಗಳೂ ಭಕ್ತರಿಂದ ಹೂವು, ಹಣ್ಣು, ಕಾಯಿ ಕೊಡುವುದರ ಮೂಲಕ ನಡೆಯುತ್ತದೆ. ಇನ್ನು ಕೆಲವರು ಮರುದಿನ ಕೊಡುತ್ತಾರೆ. ದೂರದ ಊರುಗಳಿಂದ ಬಂದವರು ಕಾಣಿಕೆ ಹಾಕಿ ಬನ್ನಿ ಮುಡಿದು ಪೂಜಾ ಸೇವೆ

ಮುಗಿಸುತ್ತಾರೆ. ನಂತರ ಹೂವಿನಪಟದ ಹರಾಜು ನಡೆಯುತ್ತದೆ. ವಿವಿಧ ಗ್ರಾಮಗಳಿಂದ ಭಕ್ತರು ಬಂದು ಕೋಲಾಟ ಮತ್ತು ಭಜನೆ ಮಾಡಿ ಬೆರಗುಗೊಳಿಸುವಂಥಾದ್ದಾಗಿದೆ. ಪ್ರತಿಯೊಬ್ಬರು ಭಾಗವಹಿಸಿ ಐಕ್ಯತೆಯನ್ನು ಕಾಪಾಡಿಕೊಳ್ಳುತ್ತಾರೆ.

ಯುವಕರು ನಂದಿಕೋಲುಗಳನ್ನು ಹಾಕಿಕೊಂಡು ಕುಣಿಸುತ್ತಾರೆ. ಎಷ್ಟೇ ತೂಕವಿದ್ದರೂ ಉತ್ಸಾಹದಿಂದ ಶಕ್ತಿಮೀರಿ ಕುಣಿಸಿ ಜನರನ್ನು ರಂಜಿಸುತ್ತಾರೆ. ಕುರಿಹಟ್ಟಿಯಿಂದ ಮೇಳ ಉರುಮೆ, ಬಂದರೆ ಗ್ರಾಮದ ಮಡಿವಾಳರು ಮಡಿ ಹಾಸುವುದು, ಪಂಜು ಹಿಡಿಯುವ ಕೆಲಸ ಮಾಡುತ್ತಾರೆ. ಬೆಳಕು, ಪಂಜು, ಲೈಟ್ ಇತ್ಯಾದಿ ವ್ಯವಸ್ಥೆಯನ್ನು ಗ್ರಾಮದ ಹರಿಜನರು ಮಾಡುತ್ತಾರೆ. ಹೀಗೆ ಮಹಾನವಮಿ(ಬನ್ನಿಹಬ್ಬ) ಹಬ್ಬದಲ್ಲಿ ಸಂಬಂಧಿಗಳ ಕೂಡುವಿಕೆ, ಗೂಳಿ, ಪೂಜೆ, ಪಟಹಾರಗಳ ಹರಾಜು, ದೇವರು ಮೈ ತುಂಬುವುದು ಪೂಜಾರಿಗಳು ಸಸ್ಯಾಹಾರಿ ಭೋಜನ, ಉಪವಾಸ ಮುಂತಾದ ಸಂಗತಿಗಳು ದಸರಾ ಹಬ್ಬದ ಐತಿಹಾಸಿಕ ಹೆಗ್ಗುರುತುಗಳಾಗಿವೆ.

## ಮಲಿಯಮ್ಮನ ಜಾತ್ರೆ

ಜುಮ್ಮೋಬನಹಳ್ಳಿ ಬಳ್ಳಾರಿ ಜಿಲ್ಲೆಗೆ ಸೇರಿದ ಒಂದು ಹಳ್ಳಿ. ಇಲ್ಲಿಯೂ ಒಂದು ದೇವಾಲಯವಿದೆ. ಅದರ ಪಕ್ಕದ ಮ್ಯಾಸರೇ ವಾಸವಾಗಿರುವ ಹಟ್ಟಿಯಲ್ಲಿಯೂ ಒಂದು ಮಲೆಯಮ್ಮನ ಗುಡಿ ಇದೆ. ಅದರ ಪ್ರಕಾರ ಮಲೆಯಮ್ಮ ತಮಗೆ ಕೊರಚರಿಂದ ದೊರೆತವಳು ಎಂದಾಗಿದೆ. ಸೊಂಡೂರು ಕಿಂಡಿಯಿಂದ ಒಮ್ಮೆ ಇತ್ತ ಕೊರಚರು ಬರುವಾಗ ಅಲ್ಲಿದ್ದ ಮಣ್ಣಿನ ಮೂರ್ತಿಯನ್ನು ಮಲೆಯಮ್ಮ ಎಂದು ಮಾರಮ್ಮನ ಮೂರ್ತಿಯನ್ನು ಮಾಡಿ ಪೂಜಿಸಿದ್ದಳು. ಈಗ ಮಲೆಯಮ್ಮನ ಆರಾಧನೆ ಮಾಡುವಾಗ ಕೆಲವೆಡೆ ಮಣ್ಣಿನಮೂರ್ತಿಯನ್ನು ಮಾಡಿ ಅದನ್ನೇ ಮಲೆಯಮ್ಮ ಎಂದು ಪೂಜಿಸಲಾಗುತ್ತದೆ. ಹಾಗಾಗಿ ಈ ಮಣ್ಣಿನಮೂರ್ತಿ ಮತ್ತು ಜೋಳಿಗೆಯೊಂದನ್ನು ಅವರು ಮ್ಯಾಸಬೇಡರ ಕೈಗೆ ತಲುಪಿಸಲು ತಮ್ಮ ಮಲೆಯಮ್ಮ ನಮಗೆ ಸಿಕ್ಕಿದ್ದಾಳೆ ಎಂದು ಆಕೆಯನ್ನು ಪೂಜಿಸುತ್ತಾ ಬರುತ್ತಿದ್ದಾರೆ. ಕೊನೆಯ ಈ ಎರಡೂ ಕಥೆಗಳೂ ಮೂಲದಲ್ಲಿದ್ದ ಮಲೆಯಮ್ಮ ನಾಯಕಿಯ ಸ್ಥಾನವನ್ನು ಪಡೆದು ದೈವಿಕ ನೆಲೆಗೇರಿದಾಗ ಆಕೆಯನ್ನು ಆ ಸಮುದಾಯದ ಬೇರೆ ಬೇರೆ ಭಾಗದಲ್ಲಿ ಗ್ರಹಿಸಿದ ಪರಿ ಅಷ್ಟೇ. ಹನ್ನೆರಡು ಗುಡಿಸಲಿನವರು ಎರಡನೆಯ ತಂಡವಾಗಿ ಮಧ್ಯ ಕರ್ನಾಟಕದ ಕಡೆ ಬಂದಾಗ ಆ ಕಂಪಳದಲ್ಲಿ ಬಂದು ತನ್ನ ಸಮುದಾಯವನ್ನು ರಕ್ಷಿಸಿದ ಕೀರ್ತಿ ಮಲೆಯಮ್ಮನಿಗೆ ಸಲ್ಲುತ್ತದೆ.

ಸಮುದಾಯವೊಂದರ ಅಳಿವು ಉಳಿವಿನ ಪ್ರಶ್ನೆ ಬಂದಾಗ ಅದನ್ನು ಉಳಿಸಲು ಮುಂದಾದವರೂ ಆ ಕಾರ್ಯದಲ್ಲಿ ಯಶಸ್ಸನ್ನು ಪಡೆದವರೂ ಆ ಸಮುದಾಯದ ಸ್ಮರಣೆಯಲ್ಲಿ ಉಳಿದುಬರುತ್ತದೆ. ಅವರನ್ನು ದೈವಿಕ ನೆಲೆಗೇರಿಸಿ ಸಮುದಾಯ ಪೂಜಿಸುತ್ತಾ ಬರುತ್ತದೆ. ತಾನು ರೂಪಿಸಿದ ಕಾರ್ಯತಂತ್ರವೇ ಕಾರಣವಾಗಿ ಸಮುದಾಯವನ್ನು ರಕ್ಷಿಸಿದ ಮಲೆಯಮ್ಮ

ಮ್ಯಾಸಮಂಡಲದಲ್ಲಿ ಸ್ಮರಣೆಗೆ ಪಾತ್ರಳಾಗಿದ್ದಾಳೆ. ಈಕೆಯ ಬಗ್ಗೆ ಕಥನವನ್ನು ಕಟ್ಟಿ ತಮ್ಮ ನೆನಪಿನಂಗಳದಲ್ಲಿ ಈಕೆಯನ್ನು ಜೀವಂತವಾಗಿರಿಸಿಕೊಂಡಿದ್ದಾರೆ. ತಮಗೆ ರೋಗರುಜಿನ, ಕಷ್ಟಕಾರ್ಪಣ್ಯಗಳು ದನಕರುಗಳಿಗೆ ಅನಾರೋಗ್ಯ ಇತರೆ ತಾಪತ್ರಯಗಳು ಬಾಧಿಸಿದಾಗಲೆಲ್ಲಾ ಕಾಡಿನಲ್ಲಿರುವ ಮಲೆಯಮ್ಮನ ನೆಲೆ ಬಳಿಗೆ ಓಡುತ್ತಾರೆ. ದುಂಬಾಲು ಬೀಳುತ್ತಾರೆ. ಹರಕೆ ಹೊತ್ತುಕೊಂಡು ಬರುತ್ತಾರೆ. ಆಕೆ ಯಾವ ರೂಪದಲ್ಲಾದರೂ, ಕೊನೆಗೆ ಒಬ್ಬ ಚಿಕ್ಕ ಬಾಲಕಿಯಾಗಿಯಾದರೂ ಅಂದಿನ ಕನಸಿನಲ್ಲಿ ಬಂದರೆ ತಮ್ಮ ಸಮಸ್ಯೆ ಪರಿಹಾರವಾದಂತೆಯೇ ಎಂದು ನಂಬುತ್ತಾರೆ. ಇಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆ. ಜಾತ್ರೆಯಲ್ಲಿ ಗಂಗೆಪೂಜೆ ಅಗ್ನಿಕುಂಡ ಪ್ರವೇಶ ಸಿಡಿ ಮುಂತಾದ ವಿಶೇಷ ಕಾರ್ಯಕ್ರಮಗಳು ನಡೆಯುತ್ತವೆ.

ಚಿತ್ರದುರ್ಗ ಜಿಲ್ಲೆಗೆ ಸೇರಿದ ಮೊಳಕಾಲ್ಮೂರು ತಾಲೂಕಿನ ಒಂದು ಪುಟ್ಟ ಹಟ್ಟಿ ಕುಂಟೋಬಯ್ಯನಹಟ್ಟಿ. ಮ್ಯಾಸನಾಯಕರೇ ವಾಸಿಸುತ್ತಿರುವ ಪ್ರದೇಶವಿದು. ಒಮ್ಮೆ ದೆಡ್ಡಿ ಸೂರನಾಯಕನ ಎತ್ತುಗಳ ಗೂಡುಗಳು ಅಲ್ಲಿದ್ದವು. ಈತ ಈಗ ಒಬ್ಬ ಸಾಂಸ್ಕೃತಿಕ ನಾಯಕ/ ಶರಣ ಎಂದು ಪರಿಗಣಿಸಲ್ಪಟ್ಟು ಆರಾಧಿಸಲ್ಪಡುತ್ತಿದ್ದಾನೆ. ಪಶುಸಂಪತ್ತು ಇರುವ ಕಡೆ ಹಾಲು ಕಾಯಿಸುವುದು, ಹೆಪ್ಪು ಹಾಕಿ ಮೊಸರು ಮಾಡಿ ಕಡೆಯುವುದು, ಇದೆಲ್ಲಾ ಸಾಮಾನ್ಯವಾಗಿರುವ ಸಂಗತಿ. ಒಮ್ಮೆ ಇಲ್ಲಿ ದನಗಳ ಗೂಡಿನಲ್ಲಿದ್ದ ಮ್ಯಾಸರು ಒಂದು ಆಲದ ಮರದ ಕೊಂಬೆಯನ್ನು ಕಡಿದು ತಮ್ಮ ಗೂಡಿನ ಮುಂಭಾಗದಲ್ಲಿ ನೆಟ್ಟು ಅದನ್ನೇ ಮಜ್ಜಿಗೆ ಕಡೆಯುವ ಕಂಬವನ್ನಾಗಿ ಮಾಡಿಕೊಂಡು ಮಜ್ಜಿಗೆ ಕಡೆಯುತ್ತಿದ್ದರಂತೆ. ಕೆಲವೇ ದಿನಗಳಲ್ಲಿ ಆ ಮರ ಚಿಗುರುತ್ತದೆ. ಆ ಮರದ ಕೆಳಗೆ ಮಲೆಯಮ್ಮ ಒಡಮೂಡಿದಳು ಎಂಬುದು ಈ ಸಮುದಾಯದವರ ನಂಬಿಕೆ. ಮಜ್ಜಿಗೆ ಕಡೆಯುವ ಕಂಬದಲ್ಲಿ ಮಲೆಯಮ್ಮ ಜನಿಸಿದಳು ಎಂದು ಹೇಳುತ್ತಾ ಆ ಪ್ರಾಂತ್ಯದ ಜನ ಆಕೆಯನ್ನು ಪೂಜಿಸುತ್ತಾ ಬರುತ್ತಿದ್ದಾರೆ. ಮೂರು ವರ್ಷಗಳಿಗೊಮ್ಮೆ ಜಾತ್ರೆ ಮಾಡುತ್ತಾರೆ.

ಕಂಪಳದೇವರಹಟ್ಟಿಯಲ್ಲಿ ಮಾರಮ್ಮನನ್ನು ಪೂಜಿಸಲಾಗುತ್ತದೆ. ವರ್ಷಕ್ಕೊಮ್ಮೆ ಹಟ್ಟಿಯ ಹೊರಗಡೆ ಪುಟ್ಟಿಯನ್ನು ತಂದು ಮಾರಮ್ಮನಿಗೆ ಎಂದು ಕುರಿ ಬಲಿ ಕೊಡುವ ಸಂಪ್ರದಾಯವಿದೆ. ಕಂಪಳರಂಗನ ಸನಿಹದಲ್ಲೇ ಈಕೆ ಇರುವುದರಿಂದ ಇದನ್ನು ಭಾಗ್ಯದ ಲಕ್ಷ್ಮಮ್ಮ ಎಂದು ಕರೆಯಲಾಗುತ್ತದೆ.

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಬೊಮ್ಮಗೊಂಡನಕೆರೆ ಎಂಬ ಊರಿನ ಪಕ್ಕದಲ್ಲಿ ಮುತ್ತಿಗಾರಹಳ್ಳಿ ಮ್ಯಾಸರಹಟ್ಟಿ ಎಂಬ ಮ್ಯಾಸನಾಯಕರೇ ಹೆಚ್ಚಾಗಿ ವಾಸಿಸುವ ಪ್ರದೇಶವಿದೆ. ಇದರ ಅಂಚಿನಲ್ಲೇ ಕುರುಚಲು ಕಾಡಿದ್ದು ಅಲ್ಲಿ ಮ್ಯಾಸನಾಯಕರ ಹಿರಿಯರಾದ ಇಂದು ದೈವಿಕ ನೆಲೆಯಲ್ಲಿ ಆರಾಧಿಸಲ್ಪಡುತ್ತಿರುವ ಮುತ್ತಿಗಾರರ ಎತ್ತುಗಳ ಗೂಡುಗಳಿವೆ. ಅವುಗಳ ರಕ್ಷಣೆ ಮಾಡುತ್ತಿರುವ ಕಿಲಾರಿಗಳೂ ಅಲ್ಲಿಯೇ ವಾಸ ಮಾಡುತ್ತಾರೆ. ಎರಡನೆಯ ತಂಡವಾಗಿ ಶ್ರೀಶೈಲದ ಕಡೆಯಿಂದ ಇತ್ತ ಬಂದು ನೆಲೆಸಿದವರೇ ಮುತ್ತಿಗಾರರು ಎಂಬುದು

ಸಮುದಾಯದವರ ನಂಬಿಕೆ. ಇವರೊಂದಿಗೆ ಬಂದವಳೇ ಮಲೆಯಮ್ಮ. ಇವರನ್ನು ರಕ್ಷಣೆ ಮಾಡಿದವಳೇ ಮಲೆಯಮ್ಮ. ಹಾಗಾಗಿ ಈ ಮಲೆಯಮ್ಮನನ್ನು ಇವರು ತಮ್ಮ ಆರಾಧ್ಯ ದೇವತೆಯನ್ನಾಗಿ ಪೂಜಿಸಿಕೊಂಡು ಬರುತ್ತಿದ್ದಾರೆ. ಮೂರು ವರ್ಷಕ್ಕೊಮ್ಮೆ ಇಲ್ಲಿ ಇವರು ಮಲೆಯಮ್ಮನ ಪೂಜೆಯನ್ನು ಏರ್ಪಡಿಸುತ್ತಾರೆ. ಹನ್ನೆರಡು ಬೆಡಗಿನವರು ಸೇರಿ ಈ ಪೂಜೆಯನ್ನು ಆಚರಿಸಲು ನಿರ್ಧರಿಸುತ್ತಾರೆ. ಹನ್ನೆರಡು ಗುಡಿಸಿಲಿನವರು, ಅವರೇ ಹನ್ನೆರಡು ಬೆಡಗಿನವರು ಸೇರಿ ಈ ಪೂಜೆಯನ್ನು ಏರ್ಪಡಿಸುತ್ತಾರೆ. ಇವರನ್ನೆಲ್ಲಾ ಕಡೇಲುನಾಯಕ ಎಂಬ ಬೆಡಗಿನ ವ್ಯಕ್ತಿ ಸಂಪರ್ಕಿಸಿ ಒಂದು ಕಡೆ ಅಂದರೆ ಎತ್ತಿನಗೂಡಿನ ಬಳಿ ಸೇರಿಸುತ್ತಾನೆ. ಅಲ್ಲಿ ಮಲೆಯಮ್ಮನ ಜಾತ್ರೆ ಮಾಡುವ ದಿನವನ್ನು ನಿರ್ಧರಿಸುತ್ತಾರೆ. ಇದನ್ನು ಮಲೆದೇವರ ಜಾತ್ರೆ ಎಂದು ಕರೆಯುತ್ತಾರೆ. ಹಬ್ಬ ಆಚರಣೆಯ ನಿಮಿತ್ತ ನಿಗದಿತ ಮಂಗಳವಾರದಂದು ಎಲ್ಲರೂ ಸೇರುತ್ತಾರೆ. ಹನ್ನೆರಡು ಗುಡಿಸಿಲಿನವರಷ್ಟೇ ಅಲ್ಲದೆ ಸುತ್ತಮುತ್ತಲ ಪ್ರಾಂತ್ಯದ ಮ್ಯಾಸನಾಯಕರು ಅಲ್ಲಿ ನೆರೆಯುತ್ತಾರೆ. ಇವರನ್ನು ಒಟ್ಟಾರೆ ಕುಲ ಸಾವಿರದವರು ಎಂದು ಕರೆಯಲಾಗುತ್ತದೆ. ಇವರೆಲ್ಲರ ಸಮಕ್ಷಮದಲ್ಲಿ ಹನ್ನೆರಡು ಗುಡಿಸಲು/ಬೆಡಗಿನವರು ಮನೆಯಿಂದ ಭಯ ಭಕ್ತಿ ಮಡಿಯಿಂದ ತಂದಿದ್ದ ತಮ್ಮ ಜನಿಗೆ ಹಸುಗಳ ಮೀಸಲು ಮತ್ತು ಕಾಸನ್ನು ಪದಿಯ ಒಳಗೆ ಕೊಡುತ್ತಾರೆ. ಹಸಿಸೊಪ್ಪಿನಿಂದ ಕಟ್ಟಿದ ಆವರಣವನ್ನು ಪದಿ ಎಂದು ಕರೆಯುತ್ತಾರೆ. ಮಣ್ಣಿನಿಂದ ಮಾಡಿದ ಮಲೆಯಮ್ಮನ ಪ್ರತಿಮೆಯನ್ನು ಇಲ್ಲಿ ಇಟ್ಟಿರುತ್ತಾರೆ. ಎಲ್ಲರೂ ಶ್ರೀಶೈಲದ ಮುತ್ತೈಯ್ಯಗಳ ಮೊಕ್ಕು ಎಂದು ನಮಸ್ಕಾರ ಮಾಡುತ್ತಾರೆ. ಮುತ್ತೈಯ್ಯಗಳ ಸ್ಮರಣೆ ಮಾಡುತ್ತಾರೆ. ಇವರಲ್ಲಿ ಯಜಮಾನನೆಂದು ಕರೆಸಿಕೊಳ್ಳುವ ಬೋಡೇಪಾಲ ಮೈಗೆ, ತಲೆಗೆ ಕರಿಕಂಬಳಿಯ ತುಂಡನ್ನು ಸುತ್ತಿಕೊಳ್ಳುತ್ತಾನೆ. ಬಾಯಿಗೂ ಕಟ್ಟಿಕೊಂಡು ಬಲಿಗಾಗಿ ಸಿದ್ಧವಾಗಿರುವ ಕುರಿಯನ್ನು, ಕುಡು ಗೋಲನ್ನು ಪೂಜೆ ಮಾಡುತ್ತಾನೆ. ಮತ್ತೊಮ್ಮೆ ಎಲ್ಲರೂ ಸೇರಿ ಶ್ರೀಶೈಲ ಮುತ್ತೈಯ್ಯಗಳ ಮೊಕ್ಕು ಎಂದು ನಮಸ್ಕರಿಸಿ ಆ ಹಿರಿಯರ ಸ್ಮರಣೆ ಮಾಡುತ್ತಾರೆ. ಕುಡುಗೋಲನ್ನು ಯಾಜಮಾನರ ಕೈಗೆ ಕೊಡಲು ಆತ ಕುರಿಯನ್ನು ಕೊಯ್ಯುತ್ತಾನೆ. ಕುರಿಯ ಬಲಗಾಲನ್ನು ಕೊಯ್ದು ಕುರಿಯ ಬಾಯಿಯಲ್ಲಿಡುತ್ತಾನೆ. ಕೊಯ್ದ ಕುರಿಯ ಮುಂಡವನ್ನು ಮೂರು ಬಾರಿ ಗಿರಗಿರನೆ ಸುತ್ತಿಸುತ್ತಾರೆ. ಪದಿಯ ಒಳಗೆ ನಂತರ ತೆರೆ ಕಟ್ಟಿಕೊಂಡು ಅದರ ಒಳಗೆ ಕುರಿಯನ್ನು ತೆಗೆದುಕೊಂಡು ಅದರ ಹೊಟ್ಟೆಯೊಳಗಿರುವ ಕಸರು ಹಿಕ್ಕೆಯನ್ನು ತೆಗೆಯುತ್ತಾರೆ. ರಕ್ತವನ್ನು ಇದರೊಂದಿಗೆ ಸೇರಿಸಿ ಹೊಸ ಮೊರದಲ್ಲಿ ಇವೆರಡನ್ನು ಕಲೆಸುತ್ತಾರೆ. ಮಲೆಯಮ್ಮನ ಪ್ರತಿಮೆಯ ಮುಂದೆ ಇದನ್ನು ಇಡುತ್ತಾರೆ. ಎಲ್ಲರೂ ಸೇರಿ ಮತ್ತೆ ನಮಸ್ಕಾರ ಮಾಡುತ್ತಾರೆ. ನಂತರ ಮಲೆಯಮ್ಮನ ಮುಂದೆ ಇಟ್ಟಿದ್ದ ರಕ್ತ ಮತ್ತು ಕಸರನ್ನು ಕಲೆಸಿಕೊಂಡು ಮುತ್ತಿಗಾರರ ಎತ್ತುಗಳ ಸುತ್ತಲೂ ಸರಗ ಚೆಲ್ಲುತ್ತಾರೆ. ಸಾಯಂಕಾಲ ಐದು ಗಂಟೆಗೆ ಈ ಪೂಜಾ ವಿಧಿಗಳೆಲ್ಲಾ ಮುಗಿಯುತ್ತವೆ. ಇದು ಇಲ್ಲಿ ಬಹಳ ಮುಖ್ಯವಾಗಿ ನಡೆಯುವ ವಿಧಿ. ಇದೇ ರೀತಿ ಮತ್ತೆ ಎರಡು ಮಂಗಳವಾರ ಇದೇ ಆಚರಣೆಯನ್ನು

ಮಾಡುತ್ತಾರೆ. ಒಟ್ಟು ಮೂರು ಮಂಗಳವಾರ ಈ ಆಚರಣೆ ನಡೆಯುತ್ತದೆ. ಆಗಲೇ ಮುತ್ತಿಗಾರರ ಮಾರಮ್ಮನ ಜಾತ್ರೆ ಮಾಡಲು ೧೫ ದಿನಗಳ 'ಸಾರ'ನ್ನು ಹಾಕುತ್ತಾರೆ. ಮುತ್ತಿಗಾರರ ಮಾರಮ್ಮನ ಜಾತ್ರೆಗೆ ಹನ್ನೆರಡು ಪೆಟ್ಟಿಗೆ ದೇವರು ಬಂದು ಹಬ್ಬವನ್ನು ಆಚರಿಸುತ್ತಾರೆ. ಬುಡಕಟ್ಟಿನ ಬಿರುಕಿನಿಂದಾಗಿ ಮುತ್ತಿಗಾರರ ಮಾರಮ್ಮ ಜಾತ್ರೆ ನಿಂತು ಹೋಗಿದೆ. ಏಕೆಂದರೆ ೧೨ ಪೆಟ್ಟಿಗೆ ದೇವರುಗಳನ್ನು ತಂದಾಗ ಉಪಪಂಗಡಗಿನವರು ನಮ್ಮ ದೇವರು ಎಂದು ತಿಳಿದು ದೇವರನ್ನು ತಮ್ಮ ಊರಿಗೆ ಹೊತ್ತೊಯ್ಯುವ ಸಾಧ್ಯತೆ ಇದೆ. ಹೀಗೆ ಅನೇಕ ಘರ್ಷಣೆಗಳಾಗಿವೆ.

ಕೂಡ್ಲಿಗಿ ತಾಲ್ಲೂಕಿನ ಜುಮ್ಮೋಬನಹಳ್ಳಿಯಲ್ಲಿಯೂ ಊರು ಮಾರಮ್ಮನ ಜಾತ್ರೆ ಮಾಡುತ್ತಾರೆ. ಕೋಣ, ಕುರಿ ಕಡಿದು ಪೂಜಿಸುತ್ತಾರೆ. ಗಾವು ಸಿಗಿಯುವುದು ಇಲ್ಲಿ ವಿಶೇಷ. ಇಲ್ಲಿ ಪ್ರಧಾನ ಪಾತ್ರ ಮ್ಯಾಸನಾಯಕರಾದರೂ ಊರಿನ ಇತರ ಸಮುದಾಯದವರೂ ಆಚರಣೆಯಲ್ಲಿ ಭಾಗವಹಿಸುತ್ತಾರೆ. ಆದರೆ ವಿಧಿಗಳನ್ನು ನಡೆಸುವವರು ಮಾತ್ರ ನಾಯಕರೇ. ಜೋಳಿಗೆ ತೂಗುವ, ಆ ಮೂಲಕ ಭವಿಷ್ಯ ಕೇಳುವ ವಿಧಾನ ಜುಮ್ಮೋಬನ ಹಳ್ಳಿಯಲ್ಲಿ ಮಾತ್ರ ಇದೆ. ಕೆಂಪು ಬಟ್ಟೆಯಿಂದ ಮಾಡಿದ ಜೋಳಿಗೆಯಿದು.

### ಗೂಡಿನ ಹಬ್ಬ

ಇದು ಮುತ್ತೈಗಳನ್ನು ನೆನೆಯುವ, ಗೋಸಂಸ್ಕೃತಿಯನ್ನು ನೆನೆಯುವ, ಗೋಸಂಪತ್ತು ಹೆಚ್ಚಲಿ ಎಂದು ಹಾರೈಸುವ ಹಬ್ಬ. ಗೂಡು ಎಂದರೆ ರೊಪ್ಪ. ಈ ಗೂಡಿನೊಳಗಿರುವ ದನ, ಕರು, ಕುರಿಗಳ ಹಿಂಡು ಹೆಚ್ಚಲಿ ಎಂದು ನಡೆಸುವ ಫಲ ಸಮೃದ್ಧಿಯ ಹಬ್ಬ. ಹಟ್ಟಿಯ ಹೊರಭಾಗದ ಬಯಲಿನಲ್ಲಿ ಕಳ್ಳೆ ಕಡಿದು ಅತ್ಯಂತ ಚಿಕ್ಕ ಚಿಕ್ಕ ಕರುವಿನ ಗೂಡು, ದನಗಳ ಗೂಡು, ತುರುಗೂಡುಗಳನ್ನು ಹಾಕುತ್ತಾರೆ. ಆ ಹಿಂದಿನ ರಾತ್ರಿ ಹಸುಗಳ ಹಾಲು ಕರೆಯದೆ ಕರುಗಳಿಗೆ ಕುಡಿಯಲು ಬಿಟ್ಟಿರುತ್ತಾರೆ. ರಾತ್ರಿಯೆಲ್ಲಾ ಕೋಲಾಟ ಹಾಕುವುದು, ಪದಗಳನ್ನು ಹಾಡುವುದು ಮಾಡುತ್ತಾರೆ. ಬೆಳಗ್ಗೆ ದನಗಳ ಸಗಣಿಯಿಂದ ಮೇಲೆ ಹೇಳಿದಂತೆ ದನಗಳ ಗೂಡು, ಕರುವಿನ ಗೂಡು, ಮಲ್ಲಬೊಮ್ಮರ ಮಾರಮ್ಮ ಗಾಳಿ ಎಂಬ ದನಗಳ ಆಕಾರ ಮಾಡಿ ಅವುಗಳಿಗೆ ಎಡೆ ಹಾಕುತ್ತಾರೆ. ದೇವರೆತ್ತಿನ ಕಿಲಾರಿ ಬಂದು ಕರಿಕಂಬಳಿ ಹಾಸುತ್ತಾನೆ. ಜನರು ತಂದ ದವಸ ಧಾನ್ಯಗಳನ್ನು ಕಾಸು ಮೀಸಲು ಅರ್ಪಿಸುತ್ತಾರೆ. ಈ ಸಂದರ್ಭದಲ್ಲಿ ಕೆಲವು ಹಟ್ಟಿಗಳಲ್ಲಿ ದನಗಳ ಕಿಚ್ಚು ಹಾಯಿಸುವ ಕಾರ್ಯವು ನಡೆಯುತ್ತದೆ.

ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಸಾಂಸ್ಕೃತಿಕತೆ ಇರುತ್ತದೆ. ಅಂಥ ವಿಭಿನ್ನತೆಗಳೇ ಇತರ ಸಮುದಾಯಗಳಿಂದ ಒಂದು ಸಮುದಾಯವನ್ನು ವಿಶಿಷ್ಟಗೊಳಿಸುತ್ತದೆ. ಹಾಗೆಯೇ ಮ್ಯಾಸನಾಯಕರ ಸಾಂಸ್ಕೃತಿಕ ಜೀವನವು ವೈವಿಧ್ಯಮವಾದುದು. ಈಗ ಅಂಥ ವೈವಿಧ್ಯಗಳೇ ನಾಶವಾಗುತ್ತಿವೆ. ಆದರೆ ಪ್ರಶ್ನೆ ಇರುವುದು ಈಗ ಕಟ್ಟಿಕೊಳ್ಳುತ್ತಿರುವ ಸಮುದಾಯದ ನವ

ಸಾಂಸ್ಕೃತಿಕ ಜೀವನ ಯಾವುದು ಎಂಬುದು. ಈ ಅಧ್ಯಯನದಲ್ಲಿ ಮ್ಯಾಸಬೇಡರ ಜೀವನಾವರ್ತನ ಆಚರಣೆಯನ್ನು ವಾರ್ಷಿಕವರ್ತನ ಆಚರಣೆಯನ್ನು ನಿರೂಪಿಸುತ್ತಾ ಹಲವು ವಿಭಿನ್ನತೆಗಳನ್ನು ಗುರುತಿಸಲಾಗಿದೆ. ಹಾಗೆಯೇ ಸಾಂಸ್ಕೃತಿಕ ಕಥನದ ಸ್ಥಿತ್ಯಂತರಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

ನಿರ್ದಿಷ್ಟವಾದ ಸಮುದಾಯವೊಂದು ತನ್ನ ಸ್ಮರಣೆ ಮತ್ತು ನಡವಳಿಕೆಗಳ ಮೂಲಕ ಜೀವಂತವಾಗಿಸಿಕೊಂಡು ಬಂದ ಬದುಕಿನ ವಿಧಾನಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಮತ್ತು ಅದರಿಂದ ಬಳಕೆಗೊಳ್ಳುವ ವಸ್ತು ವಿಶೇಷಗಳನ್ನು ಒಳಗೊಂಡಂತೆ ಸಮಗ್ರವನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಇದು ಪ್ರಜ್ಞಾಪೂರ್ವಕವಾಗಿ ಉಳಿಸಿಕೊಂಡು ಬಂದುದಾಗಿರುತ್ತದೆ. ನಾಡಿನ ಪ್ರಸಿದ್ಧ ಸಂಸ್ಕೃತಿ ಚಿಂತಕರಾದ ಶಂಬಾ ಜೋಶಿಯವರು "ಸಂಸ್ಕೃತಿಯು ಅಂತರಂಗ ಭಾವಬುದ್ಧಿಗೆ ಸಂಬಂಧಿಸಿದೆ. ಇದೇ ಮೇರೆಗೆ ಈ ಸುಸಂಸ್ಕೃತ ಭಾವಬುದ್ಧಿಯಿಂದ ನಿರ್ಮಿತ ವಸ್ತು ವಿಷಯಗಳಿಗೂ ಸಂಬಂಧಿಸಿದೆ"[೧೫] ಎಂದು ಹೇಳುತ್ತಾರೆ. ಅಂದರೆ ಸಂಸ್ಕೃತಿ ಎಂಬುದು ಅಂತರಂಗದ ಆಲೋಚನೆ ಮತ್ತು ಬಹಿರಂಗದ ನಡವಳಿಕೆ ಈ ಎರಡನ್ನು ಒಳಗೊಳ್ಳುತ್ತದೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಇಲ್ಲಿ ಸುಸಂಸ್ಕೃತ ಎಂಬ ಪದವೇ ಮತ್ತೂ ಹಲವು ಚರ್ಚೆಗಳಿಗೆ ಎಡೆ ಮಾಡಿಕೊಡುತ್ತದೆ. ಕಾರಣ ಒಬ್ಬರಿಗೆ ಸುಸಂಸ್ಕೃತ ಎನಿಸಿದ್ದು ಮತ್ತೊಂದು ನೆಲೆಯಲ್ಲಿರುವವರಿಗೆ ಬರ್ಬರ ಕಿರಾತಕ ಎನಿಸಬಹುದಲ್ಲವೆ? ಒಟ್ಟು ಸಮುದಾಯವೊಂದರ ಆಂತರಂಗಿಕ ಆಲೋಚನೆಗಳ ಫಲಶ್ರುತಿಯೇ ಕಾರಣವಾಗಿ ರೂಪುಗೊಂಡ ಒಟ್ಟು ವಿಧಿವಿಧಾನಗಳನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಬಹುದೆನಿಸುತ್ತದೆ. ಹಲವು ವಿವರಗಳಿಂದ ಕೂಡಿದ ಬದುಕನ್ನು ವ್ಯಾವಹಾರಿಕವಾಗಿ ನೋಡ ಹೊರಟಾಗ ಈ ವ್ಯಾವಹಾರಿಕತೆ ಎಂಬುದು ಇಲ್ಲಿ ಆ ಸಮುದಾಯದ ಅನ್ನದ ಅವಶ್ಯಕತೆಯೂ ಆಗಿರುತ್ತದೆ. ಬೇಟೆ ಮೂಲವಿಧಾನವಾಗಿದ್ದು, ಅಲ್ಲಿಂದ ನಂತರದಲ್ಲಿ ಬೇರೆ ಬೇರೆ ವಿಧಾನಗಳನ್ನು ರೂಢಿಸಿ ಕೊಂಡು ಬಂದಿರುವಾಗ ಈ ವಿಧಾನವೂ ಸಂಸ್ಕೃತಿಯ ಒಂದು ಭಾಗವಾಗಿರುತ್ತದೆ. ಇದೇ ಸಂಸ್ಕೃತಿಯು ಬೇಟೆ ಸಂಸ್ಕೃತಿ, ಪಶುಪಾಲನಕ ಸಂಸ್ಕೃತಿ, ಕೃಷಿ ಸಂಸ್ಕೃತಿ ಎಂದು ಮುಂತಾಗಿ ಕರೆಯಲ್ಪಡುತ್ತದೆ. ಪ್ರಧಾನವಾಗಿ ಅಂದರೆ ಒಂದು ಬುಡಕಟ್ಟಿಗೆ ಸೇರಿದ ಜನ ಸಮುದಾಯ, ತಮ್ಮದೇ ಆದ ಸಂಸ್ಕೃತಿಯನ್ನು ರೂಪಿಸಿಕೊಂಡು ಅದಕ್ಕನುಗುಣವಾಗಿ ಬದುಕುತ್ತಿರುತ್ತಾರೆ. ತಮ್ಮ ಸಾಂಸ್ಕೃತಿಕ ವಿಶೇಷತೆಯ ಕಾರಣಕ್ಕಾಗಿಯೇ ಬೇರೆಯ ಸಮುದಾಯದಿಂದ ಭಿನ್ನತೆ ಹೊಂದಿರುವುದನ್ನು ಕಾಣಬಹುದು. ಕಾಡುಗೊಲ್ಲರೊಂದಿಗೆ, ಕುಂಚಿಟಿಗರೊಂದಿಗೆ ಇವರನ್ನು ಹೋಲಿಸಬಹುದಾದರೂ ಇವರು ತಮ್ಮದೇ ಆದ ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವವರು. ಇದೊಂದು ವಿಶಿಷ್ಟವಾದ ಬುಡಕಟ್ಟು. ಏಕೆಂದರೆ ಪಶುಪಾಲನೆ ಆರ್ಯರಿಂದ ಭಾರತಕ್ಕೆ ಕಾಲಿಟ್ಟಿತು ಎಂಬ ಒಂದು ಅಭಿಪ್ರಾಯ ನಮ್ಮಲ್ಲಿದೆ. ಆದರೆ ಕೆಲವು ಸಂಸ್ಕೃತಿ ಮತ್ತು ಚರಿತ್ರೆ

ಚಿಂತಕರು ಆರ್ಯರು ತಮ್ಮ ಪಶುಸಂಪತ್ತಿನೊಂದಿಗೆ ಭಾರತಕ್ಕೆ ಬಂದರೂ ನಿಜ. ಆದರೆ ಇವರು ಬರುವ ವೇಳೆಗಾಗಲೇ ಇಲ್ಲಿಯ ಮೂಲನಿವಾಸಿಗಳಲ್ಲಿಯೂ ಪಶುಪಾಲಕ ಸಮುದಾಯ ಗಳಿದ್ದವು ಎಂದು ಅಭಿಪ್ರಾಯಪಡುತ್ತಾರೆ.

ಇಡೀ ಭಾರತದಲ್ಲಿಯೇ ಪಶುಪಾಲಕ ಮೂಲದ ನಮ್ಮ ಸಂಸ್ಕೃತಿಯನ್ನು ತುಂಬ ಜತನದಿಂದ ಆಚರಣೆಯ ರೂಪದಲ್ಲಿಯಾದರೂ ಉಳಿಸಿಕೊಂಡು ಬರುತ್ತಿರುವ ಮತ್ತು ಇದಕ್ಕೂ ಪೂರ್ವದ ತಮ್ಮ ಬೇಟೆಗಾರಿಕೆಯನ್ನು ಒಂದು ವಾರ್ಷಿಕ ಕ್ರಿಯಾಚರಣೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿರುವುದರಲ್ಲಿಯೇ ನಮಗೆ ಈ ಸಮುದಾಯದ ಅನನ್ಯತೆಯ ದರ್ಶನ ವಾಗುತ್ತದೆ. ಬೇಟೆ ಮತ್ತು ಪಶುಪಾಲನೆಗಳು ಒಟ್ಟು ಬದುಕನ್ನು ಹೇಗೆ ರೂಪಿಸಿವೆ, ಆಚರಣೆ ನಂಬಿಕೆಗಳ ಮೇಲೆ ಪ್ರಭಾವ ಬೀರಿವೆ ಎಂಬುದನ್ನು ಸಂಬಂಧಿಸಿದ ವಿವರಗಳ ಮೂಲಕ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

### ನಿಷೇಧಗಳು

ಪ್ರತಿಯೊಂದು ಬುಡಕಟ್ಟಿಗೂ ತನ್ನದೇ ಆದ ನಂಬಿಕೆಗಳಿದ್ದು, ಅವುಗಳಿಗನುಗುಣವಾಗಿ ಆಚರಣೆಗಳಿರುತ್ತವೆ. ಹಾಗೆಯೇ ನಿಷೇಧಗಳೂ ಇರುತ್ತವೆ. ನಿಷೇಧಗಳು ಈಗ ಸಡಿಲವಾಗುತ್ತಿದ್ದರೂ ಹಿಂದೆ ಬುಡಕಟ್ಟು ಈ ವಿಧಿವಿಧಾನಗಳನ್ನು ತುಂಬಾ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿತ್ತು. ವಿಧಿಗಳನ್ನು ಮೀರುವವರನ್ನು ನಿಯಂತ್ರಿಸಲು ಈ ನಿಷೇಧಗಳನ್ನು ಹಾಕಲಾಗುತ್ತಿತ್ತು. ಸಮುದಾಯದ ರಕ್ಷಣೆಯು ಇದರ ಉದ್ದೇಶಗಳಲ್ಲೊಂದಾಗಿತ್ತು. ಒಟ್ಟು ಬುಡಕಟ್ಟಿನ ಸಮಷ್ಟಿಯ ತೀರ್ಮಾನ ಇದರಲ್ಲಿರುತ್ತದೆ. ಸಮುದಾಯವೊಂದರ ಸ್ಥಿರತೆಯನ್ನು ಕಾಪಾಡುವುದರೊಂದಿಗೆ ನೈತಿಕ ಮತ್ತು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವಲ್ಲಿ ಈ ನಿಷೇಧಗಳ ಪಾತ್ರ ಬಹಳ ಮುಖ್ಯವಾದುದು.

ಕೆಲವು ವಸ್ತುಗಳ ಬಳಕೆ, ತಿನ್ನುವ ಆಹಾರ ಪದಾರ್ಥಗಳು ಕೆಲವು ಬುಡಕಟ್ಟುಗಳಲ್ಲಿ ನಿಷೇಧಿಸಲ್ಪಟ್ಟಿರುತ್ತವೆ. ಹಾಗೆಯೇ ನಿರ್ದಿಷ್ಟ ಸ್ಥಳಕ್ಕೆ ತಮ್ಮ ಸಮುದಾಯದವರು ಹೋಗಬಾರದು. ನಿರ್ದಿಷ್ಟ ಬೆಡಗಿನೊಂದಿಗೆ ಸಂಬಂಧ ಸಂಪರ್ಕಗಳು ಇರಬಾರದು ಎಂಬ ನಿಷೇಧಗಳೂ ಇರುತ್ತವೆ. ಮ್ಯಾಸನಾಯಕರಲ್ಲಿ ಇಡೀ ಸಮುದಾಯದಾದ್ಯಂತ ಇರುವ ನಿಷೇಧಿತ ಅಂಶಗಳೆಂದರೆ ಕೋಳಿ ತಿನ್ನದಿರುವುದು, ಈಚಲು ಚಾಪೆ ಪೊರಕೆ ಬಳಸದಿರುವುದು ಇತ್ಯಾದಿ. ಈಚಲ ಮರದಿಂದ ತಯಾರಿಸಿದ ಯಾವುದೇ ವಸ್ತುವನ್ನು ಬಳಸಬಾರದು, ಮದ್ಯ ಸೇವನೆ ಮಾಡಬಾರದು. ಚಪ್ಪಲಿಯಿಂದ ಹೊಡೆದಾಡಬಾರದು. ಹೊಡೆಸಿಕೊಂಡವನು ಮತ್ತೆ ಹೊಡೆದವನು ಇಬ್ಬರೂ ನಿಷೇಧಕ್ಕೊಳಗಾಗುತ್ತಾರೆ. ಕುಲಕಟ್ಟಳೆಯಂತೆ ದಂಡ ತೆತ್ತು ಪೂಜಾರಿಯಿಂದ ದೇವರ ನೀರು ಹಾಕಿಸಿಕೊಂಡು ಅಂದರೆ ದೇವರೆತ್ತಿನ ಗೂಡಿಗೆ ಹೋಗಿ ಶುದ್ಧಿ ಕ್ರಿಯೆಯ ಮೂಲಕ ಕುಲದ ಒಳಗಡೆ ಬರಬೇಕಾಗುತ್ತದೆ.

ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಮದ್ಯಸೇವನೆ ನಿಷೇಧಕ್ಕೊಳಗಾಗಿರುವುದಿಲ್ಲ. ಎಷ್ಟೋ ಸಮುದಾಯಗಳಲ್ಲಿ ಹಿರಿಯರ ಪೂಜೆಗಳಲ್ಲಿ ನೈವೇದ್ಯ ಮಾಡುವಾಗ ಮದ್ಯವನ್ನು ಇಡಲಾಗುತ್ತದೆ. ಶುಭಕಾರ್ಯಗಳಲ್ಲಿ ಬಂದ ನೆಂಟರಿಷ್ಟರಿಗೆ ಮದ್ಯದ ಸರಬರಾಜು ಆಗಲೇಬೇಕು ಎಂಬ ನಿಯಮಗಳೂ ಇವೆ. ವಿಶಿಷ್ಟತೆಯೆಂದರೆ ಈ ಮ್ಯಾಸ ಸಮುದಾಯ ಇದನ್ನು ನಿಷೇಧಿಸಿರುವುದು ಆರೋಗ್ಯದ ಮೇಲೆ ಉಂಟಾಗುವ ಪ್ರತಿಕೂಲತೆಯ ಅರಿವಿನಿಂದ ಈ ನಂಬಿಕೆ ಬೆಳೆದಿರಬಹುದೇ ಎಂದು ಅನಿಸಿದರೂ ಸ್ಪಷ್ಟ ಕಾರಣಗಳು ಸಿಗುವುದಿಲ್ಲ. ಬಹುಶಃ ಪಶುಪಾಲಕರಾಗಿದ್ದ ಇವರು ಹಗಲಿಡೀ ಎಚ್ಚರ ಸ್ಥಿತಿಯಲ್ಲಿ ದನಕರು ಮೇಯಿಸಬೇಕಾಗಿತ್ತು. ಇನ್ನು ರಾತ್ರಿಯೂ ಅರೆ ಎಚ್ಚರದ ಸ್ಥಿತಿಯಲ್ಲಾದರೂ ಎತ್ತಿನ ಗೂಡುಗಳ ಬಳಿ ಮಲಗಿ ಕಾವಲು ಕಾಯಬೇಕಾಗಿತ್ತು. ಒಂದೆಡೆ ಕಾಡುಪ್ರಾಣಿಗಳ ಕಾಟವಾದರೆ ಮತ್ತೊಂದೆಡೆ ದನಗಳ್ಳರ ಕಾಟ. ನಿಶ್ಚಿಂತೆಯ ನಿದ್ರೆಯೇ ಇವರಿಗಿಲ್ಲ. ಹಾಗಾಗಿ ಮದ್ಯಸೇವನೆಯ ದುಶ್ಚಟಕ್ಕೆ ಬಲಿಯಾದರೆ ತಮ್ಮ ಬದುಕಿಗೆ ಅದು ಮಾರಕ ಎಂಬ ತಿಳುವಳಿಕೆ ಈ ನಿಷೇಧದ ಹಿಂದೆ ಇರಬಹುದೆನಿಸುತ್ತದೆ. ಹಾಗಾಗಿ ಈಚಲ ಮರದಿಂದ ತಯಾರಾದ ಯಾವುದನ್ನು ಮುಟ್ಟಬಾರದು ಎಂಬ ಕಟ್ಟುನಿಟ್ಟಿನ ನಿಯಮ ಜಾರಿಗೆ ಬಂದಿರಬಹುದು. ಈಗಲೂ ಎಷ್ಟೇ ಮದ್ಯವ್ಯಸನಿಗಳಾಗಿದ್ದರೂ ತಮ್ಮ ಧಾರ್ಮಿಕ ಕೇಂದ್ರಗಳಿಗೆ ಮಾತ್ರ ಅವರು ಮದ್ಯ ಕುಡಿದಾಗ ಪ್ರವೇಶಿಸುವುದಿಲ್ಲ. ಮದ್ಯಪಾನ ವ್ಯಸನ ಇರುವವರು ದೈವರಾಧನೆಯ ಯಾವುದೇ ಚಟುವಟಿಕೆಗಳಲ್ಲೂ ಭಾಗವಹಿಸುವುದಿಲ್ಲ. ಅಷ್ಟರಮಟ್ಟಿಗೆ ಈ ನಿಷೇಧ ಉಳಿದುಬಂದಿದೆ.

### ಕೋಳಿ ತಿನ್ನದಿರುವುದು

ಮ್ಯಾಸ ಸಮುದಾಯ ಕೋಳಿ ತಿನ್ನುವುದಿಲ್ಲ ಕೋಳಿ ತಮ್ಮ ಹಟ್ಟಿಯ ಒಳಗೆ ಪ್ರವೇಶ ಮಾಡುವಂತಿಲ್ಲ. ಅಕಸ್ಮಾತ್ ಪ್ರವೇಶಿಸಿದರೆ ಎಲ್ಲರೂ ಗಾಬರಿಯಿಂದ ಓಡಿಸುವ ದೃಶ್ಯ ಹಿಂದೆ ಸಾಮಾನ್ಯವಾಗಿರುತ್ತಿತ್ತು. ಮಾಂಸಾಹಾರಿಗಳಾದ ಇವರಲ್ಲಿ ಇದರ ಬಗ್ಗೆ ನಿಷೇಧವಿರುವುದು ಆಶ್ಚರ್ಯವೆನಿಸುತ್ತದೆ. ಬುಡಕಟ್ಟಿನಲ್ಲಿ ಕುಲದೇವತಾರಾಧನೆಯ ಅಂಗವಾಗಿ ಯಾವುದಾದರೂ ಪ್ರಾಣಿ ಅಥವಾ ಪಕ್ಷಿಯನ್ನು ಸಾಂಕೇತಿಕವಾಗಿರಿಸಿಕೊಂಡಿದ್ದರೆ ಅದನ್ನು ತಿನ್ನುವುದಿಲ್ಲ. ಹಾಗೆಯೇ ಕೆಲವು ಬುಡಕಟ್ಟಿನವರು ಮನೆಯಲ್ಲಿ ಸಾಕುವ ಯಾವುದೇ ಪ್ರಾಣಿಯನ್ನು ತಿನ್ನುವುದಿಲ್ಲ. ಸೋಲಿಗರು ಸಾಕುವ ದನ ತಿನ್ನುವುದಿಲ್ಲ. ಗೋವಾಕುಡುಬಿಯರೂ ಮನೆಯಲ್ಲಿ ಸಾಕುವ ಪ್ರಾಣಿ ತಿನ್ನುವುದಿಲ್ಲ. ಕಾಡುಹಂದಿ ತಿನ್ನುತ್ತಾರೆ. ಆದರೆ ಸಾಕಿದ ಊರು ಹಂದಿ ತಿನ್ನುವುದಿಲ್ಲ. ಕೋಳಿ ಸಾಕುವುದಿಲ್ಲ, ತಿನ್ನುವುದಿಲ್ಲ. ಮ್ಯಾಸನಾಯಕರಂತೆಯೇ ಇವರೂ ಕೂಡ ಕೋಳಿಯ ಹಿಕ್ಕೆ ಮುಟ್ಟಿದರೂ ಗೋಮೂತ್ರದಿಂದ ಶುದ್ಧಿ ಮಾಡಿಕೊಂಡು ಒಳಗೆ ಹೋಗಬೇಕು. ಕಾಡಿನ ವಾಸಿಗಳಾದ ಬುಡಕಟ್ಟಿನವರಿಗೆ ಊರು, ಊರಿನವರು ಸಾಕುವ ಪ್ರಾಣಿಗಳು ನೈರ್ಮಲ್ಯದ ವಾತಾವರಣದಲ್ಲಿ ಬೆಳೆದಿರುವುದಿಲ್ಲ. ಈ ಕಾರಣದಿಂದ ಅವುಗಳನ್ನು ತಾವು ತಿಂದರೆ ತಮ್ಮ

ನೈರ್ಮಲ್ಯ ಹಾಳಾಗುತ್ತವೆ ಎಂಬ ಆಲೋಚನೆ ಈ ಬಗೆಯ ನಿಷೇಧಕ್ಕೆ ಕಾರಣವಾಗಿರಬಹುದು. ಮ್ಯಾಸನಾಯಕರು ತಾವು ಕೋಳಿ ತಿನ್ನದಿರುವುದಕ್ಕೆ ಇದೂ ಒಂದು ಕಾರಣ ಇದ್ದಿರಬಹುದು. ಆದರೆ ಸಮುದಾಯದ ಇತಿಹಾಸವನ್ನು ಹೇಳುವ ಮಾಹಿತಿದಾರರು ಕೊಡುವ ಉತ್ತರವೇ ಬೇರೆ ರೀತಿ ಇದೆ.

ಮ್ಯಾಸಗಂಪಳ ಆಂಧ್ರದಿಂದ ಹೊರಟು ಇತ್ತ ಬರುತ್ತಿರುವಾಗ ದಾನಸಾಲಮ್ಮನ, ಶುಕ್ಲ ಮಲ್ಲನಾಯಕನ ಕಾಲದಲ್ಲಿ ಒಮ್ಮೆ ಒಂದು ಊರಿನ ಬಳಿ ಗೂಡನ್ನು ಹಾಕಿಕೊಂಡು ಉಳಿದಿರುತ್ತಾರೆ. ಲಂಕಾದ್ರಿ ಮಲೆಯ ಬಳಿಯ ಲಂಕಾದ್ರಿಹಟ್ಟಿ ಎಂದು ಹೇಳುತ್ತಾರೆ. ಆಗ ಬೆಳಗಿನ ಜಾವದಲ್ಲಿ ಅಭ್ಯಾಸದಂತೆ ಊರ ಕೋಳಿಗಳು ಕೂಗುತ್ತವೆ. ಅದುವರೆಗೆ ಎಂದೂ ಇಂಥ ಧ್ವನಿಯನ್ನು ಕೇಳದಿದ್ದ ದನಕರುಗಳು ಗಾಬರಿಗೊಂಡು ರಂಕೆ ಹೊಡೆದು, ಕೊಂಬುಗಳನ್ನೇ ಬಾಣಗಳನ್ನಾಗಿ ಮಾಡಿಕೊಂಡು ಬಾಲವನ್ನು ಪಟ್ಟೆಯನ್ನಾಗಿ ಮಾಡಿಕೊಂಡು ದಿಕ್ಕಾಪಾಲಾಗಿ ಚೆದುರಿ ಓಡುತ್ತವೆ. ಪಕ್ಕದ ಹಟ್ಟಿಯನ್ನು ಹೊಕ್ಕು ಸಿಕ್ಕ ಸಿಕ್ಕ ಮನೆಗಳನ್ನೆಲ್ಲಾ ತುಳಿದು ನಾಶಮಾಡುತ್ತವೆ. ಎದುರಿಗೆ ಸಿಕ್ಕವರನ್ನು ತುಳಿಯುತ್ತವೆ. ತಮ್ಮ ಈ ದನಗಳ ರೌದ್ರತೆಯನ್ನು ಎಷ್ಟು ನಿಯಂತ್ರಿಸಿದರೂ ಬೇಡಗಂಪಳ ಕೈಚೆಲ್ಲಬೇಕಾಗುತ್ತದೆ. ಇದರಿಂದ ಅಲ್ಲಿದ್ದ ಬ್ರಾಹ್ಮಣರ ಶಾಪಕ್ಕೂ ತುತ್ತಾಗಿ ನಂತರ ದಾನಸಾಲಮ್ಮನ ಭಕ್ತಿ ಕಾರಣವಾಗಿ ಶಾಪದಿಂದ ವಿಮುಕ್ತರಾಗಿ ತಮ್ಮ ಸಂಪತ್ತನ್ನು ಮರಳಿ ಪಡೆಯುತ್ತಾರಾದರೂ ಈ ಕಹಿ ಘಟನೆ ಅವರ ಮನಸ್ಸಿಗೆ ವ್ಯಥೆಯುಂಟು ಮಾಡಿ ಶಾಶ್ವತವಾಗಿ ಉಳಿದುಬಿಡುತ್ತದೆ. ಅವರು ಅಂದೇ ತೀರ್ಮಾನ ಮಾಡುತ್ತಾರೆ. ತಾವು ಇನ್ನೆಂದೂ ಊರುಗಳ ಪಕ್ಕ ಗೂಡುಗಳನ್ನು ಹಾಕಿಕೊಳ್ಳುವುದಿಲ್ಲ. ತಮ್ಮ ಗೂಡಿನ ಬಳಿ, ತನ್ನ ಹಟ್ಟಿಗಳ ಬಳಿ ಕೋಳಿಯನ್ನು ಬರಗೊಡುವುದಿಲ್ಲ. ಸಾಕುವುದಿಲ್ಲ, ತಿನ್ನುವುದೂ ಇಲ್ಲ ಎಂದು ಅಂದು ಮಾಡಿದ್ದ ಈ ಪ್ರತಿಜ್ಞೆ ಕಾರಣವಾಗಿ ಇಂದಿಗೂ ತಾವು ಕೋಳಿ ತಿನ್ನುವುದಿಲ್ಲ ಎಂದು ಹೇಳುತ್ತಾರೆ. ಇಂದು ಬದಲಾದ ವರ್ತಮಾನಕ್ಕೆ ತಕ್ಕಂತೆ ತಿನ್ನುವ ಅಭ್ಯಾಸಗಳೂ ಪ್ರಾರಂಭವಾಗಿವೆ. ತೀರಾ ಸಂಪ್ರದಾಯಸ್ಥ, ಧಾರ್ಮಿಕ ವಿಧಿವಿಧಾನಗಳಲ್ಲಿ ಪಾಲ್ಗೊಳ್ಳುವವರು, ಜನಸಮೂಹದ ಮಧ್ಯೆ ಅಷ್ಟಾಗಿ ಬೆರೆಯದೆ ದೂರ ಉಳಿದವರು ಕಟ್ಟುನಿಟ್ಟಾಗಿ ಇದನ್ನು ಪಾಲಿಸುತ್ತಾರೆ. ತಿನ್ನುವವರು ಮುಚ್ಚು ಮರೆಯಿಂದ ತಿನ್ನುತ್ತಾರೆಯೇ ಹೊರತು ನೇರವಾಗಿ ಅಲ್ಲ. ಅಂದರೆ ತೋಟದ ಮನೆಯಲ್ಲಿಯೋ ಅಥವಾ ಹೊರಗಡೆ ತಿನ್ನುತ್ತಾರೆ. ಮನೆಗೆ ತಂದು ತಿನ್ನುವುದಿಲ್ಲ. ಕೋಳಿ ಸಾಕಾಣಿಕೆ ಇಂದೊಂದು ಉದ್ಯಮವಾಗಿದ್ದು, ಸರ್ಕಾರ ಕೊಡುತ್ತಿರುವ ಸಾಲಸೌಲಭ್ಯ, ಸಬ್ಸಿಡಿ ಪ್ರಯೋಜನ ಪಡೆದು ಕೆಲವರು ಈ ಉದ್ಯಮ ಪ್ರಾರಂಭಿಸಿದ್ದರೂ ಯಾವುದೇ ಕಾರಣದಿಂದ ನಷ್ಟ ಅನುಭವಿಸಿದರೂ ಕೂಡ ನಮ್ಮ ಸಮುದಾಯಕ್ಕೆ ಇದು ನಿಷೇಧ. ನಮ್ಮ ದೇವರಿಗೆ ಇದು ಆಗಿ ಬರುವುದಿಲ್ಲ. ಮಾಡಬಾರದ್ದನ್ನು ಮಾಡಿದ್ದರಿಂದ ನಷ್ಟ ಅನುಭವಿಸ ಬೇಕಾಯಿತು ಎಂದು ಹೇಳುವ ಸಂದರ್ಭಗಳೂ ಸಮುದಾಯದಲ್ಲಿವೆ.

## ಮನೆಯ ಮುಂದೆ ರಂಗೋಲಿ ಹಾಕುವುದು ನಿಷೇಧ

ಇದೊಂದು ಅಚ್ಚರಿಯ ಸಂಗತಿಯಾದರೂ ವಾಸ್ತವ. ಗುಡಿಸಲ ನಿವಾಸಿಗಳಾಗಿದ್ದ ಇವರಿಗೆ ಮನೆ, ಮನೆಯಂಗಳದಲ್ಲಿ ರಂಗೋಲಿ ಬಿಡಿಸುವುದು ತಮ್ಮ ಸಂಪ್ರದಾಯವಲ್ಲ ಎಂಬ ಭಾವನೆ ಇದೆ. ಮುಂಜಾನೆ ಹೊಸ್ತಿಲು ಸಾರಿಸಿ ಒಲೆಯ ಬೂದಿಯನ್ನೇ ವಿಭೂತಿಯಂತೆ ಹಚ್ಚಿದರೆ ಆಯಿತು. ಪಶುಪಾಲಕತನದಿಂದಾಗಿ ಅಲೆಮಾರಿತನದ ಗೂಡುಗಳ ಪಕ್ಕದ ಗುಡಿಸಲುಗಳಲ್ಲಿ ವಸತಿ ಇವರ ಸಾಮಾನ್ಯವಾದ ಬದುಕಾಗಿದ್ದು ಆಕರ್ಷಕವಾದ ರಂಗೋಲಿಯನ್ನು ಬಿಡಿಸುವ ಅವಕಾಶ, ತಕ್ಕ ಪರಿಸರ ಒದಗಿಬಾರದೇ ಇದು ನಿಷೇಧಕ್ಕೊಳಗಾಗಿರಬಹುದು. ಮತ್ತೊಂದು ಸಂಗತಿಯೆಂದರೆ ಯಾರಾದರೂ ರಂಗೋಲಿ ಹಾಕಿದ್ದರೆ ಬ್ರಾಹ್ಮಣರ ಮನೆಗಳ ಮುಂದೆ ರಂಗೋಲಿ ಹಾಕಿದಂತೆ, ಹಾಕಿದರೆ ಇದು ನಮಗೆ ಆಗಿ ಬರುವುದಿಲ್ಲ ಎಂದು ಹೇಳುವಲ್ಲಿ ವೈದಿಕಧರ್ಮದ ಶಿಷ್ಟ ಆಚರಣೆಗಳನ್ನು ನಿರಾಕರಿಸುವ ಮನಸ್ಸು ಇಲ್ಲಿ ಕೆಲಸ ಮಾಡುತ್ತಿವೆ ಯೆನಿಸುತ್ತದೆ. ಆದರೆ ಇತ್ತೀಚೆಗೆ ರಂಗೋಲಿ ಹಾಕುವುದೇ ಸಾಮಾನ್ಯವಾಗುತ್ತಿದೆ. ನಿಷೇಧಗಳನ್ನು ಕುರಿತು ವಿಚಾರ ಮಾಡಿದಾಗ ಸಮುದಾಯದಲ್ಲೇ ಆಂತರಿಕವಾಗಿ ಕುಲಾಚಾರಗಳನ್ನು ಉಲ್ಲಂಘಿಸಿದವರಿಗೂ ನಿಷೇಧಗಳನ್ನು ಹೇರುವ ಪದ್ಧತಿ ಹಿಂದೆ ಸಮುದಾಯದಲ್ಲಿತ್ತು. ಇದಕ್ಕೆ ಇಂದಿಗೂ ಈ ನಿಷೇಧವನ್ನು ಪಾಲಿಸಿಕೊಂಡು ಬರುತ್ತಿರುವ ಸಂದರ್ಭವನ್ನು ಉದಾಹರಿಸಬಹುದು.

## ಯರಮಂಚಿನಾಯಕನಿಗೆ ನಿಷೇಧ

ಸಮುದಾಯಕ್ಕೆ ಒಂದು ದೊಡ್ಡ ಸಮಸ್ಯೆಯಾಗಿ ಪರಿಣಮಿಸಿದ್ದ ಕೊಡಗಲಬೊಮ್ಮನ ಅಂತ್ಯವಾದ ಮೇಲೆ ಅದರ ನಿಮಿತ್ತ ಚಿಂತಗುಟ್ಲು ಬೋರುವನಿಗೆ ಮಾಡಿಕೊಂಡ ಹರಕೆಯನ್ನು ತೀರಿಸಬೇಕಾಗಿತ್ತು. ವಾಸೆ ಕೊಯ್ಯುವುದೇ ಆ ಹರಕೆ. ನಿಗದಿತ ಸಮಯಕ್ಕೆ ದೊರೆ ಯರಮಂಚಿ ನಾಯಕ ಬಾರದೆ ಇದ್ದಾಗ ಆತನ ಸಹೋದರನ ಮುಖಂಡತ್ವದಲ್ಲಿ ವಾಸೆ ಕೊಯ್ಯುತ್ತಾರೆ. ನಂತರ ಬಂದ ಯರಮಂಚಿನಾಯಕನಿಗೂ ಮತ್ತು ಉಳಿದ ಸಮುದಾಯಕ್ಕೂ ಈ ವಿಷಯವಾಗಿ ಘರ್ಷಣೆಯಾಗುತ್ತದೆ. ಒಬ್ಬಂಟಿಯಾದ ಈತ ಪ್ರತಿರೋಧವನ್ನು ತಾಳಲಾರದೆ ಓಡಿ ಹೋಗುತ್ತಾನೆ. ದಾರಿಯ ಪಕ್ಕದ ಹೊಲವೊಂದರಲ್ಲಿ ಮಾದಿಗ ಅಣ್ಣತಮ್ಮಂದಿರು ತಂದೆಯೊಂದಿಗೆ ಕುಳಿತು ಒಂದೇ ಎಲೆಯಲ್ಲಿ ಊಟ ಮಾಡುತ್ತಿರುತ್ತಾರೆ. ತನ್ನ ಹಿಂದೆ ತನ್ನನ್ನು ಸಮುದಾಯದವರು ಅಟ್ಟಿಸಿಕೊಂಡು ಬರುತ್ತಿರುವುದನ್ನು ಅರಿತು ಬದುಕಿ ಉಳಿಯಲೋಸುಗ, ಈತನೂ ಹೋಗಿ ಅವರ ಜೊತೆ ಕುಳಿತು ಆ ಎಲೆಯಲ್ಲಿ ಕೈ ಇಡುತ್ತಾನೆ. ಯರಮಂಚಿನಾಯಕನನ್ನು ಗುರುತಿಸಿದರೂ ಕೂಡ ಕೀಳು ಕುಲದೊಂದಿಗೆ ಊಟ ಮಾಡಿದ ಈತ ಇನ್ನು ನಮಗೆ ಬೇಡ, ಇನ್ನು ಈತ ತಮ್ಮನಲ್ಲ ಎಂದು ಅಲ್ಲಿಗೆ ಆತನಿಗೆ ತರಿಮರ ಕಡಿಯುತ್ತಾರೆ(ತರಿ ಎಂದರೆ ಕತ್ತರಿಸು ಎಂದರ್ಥ. ಮರ ಇಲ್ಲಿ ವಂಶ ಪಾರಂಪರ್ಯವಾದ ಸಂಬಂಧವನ್ನು ಸಂಕೇತಿಸುತ್ತದೆ. ಮರ ಕತ್ತರಿಸು

ಎಂದರೆ ಪರಸ್ಪರರ ಮಧ್ಯದ ಸಂಬಂಧ ಕತ್ತರಿಸಿ ಹೋಯಿತು ಎಂದರ್ಥ. ಕಡಿಯುವುದು ಇಲ್ಲಿ ದ್ವಿರುಕ್ತಿಯಾಗಿದೆ). ತಮಗೂ ಈತನಿಗೂ ಇನ್ನು ಎಂದಿಗೂ ಸಂಪರ್ಕವಿಲ್ಲ. ಸಹಭೋಜನವೂ ಇಲ್ಲ ಎಂದು ಈ ನಿಷೇಧ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿದೆ. ಪರಸ್ಪರ ಒಬ್ಬರು ಹೆಣ್ಣು ಕೊಟ್ಟು ತಂದು ಬಾಂಧವ್ಯ ಬೆಳೆಸಿದ ಮನೆಗೆ ಮತ್ತೊಬ್ಬರು ಕೊಡುವುದಿಲ್ಲ. ಇಂದಿಗೂ ಸಹಪಂಕ್ತಿ ಭೋಜನ ಇಲ್ಲ. ಪರಸ್ಪರರ ಮನೆಗಳಿಗೆ ಹೋಗುವುದಿಲ್ಲ. ಹೀಗೆ ನಿಷೇಧ ಹಾಕಿಕೊಂಡು ಅಣ್ಣ ತಮ್ಮಂದಿರು ದೂರವಾಗಿದ್ದಾರೆ. ಪರಸ್ಪರರ ದೇವಾಲಯಗಳಿಗೆ ಪ್ರವೇಶವಿಲ್ಲ. ಆದರೆ ಯರಮಂಚಿನಾಯಕನ ಪರಂಪರೆಯವರು ಯರಮಂಚಿನಾಯಕನ ಆರಾಧನೆಯಲ್ಲಿ ಈ ಹೊತ್ತಿಗೂ ಉಂಡ ಘಟನೆಯನ್ನು ಆರಾಧನಾ ಸ್ವರೂಪ ಉಳಿಸಿಕೊಂಡು ಬಂದಿದ್ದಾರೆ. ಹಬ್ಬದ ಆಚರಣೆಯಲ್ಲಿ ಮಾದಿಗರಲ್ಲಿ ಒಬ್ಬಾತ ಬಂದು ಬಡಿಸಿದ ಎಲೆಯಲ್ಲಿ ಯರಮಂಚಿನಾಯಕ ಪರಂಪರೆಯವರೊಂದಿಗೆ ಕುಳಿತು ಕೈ ಇಡುತ್ತಾರೆ. ಶಿರ ಕಾದವನನ್ನು ಕೊನೆವರೆಗೂ ಮರೆಯು ವುದಿಲ್ಲ ಎಂಬಂತೆ ಆತನ ಪರಂಪರೆ ಇದನ್ನು ನಡೆಸಿಕೊಂಡು ಬರುತ್ತಿರುವುದು ಪ್ರಶಂಸನೀಯವಾದ ಸಂಗತಿ.

## ದೆಡ್ಡಿ ಯರಪಾಲನಾಯಕನಿಗೆ ನಿಷೇಧ

ಈತನನ್ನು ಗಾದ್ರಿಪಾಲನಾಯಕನ ತಮ್ಮ ಎಂದು ಹೇಳುತ್ತಾರೆ. ರೊಪ್ಪಲಸೂರಿಯ ಮಗ ಎಂಬ ಅಭಿಪ್ರಾಯವೂ ಇದೆ. ಗಾದ್ರಿಪಾಲನಾಯಕನ ನಂತರ ಮ್ಯಾಸಮಂಡಲದ ಮುಖ್ಯಸ್ಥನೆನಿಸಿ ಪಶುಮಂದೆಗೆ ಒಡೆಯನೆನಿಸಿ ದೊರೆ ಎಂದು ಕರೆಸಿಕೊಳ್ಳುತ್ತಾನೆ. ಈತನನ್ನು ಮೆಚ್ಚಿ ಡೆಲ್ಲಿ ಸುಲ್ತಾನನ ಮಗಳು ನನ್ನಿಯಮ್ಮ ಹಿಂದೆ ಬರುತ್ತಾಳೆ(ದಿಲ್ಲಿಯ ಕಡೆಯಿಂದ ಆಕ್ರಮಣಕಾರರಾಗಿ ಬಂದ ಸುಲ್ತಾನನ ಪಡೆಯವರೆಲ್ಲಾ ಈ ಮುಗ್ಧ ಜನರ ಪಾಲಿಗೆ ಡೆಲ್ಲಿ ಸುಲ್ತಾನರೇ). ತನ್ನನ್ನೇ ನಂಬಿ ತನ್ನ ಹಿಂದೆ ಬಂದು ಒಂದಾಗಿ ಬಾಳಿದ ಆಕೆಯ ಹೆಸರನ್ನು ಪಾಲನಾಯಕ ಊರೊಂದನ್ನು ಕಟ್ಟಿ ಅದನ್ನೇ "ನನ್ನಿವಾಳ' ಎಂದು ಕರೆಯುತ್ತಾನೆ ಮತ್ತು ಆಕೆಯ ಮಗನಿಗೆ ತನ್ನ ಉತ್ತರಾಧಿಕಾರವನ್ನು ವಹಿಸಿಕೊಡುತ್ತಾನೆ. ಇಂದಿಗೂ ಈ ದೊರೆ ಮ್ಯಾಸಮಂಡಲಕ್ಕೆ ಸಂಬಂಧಿಸಿದ ಸಾಂಸ್ಕೃತಿಕ ಆಚರಣೆಗಳಲ್ಲಿ ಧರಿಸುವುದು ನವಾಬರ ಮಾದರಿಯ ಪೋಷಾಕನ್ನೇ ಮತ್ತು ದೇವರಿಗೆ ನಮಸ್ಕರಿಸುವುದು ಕೂಡ ಇಸ್ಲಾಂ ಧರ್ಮದ ಶೈಲಿಯಲ್ಲೇ. ಇದನ್ನೇ "ದೀಟೀ ಸಲಾಮು" ಎಂದು ಕರೆಯುತ್ತಾರೆ.[೧೬] ಹೀಗೆ ತನ್ನ ಪ್ರೇಯಸಿಯೊಂದಿಗೆ ಆಕೆಯ ನಂಬಿಕೆಗಳನ್ನು ದೆಡ್ಡಿ ಯರಪಾಲನಾಯಕ ಪುರಸ್ಕರಿಸಿದ. ಆದರೆ ಸಮುದಾಯ ಈತನನ್ನು ಬಹಿಷ್ಕರಿಸಿತು. ಅಂದರೆ ಆತನ ಉಳಿದ ಸಹೋದರರು ಈತನನ್ನು ಬಹಿಷ್ಕರಿಸುತ್ತಾರೆ. ಹಾಗಾಗಿ ನನ್ನಿವಾಳದ ಕಟ್ಟೆಮನೆಗೆ ಇಂದಿಗೂ ಆತನ ಸಹೋದರರಾದ ನಲಕುಲಕ್ಕೆ ಸೇರಿದವರು ಕಾಲಿರಿಸುವುದಿಲ್ಲ. ಕೊಡು-ಕೊಳ್ಳುವಿಕೆ, ಸಹಭೋಜನವೂ ಇಲ್ಲ. ದೊರೆಯ ಸಂತತಿ ಮತ್ತು ಆತನ ಉಳಿದ ಬಂಧಗಳು ಇವರೊಂದಿಗೆ ಅನ್ಯೋನ್ಯವಾದ ಸಂಪರ್ಕ ಇರಿಸಿಕೊಂಡಿದ್ದಾರೆ. ವರ್ಷಕ್ಕೊಮ್ಮೆ

ನನ್ನಿವಾಳದಲ್ಲಿ ನಡೆಯುವ ಜಾತ್ರೆಯಲ್ಲಿ ಸುತ್ತಮುತ್ತಲ ಹಟ್ಟಿಗಳ ಜನರೆಲ್ಲಾ ಭಾಗವಹಿಸುತ್ತಾರೆ. ದೊರೆ ಆಗ ಒಂದು ಕಿರುಸಭೆ ನಡೆಸುತ್ತಾನೆ. ಆಗ ತಮ್ಮ ಸಮಸ್ಯೆಗಳನ್ನು ವ್ಯಾಜ್ಯಗಳನ್ನು ಜನ ಹೇಳಿಕೊಂಡಾಗ ದೊರೆ ಪರಿಹಾರ ಕೊಡುತ್ತಾನೆ. ಎಲ್ಲರೂ ಎದ್ದು ನಿಂತು ಕೊನೆಗೆ ಇಸ್ಲಾಂ ಧರ್ಮದ ಸಂಪ್ರದಾಯದಂತೆ ಬಲಗೈ ಮುಂದೆ ಚಾಚಿ ನಂತರ ಹಣೆಗೆ ಮುಟ್ಟಿಸಿಕೊಂಡು ನಮಸ್ಕರಿಸುತ್ತಾರೆ. ನಿಷೇಧಕ್ಕೊಳಗಾದವ ದೊರೆಯಾದ್ದರಿಂದ ಆತನ ಅಧಿಕಾರ ದರ್ಪವೇ ಕಾರಣವಾಗಿ ತನ್ನ ನಂಬಿಕೆಗನುಗುಣವಾಗಿ ತನ್ನ ಆಡಳಿತದ ವ್ಯಾಪ್ತಿಯಲ್ಲಿ ಆತನ ಆಳ್ವಿಕೆ ನಡೆಸುತ್ತಿರುವುದು ಇಲ್ಲಿ ಸ್ಪಷ್ಟವಾಗುವ ಸಂಗತಿಯಾಗಿದೆ.

### ರೊಪ್ಪಲಸೂರಿಗೆ ನಿಷೇಧ

ನಾಯಕನಹಟ್ಟಿಗೆ ಸಮೀಪವಿರುವ ಗೌಡಗೆರೆ ಪ್ರಾಂತ್ಯವನ್ನು ಅಲಿಕಿಸಿರಿ ಎಂಬ ದೊರೆ ಆಳುತ್ತಿದ್ದ. ಈತನೂ ಮ್ಯಾಸಮಂಡಲಕ್ಕೆ ಸೇರಿದವನೇ. ಆಗ ಮ್ಯಾಸರು ದನಕರುಗಳ ಮಂದೆಯೊಂದಿಗೆ ಗೌಡಗೆರೆಗೆ ೪-೫ ಕಿ.ಮೀ.ಗಳ ಅಂತರದಲ್ಲಿರುವ ದೇವರಹಳ್ಳಿ, ವೇದಾವತಿಯ ನದಿಯ ಉಪನದಿಯ ಬಯಲಿನಲ್ಲಿ ರೊಪ್ಪಗಳನ್ನು ಇಟ್ಟುಕೊಂಡು ವಾಸ್ತವ್ಯ ಹೂಡಿದ್ದರು.

ಅಲಿಕಿಸಿರಿಯ ಪತ್ನಿ ದೊಡ್ಡೇರಿ ಸಂತೆಗೆ ಹೋಗಿ ಅದೇ ಮಾರ್ಗವಾಗಿ ಹಿಂದಿರುಗುತ್ತಿದ್ದಾಗ ಆಕೆಯ ರೂಪಕ್ಕೆ ಮನಸೋತಿದ್ದ ರೊಪ್ಪಲಸೂರಿ ಆಕೆಯ ಮೇನೆಯನ್ನು ಹೊರುವ ಬೋಯಿಗಳಿಗೆ ಮಾಂಸದ ಊಟದ ಆಸೆ ಹುಟ್ಟಿಸಿ ಅವರು ಅಲ್ಲಿಯೇ ಮೇನೆಯನ್ನು ಇಳಿಸುವಂತೆ ಮಾಡುತ್ತಾನೆ. ಸಮಯದ ಸದುಪಯೋಗ ಮಾಡಿಕೊಂಡು ಆಕೆಯನ್ನು ಕರೆದುಕೊಂಡು ಅಲ್ಲಿಂದ ಹೊರಟು ಹೋಗುತ್ತಾನೆ. ಆತನು ಪ್ರತಿದಿನ ಸೂರ್ಯನ ಮುಂದೆ ಸೂರ್ಯೋದಯದ ಸಂದರ್ಭದಲ್ಲಿ ಎತ್ತುಗಳನ್ನು ಹರಿಯಿಸುವ ನೇಮವನ್ನಿಟ್ಟುಕೊಂಡಿದ್ದ. ಇದನ್ನು ಮಾಡದೆ ಊಟ ಮಾಡುತ್ತಿರಲಿಲ್ಲ. ಇದು ತಿಳಿದಿದ್ದ ಆತನ ಮಗ ಯಾರಿಗೂ ತಿಳಿಸದಂತೆ ಮಧ್ಯರಾತ್ರಿಯಲ್ಲಿಯೇ ಒಂದಿಷ್ಟು ಎತ್ತು, ಹಸುಗಳನ್ನು ಹೊಡೆದುಕೊಂಡು ತಂದೆ ಇರುವ ಬಳಿ ಹೋಗಿ ನೇಮ ಮುಗಿಸಿ ಮರಳಿ ಎತ್ತುಗಳನ್ನು ತಂದು ಗೂಡಿಗೆ ಸೇರಿಸಿ ಯಾರಿಗೂ ತಿಳಿಯದಂತೆ ಇದ್ದುಬಿಡುತ್ತಾನೆ. ಪ್ರತಿದಿನ ಓಡಿ ದಣಿದ ಎತ್ತುಗಳು ಗಂಜಲ ಸಗಣಿ ಹಾಕಿದಾಗ ಜೊತೆಗೆ ರಕ್ತವೂ ಬರುತ್ತದೆ. ಇದರಿಂದ ಅನುಮಾನಗೊಂಡು ಗಮನಿಸುತ್ತಿದ್ದವರಿಗೆ ವಿಷಯ ನಿಧಾನವಾಗಿ ಸ್ಪಷ್ಟವಾಗುತ್ತದೆ. ನಾಲ್ಕಾರು ದಿನಗಳಲ್ಲಿಯೇ ಈ ಸಂಗತಿ ಹೀಗೆ ಅರಿವಿಗೆ ಬರುತ್ತದೆ. ಆ ವೇಳೆಗಾಗಲೇ ದೊರೆ ಅಲಿಕಿಸಿರಿ ಬಂದು ಸಮುದಾಯದ ಹಿರಿಯರಿಗೆ(ತನ್ನ ಹೆಂಡತಿಯ ತಂದೆಗೆ) ದೂರು ಕೊಟ್ಟಿರುತ್ತಾನೆ. ಈ ಘಟನೆಯನ್ನು ಸಮುದಾಯ ತಮಗೆ ಅದು ದೊಡ್ಡ ಅಪಮಾನ ಎಂದು ಭಾವಿಸುತ್ತದೆ. ವಿವಾಹಿತಳನ್ನು ಹೀಗೆ ಕರೆದ್ಯೊಯ್ದದ್ದು ಅಪರಾಧವಾಗಿದ್ದು, ಅಂಥ ಅಪರಾಧಿಯ ನೇಮಕ್ಕೆ ಹೀಗೆ ಆತನ ಮಗ ಎತ್ತುಗಳನ್ನು ಕೊಂಡೊಯ್ಯುತ್ತಿದ್ದಾನೆ ಎಂದು ಬೇಸರಿಸಿ ಒಂದು ದಿನ

ಕಾದು ಕುಳಿತುಕೊಳ್ಳುತ್ತಾರೆ. ಎತ್ತುಗಳನ್ನು ತಂದೆಯ ನೇಮಕ್ಕೆ ಹರಿಸಿ ಬೆಳಗಾಗುವ ವೇಳೆಗೆ ಮರಳಿ ಗೂಡಿಗೆ ತಲುಪಿಸುತ್ತಿರುವಾಗ ತಡೆದು ನಿಲ್ಲಿಸುತ್ತಾರೆ. ರೊಪ್ಪಲಸೂರಿ ಶರಣ ಶಿವಭಕ್ತ, ನೇಮ ನಡೆಸುವ ನಿಷ್ಠಾವಂತ. ಆದರೆ ವಿವಾಹಿತಳನ್ನು ಕರೆದೊಯ್ದು ಕುಲಕ್ಕೆ ಅಪಮಾನ ಮಾಡಿದ್ದಾನೆ. ಆದ್ದರಿಂದ ಅವನ ನೇಮಕ್ಕೆ ಹರಿದ ಎತ್ತುಗಳನ್ನು ನಮ್ಮ ಮಂದೆಯೊಂದಿಗೆ ಸೇರಿಸಬೇಡ. ಒಡೆಯನ ನೇಮಕ್ಕೆ ಹರಿದ ಎತ್ತುಗಳು ಒಡೆಯನಿಗೆ ಸೇರಲಿ ಎಂದು ದೂರವಿಡುತ್ತಾರೆ. ಇಂದಿಗೂ ವಡೇಲ ಎತ್ತುಗಳು ಎಂಬ ಬೇರೆಯದೆ ಆದ ಮಂದೆ ಇದ್ದು ಅದರ ಮಧ್ಯೆ ಬೇರೆಯ ಗೂಡಿನ ಎತ್ತುಗಳನ್ನು ಬೆರೆಸುವುದಿಲ್ಲ. ರೊಪ್ಪಲಸೂರಿಯ ಸಂತತಿಯವರಲ್ಲಿ ಒಬ್ಬರು ಅದನ್ನು ನೋಡಿಕೊಳ್ಳುತ್ತಾರೆ. ಮಲ್ಲೂರಹಳ್ಳಿ ಬಳಿಯ ಪಿಲ್ಲಿಗುಂಡ್ಲು ಎಂಬ ಅರಣ್ಯದಲ್ಲಿ ಈ ಎತ್ತಿನ ಗೂಡಿದೆ.

ಹಿಂದೆ ವಿಧಿಸಿದ್ದ ನಿಷೇಧಗಳನ್ನು ಸಮುದಾಯ ಇಂದಿಗೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿದೆ. ಕಾರಣ ಅದಕ್ಕೊಂದು ಧಾರ್ಮಿಕ ಆವರಣವಿದೆ. ಈ ಚೌಕಟ್ಟನ್ನು ಮೀರಬಾರದು ಎಂಬ ಭಯ ಭೀತಿ ಕಾರಣವಾಗಿ ಇದನ್ನು ನಡೆಸಲಾಗುತ್ತಿದೆ. ಆದರೆ ಇಂದಿನ ಸಂದರ್ಭದಲ್ಲಿ ಯಾರಾದರೂ ಇದೇ ಬಗೆಯ ಕಾರ್ಯ ಎಸಗಿದಾಗ ಸಮುದಾಯ ಅವರಿಗೆ ನಿಷೇಧ ಹೇರುತ್ತದೆಯೇ ಎಂದು ವಿಚಾರ ಮಾಡಿದರೆ ಇಲ್ಲ ಎಂಬ ಉತ್ತರವೇ ಸ್ಪಷ್ಟವಾದುದು. ಕಾರಣ ಬದುಕಿನ ಬದಲಾವಣೆಯಾದಾಗ ಸಂಪ್ರದಾಯ ನಂಬಿಕೆಗಳೂ ಕ್ರಮೇಣ ಬದಲಾವಣೆಯ ಕಡೆ ಸರಿಯುತ್ತಿರುವುದು ಸಹಜವಾಗಿಯೇ ಇದೆ.

ಟಿಪ್ಪಣಿಗಳು

೧. ಹೆಗಡೆ ಆರ್.ಪಿ., **ಕರೆ ಒಕ್ಕಲರು,** ಪು.೪೫೧

೨. ನಂಜಮ್ಮಣ್ಣಿ, ಉದ್ಧೃತ: **ಅರಸು ಜನಾಂಗ: ಒಂದು ಅಧ್ಯಯನ,** ಪು.

೩. ಅಂಬಳಿಕೆ ಹಿರಿಯಣ್ಣ, **ಕರ್ನಾಟಕ ಬುಡಕಟ್ಟುಗಳು ಸಂಪುಟ** ೧, ಪು.೪೫೧

೪. ನಾಗೇಗೌಡ ಎಚ್.ಎಲ್., **ಸೋಬಾನೆ ಚಿಕ್ಕಮ್ಮನ ಪದಗಳು,** ಪು. ೩೨೫

೫. ಮಂಜುನಾಥ ಬೇವಿನಕಟ್ಟಿ, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ,**

೬. ಚಕ್ರವರ್ತಿ ಶ್ರೀನಿವಾಸ ಗೋಪಾಲಚಾರ್ಯ, **ಸಂಸ್ಕೃತ ಕನ್ನಡ ಶಬ್ದಕೋಶ,** ಪು.

೭. **ಕನ್ನಡ ಸಾಹಿತ್ಯ ಪರಿಷತ್ತು ನಿಘಂಟು ಭಾಗ** ೧, ಪು.೪೪೫

೮. **ಸಂಸ್ಕೃತ–ಕನ್ನಡ ಸುವರ್ಣಕೋಶ**

೯. ರೇ॥ ಎಫ್.ಕಿಟಲ್(ಸಂ), **ಕನ್ನಡ-ಇಂಗ್ಲೀಷ್ ಡಿಕ್ಷ್ಯನರಿ**

೧೦. ಗುರುನಾಥ ಜೋಶಿ ಬಿ.(ಸಂ), **ಕನ್ನಡ-ಕನ್ನಡ ಶಬ್ದಕೋಶ**

೧೧. ಅ.ರಾ.ಸೇ(ಸಂ), **ಪರಮಾರ್ಥ ಪದಕೋಶ**

೧೨. ರಹಮತ್ ತರೀಕೆರೆ(ಸಂ), **ಧರ್ಮ:ವಿಶ್ವಕೋಶ,** ಪು.೨೦೩

೧೩. ರಹಮತ್ ತರೀಕೆರೆ, **ಕರ್ನಾಟಕದಲ್ಲಿ ನಾಥಪಂಥ,** ಪು.೧೫೫

೧೪. ಅದೇ, ಪು.೧೫೫

೧೫. ಶಂಬಾ ಜೋಶಿ, **ಸಂಸ್ಕೃತಿ ನಡೆದು ಬಂದ ಬಗೆ,** ಪು.೨೮

೧೬. ಇಸ್ಲಾಂ ಧರ್ಮದಲ್ಲಿ ದೀನ್ ಸಲಾಮ್ ಎಂಬ ನಮಸ್ಕರಿಸುವ ಕ್ರಮ ಇದೆ. ಈ ದೀನ್ ಸಲಾಮ್ ಬಹುಶಃ ದೀಟೀ ಸಲಾಮ್ ಬದಲಾಗಿರಬಹುದೆನಿಸುತ್ತದೆ.

ಅಧ್ಯಾಯ ಆರು

# ಆರ್ಥಿಕ ಮತ್ತು ಶಿಕ್ಷಣ ವ್ಯವಸ್ಥೆ

ಬುಡಕಟ್ಟು ಅಧ್ಯಯನವು ಸಮುದಾಯದ ಆರ್ಥಿಕ ಸ್ಥಿತಿಗತಿಗಳ ವಿವರಣೆಯನ್ನು ಒಳಗೊಳ್ಳುತ್ತದೆ. ಇದರ ಸ್ಥಾನಮಾನಗಳ ವಿವರಗಳ ಮೂಲಕವೇ ಸಮಾಜ, ಸಮುದಾಯ, ಧರ್ಮ, ಸಂಸ್ಕೃತಿ ಇತರೆಲ್ಲವೂ ನಿರ್ವಚಿಸಲ್ಪಡುತ್ತವೆ. ಹಾಗೆ ನೋಡಿದರೆ ಆರ್ಥಿಕ ಹಿತಾಸಕ್ತಿಯಿಲ್ಲದ ಧರ್ಮಕ್ಕಾಗಲೀ, ಸಮಾಜಕ್ಕಾಗಲೀ ಪ್ರತ್ಯೇಕ ಅಸ್ತಿತ್ವಗಳೇ ಇಲ್ಲ ಎನ್ನಬಹುದು. ಮಾನವನ ಆರ್ಥಿಕ ಜೀವನಕ್ರಮದ ಹಿನ್ನೆಲೆಯನ್ನು ವಿವೇಚಿಸಿದಂತೆ ಇಂದಿನ ನಾಗರಿಕ ಸಮಾಜ ಅತಿಹೆಚ್ಚು ಕ್ರೂರವೂ ಸ್ವಾರ್ಥಕೇಂದ್ರಿತವೂ ಆಗಿ ಕಾಣುತ್ತದೆ. ಈ ಆರ್ಥಿಕತೆ ಮನುಷ್ಯ ಜೀವನದ ಮೂಲಭೂತ ಪ್ರವೃತ್ತಿಗಳಿಗೆ ಅಂಟಿಕೊಂಡಿರುವುದು 'ಹಸಿವು' ಆಹಾರಾನ್ವೇಷಣೆಗೆ ಕಾರಣವಾಗಿದೆ. ಮೂಲ ಮಾನವನಿಂದ ಆಹಾರದ ಹುಡುಕಾಟ ಆರಂಭವಾಗಿ ಮನುಷ್ಯನ ಬದುಕಿಗೆ ಒಂದು ಬಗೆಯ ಸ್ಥಿರತೆ ಬರುವವರೆಗೆ ಈ ಹುಡುಕಾಟ ನಿರಂತರವಾಗಿದೆ. ಅರಣ್ಯ ವಾಸಿಯಾಗಿದ್ದ ಮನುಷ್ಯನಿಗೆ ಹಳ್ಳಿ ನಗರಗಳನ್ನು ಸೃಷ್ಟಿಸಿಕೊಂಡು ಜೀವಿಸುವ ರೀತಿ ಇದೆಲ್ಲಾ ಅದು ಮೂಲತಃ ಕಾಡು ಮತ್ತು ಊರುಗಳ ನಡುವಿನ ಸಾಂಸ್ಕೃತಿಕ ಸಂಬಂಧಗಳ ಇತಿಹಾಸವೇ ಆಗಿದೆ.

ಕಾಡು ಸಂಸ್ಕೃತಿಗಳ ನಿಜ ನೆಲೆಯನ್ನು ಪ್ರತಿನಿಧಿಸುತ್ತಾ ಚಲನಾಸ್ವರೂಪಿಯಾಗಿದ್ದರೆ ಊರುಗಳಲ್ಲಿನ ಸಂಸ್ಕೃತಿ ನಿರ್ಮಾಣ ತಟಸ್ಥವೂ, ಅಹಂಕಾರ ಪ್ರತಿಷ್ಠೆಗಳ ಪ್ರದರ್ಶನವೂ ಹಾಗೂ ಅದರ ಸಾಧನವೂ ಆಗಿ ಕಂಡುಬಂದಿದೆ. ಮಾನವನ ಆಹಾರೋತ್ಪಾದನೆಯೇ ಅವನ ಒಟ್ಟು ಚಟುವಟಿಕೆಗಳ ಮೂಲ ಪ್ರೇರಣೆಯಾಗಿರುವುದರಿಂದ ಅದು ಸಸ್ಯಾಹಾರ, ಮಾಂಸಾಹಾರ ಗಳೆಂಬ ದ್ವಿರೀತಿಯಲ್ಲಿ ಗೋಚರಿಸುತ್ತಾ ಬಂದಿದೆ. ಆಹಾರಕ್ಕಾಗಿ ಪ್ರಾಣಿ ಪಕ್ಷಿಗಳನ್ನು ಬೇಟೆ ಯಾಡುತ್ತಿದ್ದ ಮನುಷ್ಯ ಕಾಲಾಂತರದಲ್ಲಿ ಆಹಾರೋತ್ಪಾದನೆಯ ವಿವಿಧ ಮಾರ್ಗಗಳ ಹಿನ್ನೆಲೆಯಲ್ಲಿ

ಬೇಟೆಯನ್ನು ಒಂದು ಆಚರಣೆಯನ್ನಾಗಿ ಮಾಡಿಕೊಂಡಿದ್ದ. ಮನುಷ್ಯ ಮೂಲತಃ ಅರಣ್ಯದಲ್ಲಿದ್ದನೆಂಬ ಬಗ್ಗೆ ಯಾವ ಸಂದೇಹವೂ ಇಲ್ಲ. ಗೆಡ್ಡೆ-ಗೆಣಸುಗಳನ್ನು ತಿಂದು ಜೀವಿಸುತ್ತಿದ್ದ ಮನುಷ್ಯ ಬೇಟೆಯ ಮೂಲಕವೂ ಆಹಾರ ಸಂಗ್ರಹಿಸುತ್ತಿದ್ದ. ಬೇಟೆಯು ಅಂದಿನ ಪ್ರಮುಖ ಆಹಾರೋತ್ಪಾದನಾ ಮೂಲವಾಗಿತ್ತು. ಆದರೆ ಇದೇ ಬೇಟೆ ಈಗ ಏನಾಗಿದೆಯೆಂಬುದನ್ನು ಅವಲೋಕಿಸಿದರೆ ಸಂಸ್ಕೃತಿಯ ಸ್ಥಿತ್ಯಂತರ ಹಾಗೂ ಚಲನಶೀಲತೆಯ ಸ್ವರೂಪದ ಬಗ್ಗೆ ಸ್ಪಷ್ಟವಾಗುತ್ತದೆ. ಅಂದಿನ ಪ್ರಮುಖ ಉತ್ಪಾದನಾ ವಿಧಾನವಾಗಿದ್ದ ಬೇಟೆ ಬರುಬರುತ್ತ ಒಂದು ಪ್ರಾಸಂಗಿಕ ಕ್ರಿಯೆಯಾಯಿತು. ಅರಸರ ದಿನನಿತ್ಯದ ಹವ್ಯಾಸವಾಯಿತು. ಉತ್ಪಾದನಾ ವಿಧಾನವೊಂದು ಹವ್ಯಾಸವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಲ್ಲೇ ಊರುಗಳ ಹುಟ್ಟು ಸಂಭವಿಸಿವೆ. ಊರುಗಳು ಜನ್ಮ ತಳೆದು ಪಾಳೆಪಟ್ಟುಗಳು ರಚನೆಯಾಗುವ ವೇಳೆಗೆ ಕಾಡಿನ ಕೋಟ್ಯಂತರ ಮನುಷ್ಯರು ಊರಿನ ಮನುಷ್ಯರಾಗಿದ್ದರು. ಅವರ ಉಡುಪು ಬದಲಾಗಿತ್ತು. ವಸತಿ ಬದಲಾಗಿತ್ತು. ಆಹಾರ ವಿಧಾನ ಪರಿವರ್ತನೆಯಾಗಿತ್ತು.[೧]

ಈ ಸಮಯದಲ್ಲಿ ಅರಣ್ಯದ ಪ್ರಮುಖ ಆರ್ಥಿಕ ಚಟುವಟಿಕೆಯಾಗಿದ್ದ ಬೇಟೆ ಹವ್ಯಾಸವಾಗಿತ್ತು. ಕಾಡಿನಲ್ಲಿ ಪ್ರತಿನಿತ್ಯ ಆಹಾರವಾಗಿದ್ದ ಮಾಂಸವು ಊರಿನಲ್ಲಿ ಹಬ್ಬದ ಆಹಾರವಾಗಿತ್ತು. ಊರಿನ ಸಂಸ್ಕೃತಿ ಮತ್ತಷ್ಟು ವಿಸ್ತರಿಸುತ್ತ ವಿಕಾಸವಾಗುತ್ತ ಹೋದಂತೆ ಬೇಟೆಯು ಜನರ ಆಚರಣೆಯಾಗುತ್ತಿತ್ತು. ಕೆಲವು ಹಬ್ಬಗಳೆಂದು ಊರಿನ ಬೇಟೆಗೆಂದು ಹೋಗಿ ಹುಲಿಯನ್ನಲ್ಲ, ಹೊಲದಲ್ಲಿರುವ ಬಿಳಿ ಇಲಿಯನ್ನಾದರೂ ಹಿಡಿದುತರುತ್ತಾರೆ. ಅದರ ಮಾಂಸದ ಚೂರುಗಳನ್ನು ಹಂಚಿಕೊಳ್ಳುತ್ತಾರೆ. ಅರಣ್ಯ ಸಂಸ್ಕೃತಿಯಲ್ಲಿದ್ದ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಗಳ ಕಲ್ಪನೆ ಕಣ್ಮರೆಯಾಗುತ್ತಾ ಬಂದದ್ದು ಈಗ ಇತಿಹಾಸದ ಸಂಗತಿಯಾದ್ದರಿಂದ ಊರಿನ ಸಂಸ್ಕೃತಿಯಲ್ಲಿ ಕೇವಲ ಒಂದು ನೆನಪಾಗಿ, ಆಚರಣೆಯಾಗಿ ಪರಿವರ್ತನೆ ಹೊಂದಿದೆ. ಬೇಟೆ ಊರನ್ನು ವ್ಯಾಖ್ಯಾನ ಮಾಡುವ ಒಂದು ಮಾನದಂಡವಾಗುವುದು ಸಹಜ. ಇನ್ನೊಂದು ಮುಖ್ಯ ಬದಲಾವಣೆಯನ್ನು ಇಲ್ಲಿ ಗಮನಿಸಬಹುದು. ಊರಿನ ಸಂಸ್ಕೃತಿಯಲ್ಲಿ ಮೂರ್ತಹಿಂಸೆ ಕಡಿಮೆಯಾದಂತೆ ಕಂಡರೂ ಅಮೂರ್ತ ಹಿಂಸೆ ಜಾಸ್ತಿಯಾಗಿದೆ.[೨]

ಊರುಗಳ ಒಕ್ಕೂಟದಲ್ಲಿ ಹುಟ್ಟಿದ ರಾಜ್ಯ ವ್ಯವಸ್ಥೆ ಮತ್ತು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಗಳು ತಮ್ಮದೇ ರೀತಿಯಲ್ಲಿ ಹಿಂಸೆಯನ್ನು ಅಂತರ್ಗತ ಮಾಡಿಕೊಂಡು ಜನರಿಗೆ ಹಿಂಸೆ ಕೊಡುತ್ತಿರುವ ಸಂದರ್ಭಗಳು ಸಾಕಷ್ಟಿವೆ. ಒಂದು ಸಹಜ ಉತ್ಪಾದನಾ ವಿಧಾನವಾಗಿದ್ದ ಬೇಟೆಯೂ ಆಚರಣೆಯ ಹಂತಕ್ಕೆ ಬರುವಾಗ ಅದರೊಳಗಿನ ಹಿಂಸೆಯ ಕಲ್ಪನೆಯು ಸಾಮಾಜಿಕ, ರಾಜಕೀಯ ವ್ಯವಸ್ಥೆಯ ಒಳಸೇರಿದ್ದು ಒಂದು ವಿಪರ್ಯಾಸವೇ ಸರಿ. ಇದು ಮನುಷ್ಯ ಮನುಷ್ಯನನ್ನೇ ಹಿಂಸಿಸುವುದು ಬೇಟೆಯಾಗುವ ಸಂದರ್ಭವಿದೆ.[೩] ಇದು ಹಸಿವು ಈಡೇರಿಸಿ ಕೊಳ್ಳುವುದಕ್ಕಾಗಿ ಆಹಾರೋತ್ಪಾದನೆ ಮಾಡುತ್ತಾ ಹೊರಟ ಮನುಷ್ಯ ಅದನ್ನು ಎಲ್ಲ ಸಂದರ್ಭದಲ್ಲಿ

ಆರ್ಥಿಕ ಕಾರ್ಯಕ್ಷೇತ್ರ ಮಾಡಿಕೊಂಡು ಮಹಿಳೆಯ ವಿಚಾರದಲ್ಲಿ ಶೋಷಣೆ ಮತ್ತು ಕ್ರೌರ್ಯದ ಅಸ್ತ್ರದಂತೆ ಉಪಯೋಗಿಸಿದ ಕತೆ. ಸಂಪನ್ಮೂಲಗಳ ಲಭ್ಯತೆ ಮತ್ತು ಅವುಗಳ ನಿರ್ದಿಷ್ಟ ಉಪಯೋಗ ವಿಧಾನದ ಅರಿವಿನಿಂದಾಗಿ ಮನುಷ್ಯ ಸ್ವತಃ ತಾನೇ ಉತ್ಪಾದನಾ ಕೇಂದ್ರಗಳನ್ನು ಮಾಡಿಕೊಂಡ.

ಕಾಲಕ್ರಮೇಣ ಆರ್ಥಿಕ ಸಂಪತ್ತಿನ ಸಂಗ್ರಹಣೆ ಮತ್ತು ವಿನಿಮಯಗಳಿಂದಾಗಿ ಬಂಡವಾಳ ವೃದ್ಧಿಯಾದಂತೆ ಮನುಷ್ಯ ಊಳಿಗಮಾನ್ಯದ ಧಣಿಯಾಗಿ, ಉದ್ಯಮಪತಿಯಾಗಿ ಸಾಮಾಜಿಕ, ರಾಜಕೀಯ, ನೀತಿ ನಿರೂಪಣೆಗಳ ನಿರ್ವಾಹಕನಾಗಿ ಸುಲಿಗೆಯ ವ್ಯಾಪಕ ವ್ಯವಸ್ಥೆಯೇ ತಾನಾದ. ಇದರೊಂದಿಗೆ ಬೌದ್ಧಿಕತೆಯನ್ನು ಹತ್ತಿಕ್ಕುತ್ತ ಅತಿಭಾವುಕ ನೆಲೆಯಲ್ಲಿ ಮಹಿಳೆಯನ್ನು ದುರ್ಬಲಳನ್ನಾಗಿ ಮಾಡಿದ ಧಾರ್ಮಿಕ ವ್ಯವಸ್ಥೆಯೂ ಸೇರಿಕೊಂಡು ಒಟ್ಟಾರೆ ಅಸಹಾಯಕರನ್ನು, ಮುಗ್ಧರನ್ನು ನಿರಂತರವಾಗಿ ಅನ್ಯಾಯದ ಕತ್ತಲಲ್ಲಿರುವಂತೆ ನೋಡಿಕೊಂಡ. ಈ ಬಗೆಯ ಆರ್ಥಿಕ, ಧಾರ್ಮಿಕ ಹಿತಾಸಕ್ತಿ ಕೇಂದ್ರಗಳು ಯಾವತ್ತೂ ಜೀವನದರ್ಶನ ಪ್ರತಿಪಾದನೆಯಲ್ಲಿ ನಿರರ್ಥಕ ಅಧ್ಯಾತ್ಮ ಪರಮಾತ್ಮಗಳನ್ನು ವೈಭವೀಕರಿಸಿ ಸಾಮಾಜಿಕ, ರಾಜಕೀಯ ಸಮಾನತೆ ಸವಲತ್ತುಗಳ ಕಡೆಗೆ ನಿರ್ಲಕ್ಷ್ಯ ತಳೆಯುವಂತೆ ಮಾಡುತ್ತಾ ಬಂದಿದೆ ಮತ್ತು ಕೆಲವರ ಪಾಲಿಗೆ ಈ ಧರ್ಮವೇ ಆ ಎಲ್ಲ ಸುಖ ಸಂಪತ್ತುಗಳ ನಿರಾಯಾಸ ಅನುಭೋಗಕ್ಕೆ ಕಾರಣವಾಗಿದೆ.

ಇಂದಿನ ಆರ್ಥಿಕ ವ್ಯವಸ್ಥೆ ಜಟಿಲವಾದುದು. ಅದರ ಸ್ವರೂಪ ಅರಿಯಬೇಕಾದರೆ ಅದರ ಪೂರ್ವೇತಿಹಾಸದ ಲಘು ಪರಿಚಯ ಅತ್ಯವಶ್ಯಕ. ಮಾನವನು ಭೂಮಿಯಲ್ಲಿ ಜನ್ಮ ತಾಳಿದಾದ ಹೆಚ್ಚು ಕಡಿಮೆ ಕಾಡುಮೃಗಗಳಂತೆ ಜೀವಿಸುತ್ತಿದ್ದ. ನಂತರ ಆತನ ಆರ್ಥಿಕ ಜೀವನ ಕ್ರಮೇಣ ವಿಕಾಸವಾಗತೊಡಗಿತ್ತು. ಒಕ್ಕಲುತನ ಒಮ್ಮೆಲೇ ಎಲ್ಲೆಡೆ ಉಗಮವನ್ನು ಹೊಂದಿಲ್ಲ. ಅಂದರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ವರ್ಷಗಳಲ್ಲಿ ಒಕ್ಕಲುತನ ಪ್ರಾರಂಭವಾಯಿತು. ೧೯ನೇ ಶತಮಾನದ ವಿದ್ವಾಂಸರು ಮಾನವನ ಬೆಳವಣಿಗೆಯನ್ನು ನಾಲ್ಕು ಹಂತಗಳಲ್ಲಿ ವಿವರಿಸುತ್ತಾರೆ. ಮೊದಲನೆಯದು ಪ್ರಾಣಿಗಳನ್ನು ಬೇಟೆಯಾಡಿ ಮತ್ತು ಹಣ್ಣು ಹಂಪಲುಗಳನ್ನು ತಿಂದು ಜೀವಿಸುವ ಹಂತ. ಕಾಡುಪ್ರಾಣಿಗಳನ್ನೇ ಪಳಗಿಸಿ, ಅವುಗಳಿಂದ ಉಪಜೀವನವನ್ನು ಸಾಗಿಸುವುದು ಅಲೆಮಾರಿ ಹಂತ. ಒಂದೇ ಸ್ಥಳದಲ್ಲಿ ನೆಲೆಸಿ ಕೃಷಿಯಿಂದ ಉಪಜೀವನ ಸಾಗಿಸುವ ಕೃಷಿಯೂ ಮೂರನೆಯ ಹಂತ ಹಾಗೂ ಕೊನೆಯದು ನಾಗರಿಕತೆಯ ಹಂತ. ಕ್ರಿ.ಪೂ. ನಾಲ್ಕು ಸಾವಿರ ವರ್ಷಗಳ ಹಿಂದೆಯೇ 'ಅಲಿಕೋಸ್' ಎಂಬಲ್ಲಿ 'ಎ ಪ್ಲೇನ್ ಇನ್ ದ ನಿಯರ್ ಈಸ್ಟ್'ನಲ್ಲಿ ಒಕ್ಕಲುತನ ಪ್ರಾರಂಭವಾಯಿತೆಂದು ಒಂದು ಮೂಲದಿಂದ ಗೊತ್ತಾಗುತ್ತದೆ. ಆದರೆ ಆಧುನಿಕ ಸಂಶೋಧನಕಾರರು ಈ ಸಂಗತಿಯನ್ನು ಒಪ್ಪದೆ ಕ್ರಿ.ಪೂ. ೭೦೦ ವರ್ಷಗಳ ಹಿಂದೆ ಇತ್ತೆಂದು ಅಭಿಪ್ರಾಯಪಡುತ್ತಾರೆ. ಮುಂದುವರೆದು ಭತ್ತ ಜಾಗತಿಕ ಕೃಷಿಗೆ ಭಾರತ ನೀಡಿದ ಕೊಡುಗೆ. ಕ್ರಿ.ಪೂ. ೩೦೦೦ ಇಸವಿಯಲ್ಲಿ ಮೊಹೆಂಜೋದಾರೋ ಮತ್ತು ಹರಪ್ಪ ನಗರಗಳಲ್ಲಿ ಕೃಷಿ ಬೆಳವಣಿಗೆಯನ್ನು ಸಾಧಿಸಲಾಯಿತು.[೪]

ಭಾರತವು ಕೃಷಿ ಪ್ರಧಾನ ಅರ್ಥವ್ಯವಸ್ಥೆಯಾಗಿದ್ದು, ದೇಶದ ಶೇಕಡಾ ೭೦ರಷ್ಟು ಮಂದಿ ಕೃಷಿಯಲ್ಲಿ ತಮ್ಮ ಬಾಳನ್ನು ಕಂಡುಕೊಂಡಿದ್ದಾರೆ. ಗ್ರಾಮೀಣ ಭಾರತವೇ ನೈಜ ಭಾರತ ಎಂದು ಮಹಾತ್ಮ ಗಾಂಧೀಜಿ ಹೇಳಿರುವರು. ಕೃಷಿಕರು ಭಾರತದ ಬೆನ್ನೆಲುಬು ಎಂದು ಅರ್ಥ ಶಾಸ್ತ್ರಜ್ಞರು ವರ್ಣಿಸಿರುವರು. 'ಕೃಷಿತೋ ನಾಸ್ತಿ ದುರ್ಭಿಕ್ಷಂ' ಎಂಬ ಲೋಕೋಕ್ತಿ, ಬೇಸಾಯವನ್ನು ನೀನು ಸಾಯ ಮನೆ ಮಂದಿಯೆಲ್ಲಾ ಸಾಯ ಬೇಗ ಸಾಯ ಎಂಬ ಗಾದೆ ಮಾತು ಭಾರತ ದಲ್ಲಿ ಕೃಷಿಯು ಎಷ್ಟು ಮಹತ್ವಪೂರ್ಣವಾದದ್ದು ಎನ್ನುವುದನ್ನು ಸೂಚಿಸುತ್ತದೆ.

ಮೂಲ ಆದಿವಾಸಿ ಜನವರ್ಗದ ಬೇಟೆ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬಂದಿರು ವಂಥ ಸಮುದಾಯವೆಂದರೆ ಅದು ಬೇಡ ಬುಡಕಟ್ಟು ಸಮುದಾಯ. ಇವರ ಮೂಲ ವೃತ್ತಿ ಬೇಟೆ(ಪ್ರಾಣಿ ಪಕ್ಷಿ, ಜಲಚರಗಳು). ಈ ವೃತ್ತಿ ಇಂದಿನವರೆಗೂ ಚಲನೆಯಲ್ಲಿ ಇಲ್ಲ. ಆದರೆ ನೆನಪಿಗೋಸ್ಕರ ವರ್ಷದಲ್ಲಿ ಒಂದು ಭಾರಿ ಅದು ಯುಗಾದಿ ಹಬ್ಬದಂದು ಸಾಂಕೇತಿಕವಾಗಿ ಆಚರಣೆಯಲ್ಲಿ ತೊಡಗಿಸಿಕೊಂಡಿರುವುದುನ್ನು ನೋಡಬಹುದು. ಈ ಅದಿಮ ಬೇಟೆಯ ಸಂಸ್ಕೃತಿಯಿಂದ ತಮ್ಮ ಬದುಕನ್ನು ವರ್ತಮಾನದಲ್ಲಿ ನಿರ್ವಹಿಸಲು ಸಾಧ್ಯವಿಲ್ಲವೆಂದು ಅರಿತುಕೊಂಡು ಅದರ ಜೊತೆಗೆ ಪರ್ಯಾಯ ವೃತ್ತಿಯನ್ನು ಸಂದರ್ಭಕ್ಕನುಗುಣವಾಗಿ ಮೈಗೂಡಿಸಿಕೊಂಡಿರುವುದು ಇಂದಿನ ಕರ್ನಾಟಕದಲ್ಲಿ ವಾಸವಾಗಿರುವ ಬೇಡರ ಪ್ರದೇಶಗಳಲ್ಲಿ ಕಾಣಬಹುದು. ಸದ್ಯದ ಪರಿಸ್ಥಿತಿಯಲ್ಲಿ ಬೇಡ ಬುಡಕಟ್ಟು ಜನರು ನಿರ್ವಹಿಸುವ ಯಾವುದೇ ಕಸುಬುಗಳನ್ನು ತೆಗೆದುಕೊಂಡರೂ ಅವು ತಮ್ಮದೇ ಆದ ಸಮಸ್ಯೆಗಳಲ್ಲಿ ಸಿಕ್ಕಿಕೊಂಡಿವೆ. ಪ್ರಮುಖವಾಗಿ ಇವರ ಮೂಲ ಕಸುಬುಗಳಿಗೆ ನಾಗರಿಕ ಜಗತ್ತು ಅದರಲ್ಲೂ ವಸಾಹತು ಆಡಳಿತದ ನಂತರ ತೀವ್ರವಾದ ಬಿಕ್ಕಟ್ಟಿಗೆ ಸಿಲುಕಿ ಪರಿಹಾರ ಕಂಡುಕೊಳ್ಳದೆ ಹೆಣಗಾಡುತ್ತಿವೆ. ವಸಾಹತು ಸರ್ಕಾರ ತಮ್ಮ ಅನುಕೂಲಕ್ಕಾಗಿ ಅರಣ್ಯ ಕಾನೂನುಗಳ ಮೂಲಕ ನಿಯಂತ್ರಣಕ್ಕೆ ಒಳಪಡಿಸಲು ತೊಡಗಿದವು. ಈ ಕಾರಣದಿಂದಾಗಿ ಹಲವಾರು ಬುಡಕಟ್ಟು ಸಮುದಾಯಗಳು ತಮ್ಮ ಮೂಲ ಪಾರಂಪರಿಕ ಕಸುಬುಗಳನ್ನು ಕಳೆದುಕೊಂಡವು. ಅರಣ್ಯದಿಂದ ಅರಣ್ಯ ಉತ್ಪಾದನೆಗಳನ್ನು ಸಂಗ್ರಹಿಸುವಂಥ ಕ್ರಿಯೆಗೆ ಸಹ ತಡೆಯನ್ನುಂಟು ಮಾಡುವ ಮೂಲಕ ಅವರಿಗೆ ತೊಂದರೆಯನ್ನುಂಟು ಮಾಡಿದರು. ಹಾಗೆಯೇ ಬೇಟೆಗಾರಿಕೆ ಮಾಡದಿರಲು ವಸಾಹತು ಶಾಹಿ ಆಡಳಿತವು ಅರಣ್ಯದಲ್ಲಿರುವ ಪ್ರಾಣಿಪಕ್ಷಿಗಳು ಕುರಿತು ತೀವ್ರವಾದ ಕಾನೂನುಗಳನ್ನು ಜಾರಿಗೆ ಮಾಡಿತು. ಅರಣ್ಯದ ಪಶುಸಂಗೋಪನೆಗೆ ಅವಕಾಶವಿದ್ದರೂ ಸಹ ಪಶುಗಳಿಗೆ ಬೇಕಾಗುವ ಹುಲ್ಲು, ಮೇಯಿಸಲು ಕಾಯ್ದಿಟ್ಟ ಕಾಡಿನಲ್ಲಿ ಅವಕಾಶ ನೀಡಲಿಲ್ಲ. ಜೊತೆಗೆ ಪಶುಪಾಲನೆಯಿಂದ ಅಂಥ ಲಾಭವಿಲ್ಲದಾಯಿತು. ನಾಗರಿಕರು ವಿದೇಶಿ ಹಸುಗಳನ್ನು ಸಾಕಿ ಅದರಿಂದ ಪಡೆಯುವ ಲಾಭಕ್ಕೆ ಹೋಲಿಸಿದರೆ ಲಾಭವಿಲ್ಲವಾಯಿತು.

ಇವರು ಮಾಡುವಂಥ ಪಶುಸಾಕಾಣಿಕೆ ಬೇಡವೆನ್ನಿಸುತ್ತದೆ. ಕಾರಣ ಸದ್ಯದ ಪರಿಸ್ಥಿತಿಯಲ್ಲಿ

ಪಾರಂಪರಿಕ ವೃತ್ತಿಗಳನ್ನು ಗಮನಿಸಿದಾಗ ಕೆಲವು ಅಂಶಗಳು ಗಮನಕ್ಕೆ ಬರುತ್ತವೆ.[೫] ನಮ್ಮ ಭಾರತೀಯ ಸಮಾಜದಲ್ಲಿ ಬುದ್ಧಿಶಕ್ತಿಗೆ ನೀಡಿರುವ ಪ್ರಾಮುಖ್ಯತೆಯನ್ನು ದೈಹಿಕಶಕ್ತಿಗೆ ಕೊಡದಿರುವುದು ಅದರ ಜೊತೆಗೆ ದೈಹಿಕಶಕ್ತಿಯ ಕೆಲವು ಕೆಲಸಗಳನ್ನು ಸಹ ಕೀಳು ಮನೋಭಾವದಲ್ಲಿ ಕಾಣುವಂಥ ಪರಂಪರೆಯು ಹಿಂದಿನಿಂದಲೂ ಬೆಳೆದುಬಂದಿದೆ. ಈ ಕಾರಣದಿಂದಾಗಿಯೂ ಸಹ ಕೆಲವೊಂದು ಬುಡಕಟ್ಟು ಸಮುದಾಯಗಳು ತಮ್ಮ ಮೂಲ ಕಸುಬುಗಳನ್ನು ಕೈಬಿಡುತ್ತಿವೆ. ಹಾಗಾಗಿ ಅವರಿಗೆ ಇಷ್ಟವಿಲ್ಲದವು ಆ ಕಸುಬುಗಳಾಗಿವೆ. ಪ್ರಾಚೀನ ಸಂದರ್ಭದಿಂದಲೂ ಇಲ್ಲಿಯ ಸಾಮಾಜಿಕ ಚರಿತ್ರೆಯನ್ನು ನೋಡಿದರೆ ನಮಗೆ ತಿಳಿದುಬರುವುದೇನೆಂದರೆ ಯಾವ ವ್ಯಕ್ತಿ ಯಾವ ವೃತ್ತಿ ಮಾಡುತ್ತಾನೆ ಮತ್ತು ಆ ವೃತ್ತಿಗೆ ಸಮಾಜದಲ್ಲಿ ಯಾವ ಮನ್ನಣೆ ಇದೆ ಎಂಬುದರ ಆಧಾರದ ಮೇಲೆ ಸಾಮಾಜಿಕ ಮನ್ನಣೆಗಳು ಮಾನ್ಯತೆ ದೊರಕುತ್ತವೆ. ಇಂಥ ಸಂದರ್ಭದಲ್ಲಿ ಬುಡಕಟ್ಟು ಸಮುದಾಯವೊಂದು ಒಂದು ಕಸುಬನ್ನು ಬಿಟ್ಟು ಬೇರೆ ವೃತ್ತಿಯನ್ನು ಮಾಡಲು ನಿರ್ಧರಿಸಿದರೆ ಅವರನ್ನು ಗೌರವಿಸಬೇಕು. ಏಕೆಂದರೆ ಆ ಕಸುಬು ಅವರಿಗೆ ಸಂಭವಿಸಲಿರುವ ನೋವು, ಹಿಂಸೆ, ಹಸಿವು, ದಾರಿದ್ರ್ಯ ಮುಂತಾದವುಗಳಿಂದ ಅವರನ್ನು ರಕ್ಷಿಸುತ್ತದೆ. ನಾಗರಿಕ ಜಗತ್ತಿನ ಜನರು ಹೊಸದಾಗಿ ಆವಿಷ್ಕಾರಗೊಂಡ ತಂತ್ರಜ್ಞಾನಕ್ಕೆ ಹೋದರೆ ನಾವು ಅವರಿಗೆ ಮನ್ನಣೆ ನೀಡುತ್ತೇವೆ. ಸಮಾಜದಲ್ಲಿ ಅವರಿಗೆ ಉನ್ನತ ಸ್ಥಾನಮಾನವನ್ನು ನೀಡುತ್ತೇವೆ. ಹಾಗೆಯೇ ಬುಡಕಟ್ಟು ಸಮುದಾಯದವರು ಸಹ ಹೊಸ ವೃತ್ತಿಯನ್ನು ಮಾಡಲು ನಿರ್ಧರಿಸಿದರೆ ಅವರಿಗೆ ಅವಕಾಶ ಕಲ್ಪಿಸಿಕೊಡುವ ಮುಖಾಂತರ ಮಾನವೀಯತೆಯನ್ನು ಮೆರೆಯಬೇಕು. ನಮ್ಮ ಸಂಸ್ಕೃತಿ ಗುರುತಿಸುವ ಹೆಸರಿನಲ್ಲಿ ಹಾಗೇ ಇರುವಂತೆ ಹೇಳುವುದು ಅವರಿಗೆ ಅನ್ಯಾಯ ಮಾಡಿದಂತಾಗುತ್ತದೆ.

ಬುಡಕಟ್ಟು ಸಮುದಾಯಗಳು ಕೃಷಿ ಹಾಗೂ ಇತರ ನಾಗರಿಕ ಜಗತ್ತಿನ ವೃತ್ತಿಗಳನ್ನು ಮಾಡಲು ಪ್ರಯತ್ನಿಸಿದರು. ಅದಕ್ಕಾಗಿ ಅಲ್ಪಸ್ವಲ್ಪ ಶಿಕ್ಷಣ ಪಡೆದ ಬುಡಕಟ್ಟು ಸಮುದಾಯಗಳು ನಾಗರಿಕ ಜಗತ್ತಿನ ತಳುಕಿನ ಜೀವನದಲ್ಲಿಯೂ ಸಹ ತಮ್ಮನ್ನು ಮುಖ್ಯವಾಹಿನಿಗೆ ಬರಲು ಸಾಧ್ಯವಾಗಲೇ ಇಲ್ಲ. ಕೃಷಿ ಪ್ರಾರಂಭ ಮಾಡಿದ ಆದಿವಾಸಿ ಸಮುದಾಯಗಳು ತಮ್ಮ ವ್ಯವಸಾಯವನ್ನು ಬಿಟ್ಟು ಆಧುನಿಕ ಬೇಸಾಯ ಮಾಡಲು ಪ್ರಾರಂಭಿಸಿದವು. ಇಲ್ಲಿಯ ಕೃಷಿ ಪದ್ಧತಿ ಅವರಿಗೆ ಅರಗಲೇ ಇಲ್ಲ. ವರ್ತಮಾನದ ಜಗತ್ತು ಹಾಗೂ ಜಾಗತೀಕರಣಗಳು ಕೃಷಿಯ ಮೇಲೆ ಮೊದಲಿನಿಂದಲೂ ಮಲತಾಯಿ ಧೋರಣೆಯನ್ನು ಅನುಸರಿಸುತ್ತಾ ಬಂದಿವೆ. ಈ ತೆರನಾದ ಧೋರಣೆಯಿಂದಾಗಿ ಸಾಂಪ್ರದಾಯಿಕವಾದ ಕೃಷಿಯನ್ನು ವೃತ್ತಿಯನ್ನಾಗಿ ಮಾಡಿಕೊಂಡ ಕೆಲವು ಜಾತಿಗಳೇ ಇಂದು ಬೀದಿಪಾಲಾಗಿವೆ. ಇಂಥ ಸಂದರ್ಭದಲ್ಲಿ ಹೊಸದಾಗಿ ಕೃಷಿಗೆ ಪಾದಾರ್ಪಣೆ ಮಾಡಿದ ಬುಡಕಟ್ಟು ಸಮುದಾಯಗಳು ಹೇಳ ಹೆಸರಿಲ್ಲದಂತೆ ಮೂಲೆ ಗುಂಪಾಗಿ ತಮ್ಮನ್ನು ಇನ್ನೊಬ್ಬರಲ್ಲಿ ಜೀತದಾಳನ್ನಾಗಿಸಿಕೊಂಡಿರುವ ಸ್ಥಿತಿಗಳಿವೆ. ಅಲ್ಪಸ್ವಲ್ಪ ನಾಗರಿಕ ಜಗತ್ತಿನ

ಓದನ್ನು ಕಲಿತಿರುವ ಬುಡಕಟ್ಟು ಸಮುದಾಯದ ಬೆರಳೆಣಿಕೆಯಷ್ಟು ಜನರು ಈ ಮುಖ್ಯವಾಹಿನಿಯ ಎಲ್ಲಾ ಪಾಪಕೃತ್ಯಗಳಿಂದಾಗಿ ಸರಕಾರಿ ಕೆಲಸಗಳಿಂದ ವಂಚಿತರಾಗಿದ್ದಾರೆ. ಸರಕಾರಿ, ಅರೆಸರಕಾರಿ ಅಥವಾ ಖಾಸಗಿ ಸಂಸ್ಥೆಗಳಲ್ಲಿ ಕೆಲಸ ಸಿಕ್ಕವರು ಈ ಜಗತ್ತಿನೊಂದಿಗೆ ಹೊಂದಾಣಿಕೆ ಮಾಡಿಕೊಂಡು ತಮ್ಮ ಮೂಲ ಬುಡಕಟ್ಟು ಸಮುದಾಯದಿಂದ ದೂರ ಸರಿದು ತಮ್ಮನ್ನು ತಾವು ಕಳೆದುಕೊಂಡಿದ್ದಾರೆ. ಮತ್ತೆ ಕೆಲವರು ಇಲ್ಲಿಯ ದುರಭ್ಯಾಸಗಳಿಗೆ ಶರಣಾಗಿ ತಾವು ಯಾರು ಎಂಬುದನ್ನೇ ಮರೆತು ಹಾಳಾಗಿ ಹೋಗಿದ್ದಾರೆ. ಇಂಥ ಪರಿಸ್ಥಿತಿಗೆ ಒಳಪಟ್ಟಿರುವವರಲ್ಲಿ ಬೇಡ ಬುಡಕಟ್ಟು ಸಮುದಾಯವೂ ಒಂದು.

ಮೂಲತಃ ಗುಡ್ಡಗಾಡು ಜನರಾದ ಇವರು ಬೇಟೆಗಾರಿಕೆಯನ್ನೇ ವೃತ್ತಿಯನ್ನಾಗಿಸಿ ಆ ಮೂಲಕ ಹೊಟ್ಟೆ ಹೊರೆಯುತ್ತಿದ್ದವರು. ನಾಡಿನ ಸಂಪರ್ಕಕ್ಕೆ ಸ್ಪಂದಿಸದೇ ಅರಣ್ಯದಲ್ಲಿ ದೀರ್ಘಕಾಲ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡವರು. ಊರಿನ ಸಂಪರ್ಕವೂ ತಮಗೆ ಏಕೆ ದೊರೆಯಲಿಲ್ಲವೆಂಬುದನ್ನು ಸಮರ್ಥಿಸುವ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಮುದಾಯದ ಹಿರಿಯರಲ್ಲಿ ಕೇಳಿದಾಗ ಈ ರೀತಿಯಾಗಿ ಮಾಹಿತಿ ನೀಡಿದರು. ಬ್ರಹ್ಮನು ಜೇಡಿಮಣ್ಣಿನಿಂದ ಹಲವಾರು ಸಮುದಾಯಗಳನ್ನು ಸೃಷ್ಟಿ ಮಾಡಿ ಒಂದೊಂದನ್ನು ಹೆಸರಿಸುತ್ತಾ(ಲಿಂಗಾಯತ, ಬಣಜಿಗ, ಕುರುಬ) ಊರಿನ ಒಳಕ್ಕೆ ಎಸೆದ. ಅಷ್ಟರಲ್ಲಿ ಬ್ರಹ್ಮನಿಗೆ ಆಯಾಸವಾಗಿ ಇನ್ನು ಸಮುದಾಯಗಳು ಸೃಷ್ಟಿ ಮಾಡುವುದು ಸಾಕೆನಿಸಿ, ಉಳಿದ ಜೇಡಿಮಣ್ಣನ್ನು ಊರಿನ ಆಚೆಗೆ ಎಸೆದ. ಆ ಎಸೆದ ಮಣ್ಣಿನಿಂದ ಒಂದು ಗುಂಪು ಜನ ಸೃಷ್ಟಿಯಾಗಿ ಬಂದರು. ಅಷ್ಟರಲ್ಲಿ ಬ್ರಹ್ಮನು ಅವರನ್ನು ಊರಿನೊಳಗೆ ಬರುವುದು ಬೇಡವೆಂದು ತಡೆದ. ಸೃಷ್ಟಿಯಾದ ಗುಂಪಿನ ಜನರು ಬ್ರಹ್ಮನಿಗೆ ಎದುರು ಮಾತನಾಡದೆ ಕಾಡಿಗೆ ನಡೆದು ಬೇಟೆಗಾರಿಕೆಯಲ್ಲಿ ತೊಡಗಿಸಿಕೊಂಡರು. ಹೀಗೆ ನಾಡಿಗೆ ನಡೆದು ಬೇಡವಾದವರು ಬೇಡರಾದರು.[೬]

ಇದರಿಂದ ನಾಡಿನ ಸಮಾಜ ಸಂಪರ್ಕದಿಂದ ವಂಚಿತರಾಗಿ ದೂರವಾದರೂ ನಾಡಿನ ಪ್ರಭಾವ ಕಾಡಿನಲ್ಲಿ ವಾಸಿಸುವ ಜನಜೀವನದ ಮೇಲೆ ಆಗುತ್ತದೆಂಬುದು ನಿರಂತರ ಅನುಭವಕ್ಕೆ ಬಂದ ಅಂಶವಾಗಿದೆ. ಏಕೆಂದರೆ ನಾಡಿನ ಮನುಷ್ಯನು ಕಾಡನ್ನು ಎಂದಿಗೂ ಅಲಕ್ಷಿಸದೇ ಜೀವಿಸಲು ಸಾಧ್ಯವಿಲ್ಲ. ಕಾಡಿನ ಉತ್ಪನ್ನಗಳು ನಾಡಿಗೆ ಪೂರಕವಾದಂತೆ ನಾಡು ಕಾಡಿಗೆ ಪೂರಕವಾಗುತ್ತದೆಂಬುದು ಸತ್ಯ ಸಂಗತಿ. ಏಕೆಂದರೆ ನಾಗರಿಕ ಜನರ ಸ್ವಾರ್ಥಲೋಭಗಳ, ಲಾಭದಾಸೆಗಳ ಎಣಿಕೆಯಿಂದಾಗಿ ಗುಡ್ಡಗಾಡುಗಳಲ್ಲಿ ವಾಸಿಸುವ ಬುಡಕಟ್ಟು ಜನರು ತಾವು ಕಷ್ಟಪಟ್ಟು ಸಂಗ್ರಹಿಸಿದ ಕಾಡಿನ ಉಪಉತ್ಪನ್ನಗಳನ್ನು ಇಂಥವರಿಗೆ ಕೊಟ್ಟು ತಾವು ಕೈಕಟ್ಟಿ ಕೂಡಬೇಕಾಗಿತ್ತು. ಇಂಥ ಅಪಾಯದಿಂದ ತಪ್ಪಿಸಿಕೊಳ್ಳಬೇಕಾದರೆ ತಮ್ಮ ಮೇಲೆ ಆಕ್ರಮಣವೆಸಗಿದವ ರೊಂದಿಗೆ ಹೋರಾಡುವುದು ಅನಿವಾರ್ಯವಾಯಿತು. ಇದು ಪ್ರಾಣಿ ಬೇಟೆಯ ಹೋರಾಟದಲ್ಲಿ ಪಳಗಿದ ಬೇಡ ಬುಡಕಟ್ಟಿನವರಿಗೆ ಕಷ್ಟಸಾಧ್ಯವಲ್ಲದ ಕೆಲಸವಾಯಿತು. ಬೇಟೆಯಾಡಿದ ಪ್ರಾಣಿಯನ್ನು

ಹಿಡಿದು ಪಳಗಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಅದನ್ನು ಮಣಿಯುವಂತೆ ಮಾಡುವ, ಹಿಡಿಯಲಾಗದ ಪ್ರಾಣಿಗಳನ್ನು ಭೀತಿಗೊಳಿಸಿ ದೂರ ಅಟ್ಟುವ ಅಪಾಯಕರವೆನಿಸಿದವುಗಳನ್ನು ಹಿಡಿದುಕೊಳ್ಳುವ ಚಾಕಚಕ್ಯತೆ ಬೇಡರಿಗೆ ಇದ್ದ ವರದಾನ. ಆದ್ದರಿಂದಲೇ ಕಾಡಿನ ಮಾರ್ಗವಾಗಿ ಓಡಾಡುವ ನಾಡಿನ ಜನರನ್ನು ಅವರು ಗುಮಾನಿಯಿಂದ ಕಾಣುತ್ತಿದ್ದರು. ಅಂಥವರಿಂದ ತಮಗೆ ತೊಂದರೆಯಾದೀತೆಂಬ ಎಚ್ಚರಿಕೆಯಿಂದ ಹಿಡಿದು ಕೊಲ್ಲುತ್ತಿದ್ದರು. ಇಲ್ಲವೇ ಅವರ ವಸ್ತು ವಿಶೇಷಗಳನ್ನು ವಶಪಡಿಸಿಕೊಂಡು ಓಡಿಸುತ್ತಿದ್ದರು.

ಕ್ರಿ.ಶ. ೧೮೦೦ರಲ್ಲಿ ಭಾರತಕ್ಕೆ ಆಗಮಿಸಿದ ವಿದೇಶಿ ವಿದ್ವಾಂಸ ಬುಖಾನನು ಬೇಡರನ್ನು ಕುರಿತು ಈ ರೀತಿಯಾಗಿ ಹೇಳಿದ್ದಾನೆ. "ಚಿತ್ರದುರ್ಗ ಜಿಲ್ಲೆಯ ಉತ್ತರ ದಿಕ್ಕಿನ ಗುಡ್ಡಗಾಡು ತೀರದ ಪ್ರದೇಶದಲ್ಲಿ ವ್ಯವಸಾಯಕ್ಕಾಗಿಯೇ ಸೀಮಿತವಾದ ಪ್ರದೇಶಗಳಲ್ಲಿ ಬೇಟೆಯಾಡುವ ಬೇಡರು ವಾಸಿಸುತ್ತಿದ್ದರು. ಟಿಪ್ಪುವಿನ ಕಾಲಕ್ಕೆ ಅವರು ಸೇನೆಯಲ್ಲಿದ್ದು ೪, ೫, ೧೨(ಪಗೋಡಗಳ) ಪಗಾರವನ್ನು ಹೊಂದಿದ್ದರು. ಅವರು ಬೇಟೆಯ ವೃತ್ತಿಯಲ್ಲಿ ಪರಿಣತರಾದುದರಿಂದ ಸೈನಿಕ ಕಾರ್ಯಚರಣೆಯಲ್ಲಿ ಮತ್ತು ನಿಶ್ಚಿತವಾದ ವಿಜಯವನ್ನು ಸಾಧಿಸುವಲ್ಲಿ ಸಹಕಾರಿಗಳಾಗಿದ್ದರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಅನೇಕ ಹೋರಾಟಗಳಲ್ಲಿ ಅವರಿಂದ ಯಶಸ್ಸನ್ನು ಪಡೆದಿದ್ದರು. ಮ್ಯಾಸಬೇಡರ ಸಮುದಾಯದವರು ಸದ್ಯಕ್ಕೆ ವ್ಯವಸಾಯವನ್ನೇ ಅವಲಂಬಿಸಿ ಕಾಲಯಾಪನೆ ಮಾಡುತ್ತಿದ್ದಾರೆ. ಅವರು ಹಿಂದಿನ ಕಾಲಕ್ಕೆ ಬೇಟೆಗಾಗಿ ಬಳಸುತ್ತಿದ್ದ ಆಯುಧಗಳನ್ನು ಇಂದಿಗೂ ಇಟ್ಟುಕೊಂಡಿದ್ದಾರೆ.[೭]

"ರೈಸ್ ಅವರು ಈ ಸಮುದಾಯವನ್ನು ಕುರಿತು ಬೇಡರ ಭೋಯಾ ಅಥವಾ ಚೇಲಾ ಎಂದು ಸಂಬೋಧಿಸಲಾಗುತ್ತಿತ್ತು. ಅಲ್ಲದೆ ನಾಯಕ ಬಾರಿಕ, ಕಣ್ಣಯ್ಯಗಳೆಂದು ಕರೆಯಲಾಗುತ್ತಿತ್ತು. ಈ ಬೇಡರು ಬೇರೆ ಬೇರೆ ಸಮುದಾಯದ ಸಂಪ್ರದಾಯ ಹಾಗೂ ಪದ್ಧತಿಗಳನ್ನು ಅಳವಡಿಸಿ ಕೊಂಡಿದ್ದಾರೆ. ಅವರ ಸ್ಥೂಲಕಾಯ, ದಪ್ಪನೆಯ ಮೂಗು, ಗುಂಗುರು ಕೂದಲುಗಳನ್ನು ನೋಡಿದಾಗ, ಬಹುಶಃ ಅವರು ಮೂಲತಃ ಅನಾರ್ಯ(ಅರ್ಯರು ಅಲ್ಲ)ರು ಎಂದು ಸಾಬೀತಾಗುತ್ತದೆ"[೮] ಎಂದು ಹೇಳಿದ್ದಾರೆ. ಕ್ಷೇತ್ರಕಾರ್ಯದಲ್ಲಿ ವಕ್ತೃಗಳು ಹೇಳುವಂತೆ "ನಮ್ಮಲ್ಲಿ ಬೇಡರಿಗೆ ಬೇರೆ ಜನರು ಬಹಳ ಹೆದರುತ್ತಾರೆ. ಆದರೆ ನಾವು ಹಿಂದಿನ ನಮ್ಮ ಕುಲ ಕಸುಬು ಆದ ಕಾಡಿನ ಪ್ರಾಣಿಪಕ್ಷಿಗಳನ್ನು ಕೊಲ್ಲುವುದು ಮಹಾ ಅಪರಾಧ ಎಂದು ತಿಳಿದುಕೊಂಡು ಬೇಟೆಯಾಡುವ ವೃತ್ತಿಯಿಂದ ದೂರವಾಗಿದ್ದೇವೆ. ಇಂದು ನಮ್ಮೂರಿನ ಭೂ ಮಾಲೀಕರಲ್ಲಿ ಕೂಲಿ ಕೆಲಸ ಮಾಡುತ್ತಾ ಜೀವನ ಸಾಗಿಸುತ್ತಿದ್ದೇವೆ. ಆದರೂ ಮಾಂಸ ತಿನ್ನಬೇಕು ಎಂದಾಗ ಊರಲ್ಲಿ ಮಾರಾಟ ಮಾಡುವ ಕುರಿ ಮೇಕೆ ಮಾಂಸವನ್ನು ತಂದು ಇಡೀ ಮನೆಮಂದಿಯೆಲ್ಲಾ ವಾರದಲ್ಲಿ ಒಂದೊಂದು ಸಲ ತಿನ್ನುತ್ತೇವೆ ಎಂದು ಹೇಳಿದರು."[೯] ಇವತ್ತಿನ ಸಂದರ್ಭದಲ್ಲಿ ಬೇಡರು ತಮ್ಮ ಮೂಲ ಕಸುಬುಗಳಿಂದ ದೂರವಾಗುತ್ತಿದ್ದಾರೆಂದು ತಿಳಿದುಬರುತ್ತದೆ.

ಒಂದು ಸಂದರ್ಭದಲ್ಲಿ ಸಮುದಾಯದ ಜೀವನಪದ್ಧತಿಯು ಸದಾ ಹಾಗೆ ಇರಲು ಸಾಧ್ಯವಿಲ್ಲ. ಅದು ಸದಾ ಪರಿವರ್ತನೆಗೆ ಒಳಪಟ್ಟಿರುತ್ತದೆ. ಹಾಗಾಗಿ ಹಿಂದೆ ಒಂದು ಕಾಲದಲ್ಲಿ ಬೇಡ ಸಮುದಾಯದಲ್ಲಿ ಇದ್ದ ವೃತ್ತಿಜೀವನವು ಇವತ್ತಿನ ಸಮುದಾಯದಲ್ಲಿ ಇದ್ದ ಜೀವನ ವಿಧಾನ ಬಹಳಷ್ಟು ಬದಲಾವಣೆ ಹೊಂದುತ್ತಾ ಸಾಗಿದೆ. ಸಂಸ್ಕೃತಿ ಎನ್ನುವುದು ಸದಾ ಬದಲಾವಣೆಗೆ ಒಳಗಾಗುವಂತದ್ದು. ಅದು ಅದರ ಮುಖ್ಯ ಗುಣ ಹೀಗಿರುವಾಗ ಬುಡಕಟ್ಟು ಸಮುದಾಯದವರು ತಮ್ಮ ಪಾರಂಪರಿಕ ಅಸ್ಮಿತೆಗಳನ್ನು ಉಳಿಸಿಕೊಳ್ಳುತ್ತಲೇ ಪರಿವರ್ತನೆಯಾಗುವುದಕ್ಕೆ ಪೂರಕವಾಗಿ ತಮ್ಮ ಸರ್ಕಾರದ ಅಭಿವೃದ್ಧಿ ಯೋಜನೆಗಳಿರಬೇಕಾಗುತ್ತದೆ. ಮೊದಲು ಕಾಡನ್ನು ಆಶ್ರಯಿಸಿಕೊಂಡು ಜೀವನ ನಡೆಸುತ್ತಿದ್ದರು. ಈ ದಿನ ಅರಣ್ಯದಲ್ಲಿ ಅವರು ಪ್ರವೇಶ ಮಾಡಲು ಸರಕಾರ ಬಿಡುತ್ತಿಲ್ಲ. ಜೊತೆಗೆ ಅರಣ್ಯದಲ್ಲಿ ಪ್ರಾಣಿಪಕ್ಷಿಗಳೇ ಇಲ್ಲವಾಗಿವೆ.

ಈ ಸಮುದಾಯದಲ್ಲಿ ಕೃಷಿ ಭೂಮಿಯನ್ನು ಹೊಂದಿರುವಂಥ ಕುಟುಂಬಗಳನ್ನು ಕುರಿತು ನೋಡಿದಾಗ ಬಯಲುಸೀಮೆಯಲ್ಲಿ ಕಡಿಮೆ ಪ್ರಮಾಣದ ಜಮೀನು ಹೊಂದಿರುವುದನ್ನು ಕಾಣಬಹುದು. ಒಂದು ವೇಳೆ ಭೂಮಿಯನ್ನು ಹೊಂದಿದ್ದರೂ ಸಹ ಐದು ಎಕರೆಗಿಂತ ಕಡಿಮೆಯಿರುವುದು ಕಂಡುಬರುತ್ತದೆ. ಅದು ಬಂಜರುಭೂಮಿ ಅಥವಾ ಒಣ ನೀರಾವರಿಯಿಂದ ಕೂಡಿರುವುದೇ ಅಧಿಕವಾಗಿ ಇರುವುದು. ಆದರೆ ಭೂಮಿ ಇದ್ದವರು ಬಿತ್ತನೆ ಮಾಡಲು ಎತ್ತುಗಳು ಹಾಗೂ ಕೃಷಿ ಸಲಕರಣೆಗಳು ಇರದೆ ಸಮಸ್ಯೆ ಎದುರಿಸುವಂಥ ಕುಟುಂಬಗಳೇ ಅತಿಯಾಗಿ ಈ ಪ್ರದೇಶದಲ್ಲಿವೆ. ಇನ್ನು ಭೂರಹಿತ ಕುಟುಂಬದವರು ತಮ್ಮ ಆಹಾರಕ್ಕಾಗಿ ಅನ್ಯರ ಭೂಮಿಯಲ್ಲಿ ಕೆಲಸ ದೊರೆತರೆ ಮಾತ್ರ ಚಿಂತೆಯಿಲ್ಲ. ಅದು ದೊರೆಯದೆ ಇದ್ದರೆ ಇಡೀ ಕುಟುಂಬ ಸಮೇತ ನಗರಪ್ರದೇಶಗಳಿಗೆ ವಲಸೆ ಹೋಗುವಂಥ ಅನಿವಾರ್ಯತೆ ಅಧಿಕವಾಗಿದೆ. ಇವೆರಡು ಸಮಸ್ಯೆಗಳನ್ನು ಎದುರುಗೊಳ್ಳದೆ ಇರುವಂಥ ಕುಟುಂಬದವರು ತಮ್ಮ ಊರಿನಲ್ಲಿ ಅಥವಾ ತಾಲೂಕು ಪ್ರದೇಶದಲ್ಲಿ ಪುರುಷರು ಟ್ರ್ಯಾಕ್ಟರ್ ಚಾಲಕರಾಗಿ ಗುತ್ತಿಗೆದಾರರ ಕೈಯಲ್ಲಿ ಸಹಾಯಕರಾಗಿ ಶ್ರಮ ವಹಿಸಿದರೆ, ಮಹಿಳೆಯರು ಮಾತ್ರ ತಮ್ಮ ಊರಿನಲ್ಲಿ ಭೂಮಾಲೀಕರ ಭೂಮಿಯಲ್ಲಿ ಅಗ್ಗದ ಕೂಲಿಗೆ ಶ್ರಮ ವಹಿಸಿ ದುಡಿಯುತ್ತಿರುವುದು ಸಾಮಾನ್ಯ ಸಂಗತಿ. ಭೂಮಾಲೀಕರು ಕೊಡುವ ಪ್ರತಿದಿನದ ೫೦-೬೦ ರೂಪಾಯಿಗಳು ಬರದಿದ್ದರೆ, ಕುಟುಂಬದ ಅಗತ್ಯ ವಸ್ತುಗಳನ್ನು ಕೊಂಡುಕೊಳ್ಳುವುದು ದುಸ್ತರವಾಗುತ್ತದೆ. ಇದರ ಜೊತೆಗೆ ಸರ್ಕಾರದಿಂದ ದೊರೆಯುವಂಥ ತಿಂಗಳ ರೇಷನ್(ಅಕ್ಕಿ, ಗೋಧಿ, ಸಕ್ಕರೆ) ತೆಗೆದುಕೊಳ್ಳಲು ಹಣವಿಲ್ಲದ ಪದ್ಧತಿ ಎದುರಾಗುತ್ತದೆ. ಎನ್ನುವ ಅನಿವಾರ್ಯತೆಯಿಂದ ಬಯಲುಸೀಮೆಯಲ್ಲಿ ದಿನಂಪ್ರತಿ ಎಣ್ಣೆಗಾಣದ ಎತ್ತಿನಂತೆ ಶ್ರಮಪಡುತ್ತಿದ್ದಾರೆ.

ಬಯಲುಸೀಮೆ ಭೂಮಿಯ ಫಲವತ್ತತೆಯನ್ನು ಗಮನಿಸಿ ಎರೆಭೂಮಿ, ಕೆಂಪುಭೂಮಿ, ಮರಳುಭೂಮಿ, ಕಲ್ಗಚ್ಚು ಭೂಮಿ ಮುಂತಾಗಿ ಕರೆಯುವ ಕ್ರಮ ರೂಢಿಯಲ್ಲಿತ್ತು. ಈ ಪ್ರದೇಶ

ದಲ್ಲಿ ಹಲವು ಬಾವಿ ಕೆರೆಗಳನ್ನು ಕಾಣಬಹುದು. ಭರಮಸಾಗರಕೆರೆ, ಅಬ್ಬನಾಯಕನಹಳ್ಳಿಕೆರೆ, ಭೀಮಸಮುದ್ರಕೆರೆ, ಸಂಗೇನಹಳ್ಳಿಕೆರೆ, ರಂಗಯ್ಯನದುರ್ಗ ಜಲಾಶಯ, ತುಂಗಭದ್ರಾ ಜಲಾಶಯ ಇನ್ನೂ ಮೊದಲಾದ ಕೆರೆಗಳು ಮತ್ತು ಜಲಾಶಯಗಳಿಂದ ಸಾವಿರಾರು ಎಕರೆ ಭೂಮಿಗೆ ನೀರುಣಿಸುತ್ತಿವೆ.

ಕೃಷಿಯು ಮಾನವ ಮತ್ತು ಪ್ರಕೃತಿಯ ನಡುವಿನ ಹೊಂದಾಣಿಕೆಯ ವೃತ್ತಿಯಾಗಿದ್ದು, ಇಲ್ಲಿ ಬಹುಪಾಲು ಜನರು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನೇ ಅವಲಂಬಿಸಿರುವುದರಿಂದ ಕೃಷಿ ಭಾರತದ ಆರ್ಥಿಕತೆಯ ಬೆನ್ನೆಲುಬಾಗಿದೆ."[೧೦] ಕೃಷಿಯಲ್ಲಿ ಕೆಲಸ ಮಾಡುವ ರೈತರು ಭೂಮಿಯನ್ನು ಹದಗೊಳಿಸಿ ಉತ್ತಿ ಬಿತ್ತಿ ಬೆವರು ಸುರಿಸಿ ಬೆಳೆದು ದೇಶದ ಜನರ ಹೊಟ್ಟೆ ತುಂಬಿಸುವ ಅನ್ನದಾತ. ಆದರೆ ಇವರ ಜೀವನ ಸುಖಕರವಾಗಿಲ್ಲ. ಏಕೆಂದರೆ ಸರಿಯಾದ ಮಳೆ ಬೆಳೆ ಹಾಗೂ ವರ್ಷದಲ್ಲಿ ದುಡಿದ ಬೆಳೆಗೆ ಸರಿಯಾದ ಬೆಲೆ ಸಿಗದೆ ಇದ್ದಾಗ ವೆಚ್ಚ ಸರಿದೂಗಿಸಲು ಸಿಗದ ಬೆಲೆ ಹಾಗೂ ಹಳೆ ಮಾದರಿಯ ಬೇಸಾಯ ಪದ್ಧತಿಯನ್ನು ಅವಲಂಬಿಸಿರುವುದರಿಂದ ನಮ್ಮ ರೈತರ ಬದುಕು ಕಷ್ಟಕರವಾಗಿದೆ. ಇಂದು ನೀರಾವರಿಗಾಗಿ ಕೊಳವೆ ಮೂಲಕ ನೀರು ತರಲು ಸು.೩೦೦ರಿಂದ ೫೦೦ ಅಡಿಯಷ್ಟು ಆಳ ಬೋರವೆಲ್ ಹಾಕಿಸಿದರೂ ನೀರು ಸಿಗುತ್ತಿಲ್ಲ. ಕಾರಣ. ಸುಮಾರು ನಾಲ್ಕೈದು ವರ್ಷಗಳಿಂದ ಮಳೆಯ ಪ್ರಮಾಣ ಕಡಿಮೆಯಾಗಿದೆ. ಇದರಿಂದ ಸಾಕಷ್ಟು ರೈತರು ಸಾಲಶೂಲ ಮಾಡಿ ಕಂಗಲಾಗಿದ್ದಾರೆ. ಕೃಷಿಯ ಅಭಿವೃದ್ಧಿ ಆಧಾರದ ಮೇಲೆ ಕೈಗಾರಿಕೆ, ಸಾರಿಗೆ ಸಂಪರ್ಕ, ವ್ಯಾಪಾರ ಇನ್ನೂ ಅನೇಕ ವಲಯಗಳು ಅಭಿವೃದ್ಧಿಯಾಗುತ್ತಿವೆ. ೧೯೭೭ರ ಹೊತ್ತಿಗೆ ಭೌಗೋಳಿಕ ಪ್ರದೇಶದಲ್ಲಿ ಶೇಕಡಾ ೬೬ರಷ್ಟು ಜನ ಭೂಪ್ರದೇಶದಲ್ಲಿ ಕೃಷಿಯನ್ನೇ ಮೂಲ ಉದ್ದೇಶವನ್ನು ಮಾಡಿಕೊಂಡು ಬದುಕುವವರು ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಭಾರತವನ್ನು ಕೃಷಿಯಾಧಾರಿತ ದೇಶವೆಂದೇ ಹೇಳುತ್ತಾರೆ.

ಬುಡಕಟ್ಟಿನ ಜನರು ಕೃಷಿಯನ್ನು ಅವಲಂಬಿಸಿರುವುದರಿಂದ ಮತ್ತು ಶ್ರೀಮಂತರಲ್ಲದ್ದರಿಂದ ಅವರ ಸಾಮಾಜಿಕ ಅಂತಸ್ತು ಹೆಚ್ಚಿನ ಮಟ್ಟದಾಗಿರುವುದಿಲ್ಲ. ಭಾರತವು ಕೃಷಿಪ್ರಧಾನ ಅರ್ಥವ್ಯವಸ್ಥೆಯಾಗಿದ್ದು, ದೇಶದ ಶೇ. ೭೦ರಷ್ಟು ಜನ ಕೃಷಿಯಲ್ಲಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. "ಭಾರತದಂತೆ ಕರ್ನಾಟಕವೂ ಕೃಷಿ ಪ್ರಧಾನ ರಾಜ್ಯ. ಇದು ೧.೯೫ ಲಕ್ಷ ಚದುರ ಕಿ.ಮೀ. ವಿಸ್ತೀರ್ಣದೊಂದಿಗೆ ಕರ್ನಾಟಕವೂ ಪ್ರಧಾನವಾಗಿ ಮಳೆಯಾಶ್ರಿತ ಬೇಸಾಯದ ರಾಜ್ಯವಾಗಿದೆ."[೧೧] ಇಂಥ ರಾಜ್ಯದಲ್ಲಿ ಕೃಷಿಯನ್ನೇ ನಂಬಿ ಜೀವನ ನಿರ್ವಹಿಸುವ ಸಮುದಾಯಗಳಲ್ಲಿ ಮ್ಯಾಸ ಸಮುದಾಯವು ಒಂದು. ಈ ಸಮುದಾಯವು ಕೃಷಿಯಲ್ಲಿ ಗಂಡು ಹೆಣ್ಣು ಎಂಬ ಭೇದಭಾವವಿಲ್ಲದೆ ದುಡಿಯುತ್ತದೆ. ಇವರು ವ್ಯವಸಾಯದಲ್ಲಿ ಹಿಂದುಳಿದವರಾಗಿದ್ದು, ಕೃಷಿಗೆ ಜಮೀನು ಕಡಿಮೆಯಿದ್ದು, ಅದರಲ್ಲಿ ಸಣ್ಣ ಭೂಹಿಡುವಳಿದಾರರು, ಸಣ್ಣರೈತರು, ಅತಿ ಸಣ್ಣ ರೈತರು ಹಾಗೂ ಕೃಷಿ

ಕಾರ್ಮಿಕರೇ ಹೆಚ್ಚಾಗಿ ಕಾಣಸಿಗುತ್ತಾರೆ. ಇವರಲ್ಲಿ ಹೆಚ್ಚಾಗಿ ಒಣಬೇಸಾಯ ಪದ್ಧತಿ ಇರುವುದು ಕಂಡುಬರುತ್ತದೆ. ಈ ಕಾರಣದಿಂದ ಇವರು ಕೃಷಿಯ ಮೂಲಕ ಆರ್ಥಿಕವಾಗಿ ಸದೃಢರಾಗಲು ಸಾಧ್ಯವಿಲ್ಲ.

ದೇಶದ ಅನೇಕ ಭಾಗಗಳನ್ನು ನೋಡಿದಾಗ ಬೇಸಾಯದಲ್ಲಿ ತೀವ್ರ ಬಿಕ್ಕಟ್ಟಿನ ಪರಿಸ್ಥಿತಿಯಿದೆ ಎನ್ನುವ ವಾಸ್ತವವನ್ನು ಅಲ್ಲಗಳೆಯುವಂತಿಲ್ಲ. ಪ್ರತಿಯೊಂದು ಪ್ರದೇಶದ ಪ್ರತಿಕೂಲ ಪರಿಸ್ಥಿತಿಯ ನಡುವೆ ಕೃಷಿ ಚಟುವಟಿಕೆ ನಡೆಯುತ್ತಿದೆ ಎನ್ನುವ ಭಾವನೆ ನಮ್ಮಲ್ಲಿ ಮೂಡುತ್ತದೆ. ಇದಕ್ಕೆ ಅನೇಕ ಕಾರಣಗಳಿದ್ದು, ಆದರೆ ಅಂತಿಮ ಉತ್ತರ ಒಂದೇ ಆಗಿದೆ. ಬಹುಪಾಲು ರೈತರು ತೀವ್ರ ಸಂಕಷ್ಟದಲ್ಲಿದ್ದಾರೆ ಎನ್ನುವುದಕ್ಕೆ ಮ್ಯಾಸನಾಯಕರೂ ಉದಾಹರಣೆಯಾಗಿದ್ದಾರೆ. ಮ್ಯಾಸ ನಾಯಕರ ಭೂಮಿಯು ಮಳೆಯಾಧಾರಿತ ಒಣಬೇಸಾಯ ಪದ್ಧತಿಯಿಂದ ಕೂಡಿದ್ದು ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುತ್ತಿಲ್ಲ.

ಮ್ಯಾಸನಾಯಕರ ವ್ಯವಸಾಯ ಸಾಮಾನ್ಯವಾಗಿ ಒಣಬೇಸಾಯ ಪದ್ಧತಿಯಿಂದ ಕೂಡಿದ್ದು, ಇದರಲ್ಲಿ ಬೆಳೆ ಬೆಳೆಯುವ ವಿಧಾನವು ಅಷ್ಟೇನೂ ಲಾಭದಾಯಕವಾಗಿಲ್ಲ. ಇಲ್ಲಿ ಬೆಳೆ ಬೆಳೆಯುವ ಪದ್ಧತಿ ಸರಳವಾಗಿರುತ್ತದೆ. ಒಣಭೂಮಿಯಲ್ಲಿ ನೇಗಿಲಿನ ಮೂಲಕ ಭೂಮಿಯನ್ನು ಉಳುಮೆ ಮಾಡಿ ಹದಗೊಳಿಸುತ್ತಾರೆ. ಪಿ.ಜಿ.ಜಾನ್ ಎಂಬುವವನು "ಒಬ್ಬ ರೈತ ತನ್ನ ಭೂಮಿಯಲ್ಲಿ ತೆಗೆಯುವ ಬೆಳೆಗಳ ಮಿಶ್ರಣ ಭರಿತವಾದ ಅಂದರೆ ಬೆಳೆ ತೆಗೆಯುವಲ್ಲಿ ವಿಭಿನ್ನ ಬದಲಾವಣೆಗಳನ್ನು ಹೊಂದಿರುವುದೇ ಬೆಳೆ ವಿಧಾನ"[೧೨] ಎಂದಿದ್ದಾರೆ. ಮ್ಯಾಸನಾಯಕರಲ್ಲೂ ಬೆಳೆ ವಿಧಾನವು ಸಂಪೂರ್ಣವಾಗಿ ಮಳೆಯಾಶ್ರಿತ ಒಣಭೂಮಿಗೆ ಸಂಬಂಧಿಸಿದ್ದಾಗಿದೆ. ಇವರಲ್ಲಿ ಒಣಭೂಮಿ ಹೆಚ್ಚಾಗಿ ಇರುವುದರಿಂದ ಆಹಾರ ಧಾನ್ಯಗಳನ್ನೇ ಹೆಚ್ಚಾಗಿ ಬೆಳೆಯುತ್ತಾರೆ. ವಾಣಿಜ್ಯ ಬೆಳೆಗಳನ್ನು ಸಹ ಅಲ್ಪಪ್ರಮಾಣದಲ್ಲಿ ಬೆಳೆಯುವುದನ್ನು ಕಾಣಬಹುದು.

ವ್ಯವಸಾಯದ ಮೂಲಕ ಬೆಳೆಯುವ ಬೆಳೆಗಳನ್ನು ಸಾಮಾನ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದಾಗಿದೆ. ಒಂದು ಆಹಾರ ಬೆಳೆಗಳು ಮತ್ತೊಂದು ವಾಣಿಜ್ಯ ಬೆಳೆಗಳು. ಈ ಆಹಾರ ಹಾಗೂ ವಾಣಿಜ್ಯ ಬೆಳೆಗಳು ಆಯಾ ವ್ಯವಸಾಯದ ಪ್ರಗತಿಯನ್ನು ಸೂಚಿಸುವ ಸಂಕೇತಗಳಾಗಿವೆ. "ಸಾಮಾನ್ಯವಾಗಿ ದೊಡ್ಡ ಗಾತ್ರದ ಭೂ ಹಿಡುವಳಿಗಳಲ್ಲಿ ವಾಣಿಜ್ಯ ಬೆಳೆಗಳನ್ನು ಮತ್ತು ಸಣ್ಣ, ಅತಿಸಣ್ಣ ಭೂಹಿಡುವಳಿಗಳನ್ನು ಹೊಂದಿರುವ ರೈತರು ಅಧಿಕವಾಗಿ ಆಹಾರದ ಬೆಳೆಗಳನ್ನೇ ಬೆಳೆಯುತ್ತಾರೆ.[೧೩] ಈ ಹಿನ್ನೆಲೆಯಲ್ಲಿ ಮ್ಯಾಸನಾಯಕರಲ್ಲಿ ಸಣ್ಣ ಮತ್ತು ಅತಿಸಣ್ಣ ಭೂ ಹಿಡುವಳಿದಾರರು ಕ್ರಮವಾಗಿ ೩೯.೯೫ ಹಾಗೂ ೩೦ರಷ್ಟು ಕಂಡುಬರುತ್ತಿದ್ದು, ಇವರೆಲ್ಲಾ ಆಹಾರ ಬೆಳೆಗಳನ್ನೇ ಹೆಚ್ಚಾಗಿ ಬೆಳೆಯುತ್ತಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಕಾರಣಗಳು ಹಲವಾರು ಇದ್ದು ಅವು ಈ ಕೆಳಗಿನಂತಿವೆ.

೧. ಸಣ್ಣ ಹಿಡುವಳಿದಾರರಾದ ಮ್ಯಾಸನಾಯಕರಿಗೆ ಸಾಲಸೌಲಭ್ಯಗಳನ್ನು ಬ್ಯಾಂಕುಗಳು ಕೊಡದೆ ಇರುವುದು. ಕೆಲಮೊಮ್ಮೆ ಕೊಟ್ಟರೂ ರಾಜಕೀಯ ಹಸ್ತಕ್ಷೇಪದಿಂದ ಸ್ಥಿತಿವಂತರಿಗೆ ಕೊಡುವುದು.

೨. ನೀರಾವರಿ ಸೌಲಭ್ಯವಿಲ್ಲದಿರುವುದು.

೩. ಸಾಂಪ್ರದಾಯಿಕ ಕೃಷಿಪದ್ಧತಿಯನ್ನು ಅನುಸರಿಸುತ್ತಿರುವುದು

೪. ಸುಧಾರಿತ ಬಿತ್ತನೆ ಬೀಜಗಳ ಪೂರೈಕೆಯಾಗದಿರುವುದು.

೫. ಪ್ರಕೃತಿ ವೈಪರಿತ್ಯಗಳಿಂದ ಬೆಳೆ ನಾಶ.

೬. ಕಾಡುಮೃಗಗಳಿಂದ ಬೆಳೆ ನಾಶವಾಗುವುದು.

೭. ಮಧ್ಯವರ್ತಿಗಳ ಹಾವಳಿ.

೮. ಕೃಷಿ ಮಾರುಕಟ್ಟೆಯಲ್ಲಿ ಸರಿಯಾದ ಬೆಲೆ ಸಿಗದೇ ಇರುವುದು ಮುಂತಾದವು. ಕ್ಷೇತ್ರಕಾರ್ಯದ ಅನುಭವದಿಂದ ಹೇಳುವುದಾದರೆ ಬಯಲುಸೀಮೆಯಲ್ಲಿ ಈ ವರ್ಷ ಸಾಕಷ್ಟು ನೀರಾವರಿ ಪ್ರದೇಶದಲ್ಲಿ ಈರುಳ್ಳಿ ಬೆಳೆದರೂ ಸರಿಯಾದ ಬೆಲೆ ಸಿಗದೆ ರೈತ ಬೀದಿಪಾಲಾಗಿರುವುದು ನಮ್ಮ ಕಣ್ಮುಂದೆ ಕಾಣುವ ವಿಷಯವಾಗಿದೆ.

ಈ ಮೇಲಿನ ಕಾರಣಗಳು ಮಾತ್ರವಲ್ಲದೆ ಇನ್ನೂ ಹಲವಾರು ಕಾರಣಗಳಿಂದ ವಾಣಿಜ್ಯ ಬೆಳೆಗಳನ್ನು ಅವರಿಗೆ ಬೆಳೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಕೇವಲ ಆಹಾರದ ಬೆಳೆಗಳನ್ನು ಮಾತ್ರ ಬೆಳೆಯುತ್ತಿರುವುದರಿಂದ ಇವರು ಉತ್ತಮ ಜೀವನಮಟ್ಟವನ್ನು ನಿರ್ವಹಿಸಲು ಸಾಧ್ಯವಾಗುತ್ತಿಲ್ಲ ಎಂಬ ಕಾರಣದಿಂದಲೂ ಇವರು ಆರ್ಥಿಕವಾಗಿ ಸಂಕಷ್ಟದಲ್ಲಿದ್ದಾರೆ. ಬಯಲು ಸೀಮೆಯಲ್ಲಿ ಹೆಚ್ಚಾಗಿ ಒಣಬೇಸಾಯ ಮತ್ತು ನೀರಾವರಿಗೆ ಕಡಿಮೆ ಆದ್ಯತೆ ಕೊಟ್ಟಿದ್ದರೂ ಈಗಿನಂತೆ ಹಿಂದೆಯೂ ಕೃಷಿಯು ಎರಡು ಕಾಲಾವಧಿಗಳನ್ನು ಹೊಂದಿತ್ತು. ಜೂನ್‌ನಿಂದ ಅಕ್ಟೋಬರ್, ಜನವರಿ–ಫೆಬ್ರವರಿ ಮುಂಗಾರು–ಹಿಂಗಾರು ಎಂದು ಕರೆಯುತ್ತಾರೆ.

ಮ್ಯಾಸನಾಯಕರು ವಾಣಿಜ್ಯ ಬೆಳೆಗಳಾದ ತೊಗರಿ, ಮೆಣಸು, ಎಳ್ಳು, ಹೆಸರು, ಔಡಲ, ತೆಂಗು, ಮೆಕ್ಕೆಜೋಳ, ವೀಳ್ಯದೆಲೆ, ಹತ್ತಿ, ಕುರಸಣ್ಣಿ(ಹುಚ್ಚೆಳ್ಳು), ಅಡಕೆ ನೆಲಗಡಲೆ(ಶೇಂಗಾ) ಹಾಗೂ ಆಹಾರ ಬೆಳೆಗಳಾದ ರಾಗಿ, ಜೋಳ, ಮುಸುಕಿನಜೋಳ, ಅವರೆ, ಸಜ್ಜೆ, ಹುರುಳಿ, ಹಲಸಂದಿ, ಕಡ್ಲೆ, ನವಣೆ, ಸಾವೆ, ಈರುಳ್ಳಿ, ಮಡಿಕೆಕಾಳು, ಭತ್ತ, ತರಕಾರಿ ಮತ್ತು ಹಣ್ಣುಗಳನ್ನು ಮ್ಯಾಸನಾಯಕರು ತಮ್ಮ ಒಣಬೇಸಾಯ ಪದ್ಧತಿಯಲ್ಲಿ ಹೆಚ್ಚಾಗಿ ಬೆಳೆಯುತ್ತಿರುವುದನ್ನು ಗಮನಿಸಬಹುದು. ಮಳೆಯಾಶ್ರಿತ ಭೂಮಿಗಳಲ್ಲಿ ಸಾಮಾನ್ಯವಾಗಿ ರಾಗಿ, ಜೋಳ, ಗೋದಿ, ಹುರುಳಿ, ಹಲಸಂದಿ, ನವಣೆ, ಕಡ್ಲೆ, ಅವರೆ, ತೊಗರಿ, ಹೆಸರು, ಕರಿಸಣ್ಣೆ(ಹುಚ್ಚೆಳ್ಳು), ಔಡಲ, ಶೇಂಗಾ ಮುಂತಾದವುಗಳನ್ನು ಬೆಳೆದರೂ ಅತಿ ಹೆಚ್ಚಾಗಿ ಮ್ಯಾಸಮಂಡಲದದಲ್ಲಿ ಶೇಂಗಾ ಬೆಳೆಯನ್ನು ಬೆಳೆಯುತ್ತಾರೆ. ನೀರಿನ ಸೌಲಭ್ಯವಿರುವ ನೀರಾವರಿ ಭೂಮಿಗಳಲ್ಲಿ ಭತ್ತ, ತೆಂಗು, ಈರುಳ್ಳಿ, ಅಡಿಕೆ, ವೀಳ್ಯೆದೆಲೆ ಮುಂತಾದವುಗಳನ್ನು ಬೆಳೆಯುತ್ತಾರೆ. ಇವರಲ್ಲಿ ಕೆಲವರು ಮಿಶ್ರ ಬೇಸಾಯವನ್ನು ಮಾಡುತ್ತಿದ್ದು, ಅದರಲ್ಲಿ ಹೆಚ್ಚಾಗಿ ತರಕಾರಿ ಮತ್ತು ಹಣ್ಣು ಬೆಳೆಯುತ್ತಾರೆ. ತರಕಾರಿಯಲ್ಲಿ ಬದನೆಕಾಯಿ, ಬೆಂಡೆಕಾಯಿ, ಸೋರೆಕಾಯಿ, ಹಾಗಲಕಾಯಿ, ಜವಳಿಕಾಯಿ,

ಟೊಮೊಟೋ, ಪಡವಲಕಾಯಿ, ಈರುಳ್ಳಿ, ಮೂಲಂಗಿ, ಎಲೆಕೋಸು, ಮೆಣಸಿನಕಾಯಿ ಕೊತ್ತಂಬರಿ, ಸೌತೆಕಾಯಿ ಮತ್ತು ಗೆಣಸು, ಸೊಪ್ಪುಗಳಾದ ಮೆಂತ್ಯೆ, ಪಾಲಕ್, ಹಣ್ಣುಗಳಾದ ಕಿತ್ತಳೆ, ಹಲಸು, ಮಾವು, ಬಾಳೆಹಣ್ಣು, ಪರಂಗಿ, ದಾಳಿಂಬೆ, ನಿಂಬೆ, ಸೀಬೆ, ಕಲ್ಲಂಗಡಿ ಮುಂತಾದವುಗಳನ್ನು ಬೆಳೆಯುತ್ತಾರೆ.

## ಮಾರುಕಟ್ಟೆ ವ್ಯವಸ್ಥೆ

ಹಿಂದೆ ಇವರಲ್ಲಿ ಸಾಟಿ ವಿನಿಮಯ ಪದ್ಧತಿ ಅಸ್ತಿತ್ವದಲ್ಲಿತ್ತು. ಇದರಿಂದಾಗಿ ತಾವು ಬೆಳೆದ ಬೆಳೆಗಳನ್ನು ತಮ್ಮ ತಮ್ಮಲ್ಲಿಯೇ ವಿನಿಮಯ ಮಾಡಿಕೊಳ್ಳುತ್ತಿದ್ದರು. ಇದಕ್ಕೆ ಕಾರಣ ಬಹುತೇಕ ಹಟ್ಟಿಗಳು ಊರು ಬಿಟ್ಟು ಇರುವುದರಿಂದ ನಗರಕ್ಕೆ ಬಂದು ತಮ್ಮ ಬೆಳೆಗಳನ್ನು ಮಾರಾಟ ಮಾಡಲಾಗದೆ ಈ ರೀತಿ ವಸ್ತು ವಿನಿಮಯ ಪದ್ಧತಿಯನ್ನು ರೂಢಿಯಲ್ಲಿಟ್ಟುಕೊಂಡಿದ್ದರು. ಪಟ್ಟಣಕ್ಕೆ ಸಮೀಪವಿರುವ ಹಟ್ಟಿಗಳಲ್ಲಿಯ ಜನರು ನೇರವಾಗಿ ತಮ್ಮ ಬೆಳೆಗಳನ್ನು ನಗರ ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದರು. ಇವರು ನೇರವಾಗಿ ಮಾರುಕಟ್ಟೆಯಲ್ಲಿ ತಮ್ಮ ಬೆಳೆಗಳನ್ನು ಮಾರಾಟ ಮಾಡುವುದು ತುಂಬಾ ಕಡಿಮೆ. ಮಧ್ಯವರ್ತಿಗಳನ್ನು ಹೆಚ್ಚಾಗಿ ಅವಲಂಬಿಸಿಕೊಂಡು ಅವರಿಗೆ ಮಾರಾಟ ಮಾಡುತ್ತಾರೆ.

ಮಧ್ಯವರ್ತಿಗಳಿಗೆ ತಮ್ಮ ಬೆಳೆಗಳನ್ನು ಮಾರಾಟ ಮಾಡಲು ಹಲವಾರು ಕಾರಣಗಳಿವೆ. ಅವುಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಮ್ಯಾಸನಾಯಕರ ಹಟ್ಟಿಗಳು ಊರು ಬಿಟ್ಟು ಬೆಟ್ಟಗುಡ್ಡದ ತಪ್ಪಲಿನಲ್ಲಿದ್ದು, ತಮ್ಮ ಸರಕುಗಳನ್ನು ಸಾಗಿಸಿ ಮಾರಾಟ ಮಾಡುವುದಕ್ಕೆ ಸರಿಯಾದ ರಸ್ತೆಗಳು ಇಲ್ಲದಿರುವುದು. ಕೆಲವು ಹಟ್ಟಿಗಳಿಗೆ ಮಾತ್ರ ರಸ್ತೆಗಳಿದ್ದು, ಅಂಥ ಹಟ್ಟಿಗಳಲ್ಲಿ ಮಾತ್ರ ಮಾರಾಟ ವ್ಯವಸ್ಥೆಯನ್ನು ಕಾಣುತ್ತೇವೆ.

೨. ಮ್ಯಾಸನಾಯಕರ ಹಟ್ಟಿಗಳಲ್ಲಿ ತಮ್ಮ ಸರಕುಗಳನ್ನು ದಾಸ್ತಾನು ಮಾಡಲು ದಾಸ್ತಾನು ಮಳಿಗೆಗಳು ಇಲ್ಲದಿರುವುದು. ಇದರಿಂದಾಗಿ ಕಡಿಮೆ ಬೆಲೆಯಿದ್ದರೂ ತಮ್ಮ ಸರಕುಗಳನ್ನು ಅನಿವಾರ್ಯವಾಗಿ ಮಾರಾಟ ಮಾಡುತ್ತಾರೆ.

೩. ಮ್ಯಾಸ ಸಮುದಾಯದ ಭೂಮಿಗಳು ಒಣಭೂಮಿಗಳಾಗಿರುವುದರಿಂದ ಹಣಕಾಸಿನ ಸಂಸ್ಥೆಗಳು ಇವರಿಗೆ ಸಾಲ ಸೌಲಭ್ಯಗಳನ್ನು ಕೊಡುವುದು ತುಂಬಾ ಕಡಿಮೆ ಪ್ರಮಾಣದಲ್ಲಿವೆ. ಇದರಿಂದಾಗಿ ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮ್ಯಾಸನಾಯಕರಿಗೆ ಸಾಧ್ಯವಾಗುತ್ತಿಲ್ಲ. ಈ ಕಾರಣಗಳಿಂದ ಮ್ಯಾಸನಾಯಕರು ಮಧ್ಯವರ್ತಿಗಳಿಂದ ಮುಂಗಡವಾಗಿ ಹಣವನ್ನು ಪಡೆಯುತ್ತಾರೆ. ಹಣವನ್ನು ಕೊಡುವಾಗ ಮಧ್ಯವರ್ತಿಗಳೂ ಸರಕುಗಳನ್ನು ತಮಗೆ ಮಾರಾಟ ಮಾಡಬೇಕೆಂದು ಕರಾರು ಹಾಕಿರುತ್ತಾರೆ. ಈ ಕರಾರಿನಾನ್ವಯ ಮ್ಯಾಸನಾಯಕರು ತಮ್ಮ ಸರಕುಗಳನ್ನು ಅವರಿಗೆ ಅನಿವಾರ್ಯವಾಗಿ ಕಡಿಮೆ ಬೆಲೆಗೆ ಮಾರಾಟ ಮಾಡಬೇಕಾಗಿ ಬರುತ್ತದೆ.

೪. ಮ್ಯಾಸನಾಯಕರಿಗೆ ತಮ್ಮ ಸರಕುಗಳನ್ನು ಮಾರಾಟ ಮಾಡಲು ಬಾರದೆ ಇರುವುದಕ್ಕೆ ಮತ್ತೊಂದು ಕಾರಣ ಇವರಿಗೆ ಮಾರುಕಟ್ಟೆಯ ಬಗ್ಗೆ ಮಾಹಿತಿ ಇಲ್ಲದೇ ಇರುವುದು. ಇವರಿಗೆ ವಿದ್ಯುತ್ ಮತ್ತು ದಿನಪತ್ರಿಕೆಗಳು ತಲುಪದೆ ಇರುವ ಕಾರಣ ಮಾರುಕಟ್ಟೆಯ ಮಾಹಿತಿ ಲಭ್ಯವಾಗುವುದಿಲ್ಲ. ಅಲ್ಲದೆ ಕೆಲವು ಹಟ್ಟಿಗಳಿಗೆ ಪತ್ರಿಕೆಗಳೂ ತಲುಪಿದರೂ ಅದನ್ನು ಓದಲು ಇವರಿಗೆ ಸಾಧ್ಯವಾಗುತ್ತಿಲ್ಲ. ಆದ ಕಾರಣ ಇವರಲ್ಲಿ ಅನೇಕರು ಅನಕ್ಷರಸ್ಥರು. ಈ ಕಾರಣದಿಂದಾಗಿ ಸರಕುಗಳ ಬೆಲೆಗಳ ಬಗ್ಗೆ ಮಾಹಿತಿ ಇಲ್ಲದೆ ಅನಿವಾರ್ಯ ಪರಿಸ್ಥಿತಿಯಲ್ಲಿ ಮಧ್ಯವರ್ತಿಗಳಿಗೆ ಮಾರಾಟ ಮಾಡುತ್ತಿದ್ದಾರೆ.

೫. ಒಣ ಬೇಸಾಯ ಪದ್ಧತಿಯಿಂದ ಇವರ ಇಳುವರಿ ತುಂಬಾ ಕಡಿಮೆ ಪ್ರಮಾಣದಲ್ಲಿರುತ್ತದೆ. ಇದರಿಂದಾಗಿ ಅಲ್ಪಪ್ರಮಾಣದಲ್ಲಿ ಇಳುವರಿಯನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಲು ಇವರು ಇಷ್ಟಪಡುವುದಿಲ್ಲ.

೬. ಕೆಲವು ಮ್ಯಾಸನಾಯಕರು ಮಾರುಕಟ್ಟೆಗೆ ತಮ್ಮ ವಸ್ತುಗಳನ್ನು ಮಾರಾಟ ಮಾಡಲು ಇಚ್ಚಿಸಿ ಮಾರುಕಟ್ಟೆಗೆ ವಸ್ತುಗಳನ್ನು ತೆಗೆದುಕೊಂಡು ಹೋಗುತ್ತಾರೆ. ಮಾರುಕಟ್ಟೆಯ ಅವ್ಯವಸ್ಥೆ ತೂಕ ಮತ್ತು ಅಳತೆಯಲ್ಲಿ ಮೋಸ, ಈ ಮೋಸ ವ್ಯವಹಾರದಿಂದ ಬೇಸತ್ತು ಅನಿವಾರ್ಯವಾಗಿ ಮಧ್ಯವರ್ತಿಗಳಿಗೆ ತಮ್ಮ ಸರಕುಗಳನ್ನು ಮಾರಾಟ ಮಾಡುತ್ತಾರೆ. ಉದಾಹರಣೆಗೆ ಚಳ್ಳಕೆರೆಯ ಮಾರುಕಟ್ಟೆಗೆ ಶೇಂಗಾವನ್ನು ಮಾರಾಟಕ್ಕೆ ತೆಗೆದುಕೊಂಡು ಹೋದರೆ ಅಲ್ಲಿನ ಹಮಾಲಿಗಳೇ ತೂಕ ಮಾಡಿ ಸುರಿದು ಉಳಿದಿರುವ ಶೇಂಗಾವನ್ನು ತಮಗೆಂದು ಎತ್ತಿ ಇಟ್ಟುಕೊಳ್ಳುತ್ತಾರೆ.

೭. ಮ್ಯಾಸನಾಯಕರಿಗೆ ಮಾರುಕಟ್ಟೆಯ ಇನ್ನೊಂದು ಸಮಸ್ಯೆ ಎಂದರೆ ಸಾಲ. ಸಾಲ ಕೊಟ್ಟಿರುವ ವ್ಯಕ್ತಿ ಇಂಥ ಅಂಗಡಿಗೆ ಸರಕನ್ನು ಬಿಡಬೇಕೆಂದು ತಾಕೀತು ಮಾಡಿ ಕಡಿಮೆ ಬೆಲೆಗೆ ಮಾರಾಟ ಮಾಡಿ ಅವನೇ ಪಟ್ಟಿ ತೆಗೆದುಕೊಂಡು ಉಳಿಕೆಯಾದ ಹಣವನ್ನು ರೈತರಿಗೆ ನೀಡುತ್ತಾನೆ.

ಈ ಮೇಲಿನ ಅಂಶಗಳು ಮಾತ್ರವಲ್ಲದೆ ಇನ್ನೂ ಹಲವಾರು ಕಾರಣಗಳಿಂದಾಗಿ ಮಧ್ಯವರ್ತಿಗಳು ಮಾತ್ರ ಮ್ಯಾಸನಾಯಕರ ಸರಕುಗಳನ್ನು ಮಾರುಕಟ್ಟೆ ಬೆಲೆಗಿಂತ ತುಂಬಾ ಕಡಿಮೆ ಬೆಲೆಯಲ್ಲಿ ಕೊಳ್ಳುತ್ತಾರೆ. ಇದರಿಂದಾಗಿ ಮ್ಯಾಸನಾಯಕರು ಶೋಷಣೆಗೆ ಒಳಪಟ್ಟು ಬಡವರಾಗಿಯೇ ಮುಂದುವರಿಯುತ್ತಿದ್ದಾರೆ.

**ಬೆಳೆ ಕಟಾವು ಸಂದರ್ಭದ ಕೂಲಿ**

ಸುಗ್ಗಿಯ ಸಂದರ್ಭದಲ್ಲಿ ಮ್ಯಾಸನಾಯಕರು ಕೂಲಿ ಕಾರ್ಮಿಕರಿಗೆ ದಿನನಿತ್ಯ ಕೂಲಿ ಹಣಕ್ಕಿಂತ ಸ್ವಲ್ಪ ಹೆಚ್ಚಿಗೆ ಕೊಡುತ್ತಾರೆ. ಇಲ್ಲಿ ಸ್ವಂತ ಕೂಲಿಗಳು ಮತ್ತು ತಾತ್ಕಾಲಿಕ ಕೂಲಿಗಳು ಎಂಬ ಭೇದಭಾವ ಈ ಸಮಯದಲ್ಲಿ ಇರುವುದಿಲ್ಲ. ಕಡ್ಡಾಯವಾಗಿ ಜಮೀನುಗಳಿಗೆ ಸ್ವಂತ ಕೂಲಿಗಳು ಬಂದರೆ, ಬೇಡಿಕೆಗೆ ಅನುಗುಣವಾಗಿ ತಾತ್ಕಾಲಿಕ ಕೂಲಿಗಳು ದುಡಿಯಲು ಬರುತ್ತಾರೆ.

ಇಂಥ ಸಂದರ್ಭದಲ್ಲಿ ಜಮೀನಿನ ಕೆಲಸಕ್ಕೆ ಅತಿ ಹೆಚ್ಚಿನ ಬೇಡಿಕೆ ಇರುವುದರಿಂದ ಹೆಚ್ಚಿನ ಕೂಲಿಯ ಅಮಿಷ ಒಡ್ಡಿ ತಾತ್ಕಾಲಿಕ ಕೂಲಿಗಳನ್ನು ದುಡಿಯಲು ತರುತ್ತಾರೆ. ಈ ಸಂದರ್ಭದಲ್ಲಿ ಅಮಿಷ ಒಡ್ಡಿ ತಾತ್ಕಾಲಿಕ ಕೂಲಿಗಳನ್ನು ಭೂಮಾಲೀಕರು ತಮ್ಮೆಡೆಗೆ ಸೆಳೆಯುತ್ತಾರೆ. ಫಸಲನ್ನು ಕೊಯ್ಯುವ ಸಂದರ್ಭದಲ್ಲಿ ಕೃಷಿಕೂಲಿಕಾರರು ಇತರೆ ದಿನಗಳಿಗಿಂತ ಸ್ವಲ್ಪ ಪ್ರಮಾಣದಲ್ಲಿ ನೆಮ್ಮದಿಯಿಂದ ಬದುಕುತ್ತಾರೆ. ಇದೇ ಸಂದರ್ಭದಲ್ಲಿ ಮಕ್ಕಳಿಗೆ, ತಮಗೆ ಬಟ್ಟೆ ಬರೆ ಖರೀದಿಸು ವುದು ಕಂಡುಬರುತ್ತದೆ. ಆದರೆ ಈ ಸಂದರ್ಭದಲ್ಲಿ ಬಂದ ಹಣವನ್ನು ಕೂಡಿಡದೇ ಖರ್ಚು ಮಾಡಿ ಇತರೆ ದಿನಗಳಲ್ಲಿ ಗಂಜಿ ಕುಡಿಯುತ್ತ ಹಣಕ್ಕಾಗಿ, ಆಹಾರ ಧಾನ್ಯಗಳಿಗಾಗಿ ಪರದಾಡುತ್ತಾ ಬದುಕುವುದು ಸರ್ವೇಸಾಮಾನ್ಯವಾಗಿದೆ. ಆದರೆ ಇದು ತಾತ್ಕಾಲಿಕವಾದ್ದರಿಂದ ಆರ್ಥಿಕಮಟ್ಟ ಉತ್ತಮಗೊಳ್ಳದೇ ಬಂದ ಹಣ ನೀರಿನಂತೆ ಖರ್ಚಾಗುತ್ತದೆ.

**ಕುರಿಸಾಕಾಣಿಕೆ**

ಮ್ಯಾಸನಾಯಕರು ಇಂದು ಕುರಿ ಸಾಕಾಣಿಕೆಯನ್ನು ಪ್ರಧಾನ ವೃತ್ತಿಯಾಗಿಸಿಕೊಂಡಿರುವುದು ಕಂಡುಬರುತ್ತದೆ. ಕುರಿ ಸಾಕಾಣಿಕೆ ಇತರೆ ಪಶುಪಾಲಕ ವೃತ್ತಿಗಿಂತ ಹೆಚ್ಚಿನ ಆದಾಯ ತಂದು ಕೊಡುವುದಾಗಿದೆ ಎಂಬ ಅಭಿಪ್ರಾಯ ಮ್ಯಾಸನಾಯಕರಲ್ಲಿದೆ. ಹೀಗಾಗಿ ಈ ಪಶುಪಾಲನೆಗೆ ಹೆಚ್ಚಿನ ಮಹತ್ವ ಕೊಡುತ್ತಿದ್ದಾರೆ. ಸಾಮಾನ್ಯವಾಗಿ ಪ್ರತಿಯೊಬ್ಬರ ಮನೆಯಲ್ಲೂ ಕುರಿಗಳಿರುವುದನ್ನು ಕಾಣುತ್ತೇವೆ. ಮಧ್ಯಮವರ್ಗದ ಮತ್ತು ಶ್ರೀಮಂತರಾದ ಮ್ಯಾಸನಾಯಕರು ಒಂದು ನೂರರಿಂದ ಸಾವಿರದವರೆಗೆ ಕುರಿ ಸಾಕಿರುತ್ತಾರೆ. ಬಡತನದಲ್ಲಿರುವವರು ೮-೧೦ ಕುರಿಗಳನ್ನು ಹೊಂದಿದ್ದಾರೆ. ಕುರಿಗಳ ಸಂಖ್ಯೆಯ ಆಧಾರದ ಮೇಲೆ ಇವರ ಶ್ರೀಮಂತಿಕೆಯನ್ನು ಅಳೆಯುತ್ತಾರೆ. ಬಯಲುಸೀಮೆಯಲ್ಲಿ ಮ್ಯಾಸನಾಯಕರ ಪ್ರಧಾನವೃತ್ತಿ ಇಂದು ಕುರಿ ಸಾಕಾಣಿಕೆಯಾಗಿದೆ.

ಮ್ಯಾಸನಾಯಕರು ಮಳೆಗಾಲದಲ್ಲಿ ತಮ್ಮ ಹಟ್ಟಿಯಲ್ಲಿಯೇ ಇದ್ದುಕೊಂಡು ಕುರಿಗಳ ಪಾಲನೆ ಮಾಡುತ್ತಾರೆ. ಮಳೆಗಾಲ ಮುಗಿದ ಮೇಲೆ ಆ ಪ್ರದೇಶದಲ್ಲಿನ ಹುಲ್ಲಿನ ಅಭಾವ ಕಾಣಿಸಿಕೊಳ್ಳಲು ಪ್ರಾರಂಭಿಸಿದರೆ ತಮ್ಮ ಕುರಿಗಳನ್ನು ಹೊಡೆದುಕೊಂಡು ಬೇರೆ ಬೇರೆ ಪ್ರದೇಶಗಳಿಗೆ ಹೋಗುವರು. ಹೊಲಗದ್ದೆ ಬಯಲು ಪ್ರದೇಶಗಳಲ್ಲಿ ಹಟ್ಟಿ ಹಾಕಿಕೊಂಡು ಕುರಿ ಮೇಯಿಸುತ್ತಾರೆ. ಕೆಲ ರೈತರು ತಮ್ಮ ಭೂಮಿ ಫಲವತ್ತಾಗಲೆಂದು ಕುರಿ ಮಂದೆ ಮಾಡುವುದುಂಟು. ರೈತರು ಕುರಿಮಂದೆ ಮಲಗಿಸಿದರೆ ಒಂದು ದಿನಕ್ಕೆ ೨೦೦ರಿಂದ ೮೦೦ರವರೆಗೆ ಹಣ ಕೊಡುವರು. ಕೆಲವರು ಧಾನ್ಯರೂಪದಲ್ಲಿ ಕೊಡುವರು. ಕುರಿಸಾಕಾಣಿಕೆಗಾಗಿ ಅಲೆದಾಡುವಾಗ ಇವರು ತಮ್ಮ ಎಲ್ಲಾ ವಸ್ತುಗಳನ್ನು ತೆಗೆದುಕೊಂಡು ಹೋಗುವರು. ಕೆಲವರು ಕುರಿಗಳ ಜೊತೆಗೆ ಆಕಳುಗಳು, ಕುದುರೆಗಳು, ಕತ್ತೆಗಳು ಮತ್ತು ನಾಯಿಗಳನ್ನು ತೆಗೆದುಕೊಂಡು ಹೋಗುತ್ತಾರೆ.

ಕುರಿಗಳನ್ನು ರಾತ್ರಿ ವೇಳೆಯಲ್ಲಿ ತೋಳ, ಚಿರತೆಗಳಿಂದ ಕಾಪಾಡುವ ಸಲುವಾಗಿ ತಾತ್ಕಾಲಿಕ ಬೇಲಿಯನ್ನು ನಿರ್ಮಿಸಿಕೊಂಡು ಅದರೊಳಗೆ ಕುರಿಗಳನ್ನು ಕೂಡಿ ಹಾಕುತ್ತಾರೆ.

ಹಿಂದಿನ ಕಾಲದಲ್ಲಿ ಬಂದ್ರಿ ಸೊಪ್ಪಿನಿಂದ ಬೇಲಿ ಕಟ್ಟುತ್ತಿದ್ದರು. ನಂತರ ಬಿದಿರಿನ ತಟ್ಟಿಗಳು ಬಂದವು. ಆ ನಂತರ ಕಬ್ಬಿಣದ ತಡಿಕೆಗಳು ಬಂದಿರುವುದರಿಂದ ಇವುಗಳನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವುದು ಸುಲಭವಾಯಿತು. ಕುರಿಗಳನ್ನು ಕಾಯಲು ನಾಯಿಗಳನ್ನು ಸಾಕಿರುತ್ತಾರೆ. ರಾತ್ರಿ ಎಚ್ಚರದಿಂದಿದ್ದು ಕುರಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಕಾಯುವರು. ಕೆಲವರು ಜಾಲಿ, ಕಳ್ಳಿ, ಕಾರೆ ಮುಳ್ಳುಗಳಿಂದ ರೊಪ್ಪಗಳನ್ನು ಸಿದ್ಧಪಡಿಸಿ ಅದರ ಮಧ್ಯೆ ಕುರಿಗಳನ್ನು ಸಾಕುತ್ತಾರೆ. ಒಬ್ಬೊಬ್ಬರು ಕುರಿಗಳ ಮಧ್ಯೆ ಮಲಗಿದರೆ ಒಂದಿಬ್ಬರು ಹೊರಗೆ ಕುರಿ ಕಾಯುತ್ತಾರೆ. ಕಳ್ಳರು ಮತ್ತು ಇತರೆ ಪ್ರಾಣಿಗಳು ಕುರಿಗಳ ಮೇಲೆ ಆಕ್ರಮಣ ಮಾಡಲು ಬಂದರೆ ನಾಯಿಗಳು ಬೊಗಳುತ್ತವೆ. ಆಗ ತಕ್ಷಣವೇ ಎದ್ದು ಕೂಗು ಹಾಕುತ್ತಾ ಅವುಗಳನ್ನು ಓಡಿಸುತ್ತಾರೆ. ತಮ್ಮ ಹಿಂಡಿನಲ್ಲಿ ಎಷ್ಟು ಕುರಿಗಳಿವೆ, ಯಾವ ಕುರಿ ಕಾಣುತ್ತಿಲ್ಲ ಎಂಬುದರ ಸೂಕ್ಷ್ಮ ಅರಿವು ಇವರಿಗಿರುತ್ತದೆ.

ಅನೇಕ ಮ್ಯಾಸನಾಯಕರು ಆಧುನಿಕ ತಳಿಯ ಕುರಿಗಳನ್ನು ಈಗ ಸರ್ಕಾರದ ನೆರವಿನಿಂದ ಸಾಕುತ್ತಿದ್ದಾರೆ. ಈ ಕುರಿಗಳು ಬಹಳ ಬೇಗ ಮಾಂಸಕ್ಕಾಗಿ ಬಳಸಲು ಸಿದ್ಧವಾಗುತ್ತವೆ. ಇದರಿಂದ ಹೆಚ್ಚಿನ ಲಾಭ ಸಿಗುತ್ತದೆ ಎಂಬ ಕಾರಣದಿಂದ ಹೊಸ ತಳಿಗಳನ್ನು ಸಾಕುತ್ತಿದ್ದಾರೆ. ಆದರೆ ಸ್ಥಳೀಯ ಮಟ್ಟದಲ್ಲಿ ಹೊಸ ತಳಿಯ ಮಾಂಸವನ್ನು ತಿನ್ನುವುದಿಲ್ಲ. ಆದ್ದರಿಂದ ಬೇರೆಡೆಗೆ ಅವುಗಳನ್ನು ರಫ್ತು ಮಾಡಬೇಕಾಗುತ್ತದೆ. ಅಲ್ಲಿಯವರೆಗೆ ಸಾಕಷ್ಟು ದವಸ ಮತ್ತು ಹುಲ್ಲನ್ನು ತಿಂದು ಹಾಕುತ್ತವೆ. ಕುರಿ ಉಣ್ಣೆಗೂ ಸಾಕಷ್ಟು ಬೇಡಿಕೆ ಇರುವುದರಿಂದ ಆಕಳು, ಎಮ್ಮೆ ಸಾಕಾಣಿಕೆಗಿಂತ ಈ ವೃತ್ತಿ ಲಾಭದಾಯಕವಾಗಿದೆ ಎಂದು ಮ್ಯಾಸರು ಅಭಿಪ್ರಾಯಪಡುತ್ತಾರೆ. ಬಡತನ ರೇಖೆಗಿಂತ ಕೆಳಗಿರುವ ಮ್ಯಾಸನಾಯಕರು ಸಹ ಕುರಿ ಸಾಕಾಣಿಕೆಗೆ ಒಲವು ತೋರಿಸುತ್ತಿದ್ದಾರೆ. ಆದರೆ ಅವರಲ್ಲಿ ಬಂಡವಾಳವಿಲ್ಲದೆ ಕೈಕಟ್ಟಿ ಕುಳಿತಿದ್ದಾರೆ.

ನಾನು ಕ್ಷೇತ್ರಕಾರ್ಯ ಕೈಗೊಂಡ ಹಟ್ಟಿಗಳಲ್ಲಿ ಸುಮಾರು ಒಂದು ಹಟ್ಟಿಯಲ್ಲಿ ೫೦೦ ರಿಂದ ೧೦೦೦ ಕುರಿಗಳನ್ನು ಸಾಕಿರುವ ಬಗ್ಗೆ ಮಾಹಿತಿ ದೊರಕಿದೆ. ಕುರಿಗೆ ಬರುವ ರೋಗದ ಬಗ್ಗೆ ಸಣ್ಣ ಮರಿಗಳ ಬಗ್ಗೆ ವಿಶೇಷ ಆಸಕ್ತಿ ಪರಿಣತಿಯನ್ನು ಪಡೆದುಕೊಂಡಿದ್ದಾರೆ. ಕುರಿ ಮೇಯಿಸುವವನು ಯಾವಾಗಲೂ ಅವುಗಳ ಕಡೆ ಗಮನ ಹರಿಸಬೇಕಾಗುತ್ತದೆ. ಅವುಗಳ ಬಗ್ಗೆ ತಾತ್ಸಾರ ತೋರಿದರೆ ಕುರಿಮಂದೆ ಕಡಿಮೆಯಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಕುರಿಯ ಪಿಚ್ಚಿಗೆಯನ್ನು ಚೀಲದ ಲೆಕ್ಕದಲ್ಲಿ ತೆಗೆದುಕೊಂಡು ಹೋಗುತ್ತಾರೆ. ಈಗ ಕುರಿಯ ಪಿಚ್ಚಿಗೆ ಸಾಕಷ್ಟು ಬೇಡಿಕೆ ಇದೆ. ಆಧುನಿಕತೆಯಿಂದ ಎಲ್ಲಿ ನೋಡಿದರೂ ಕುರಿಕಾಯುವವನ ಕೈಯಲ್ಲಿ ಮೊಬೈಲ್ ಫೋನ್ ಇರುತ್ತದೆ. ಅದು ಬೆಳಗ್ಗೆ ಹಾಡಲು ಶುರುವಾದರೆ ಸಾಕು ಅದು ಕೊನೆಗೊಳ್ಳುವುದು ಕುರಿ ಮಂದೆ ಸೇರಿದಾಗ. ಈ ವೃತ್ತಿಯನ್ನು ಕೈಗೊಂಡಿರುವವರು ಆರ್ಥಿಕವಾಗಿ ಹಂತ ಹಂತವಾಗಿ ಸಬಲರಾಗುತ್ತಿರುವ ಚಿತ್ರಣ ಕಂಡುಬರುತ್ತಿದೆ. ಆಧುನಿಕತೆ ಮತ್ತು ನಗರೀಕರಣದ ಪ್ರಭಾವಕ್ಕೊಳಗಾದ

ಮ್ಯಾಸನಾಯಕರು ವಿದ್ಯಾವಂತ ಯುವಕರು ಮಾತ್ರ ಈ ವೃತ್ತಿಯಲ್ಲಿ ಕೈ ಜೋಡಿಸುತ್ತಿಲ್ಲ. ಇದೊಂದು ಪ್ರತಿಷ್ಠಿತವಾದ ವೃತ್ತಿಯಾಗಿಲ್ಲ ಎಂಬುದು ಅವರ ಅನಿಸಿಕೆಯಾಗಿದೆ.

## ದಿನಗೂಲಿ ಕಾರ್ಮಿಕರು

ಮ್ಯಾಸನಾಯಕರು ಕೃಷಿ ಕೂಲಿ, ಪಶುಪಾಲನೆ ವೃತ್ತಿಗಳಲ್ಲಿ ಮಾತ್ರ ತೊಡಗಿರದೆ ಇನ್ನಿತರ ಅನೇಕ ವೃತ್ತಿಗಳಲ್ಲಿಯೂ ತೊಡಗಿದ್ದಾರೆ. ಸಾಮಾನ್ಯವಾಗಿ ಅನೇಕರು ದಿನಗೂಲಿ ಕೆಲಸಕ್ಕೆ ಹೋಗುವುದು ಇವರಲ್ಲಿ ಕಂಡುಬರುತ್ತದೆ. ಈ ದಿನಗೂಲಿ ಕೆಲಸವು ದಿನದ ಲೆಕ್ಕದ ಕೆಲಸವಾಗಿದ್ದು, ಅಂದೇ ದುಡಿದು ಅಂದೇ ಕೂಲಿಯನ್ನು ಪಡೆಯುತ್ತಾರೆ. ಕೆಲಸದ ನಂತರ ಮಾಲೀಕರಿಗೂ ಇವರಿಗೂ ಯಾವುದೇ ರೀತಿಯ ವ್ಯವಹಾರ ಇರುವುದಿಲ್ಲ. ಇವರು ಪಡೆಯುವ ಕೂಲಿಯು ಅಲ್ಪ ಪ್ರಮಾಣದಲ್ಲಿರುತ್ತದೆ. ಪ್ರಸ್ತುತ ಕ್ಷೇತ್ರ ಅಧ್ಯಯನ ಕೈಗೊಂಡಾಗ ಹಟ್ಟಿಗಳಲ್ಲಿ ಗಾರೆ ಕೆಲಸ, ಹಮಾಲಿ ಕೆಲಸ, ರಸ್ತೆ ರಿಪೇರಿ, ಕಸ ಹೊರುವುದು, ಸಿಮೆಂಟ್ ಕಾಂಕ್ರಿಟ್ ಕೆಲಸ, ತಡೆಗೋಡೆ, ಚೆಕ್‌ಡ್ಯಾಂ, ಚರಂಡಿ, ಸೇತುವೆ ನೀರಾವರಿ ಕಾಲುವೆ, ನೀರಿನ ಸಂಪರ್ಕ ಕಲ್ಪಿಸುವ ಕೆಲಸಗಳಿಗೆ ದಿನಗೂಲಿಗಳಾಗಿ ಮ್ಯಾಸನಾಯಕರು ಹೋಗುವುದನ್ನು ಕಾಣುತ್ತೇವೆ. ಇವರು ಪಡೆಯುವಂಥ ಕೂಲಿ ಹಣವೂ ಸಹ ಅಲ್ಪಪ್ರಮಾಣದ್ದಾಗಿದ್ದು, ಇಲ್ಲಿ ಮೇಸ್ತ್ರಿಗಳ ಕೈವಾಡ ಅಧಿಕವಾಗಿರುತ್ತದೆ. ಕೆಲಸ ಹುಡುಕುವವನು ಮೇಸ್ತ್ರಿಯಾಗಿರುವುದರಿಂದ ಅಲ್ಪ ಹಣವನ್ನು ಅವನು ದೋಚುವ ದೃಶ್ಯ ಕಣ್ಣಿಗೆ ಕಾಣಸಿಗುತ್ತದೆ.

## ಆಯಗಾರ ಪದ್ಧತಿ

ಬ್ರಿಟಿಷರು ಭಾರತಕ್ಕೆ ಬರುವುದಕ್ಕೆ ಮುಂಚೆ ಭಾರತದಲ್ಲಿ ಹಲವಾರು ಸಾಮಾಜಿಕ ಸಂಸ್ಥೆಗಳಿದ್ದವು. ಅವುಗಳಲ್ಲಿ ಪ್ರಮುಖವಾಗಿ ಜಾಜ್‌ಮಾನಿ ಪದ್ಧತಿಯು ಅತಿ ವಿಶಿಷ್ಟವಾದ ಸ್ಥಾನವನ್ನು ಪಡೆದಿತ್ತು. ಯೋಗೇಂದ್ರ ಸಿಂಗ್ ಅವರ ಪ್ರಕಾರ ಜಾಜ್‌ಮಾನಿ ಪದ್ಧತಿಯು ಒಂದು ಗ್ರಾಮವನ್ನು ಮತ್ತು ಅದರ ಸುತ್ತಮುತ್ತಲಿನ ಇತರೇ ಗ್ರಾಮಗಳೊಂದಿಗೆ ಬೆಸೆಯುವ ಕೆಲಸ ಮಾಡಿತ್ತು. ಹಿಂದಿನ ಕಾಲದಲ್ಲಿ ಜಾಜ್‌ಮಾನಿ ವ್ಯವಸ್ಥೆಯು ಜಾತಿಪದ್ಧತಿಯೊಂದಿಗೆ ಸಂಬಂಧಿಸಿತ್ತು. ವಾಸ್ತವವಾಗಿ ಜಾತಿಪದ್ಧತಿ ಹಾಗೂ ಜಾಜ್‌ಮಾನಿ ಪದ್ಧತಿ ಎರಡೂ ಒಟ್ಟಾಗಿಯೇ ಕಾರ್ಯ ನಿರ್ವಹಿಸುತ್ತಿದ್ದವು. ಆ ಕಾಲದಲ್ಲಿ ಜಾಜ್‌ಮಾನಿ ವ್ಯವಸ್ಥೆಯು ಸಮಾಜೋ ಆರ್ಥಿಕ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗವಾಗಿತ್ತು. ಈ ಜಾತಿಪದ್ಧತಿಯಲ್ಲಿ ಒಂದು ಜಾತಿಯ ಮತ್ತೊಂದು ಜಾತಿ ಸಮೂಹದ ಮೇಲೆ ಅವಲಂಬಿಸಬೇಕಾಗಿತ್ತು. ಇದು ಒಂದು ಜಾತಿಯ ಜನರನ್ನು ಮತ್ತೊಂದು ಜಾತಿಯ ಮೇಲೆ ಅವಲಂಬಿಸುವಂತೆ ಮತ್ತು ಸಹಕಾರದಿಂದ ಬದುಕುವಂತೆ ಪ್ರೇರಣೆ ಮಾಡುತ್ತಿತ್ತು. ಜಾಜ್‌ಮಾನಿ ವ್ಯವಸ್ಥೆಯು ವಿವಿಧ ಜಾತಿಯ ಜನರಲ್ಲಿ ಪರಸ್ಪರಾವಲಂಬನೆಯ ಭಾವನೆಯನ್ನು ಸೃಷ್ಟಿಸಿತ್ತು. ಅಸಂಖ್ಯಾತ ಜಾತಿ ಸಮೂಹಗಳನ್ನು ಹೊಂದಿದ್ದ ಭಾರತ ಜಾತಿಸಂಘರ್ಷದಿಂದ ಮುಕ್ತವಾಗಿದ್ದಕ್ಕೆ ಜಾಜ್‌ಮಾನಿ ವ್ಯವಸ್ಥೆಯೇ ಕಾರಣವೆಂದು ಹೇಳಬಹುದು.

ಜಾಜ್‌ಮಾನಿ ವ್ಯವಸ್ಥೆಯಲ್ಲಿ ಎರಡು ಪ್ರಮುಖ ವರ್ಗಗಳಿದ್ದವು. ಒಂದು ವರ್ಗವು ಮತ್ತೊಂದು ವರ್ಗಕ್ಕೆ ಸೇವೆ ಮತ್ತು ಕೃಷಿ ಚಟುವಟಿಕೆಗಳಿಗೆ ಪೂರಕವಾದ ಹಲವು ವಸ್ತುಗಳನ್ನು ಪೂರೈಸುತ್ತಿದ್ದವು. ಇದಕ್ಕೆ ಪ್ರತಿಯಾಗಿ ಅದು ವಸ್ತು ಮತ್ತು ಸೇವೆಯನ್ನು ಪಡೆದ ವರ್ಗದವರಿಂದ ಪ್ರತಿಫಲವಾಗಿ ದವಸ ಧಾನ್ಯಗಳ ರೂಪದಲ್ಲಿ ಪಡೆದುಕೊಳ್ಳುತ್ತಿದ್ದವು. ಸೇವೆಯನ್ನು ಮಾಡುವ ವರ್ಗವನ್ನು ಕಾಮೀನರು ಅಥವಾ ಪ್ರಜೋಗಳು ಎಂದು ಕರೆಯಲಾಗುತ್ತಿತ್ತು. ಈ ವರ್ಗದಡಿಯಲ್ಲಿ ಬಡಿಗ, ಚಮ್ಮಾರರು, ಕಮ್ಮಾರರು, ಕ್ಷೌರಿಕರು, ಅಗಸ ಮುಂತಾದ ವೃತ್ತಿ ಸಮೂಹದವರು ಇರುತ್ತಿದ್ದರು. ಅಂದಿನ ಕಾಲದಲ್ಲಿ ಇವರು ಜಾತಿ ನಿಯಮಗಳಿಗನುಗುಣವಾಗಿ ತಮ್ಮ ಪರಂಪರಾನುಗತವಾದ ವೃತ್ತಿಯಲ್ಲಿ ತೊಡಗುತ್ತಿದ್ದರು. ಜಾತಿಯ ಮೂಲ ವೃತ್ತಿಯನ್ನು ಬಿಟ್ಟು ಮತ್ತೊಂದು ವೃತ್ತಿಯಲ್ಲಿ ಅವರು ತೊಡಗುವಂತಿರಲಿಲ್ಲ. ಹೀಗಾಗಿ ಅವರು ಉಪಜೀವನಕ್ಕೆ ತಮ್ಮ ಜಾತಿಯ ಅಥವಾ ಕೌಟುಂಬಿಕ ಉದ್ಯೋಗದಲ್ಲಿ ತೊಡಗುತ್ತಿದ್ದರು. ಇವರಿಂದ ಸೇವೆ ವಸ್ತುಗಳನ್ನು ಪಡೆದುಕೊಳ್ಳುತ್ತಿದ್ದ ವರ್ಗವೆಂದರೆ ಜಾಜ್ಮಾನರು ಅಂದರೆ ಯಾಜಮಾನರು. ಇವರು ಸಾಮಾನ್ಯವಾಗಿ ಮೇಲ್ಜಾತಿಗೆ ಸೇರಿದವರಾಗಿದ್ದರು. ಇವರದು ಭೂಮಾಲೀಕರ ವರ್ಗವಾಗಿತ್ತು. ಇವರು ತಾವು ಕಾಮೀನರು ಅಥವಾ ಪ್ರಜೆಗಳಿಂದ ಪಡೆದ ಸೇವೆಗೆ ಪ್ರತಿಫಲವಾಗಿ ಅವರಿಗೆ ಸುಗ್ಗಿ ಮುಗಿದ ನಂತರ ದವಸ ಧಾನ್ಯಗಳನ್ನು ಕೊಡುತ್ತಿದ್ದರು. ಈ ಹಿಂದೆ ಕಾಮೀನರು ಯಜಮಾನರ ಮೇಲೆ ಹಾಗೂ ಯಜಮಾನರು ಕಾಮೀನರ ಮೇಲೆ ಅವಲಂಬಿತರಾಗಿದ್ದರು. ಇವರ ನಡುವಿನ ಪರಸ್ಪರಾವಂಬನೆಯು ಇಬ್ಬರಿಗೂ ಲಾಭದಾಯಕವಾಗಿದ್ದಿತು.

ಗ್ರಾಮೀಣ ಸಮುದಾಯಗಳು ಮತ್ತು ಅವುಗಳ ಸಂಘಟನೆ ಕುರಿತಂತೆ ಕ್ರಮಬದ್ಧವಾದ ವಿಶ್ಲೇಷಣೆಯನ್ನು ಪ್ರಾರಂಭಿಸಿದ ಮಹನೀಯ ಬ್ರಿಟನ್ನಿನ ನ್ಯಾಯಶಾಸ್ತ್ರ ವಿದ್ವಾಂಸರಾದ ಸರ್ ಹೆನ್ರಿ ಸಮ್ನರ್ ಮೇನ್‌ಗೆ ಸಲ್ಲುತ್ತದೆ. ೧೮೬೧ರಲ್ಲಿ ಅವರು ಪ್ರಕಟಿಸಿದ ಆನ್ಶಿಂಟ್ ಲಾನಲ್ಲಿ ಭಾರತದಲ್ಲಿನ ಗ್ರಾಮ ಸಮುದಾಯಗಳ ಬಗೆಗೆ ಅದರಲ್ಲೂ ಭೂ ಒಡೆತನ ಪದ್ಧತಿಗಳ ಬಗೆಗೆ ಉಲ್ಲೇಖ ಮಾಡಿದ್ದರಿಂದ ಅವರ ಹೆಸರು ಬೆಳಕಿಗೆ ಬರಲು ಕಾರಣವಾಯಿತು. ನಂತರ ಲಾರ್ಡ್ ಬೆಡನ್ ಪಾವೆಲ್ ಅವರು ಗ್ರಾಮಗಳಲ್ಲಿನ ಭೂ ಒಡೆತನ ಮತ್ತು ಭೂಕಂದಾಯ ವ್ಯವಸ್ಥೆಗಳನ್ನು ಅಧ್ಯಯನ ಮಾಡಿ ಭಾರತದ ಹಲವಾರು ಭಾಗಗಳಲ್ಲಿನ ಭೂ ಒಡೆತನ ಪದ್ಧತಿಯ ಬಗೆಗಿನ ವಿವರಗಳನ್ನು ಕುರಿತು ೧೮೯೨ರಲ್ಲಿ ಮೂರು ಸಂಪುಟಗಳನ್ನು ಪ್ರಕಟಿಸಿದರು. ಒಂದನೇ ಸಂಪುಟದಲ್ಲಿ ಬಂಗಾಳದಲ್ಲಿನ ಭೂ ಒಡೆತನ ಪದ್ಧತಿಯ ಬಗ್ಗೆ ೨ನೇ ಸಂಪುಟದಲ್ಲಿ ಪಂಜಾಬ್ ಮತ್ತು ಅಜ್ಮೀರ್ ಸೆಂಟ್ರಲ್ ಫ್ರಾವಿನ್ಸಿನ ಮತ್ತು ನಾರ್ಥ್‌ವೆಸ್ಟ್ ಪ್ರಾವಿನ್ಸ್‌ಗಳ ಬಗ್ಗೆ ಹಾಗೂ ೨ನೇ ಸಂಪುಟದಲ್ಲಿ ಮದ್ರಾಸ್, ಬಾಂಬೆ, ಅಸ್ಸಾಂ, ಬಿಹಾರ್, ಬ್ರಿಟಿಷ್ ಬರ್ಮ ಮತ್ತು ಅಂಡಮಾನ್‌ನಲ್ಲಿದ್ದ ಭೂ ಒಡೆತನ ಪದ್ಧತಿಯ ಬಗ್ಗೆ ಪ್ರಕಟಿಸಿದ್ದಾರೆ.

೧೯೨೧ರಲ್ಲಿ ಬಾಂಬೆ ಸಂಸ್ಥಾನದ ಕೃಷಿ ನಿರ್ದೇಶಕರಾದ ಎಚ್.ಎಸ್.ಮಾನ್ ಅವರು 'ಲ್ಯಾಂಪ್ ಅಂಡ್ ಲೇಖರಂ ಇನ್ ಡೆಕ್ಕನ್ ವಿಲೇಜ್' ಎಂಬ ಗ್ರಂಥವನ್ನು ಪ್ರಕಟಿಸಿದರು. ಡೆಕ್ಕನ್ ಸಂಸ್ಥಾನದಲ್ಲಿನ ಆಯ್ದ ಗ್ರಾಮಗಳ ಮೊದಲ ನೇರ ಅನುಭವಾತ್ಮಕ ಅನ್ವೇಷಣೆಯ ಫಲಿತಾಂಶವೇ ಈ ಗ್ರಂಥವಾಗಿದೆ. ದಕ್ಷಿಣ ಭಾರತದ ಗ್ರಾಮ ಅಧ್ಯಯನಗಳನ್ನು ಪ್ರಾರಂಭಿಸಿದ ಕೀರ್ತಿ ಪ್ರೊ. ಗಿಲ್‌ಬರ್ಟ್ ಸ್ಲೇಟರ್ ಅವರಿಗೆ ಸಲ್ಲುತ್ತದೆ. ಇವರು ಮದ್ರಾಸ್ ವಿಶ್ವವಿದ್ಯಾಲಯದ ಸ್ನಾತಕ ವಿದ್ಯಾರ್ಥಿಗಳ ಸಹಾಯದಿಂದ ಹನ್ನೆರಡು ಗ್ರಾಮಗಳ ಸಮೀಕ್ಷೆಯನ್ನು ಕೈಗೊಂಡನು. ಈ ಸಮೀಕ್ಷೆಗಳಿಂದ ಹೊರಬಂದ ಫಲಿತಾಂಶದ ಆಧಾರದ ಮೇಲೆ ೧೯೧೮ರಲ್ಲಿ 'ಸಮ್ ಸೌಥ್ ಇಂಡಿಯನ್ ವಿಲೇಜಸ್' ಎಂಬ ಗ್ರಂಥವನ್ನು ಪ್ರಕಟಿಸಿದರು. ಇದು ಆ ಪ್ರದೇಶದಲ್ಲಿನ ಆರ್ಥಿಕ ಸಂಘಟನೆ, ಸಹಕಾರಿ ಕೈಗಾರಿಕೆಗಳು, ಗ್ರಾಮ, ವ್ಯಾಪಾರ, ನೈರ್ಮಲ್ಯ, ಶೈಕ್ಷಣಿಕ ಪದ್ಧತಿ, ಗ್ರಾಮ ಆಡಳಿತದ ಬಗೆಗೆ ಪೂರ್ಣ ವಿವರಗಳನ್ನೊಳಗೊಂಡಿದೆ.

ಭಾರತೀಯ ಗ್ರಾಮಗಳ ಬಗ್ಗೆ ಅಧ್ಯಯನ ಮಾಡಿದ ಕೀರ್ತಿ ಡಬ್ಲ್ಯೂ.ಎಚ್.ವೈಸರ್‌ಗೆ ಸಲ್ಲುತ್ತದೆ. ಅಮೆರಿಕ ದೇಶದ ಸಂಜಾತರಾದ ಅವರು ಕ್ರೈಸ್ತ ಮಿಷನರಿಯಾಗಿ ಭಾರತಕ್ಕೆ ಬಂದು ಉತ್ತರ ಪ್ರದೇಶದ ಕರೀಂಪುರ ಗ್ರಾಮದಲ್ಲಿ ಅಧ್ಯಯನವನ್ನು ಕೈಗೊಂಡರು. ತಾವು ಕ್ಷೇತ್ರಾಧ್ಯಯನ ಮಾಡುವಾಗ ಸಹಭಾಗಿ ಅವಲೋಕನದ ವಿಧಾನವನ್ನು ಅಳವಡಿಸಿಕೊಂಡಿರುವುದಾಗಿ ಅವರು ತಿಳಿಸುತ್ತಾರೆ. ಈ ವಿಧಾನದ ಮೂಲಕ ಸಂಗ್ರಹಿಸಿದ ಮಾಹಿತಿ ಆಧಾರದ ಮೇಲೆ ಡಬ್ಲ್ಯೂ.ಎಚ್.ವೈಸರ್ ಅವರು ಎರಡು ಗ್ರಂಥಗಳನ್ನು ಪ್ರಕಟಿಸಿದರು. ಬಿಹೈಂಡ್ ದಿ ಮಡ್ ವಾಲ್ಸ್ ಮತ್ತು ದಿ ಜಾಜ್‌ಮಾನಿ ಸಿಸ್ಟಮ್ ಈ ಗ್ರಂಥಗಳಿಗಾಗ ಅಮೆರಿಕದ ಕಾರ್ನೆಲ್ ವಿಶ್ವವಿದ್ಯಾಲಯವು ಅವರಿಗೆ ಡಾಕ್ಟರೇಟ್ ಪದವಿಯನ್ನು ನೀಡಿದೆ.

ಕರೀಂಪುರದ ಸೂಕ್ಷ್ಮ ಅಧ್ಯಯನದಲ್ಲಿ ಡಬ್ಲ್ಯೂ.ಎಚ್.ವೈಸರ್ ಅವರು ಜಾಜ್‌ಮಾನಿ ಎಂದು ಕರೆಯಲ್ಪಡುವ ಸಾಂಪ್ರದಾಯಿಕ ಆರ್ಥಿಕ ಸಂಘಟನೆಯನ್ನು ವರ್ಣಿಸಿದ್ದಾರೆ. ಈ ವ್ಯವಸ್ಥೆಯಲ್ಲಿ ಎದ್ದು ಕಾಣುವ ಎರಡು ಗುಂಪುಗಳಿವೆ. ಅವುಗಳೇ ಜಾಜ್‌ಮಾನರು ಮತ್ತು ಕಮೀನರು. ಜಾಜ್‌ಮಾನರು ಭೂ ಒಡೆಯರಾಗಿರುತ್ತಾರೆ. ಕಮೀನರು ಸುಗ್ಗಿಯ ಕಾಲದಲ್ಲಿ ಧವಸ ಧಾನ್ಯಗಳ ರೂಪದಲ್ಲಿ ತಮ್ಮ ಕೆಲಸಕ್ಕೆ ಪ್ರತಿಫಲವನ್ನು ಪಡೆಯುವವರಾಗಿರುತ್ತಾರೆ. ಇದು ಪುರಾತನ ಸಮತಾವಾದದ ಲಕ್ಷಣ ಎಂಬ ಅಭಿಪ್ರಾಯಕ್ಕೆ ಬಂದಿರುತ್ತಾರೆ. ಗ್ರಾಮಗಳಲ್ಲಿರುವ ಎಲ್ಲಾ ಜನರು ಒಟ್ಟಾಗಿ ಭೂ ಒಡೆತನ ಹೊಂದಿದ್ದು ಒಟ್ಟಾಗಿ ಸಾಗುವಳಿ ಮಾಡುವುದರ ಮೂಲಕ ಒಂದು ಬಗೆಯ ಸಮತಾವಾದ ಗ್ರಾಮಗಳಲ್ಲಿ ಆಚರಣೆಯಲ್ಲಿತ್ತು ಎನ್ನುವ ಕಾಲ್‌ಮಾರ್ಕ್ಸ್ ಮತ್ತು ಹೆನ್ರಿ ಸಮ್ನರ್ ಮೇನ್ ಅವರ ಅಭಿಪ್ರಾಯಗಳನ್ನು ಡಬ್ಲ್ಯೂ.ಎಚ್.ವೈಸರ್ ಒಪ್ಪುತ್ತಾರೆ. ಜಾಜ್‌ಮಾನಿ ಪದ್ಧತಿಯು ಉತ್ತರ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರಲಿಲ್ಲವೆಂದು ಇದು ಭಾರತದ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಇರುವುದನ್ನು ಕಾಣಬಹುದು.

ಮಹಾರಾಷ್ಟ್ರದಲ್ಲಿ ಬಾರಾಬಲುತೆದಾರ ಎಂದು, ಉತ್ತರ ಕರ್ನಾಟಕದಲ್ಲಿ ಇದನ್ನು ಆಯಪದ್ಧತಿ ಎಂದೂ ಕರೆಯಲಾಗುತ್ತಿದೆ. ಈ ಪದ್ಧತಿಯಲ್ಲಿ ಎರಡು ಗುಂಪುಗಳಿವೆ. ಅವು ಯಾವುವು ಎಂದರೆ ಆಯ್ದ ಕುಳ ಮತ್ತು ಆಯಗಾರ ದುಡಿಯುವವರು. ಆಯ್ದ ಕುಳದವರು ಆಯಗಾರರಿಗೆ ಆಯವನ್ನು ಧಾನ್ಯದ ರೂಪದಲ್ಲಿ ಕೊಡುತ್ತಿದ್ದರು. ಉತ್ತರ ಕರ್ನಾಟಕದಲ್ಲಿ ಆಯಗಾರ ಪದ್ಧತಿ ಅಂದು ಹೆಸರು ಪಡೆದಿದ್ದರೆ ದಕ್ಷಿಣ ಕರ್ನಾಟಕ ಪ್ರಾಂತ್ಯದಲ್ಲಿ ಹಡದೆ ಎಂದು ಇದು ಹೆಸರು ಪಡೆದಿದೆ.

ಸಮಾಜೋ ಜಾಜ್‌ಮಾನಿ ಪದ್ಧತಿ ಆರ್ಥಿಕ ವ್ಯವಸ್ಥೆಯ ಒಂದು ಅವಿಭಾಜ್ಯ ಅಂಗ. ಒಂದು ಜಾತಿಯು ತನ್ನ ಅಸ್ತಿತ್ವಕ್ಕಾಗಿ ಮತ್ತೊಂದು ಜಾತಿ ಸಮೂಹದ ಮೇಲೆ ಅವಲಂಬಿತವಾಗಿರುವುದೇ ಜಾಜ್‌ಮಾನಿ ಎಂದು ಕರೆಯುವರು.

ಸಾಂಪ್ರದಾಯಿಕವಾದ ಗ್ರಾಮ ಸಮಾಜದಲ್ಲಿ ಹನ್ನೆರಡು ಮಂದಿ ಆಯಗಾರರು ಪ್ರಾಚೀನ ಕಾಲದಿಂದಲೂ ಇದ್ದರೆಂದು ತಿಳಿದುಬರುತ್ತದೆ. ಗ್ರಾಮ ಸಮಾಜದಲ್ಲಿ ನರನಾಡಿಗಳಂತೆ ತಮ್ಮ ಪಾಲಿನ ಕೆಲಸಗಳನ್ನು ಗೌಡ, ಬಣಕಾರ, ಬಡಗಿ, ಕಮ್ಮಾರ, ಅಕ್ಕಸಾಲಿ ಕುಂಬಾರ, ನಾಯಿಂದ, ಬಾರಿಕ, ತಳವಾರ, ಅಗಸ, ಚಲವಾದಿ, ಮಾದಿಗ ಈ ಜಾತಿಗಳವರು ನಿರ್ವಹಿಸುತ್ತಿದ್ದರು. ಇದು ಸಾಮಾಜಿಕ ಏಣಿ ಶ್ರೇಣಿ ವ್ಯವಸ್ಥೆಯೇನೋ ಸರಿ. ಇವರೆಲ್ಲರೂ ಊರ ಪರಸ್ಪರ ಒಪ್ಪಂದದಿಂದ ಸಹಾನುಭೂತಿಯಿಂದ ಸಹಕಾರದಿಂದ ಕೆಲಸ ನಿರ್ವಹಿಸಿದಂತೆ, ಒಮ್ಮೊಮ್ಮೆ ಘರ್ಷಣೆಗಳಾಗುವ ಸಂಭವಗಳು ಇದ್ದವು. 'ಅಯಪದ್ಧತಿ' ಗ್ರಾಮೀಣ ಸಮಾಜದಲ್ಲಿ ವಿಶಿಷ್ಟ ಸಾಮಾಜಿಕ, ಆರ್ಥಿಕ ಭದ್ರತೆ ಒದಗಿಸುವ ಕ್ರಮವಾಗಿದೆ. ಆದರೆ ಇಂದು ಯಾವೊಂದು ಪದ್ಧತಿಯೂ ಗ್ರಾಮದಲ್ಲಿ ಇಲ್ಲ. ಅದು ತೀರ ಹಿಂದುಳಿದ ಗ್ರಾಮಗಳಲ್ಲಿ ಕಂಡುಬಂದರೂ ವ್ಯಾವಹಾರಿಕತೆಯ ಸ್ವರೂಪವನ್ನು ಪಡೆದುಕೊಂಡಿದೆ.

ಗ್ರಾಮೀಣ ಆಯಗಾರರು ವಂಶಪಾರಂಪರಿಕವಾಗಿ ಹರಿದು ಬಂದ ತಮ್ಮ ವೃತ್ತಿಯನ್ನೇ ನಂಬಿಕೊಳ್ಳಲಿಲ್ಲ. ಆದರೂ ಅದೇ ಉದ್ಯೋಗವೇ ಇಂದು ಬೇರೆ ರೂಪ ಪಡೆದು ಪಟ್ಟಣಗಳಲ್ಲಿ ಸೇರಿ ಹೆಚ್ಚು ಸಂಪಾದನೆ ತಂದುಕೊಡುತ್ತಿದೆ. ಹಳ್ಳಿಯ ನಾಯಿಂದ, ಅಗಸ, ಕಮ್ಮಾರ ಮೊದಲಾದ ಕಸಬುದಾರರು ಗ್ರಾಮದೊಂದಿಗೆ ಸಂಬಂಧವನ್ನು ಕಳೆದುಕೊಂಡು ಪೇಟೆಗಳಲ್ಲಿ ಹೆಚ್ಚು ದುಡಿಮೆ ಯನ್ನು ದುಡಿಯಲು ಉತ್ಸುಕರಾಗಿದ್ದಾರೆ. ನಾಯಿಂದರು ಹಳೆಯ ಕೈ ಪೆಟ್ಟಿಗೆಯ ಬದಲಿಗೆ ಸುಂದರವಾಗಿ ಸಿಂಗರಿಸಿದ ಕನ್ನಡಿ ಕುರ್ಚಿಗಳಿಂದ ವಿವಿಧ ಆಧುನಿಕ ವಸ್ತುಗಳನ್ನು ಬಳಸಿ 'ಸೆಲೂನ್' ಅಂಗಡಿಯನ್ನು ತೆಗೆಯುತ್ತಿದ್ದಾರೆ. ಅಗಸರು ಪೇಟೆಗಳಿಗೆ ಸೇರಿ ಡ್ರೈಕ್ಲೀನರ್ ಅಂಗಡಿಗಳನ್ನು ತೆರೆಯುತ್ತಿದ್ದಾರೆ. ಹೀಗೆ ಸಾಂಪ್ರದಾಯಿಕವಾಗಿ ಗ್ರಾಮಸಮಾಜದೊಂದಿಗೆ ಇಟ್ಟುಕೊಂಡಿದ್ದ ಆಯ ಪದ್ಧತಿ ಬದಲಾಗುತ್ತಿದೆ. ಹಿಂದೆ ಮೂರ್ನಾಲ್ಕು ದಿನಗಳು ಜರುಗುತ್ತಿದ್ದ ಹಬ್ಬ ಹರಿದಿನ ಜಾತ್ರೆ ಮದುವೆಗಳು ಕೂಡ ಇವುಗಳ ಜೊತೆಗೆ ಕ್ಷೀಣಿಸುತ್ತಾ ನಡೆದಿವೆ.

ಆಧುನಿಕ ತಂತ್ರಜ್ಞಾನ ಗ್ರಾಮೀಣರಿಗೆ ಲಭ್ಯವಾಗಿವೆ. ಸಂಚಾರ ಸಂಪರ್ಕ ವ್ಯವಸ್ಥೆಗಳು, ಅನುಕೂಲಗಳು ಗ್ರಾಮ-ನಗರಗಳ ಅಂತರವನ್ನು ಕಡಿಮೆಗೊಳಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಕೃಷಿ ಇಂದು ಆಹಾರ ಬೆಳೆಯಾಗಿ ಮಾತ್ರ ಉಳಿಯದೇ ಮಾರುಕಟ್ಟೆಯ ಬೆಳೆಯಾಗಿ ಮಾರ್ಪಟ್ಟಿದೆ. ಆದರೂ ಗ್ರಾಮೀಣ ರೈತನ ಜೀವನ ಸುಧಾರಿಸಿಲ್ಲ. ರೈತರು ಬೆಳೆದ ಬೆಳೆಗಳಿಗೆ ಸರಿಯಾದ ಬೆಲೆಗಳು ಸಿಗದೆ ಆತ್ಮಹತ್ಯೆಯ ಪ್ರಕರಣಗಳು ನಡೆಯುತ್ತಿವೆ. ಗ್ರಾಮೀಣ ಪ್ರದೇಶಗಳಲ್ಲಿ ಕಷ್ಟಪಟ್ಟು ಬೆಳೆ ತೆಗೆದ ರೈತ ಬೆಲೆ ಸಿಗದ ರೀತಿಯಲ್ಲಿ ಒದ್ದಾಡುತ್ತಿದ್ದರೆ, ಆತ ಬೆಳೆದ ಬೆಳೆಗಳು ವಿದೇಶಗಳಲ್ಲಿ ಹೆಚ್ಚಿನ ಬೆಲೆಗೆ ಮಾರಾಟವಾಗುತ್ತವೆ. ಪರಿಶ್ರಮ ಒಬ್ಬರದು, ಪ್ರತಿಫಲ ಮತ್ತೊಬ್ಬರದು.

## ಶಿಕ್ಷಣ

ಶಿಕ್ಷಣವೇ ಶಕ್ತಿ ಎಂದು ಹೇಳುವಂತೆ ಶಿಕ್ಷಣ ಮಾನವನ ನಿಪುಣತೆ ಮತ್ತು ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಮಹತ್ವಪೂರ್ಣ ಸ್ಥಾನ ಪಡೆದಿವೆ. ಶಿಕ್ಷಣ ಅಭಿವೃದ್ಧಿಯ ಮೂಲ ಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನ ಶಿಕ್ಷಣವನ್ನು ಅಲಕ್ಷಿಸಿ ಯಾವುದೇ ದೇಶ ಮುಂದುವರಿಯುವುದು ಸಾಧ್ಯವಿಲ್ಲ. ಶಿಕ್ಷಣವೆಂದರೆ ಪ್ರಾಣಿ ರೂಪದಲ್ಲಿರುವ ಮಾನವನನ್ನು ಮಾನವತ್ವದೆಡೆಗೆ ಒಯ್ಯುವ ಸಾಧನವಾಗಿದೆ. ಆದುದರಿಂದಲೇ ಶೈಕ್ಷಣಿಕ ಪ್ರಗತಿ ಸಾಧಿಸಿರುವ ಯಾವುದೇ ದೇಶವಾದರೂ ಅತಿ ಸುಲಭವಾಗಿ ಮುಂದುವರಿಯುತ್ತದೆ. ಇಂದು ಜಗತ್ತಿನಲ್ಲಿ ನಾವು ನೋಡುತ್ತಿರುವ ಅನೇಕ ಹಿಂದುಳಿದ ರಾಷ್ಟ್ರಗಳು ಶಿಕ್ಷಣದಲ್ಲಿ ಹಿಂದುಳಿದವುಗಳಾಗಿವೆ. ಅಕ್ಷರ ಜ್ಞಾನವಿಲ್ಲದ ಮನುಷ್ಯ ಪಶು ಸಮಾನ ಶಿಕ್ಷಣವು ಪ್ರಜ್ಞೆಯ ಅಭಿವೃದ್ಧಿಯ, ಸಮಾಜದ ಮರುಸಂಘಟನೆಯ ಮತ್ತು ಆರ್ಥಿಕ ಅಭಿವೃದ್ಧಿಯ ಮೂಲ ಸಾಧನವಿದ್ದಂತೆ. ಆದ್ದರಿಂದಲೇ "ಶಿಕ್ಷಣ ರಕ್ಷಣೆಯಷ್ಟೇ ಮುಖ್ಯ" ಎಂದು ಶಿಕ್ಷಣತಜ್ಞ ಡಾ.ಎಚ್.ನರಸಿಂಹಯ್ಯ ಹೇಳುತ್ತಾರೆ.[೧೪] ಅಂತೆಯೇ ಶಿಕ್ಷಣದ ಪಾತ್ರವನ್ನು ಸಮರ್ಥವಾಗಿ ಮನಗಂಡಿದ್ದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಶಿಕ್ಷಣವನ್ನು "ಪ್ರಜ್ಞೆಯ ಅಭಿವೃದ್ಧಿಯ ಮತ್ತು ಸಮಾಜದ ಮರುಸಂಘಟನೆಯ ಮೂಲ ಸಾಧನ"[೧೫] ಎಂದು ಕರೆದಿದ್ದರು. ಡಾ.ಬಿ.ಆರ್.ಅಂಬೇಡ್ಕರ್ ಅವರು "ಶಿಕ್ಷಣದಿಂದ ಮಾತ್ರ ಶೋಷಣೆ ನಿರ್ಮೂಲನೆ ಸಾಧ್ಯವೆಂದು ತಿಳಿಸಿದ್ದರು. ಅವರು ಹೇಳುವಂತೆ ಶಿಕ್ಷಣವೊಂದೆ ದಲಿತರನ್ನು ಮೇಲಕ್ಕೆತ್ತುವ ಸಾಧನ. ಓದು, ಓದು, ಓದು. ಎಡೆಬಿಡದೆ ಓದು ಮತ್ತು ಆಳವಾದ ಚಿಂತನೆ ನಮ್ಮ ಬುದ್ಧಿವಂತಿಕೆಯನ್ನು ಹೆಚ್ಚಿಸಬೇಕು. ವೈಚಾರಿಕವಾಗಿ ಚಿಂತಿಸಬೇಕು. ಆಗ ಮಾತ್ರ ದಲಿತರು ಮೇಲಕ್ಕೆ ಬರಲು ಸಾಧ್ಯವಾಗುತ್ತದೆ"[೧೬] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ಈ ಹಿನ್ನೆಲೆಯಲ್ಲಿ ಯಾವುದೇ ದೇಶದ ಅಭಿವೃದ್ಧಿಯು ಅಲ್ಲಿನ ಶಿಕ್ಷಣವನ್ನು ಅವಲಂಬಿಸಿರುತ್ತದೆ. ಈ ಕಾರಣದಿಂದಲೇ ವಿಶ್ವ ಅಭಿವೃದ್ಧಿ ವರದಿಯು ಪ್ರಸ್ತುತಪಡಿಸಿರುವ ದೇಶದ "ಅಭಿವೃದ್ಧಿಯ ಮಾನದಂಡಗಳಾಗಿರುವ ಮಾನವ ಅಭಿವೃದ್ಧಿ ಸೂಚಿ ಹಾಗೂ

ಜೀವನದ ಭೌತಿಕ ಅನುಸೂಚಿಯಲ್ಲಿ ಶಿಕ್ಷಣವನ್ನು ಪ್ರಮುಖ ಸೂತ್ರವನ್ನಾಗಿ ಬಳಸಿಕೊಂಡಿದೆ. ಈ ಮೂಲಕ ಮಕ್ಕಳು ಒಂದು ನಿರ್ದಿಷ್ಟ ವಯಸ್ಸಿನವರೆಗೆ ಶಾಲೆ ಕಲಿಯಬೇಕಾಗುತ್ತದೆ. ಇದಕ್ಕಾಗಿ ಭಾರತ ಸರ್ಕಾರವು ಸಂವಿಧಾನದ ನಾಲ್ಕನೆಯ ಪರಿಚ್ಛೇದದ ನಿರ್ದೇಶಕ ಸೂತ್ರಗಳಲ್ಲಿ ಬರುವ ೪೫ನೇ ವಿಧಿಯ ಪ್ರಕಾರ ೬ರಿಂದ ೧೪ ವರ್ಷದ ವಯೋಮಾನದವರೆಗಿನ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸಲು ಕ್ರಮ ವಹಿಸುತ್ತಿದೆ."[೧೭] ಇದರಿಂದಾಗಿ ಮಾನವನಿಗೆ ಸಾಕ್ಷರತೆ ಎಷ್ಟೊಂದು ಅವಶ್ಯಕತೆ ಎಂದು ತಿಳಿದುಬರುತ್ತದೆ.

ಸರ್ಕಾರ ಅನೇಕ ಯೋಜನೆಗಳನ್ನು ಜಾರಿಗೆ ತಂದು ಶಿಕ್ಷಣ ನೀಡಲು ಪ್ರಯತ್ನಿಸುತ್ತಿದ್ದರೂ ಸಹ, ಇದನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ಕೆಲವು ಸಮುದಾಯಗಳು ಸಾಧ್ಯವಾಗುತ್ತಿಲ್ಲ. ಅಂಥ ಸಮುದಾಯಗಳಲ್ಲಿ ಮ್ಯಾಸ ಸಮುದಾಯವೂ ಒಂದಾಗಿದೆ. ಇವರಲ್ಲಿ ಶಿಕ್ಷಣದ ಕೊರತೆ ಬಹಳಷ್ಟು ಇರುವುದು ಕಂಡುಬರುತ್ತದೆ. ವೆರಿಯರ್ ಎಲ್ವಿನ್ ಅವರು ಹೇಳುವಂತೆ "ಬೆಳೆಯುತ್ತಿರುವ ಗಂಡು ಮತ್ತು ಹೆಣ್ಣು ಮಕ್ಕಳನ್ನು ಶಾಲೆಗೆ ಕಳಿಸಿಕೊಡುವುದು, ಮೂಲದಲ್ಲಿ ಅವರ ಅರ್ಥವ್ಯವಸ್ಥೆಗೆ ಮತ್ತು ಸಾಂಪ್ರದಾಯಿಕ ಶ್ರಮ ವಿಭಜನೆಗೆ ಅಡ್ಡ ಬರುತ್ತದೆ[೧೮] ಎಂಬ ಹೇಳಿಕೆಯಲ್ಲಿ ಸತ್ಯಾಂಶವಿದೆ. ಈ ಹೇಳಿಕೆಗೆ ಅನುಗುಣವಾಗಿ ಮ್ಯಾಸನಾಯಕರಲ್ಲಿ ಹೆಚ್ಚಿನ ಜನರು ಅನಕ್ಷರಸ್ಥರ ಸಾಲಿಗೆ ಸೇರಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬರುತ್ತದೆ. ಇದಕ್ಕೆ ಮುಖ್ಯ ಕಾರಣ ಇವರು ಆರ್ಥಿಕವಾಗಿ ಸಬಲರಾಗಿರದೇ ಇರುವುದಾಗಿದೆ. ತಮ್ಮ ದೈನಂದಿನ ಹೊಟ್ಟೆಪಾಡಿಗಾಗಿ ಮಕ್ಕಳನ್ನು ಶಾಲೆ ಬಿಡಿಸಿ ಕೂಲಿ ಕೆಲಸಕ್ಕೆ ಕಳುಹಿಸುವುದನ್ನು ಕಾಣುತ್ತೇವೆ. ಇನ್ನೊಂದು ಪ್ರಮುಖ ಕಾರಣವೆಂದರೆ ಹಟ್ಟಿಗಳು ಸಾಕಷ್ಟು ಬೆಟ್ಟಗುಡ್ಡದ ಅಂಚಿನಲ್ಲಿರುವುದರಿಂದ ಸರಿಯಾದ ಸಮಯಕ್ಕೆ ಸಾರಿಗೆ ಸಂಪರ್ಕವಿಲ್ಲದ ಕಾರಣ ಶಿಕ್ಷಕರು ನಿರ್ಲಕ್ಷತೆ ತೋರಿಸುತ್ತಾರೆ.

ಒಟ್ಟಾರೆಯಾಗಿ ಮ್ಯಾಸನಾಯಕರಲ್ಲಿ ಕಂಡುಬರುವ ಸಾಕ್ಷರತೆ ಪ್ರಮಾಣ ಹಾಗೂ ಶೈಕ್ಷಣಿಕ ಮಟ್ಟಗಳಲ್ಲಿನ ಪ್ರಮಾಣಗಳಿಂದ ತಿಳಿದುಬರುವ ಅಂಶವೆನೆಂದರೆ ಇವರಲ್ಲಿ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳು ಹೆಚ್ಚು ಪ್ರಬಲವಿಲ್ಲದಿರುವುದು, ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಬಲರಲ್ಲದ ಮತ್ತು ನಗರಗಳಿಂದ ದೂರ ಇರುವುದರಿಂದ ಸದಾ ಅಲೆಮಾರಿತನದಲ್ಲಿಯೇ ಕಾಲ ಕಳೆಯುತ್ತಿದ್ದುದರಿಂದ ಶಿಕ್ಷಣದ ಬಗ್ಗೆ ಒಲವು ತೋರಿಸಿಲ್ಲ. ಹೀಗಾಗಿ ಈ ಸಮುದಾಯ ಸಾಕ್ಷರತೆಯಲ್ಲಿ ಹಿಂದುಳಿಯಲು ಕಾರಣವಾಗಿದೆ. ಸಮುದಾಯದ ಶೈಕ್ಷಣಿಕ ಅಭಿವೃದ್ಧಿಯ ಕಡೆಗೆ ಸರ್ಕಾರ ಹೆಚ್ಚಿನ ಗಮನ ಕೊಡಬೇಕಾದುದು ತುಂಬಾ ಅವಶ್ಯಕತೆಯಿದೆ.

ಪರಿಶಿಷ್ಟ ಪಂಗಡ ಎಂದು ಸರ್ಕಾರ ಗುರುತಿಸಿ ಸೌಲಭ್ಯಗಳನ್ನು ನೀಡುವವರೆಗೂ ಈ ಸಮುದಾಯದಲ್ಲಿದ್ದ ಒಟ್ಟು ವಿದ್ಯಾವಂತರ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟೇ. ಇದನ್ನು ಮಹಿಳೆಯರ ಸಂಖ್ಯೆ ಅತ್ಯಂತ ಕಡಿಮೆ. ಅಕ್ಷರದ ಅರಿವಿನ ಮೂಲಕವೇ ಜ್ಞಾನದ ಪರಿಧಿಯನ್ನು ಅಳೆಯುವ

ಮತ್ತು ಆ ಮೂಲಕ ಸ್ಥಾನಮಾನ, ಅವರಿಗೆ ಉದ್ಯೋಗ ನೀಡುವ ವ್ಯವಸ್ಥೆಯಡಿಯಲ್ಲಿ ಅಕ್ಷರದ ಅರಿವನ್ನೇ ಪಡೆಯದವರು ಅತ್ಯಂತ ನಿಕೃಷ್ಟ ಸ್ಥಿತಿಯಲ್ಲಿರುವುದು ಸಹಜವೇ ಆಗಿ ಬಿಟ್ಟಿತ್ತು. ದೈಹಿಕ ಶ್ರಮವನ್ನು ಬಂಡವಾಳವನ್ನಾಗಿ ಹೂಡಿ ದುಡಿಯುವ ಶ್ರಮಜೀವಿಗಳಿಗೆ ಇಂದಿಗೂ ನಮ್ಮಲ್ಲಿ ಸಲ್ಲುತ್ತಿರುವ ಮಾನ್ಯತೆ ಯಾವ ನೆಲೆಯದು ಎಂಬ ಸತ್ಯ ನಮಗೆಲ್ಲಾ ತಿಳಿದಿರುವುದೇ ಆಗಿದೆ.

ಬೌದ್ಧಿಕ ಹಸಿವಿನಿಂದ ಸಾಯುವುದು ಮಹಿಳೆಯ ವಿಧಿ ಎಂದು ಹೇಳುತ್ತಾರೆ ಫ್ಲಾರೆನ್ಸ್ ನೈಟಿಂಗೇಲ್. ಇಲ್ಲಿ ಬೌದ್ಧಿಕತೆಯೆಂಬುದು ಕೂಡ ಜ್ಞಾನದ ಪರಿಧಿಯಲ್ಲಿಯೇ ವ್ಯಾಖ್ಯಾನಿಸಲ್ಪಡು ವಂತಹುದು. ವ್ಯವಸ್ಥೆಯೊಂದು ಒದಗಿಸಿಕೊಡುವ ಯಾವುದೇ ಅನುಕೂಲವನ್ನು ಮೊದಲು ಅನುಭವಿಸುವವನೇ ಪುರುಷ. ಪುರುಷರೇ ಅಪರೂಪಕ್ಕೆಂಬಂತೆ ಅಕ್ಷರಸ್ಥರಾಗುತ್ತಿದ್ದ ಪರಿಸ್ಥಿತಿಯಲ್ಲಿ ಇನ್ನು ಈ ಪರಿಸರದ ಮ್ಯಾಸನಾಯಕರು ವ್ಯಾಪಕವಾಗಿ ನೆಲೆಸಿರುವ ಪ್ರದೇಶ ಹಟ್ಟಿಗಳಿಂದ, ಊರು, ಪಟ್ಟಣಗಳವರೆಗೆ ಇಂದು ಮ್ಯಾಸಬೇಡರ ವಾಸ್ತವ್ಯ ವಿಸ್ತರಿಸಲ್ಪಟ್ಟಿದೆ. ಕೇವಲ ಮ್ಯಾಸಬೇಡರು ಮಾತ್ರ ವಾಸಿಸುವ ಹಟ್ಟಿಗಳ ಚಿತ್ರಣ ನೋಡಿದರೆ ಸಮುದಾಯದ ಸಾಕ್ಷರತೆ ಪ್ರಮಾಣ ಗ್ರಹಿಸಲು ಸಾಧ್ಯವಾಗುತ್ತದೆ.

**ಟಿಪ್ಪಣಿಗಳು**

೧. ಬರಗೂರು ರಾಮಚಂದ್ರಪ್ಪ, **ಸಂಸ್ಕೃತಿ ಶ್ರಮ ಮತ್ತು ಸೃಜನಶೀಲತೆ,** ೨೦೦೫, ಪು. ೧೮೮

೨. ಅದೇ ಪು. ೧೮೯

೩. ಅದೇ, ಪು.೧೯೮

೪. ಅಂಜಿನಪ್ಪ ಟಿ.ಹೆಚ್., **ಮಹಿಳೆ ಮತ್ತು ದುಡಿಮೆ,** ೨೦೦೬, ಪು. ೪೩

೫. ಮಂಜುನಾಥ ಬೇವಿನಕಟ್ಟಿ, **ಆದಿವಾಸಿ,** ಪು. ೪೫

೬. ಮಾಹಿತಿದಾರರು ಬೋರಪ್ಪ ಕಾಟಪ್ಪನಹಟ್ಟಿ

೭. ಮಂಜುನಾಥ ಬೇವಿನಕಟ್ಟಿ, **ಪೂರ್ವೋಕ್ತ,** ಪು. ೪೮

೮. ಅದೇ, ಪು. ೪೮

೯. ಮಾಹಿತಿದಾರ ಬಸಪ್ಪ, ಬಸಪ್ಪನಹಟ್ಟಿ

೧೦. ಎಚ್ಚಾರ್ಕೆ, **ಭಾರತದ ಆರ್ಥಿಕ ವ್ಯವಸ್ಥೆ,** ಪು. ೧೫೭

೧೧. ಕೃಷಿ ಉತ್ಪಾದನೆ, ೧೯೯೪-೧೯೯೫, ಪು. ೩೪

೧೨. Singh L.and Sadhu, **IBID,** P.38

೧೩. ಗುರುಲಿಂಗಯ್ಯ ಎಂ.ವಿ., ನಾಗಪ್ಪ, **ಕಾಡುಗೊಲ್ಲ,** ಪು. ೧೧೨

೧೪. ಎಚ್ಚಾರ್ಕೆ, **ಪೂರ್ವೋಕ್ತ,** ಪು. ೫೧೨

೧೫. ರಾಮನ್ ಬಿ.ಎಸ್., **ಭಾರತದ ಆರ್ಥಿಕ ಅಭಿವೃದ್ಧಿ,** ಪು. ೧೬೧

೧೬. ಡಾ.ಪ್ರಭಾಕರ ಶಿಶಿಲ, **ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ,** ಪು. ೩೮೬

೧೭. ಚಂದ್ರಶೇಖರ ಟಿ.ಆರ್., ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ವರ್ಗದ ಸಾಕ್ಷರತೆ ಜಿಲ್ಲಾವಾರು ೧೯೯೧ ಮತ್ತು ೨೦೦೧, ಸಂ.೩, ಸಂ.೧, ಪು. ೩

೧೮. Elwin V.A., **Tribal India,** Pp.103

ಅಧ್ಯಾಯ ಏಳು

# ಕಲೆ ಮತ್ತು ವಾಸ್ತುಶಿಲ್ಪ

೭.೧. ದೇವಾಲಯಗಳು

೭.೨. ವೀರಗಲ್ಲು

೭.೩. ಶಾಸನಗಳು

೭.೪. ಸ್ಮಾರಕಗಳು

೭.೫. ರಕ್ಷಣಾ ವಾಸ್ತುಶಿಲ್ಪ

ಅಧ್ಯಾಯ ಏಳು

# ಕಲೆ ಮತ್ತು ವಾಸ್ತುಶಿಲ್ಪ

ವಾಸ್ತುಶಾಸ್ತ್ರ ಎಂದರೆ ವಸತಿ ನಿರ್ಮಾಣಶಾಸ್ತ್ರ ಎಂದು ಅರ್ಥ. ವಾಸ್ತುಶಿಲ್ಪಕ್ಕೆ ಸಾಂಸ್ಕೃತಿಕವಾಗಿ ಹೆಚ್ಚಿನ ಮಹತ್ವವಿದೆ. ಹಿಂದೆ ದೇವಾಲಯಗಳು ಹಳ್ಳಿಗರ ಜೀವನಾಡಿಗಳಾಗಿದ್ದವು. ದೇವಾಲಯಗಳು ಅವರಿಗೆ ವಿದ್ಯಾಕೇಂದ್ರಗಳಾಗಿ, ವಿವಿಧ ರೀತಿಯ ಮನರಂಜನೆಯ, ವಿನೋದಾದಿಗಳ ಅಗರವಾಗಿ, ಕುಶಲಕಲೆಗಳ ಸಾಧನಗಳಾಗಿ, ಮತಧರ್ಮಗಳ ನೆಲೆದಾಣವಾಗಿ, ದೀನ ದಲಿತರ ಆಶ್ರಯ ಕಲ್ಪತರುವಾಗಿ ಹಲವು ಹತ್ತು ಕಾರ್ಯಕ್ಷೇತ್ರಗಳ ಶಾಂತಿಧಾಮವಾಗಿ ಇದ್ದುದು ಶಾಸನಗಳಿಂದ ತಿಳಿದುಬರುತ್ತದೆ.

ವಾಸ್ತುರಚನೆಯೊಂದು ಒಳಗೊಂಡಿರುವ ವಿವಿಧ ವಾಸ್ತುಭಾಗಗಳು ಹಾಗೂ ಅವುಗಳ ಮೇಲಿನ ಅಲಂಕರಣೆ ಮತ್ತು ಶಿಲ್ಪಗಳನ್ನು ಸ್ಥೂಲವಾಗಿ ವಾಸ್ತುಕಲೆ ಎಂದು ಕರೆಯಬಹುದು. ಭಾರತೀಯ ವಾಸ್ತುಕಲೆಯು[೧] ಇತರ ಕಲೆಗಳಂತೆಯೇ ಆಯಾ ಕಾಲದ ಮತ್ತು ಆಯಾ ಜನಾಂಗದ ಆಂತರಿಕ ಆಕಾಂಕ್ಷೆ ಅನುಭವಗಳಿಗೆ ಕನ್ನಡಿಯನ್ನು ಹಿಡಿಯಬಲ್ಲದು. ವಾಸ್ತುಕಲೆಯು "ನಾಗರಿಕತೆಯನ್ನು ರೂಪಿಸುವ ಮಾತೃಕೆ."[೨] ನಾಗರಿಕತೆಯ ಶಿಶುವನ್ನು ತನ್ನ ಗರ್ಭದಲ್ಲಿಟ್ಟುಕೊಂಡು ಇದು ಬೆಳೆಸುತ್ತದೆ. ಮಾನವ ಜನಾಂಗದ ವಿಕಾಸವನ್ನು ಗುರುತಿಸುವ ವಿವಿಧ ಹಂತಗಳನ್ನು ವಾಸ್ತುಕಲೆಯಲ್ಲಿ ನಾವು ಕಂಡುಕೊಳ್ಳಬಹುದು.

ವಾಸ್ತುವೆಂದರೆ ವಿಶಾಲಾರ್ಥದಲ್ಲಿ ಮರ, ಕಲ್ಲು ಅಥವಾ ಮಣ್ಣು ಇತ್ಯಾದಿಗಳೆಲ್ಲವೂ ಆಗಬಹುದು. ಮಯಮತ ಗ್ರಂಥವು ವಾಸ್ತು ಶಬ್ದವನ್ನು ಎರಡು ಹಂತಗಳಲ್ಲಿ ವಿವರಿಸಿದೆ.[೩] ಮರ್ತ್ಯರು ಮತ್ತು ಅಮರ್ತ್ಯರು ವಾಸಿಸುವ ಸ್ಥಳಕ್ಕೆ 'ವಸ್ತು' ಎಂದು ಹೆಸರು. ವಸ್ತುವನ್ನು ಆಶ್ರಯಿಸಿದ್ದು 'ವಾಸ್ತು' ಎಂದು ಗುರುತಿಸಲ್ಪಡುತ್ತದೆ.

ಅವಾಸ ವಾಸ ದೌಪುರೇ ಗ್ರಾಮೇವಣಿಕ್ಷಥೇ

ಪ್ರಸಾದಾರಾಮ ದುರ್ಗೇಷು ದೇವಾಲಯ ಮತೇಷುಚ

ಗರುಡ ಪುರಾಣದ ಈ ಶ್ಲೋಕವು ಗ್ರಾಮಗಳು, ನಗರಗಳು ಕೋಟೆಗಳು, ಪಟ್ಟಣಗಳು, ಮಠಗಳು ಸಹ ವಾಸ್ತುಗಳೆಂದು ಹೇಳುತ್ತದೆ.[೪] ಆಲಯಗಳನ್ನು ಕಟ್ಟಲು ಬಳಸಿದ ಇಟ್ಟಿಗೆ, ಕಲ್ಲು, ಮರ ಹಾಗೂ ಕಬ್ಬಿಣಗಳನ್ನು ಸಹ ವಿಶ್ವಕರ್ಮನ ವಾಸ್ತುಶಾಸ್ತ್ರದಲ್ಲಿ ವಾಸ್ತುಗಳೆಂದೇ ಕರೆದಿದೆ.[೫] ಪ್ರಾಸಾದ, ಹರ್ಮ್ಯ, ಸೌಧ ಇತ್ಯಾದಿಗಳು ವಸ್ತುಗಳನ್ನು ಆಶ್ರಯಿಸಿದ್ದರಿಂದ 'ವಾಸ್ತು' ಎಂದೆನಿಸುತ್ತದೆ. ಆದ್ದರಿಂದ 'ವಾಸ್ತು' ಎಂದಲ್ಲ ವಸತಿಯೋಗ್ಯ ಭೂಮಿ ಮತ್ತು ಆ ಭೂಮಿಯ ಮೇಲೆ ನಿಂತ ಕಟ್ಟಡ ಎರಡನ್ನೂ ಒಳಗೊಳ್ಳುತ್ತದೆ. ದೇವಾಲಯ, ಅರಮನೆ ಅಥವಾ ರಾಜಗೃಹ ರಚನೆ, ದೇವತಾಮೂರ್ತಿಗಳ ರಚನೆ, ಸರ್ವಜನೋಪಯೋಗಿ ಗೃಹಗಳು, ಬಾವಿ, ಪುಷ್ಕರಿಣಿ ಮುಂತಾದವುಗಳನ್ನು ಶುಕ್ರನೀತಿ ಗ್ರಂಥವು ಶಿಲ್ಪಶಾಸ್ತ್ರದಡಿಯಲ್ಲಿ ಗುರುತಿಸುತ್ತದೆ.[೬]

ವಾಸ್ತುಶಾಸ್ತ್ರಕ್ಕೆ ಸಂಬಂಧಿಸಿದ ಶಬ್ದಕೋಶದ ಮುನ್ನುಡಿಯಲ್ಲಿ ವಿದ್ವಾಂಸ ಪಿ.ಕೆ.ಆಚಾರ್ಯ ರವರು ವಾಸ್ತುಶಾಸ್ತ್ರ ಮತ್ತು ಶಿಲ್ಪಶಾಸ್ತ್ರ ಪದಗಳನ್ನು ಪರ್ಯಾಯ ಪದಗಳೆಂಬಂತೆ ಬಳಸಿದ್ದಾರೆ. ಭಾರತೀಯ ವಾಸ್ತುಮೂರ್ತಿ ಚಿತ್ರಕಲೆಗಳ ಅಧ್ಯಯನಕ್ಕೆ ಸಂಬಂಧಿಸಿದ ಪ್ರಾಚೀನ ಗ್ರಂಥಗಳನ್ನು ಶಿಲ್ಪಶಾಸ್ತ್ರಗಳೆಂದೇ ಗುರುತಿಸುವುದುಂಟು. ಕೆಲವೊಮ್ಮೆ ಶಿಲ್ಪಶಾಸ್ತ್ರವೆಂದಲ್ಲಿ ಮೂರ್ತಿ ಅಥವಾ ಪ್ರತಿಮಾ ರಚನೆ, ಅವುಗಳ ಲಕ್ಷಣಗಳು, ತಾಳಮಾನ ಇತ್ಯಾದಿಗಳನ್ನು ಹೆಸರಿಸುವುದುಂಟು. ಪ್ರೊ. ಫಣೇಂದ್ರನಾಥ ಬೋಸ್ ಅವರು ಭಾರತೀಯ ಶಿಲ್ಪಶಾಸ್ತ್ರದ ಮೂಲತತ್ವಗಳನ್ನು ಗುರುತಿಸು ವಾಗ ಶಿಲ್ಪಶಾಸ್ತ್ರವೆಂಬ ಪದವನ್ನು ವಾಸ್ತು ಹಾಗೂ ಪ್ರತಿಮಾಶಾಸ್ತ್ರ ಎರಡನ್ನೂ ಒಳಗೊಂಡಂತೆ ವಿವರಿಸಿದ್ದಾರೆ.[೭]

'ಶಿಲ್ಪ' ಎನ್ನುವ ಪದವು ಮೂರ್ತಿಶಿಲ್ಪವೆಂಬ ಅರ್ಥದಲ್ಲಿ ರೂಢಿಗತವಾಗಿದ್ದರೂ, ಅದಕ್ಕೆ ತನ್ನದೇ ಆದ ಖಚಿತಾರ್ಥವಿದೆ. 'ಶಿಲ್ಪಂ ಕರ್ಮ ಕಲಾಧಿಕಂ'[೮] ಇದು ಅಮರಸಿಂಹನ ಅಮರ ಕೋಶದ ವಿವರಣೆ. ಕರ್ತೃವಿನ ಅಧಿಕ ಕೌಶಲ್ಯಗಳನ್ನೊಳಗೊಂಡ ಕರ್ಮ ಅಥವಾ ಕ್ರಿಯೆಗೆ ಶಿಲ್ಪವೆಂದು ಹೆಸರು. ಇದು ತಾಂತ್ರಿಕ ಪರಿಣತಿಯನ್ನು ಅಪೇಕ್ಷಿಸುತ್ತದೆ.

'ಶಿಲ್ಪ ಶಬ್ದಸ್ತಯ ಪುನಃ ಶೀಲ ಸಮಾಧೌ ಇತಿಧಾತೋರ್ಮನಸಃ ಸಮಾಧಾನಕಾರಕಂ ವಸ್ತು ಜಾತಮಿತಿ ಉತ್ಪದ್ಯತೇ" ಶಿಲ್ಪ ಶಬ್ದವು ಮನಸ್ಸಿಗೆ ಸಮಾಧಾನವನ್ನು ಉಂಟುಮಾಡುವ ಕ್ರಿಯೆಯಾಗಿದ್ದು, ಕಲೆಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತದೆ. ಈಗ ವಾಸ್ತುಶಾಸ್ತ್ರ ಮತ್ತು ವಾಸ್ತುಶಿಲ್ಪ ಪದಗಳನ್ನು ಸುಲಭವಾಗಿ ಅರ್ಥೈಸಿಕೊಳ್ಳಬಹುದು. ವಾಸ್ತುವಿಗೆ ಸಂಬಂಧಿಸಿದ ಮೂಲ ಸಿದ್ಧಾಂತಗಳನ್ನು ಗುರುತಿಸುವುದೇ ವಾಸ್ತುಶಾಸ್ತ್ರ. ವಾಸ್ತುಶಿಲ್ಪವೆಂದಲ್ಲ. ತಾಂತ್ರಿಕ ಪರಿಣತಿಯನ್ನು ಹೊಂದಿದ ಭಾವ ಸಂಬಂಧವೂ ಬೆಸೆಯಲ್ಪಟ್ಟ ಸಾಂಸ್ಕೃತಿಕ ವಾಸ್ತುರಚನೆಗಳು ಹಾಗೂ ವಿವರಗಳು

ಪ್ರಧಾನವೆನಿಸುತ್ತವೆ. ಒಟ್ಟಿನಲ್ಲಿ ದೇವಾಲಯ ವಾಸ್ತುವನ್ನು, ಸಾಂಸ್ಕೃತಿಕ ವಾಸ್ತು ಎಂದು ಹೆಸರಿಸಬಹುದು. ದೇವಾಲಯದಲ್ಲಿನ ಪ್ರತಿಮಾರಚನೆ ಹಾಗೂ ಲಕ್ಷಣಗಳು, ಚಿತ್ರ ರಚನೆ ಇತ್ಯಾದಿಗಳಿಗೆ ಸಂಬಂಧಿಸಿದ್ದನ್ನು ಶಿಲ್ಪಶಾಸ್ತ್ರವೆನ್ನಬಹುದು.

ವಾಸ್ತುವಿನ ಜೊತೆ ಜೊತೆಗೆ ಶಿಲ್ಪವು ಶಿಲ್ಪಿಯ ಅಭಿರುಚಿಗೆ ಅನುಗುಣವಾಗಿ ವಾಸ್ತುವಿನ ವಿವಿಧ ಭಾಗಗಳಲ್ಲಿ ವ್ಯಕ್ತವಾಗಿರುವುದನ್ನು ನಾವು ಕಾಣುತ್ತೇವೆ. ವಾಸ್ತು ಮತ್ತು ಶಿಲ್ಪಗಳೆರಡೂ ಸೌಂದರ್ಯದ ಪ್ರತೀಕವಾಗಿವೆ. ಇವು ಆರಂಭದಿಂದಲೂ ಜೊತೆಯಾಗಿಯೇ ಬೆಳೆದುಬಂದಿರುವುದು ಗಮನೀಯ ಅಂಶ. ಈ ಪರಿಸರದ ದೇವಾಲಯಗಳಲ್ಲಿ ಭಿತ್ತಿ, ಪ್ರಸ್ತರ ಹಾಗೂ ಕಂಬಗಳ ವಿಭಿನ್ನ ಭಾಗಗಳಲ್ಲಿ ಬಗೆಬಗೆಯ ಶಿಲ್ಪಗಳನ್ನು ಕಾಣಬಹುದು. ಇನ್ನು ಕೆಲವು ದೇವಾಲಯಗಳಲ್ಲಿ ಶಿಲ್ಪಗಳಿರದೆ, ಕೇವಲ ವಾಸ್ತುಭಾಗವನ್ನು ಮಾತ್ರ ಒಳಗೊಂಡಿವೆ.

ಒಟ್ಟಿನಲ್ಲಿ ವಾಸ್ತುವೊಂದನ್ನು ನಿರ್ಮಿಸುವುದು ಪ್ರಾಚೀನ ವಾಸ್ತುಕಲೆ ಎನ್ನುವ ಪದ ಪ್ರಯೋಗವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ವಾಸ್ತುಕಲೆ ಎನ್ನುವ ಪದಪ್ರಯೋಗವನ್ನು ಇಲ್ಲಿ ಮಾಡಲಾಗಿದೆ. ಭಾರತೀಯ ವಾಸ್ತುಕಲೆಯನ್ನು ನಾವು ಆಧ್ಯಾತ್ಮಿಕ ಮನೋಧರ್ಮವನ್ನು ಕಾಣುತ್ತೇವೆ.[೯] ಇದೇ ಧಾರ್ಮಿಕ ಭಾವನೆಯನ್ನು ಮೈಗೂಡಿಸಿಕೊಂಡು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ರಾಜರು, ಸಾಮಂತರು ಅನೇಕ ದೇವಾಲಯಗಳನ್ನು ಕಟ್ಟಿದ್ದಾರೆ. ಜೊತೆಗೆ ಅಲ್ಲಲ್ಲಿ ಕೋಟೆಗಳನ್ನು, ಲೌಕಿಕ ಕಟ್ಟಡಗಳನ್ನು ನಿರ್ಮಿಸಿದ್ದಾರೆ.[೧೦]

ಅಲೆಮಾರಿಯಾಗಿದ್ದ ಮಾನವ ಒಂದು ಕಡೆ ನೆಲೆಯಾಗಿ ನಿಲ್ಲಬೇಕೆಂದು ಒಂದು ಸುರಕ್ಷಿತ ಗೂಡಿನಲ್ಲಿ ವಾಸಿಸಬೇಕೆಂದು ಎಂದಿನಿಂದ ಬಯಸಿದನೋ ಅಂದಿನಿಂದ ತನಗಾಗಿ ಮನೆಯನ್ನು ಕಟ್ಟಿಕೊಳ್ಳಲು ಪ್ರಾರಂಭಿಸಿದ. ಇದು ವಾಸ್ತುಶಿಲ್ಪದ ಪ್ರಥಮ ಹೆಜ್ಜೆಯಾಯಿತು. ಸುತ್ತಲಿರುವ ಪ್ರಕೃತಿಯ ಬಗ್ಗೆ ಮಾನವನಿಗೆ ಭಯ, ಗೌರವ, ಭಕ್ತಿಗಳು ಮೂಡಿದವು. ಈ ದೃಷ್ಟಿಯಿಂದ ಪ್ರಕೃತಿಯ ಎಲ್ಲಾ ವಸ್ತುಗಳು ಪೂಜಾರ್ಹವಾದವು. ಈ ಕಾರಣದಿಂದಲೇ ಗಿಡ, ಮರ, ನದಿ, ಇತ್ಯಾದಿಗಳು ಅವನಿಗೆ ಪೂಜ್ಯನೀಯ ಸ್ಥಾನಗಳೂ ಆದವು. ಇನ್ನು ಮುಂದುವರೆದು ಈ ಎಲ್ಲಾ ಸೃಷ್ಟಿಯ ಹಿನ್ನೆಲೆಯಾಗಿ ನಿಂತು ತನ್ನನ್ನು ನಡೆಸುತ್ತಿರುವ ಯಾವುದೋ ಒಂದು ಅನಂತಶಕ್ತಿ ಇದೆ ಎಂಬ ಅರಿವು ಉಂಟಾದಾಗ, ಆ ಶಕ್ತಿಗೆ ಒಂದು ರೂಪ ಕೊಡಲು ಯತ್ನಿಸಿದ. ಹೀಗೆ ನೀಡಿದ ಒಂದು ರೂಪಕ್ಕೆ ಅಥವಾ ಸಂಕೇತಕ್ಕೆ ರಕ್ಷಣಾರ್ಥವಾಗಿ ಪ್ರತ್ಯೇಕ ಆಲಯವನ್ನು ಕಟ್ಟಲು ಆರಂಭಿಸಿದ. ಇದು ದೇವಾಲಯ ರಚನೆಗೆ ನಾಂದಿಯಾಯಿತು.

ತನಗಾಗಿ ಕಟ್ಟಿಕೊಂಡ ಮನೆ 'ಗೃಹ ವಾಸ್ತುಶಿಲ್ಪ' ಎನಿಸಿದರೆ, ತನ್ನ ದೇವರಿಗಾಗಿ ಕಟ್ಟಿದ್ದು ಧಾರ್ಮಿಕ ವಾಸ್ತುಶಿಲ್ಪ ಅಥವಾ ದೇವಾಲಯ ವಾಸ್ತುಶಿಲ್ಪ ಎನಿಸಿತು. ಅಲ್ಲದೆ ಗೃಹ ವಾಸ್ತುವಿನ ರಚನೆಯು ದೇವಾಲಯ ವಾಸ್ತುಶಿಲ್ಪ ರಚನೆಯ ಮೇಲೆ ಪ್ರಭಾವ ಬೀರುತ್ತಾ ಹೋಯಿತು.

ನೈಸರ್ಗಿಕ ಗುಹೆಗಳನ್ನೇ ಈ ಉದ್ದೇಶಕ್ಕಾಗಿ ಬಳಸಿಕೊಂಡರೂ, ನಂತರ ಅದಕ್ಕಾಗಿಯೇ ಮುಂಭಾಗದಲ್ಲಿ ನೆರೆದ ಜನರಿಗೆ ಕಾಣುವಂತೆ ವೇದಿಕೆಯನ್ನೋ, ಕ್ರಮೇಣ ರಕ್ಷಣೆಗೋಸ್ಕರ ಆಲಯವನ್ನು ಕಟ್ಟುವ ಪರಿಪಾಟ ಆರಂಭವಾಯಿತು. ಮೊದಲಿಗೆ ಮೂರ್ತಿ(ಪ್ರತಿಮೆ)ಯನ್ನು ಇಡಲು ಒಂದು ಸಣ್ಣ ಮಂಟಪವಷ್ಟೇ ಇದ್ದು, ಇದು ದೇವಾಲಯದ ಸೀಮಿತ ಉದ್ದೇಶವನ್ನು ಪೂರೈಸುತ್ತಿದ್ದಿತು. ಕಾಲ ಕಳೆದಂತೆ ಪೂಜಾವಿಧಿಗಳು ನಿರ್ದಿಷ್ಟಗೊಂಡು ಆಚರಣೆಗಳು ಹೆಚ್ಚಿದಂತೆ ಅದಕ್ಕೆ ತಕ್ಕಂತೆ ದೇವಾಲಯವೂ ವಿಸ್ತೃತಗೊಳ್ಳಲಾರಂಭಿಸಿತು. ಅವನ ಸುಸಂಸ್ಕೃತ ವಿಚಾರಗಳು ಬೆಳೆದಂತೆಲ್ಲ ದೇವಾಲಯವೂ ಬೆಳವಣಿಗೆಯನ್ನು ಪಡೆಯಿತಲ್ಲದೆ, ಅದು ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿತು. ಅವು ಸಾರ್ವಜನಿಕ ಪೂಜಾ ಮಂದಿರಗಳಾಗುವುದರೊಂದಿಗೆ ಸಮಾಜದ ವಿವಿಧ ಕ್ಷೇತ್ರಗಳಲ್ಲೂ ಮಹತ್ತರ ಪಾತ್ರ ವಹಿಸಿದವು. ಹಾಗೆ ಪ್ರಮುಖ ವಿದ್ಯಾಕೇಂದ್ರಗಳಾಗಿ ಮೆರೆಯುವುದರೊಂದಿಗೆ ಸಂಗೀತ, ನೃತ್ಯ ಮುಂತಾದ ಕಲೆಗಳಿಗೂ ಆಸರೆಯಾದವು. ಹೀಗೆ ಸಮಾಜದ ವಿವಿಧ ಉದ್ದೇಶಗಳಿಗೆ ನೆರವಾಗಿ ನಿಂತು ಒಂದಲ್ಲಾ ಒಂದು ರೀತಿಯಲ್ಲಿ ಸಮಾಜದ ಕೇಂದ್ರ ಸ್ಥಾನವೆನಿಸಿವೆ. ಅಂತೆಯೇ ದೇವಾಲಯ ನಿರ್ಮಾಣವು ಇಡೀ ಸಮಾಜದ ಧಾರ್ಮಿಕ ಶ್ರದ್ಧೆಯ ಭಕ್ತಿ ಪ್ರತೀಕವೆನಿಸಿತು. ಆಯಾಯ ಧಾರ್ಮಿಕ ಮತಗಳಿಗೆ ಅನುಗುಣವಾಗಿ ಈ ಪೂಜಾಸ್ಥಾನಗಳು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತವೆ. ಅಂದರೆ ಹಿಂದೂಗಳು ದೇವಾಲಯ ಎಂದು ಕರೆದರೆ ಜೈನರು ಬಸದಿ ಎಂದೂ ಬೌದ್ಧರು ಚೈತ್ಯವೆಂದೂ, ಕ್ರೈಸ್ತರು ಚರ್ಚ್‌ಗಳೆಂದು ಕರೆದರು.

## ೪.೧. ದೇವಾಲಯಗಳು

## ಜಗಲೂರು ಪಾಪನಾಯಕನ ದೇವಾಲಯ

ಚಳ್ಳಕೆರೆ ಪಟ್ಟಣದ ಪಶ್ಚಿಮ ದಿಕ್ಕಿನಲ್ಲಿ ೩ ಕಿ.ಮೀ. ದೂರದಲ್ಲಿ ಜಗಳೂರು ಪಾಪಯ್ಯನ (ಜಗಳೂರಜ್ಜ) ದೇವಾಲಯವಿದೆ. ಈ ದೇವಾಲಯವು ನೂತನವಾಗಿ ನಿರ್ಮಾಣ ಗೊಂಡಿದ್ದರೂ ಸಹ ಇದರ ಹಿನ್ನೆಲೆ ೫೦೦ ವರ್ಷಗಳ ಹಿಂದಿನ ಮೌಖಿಕ ಇತಿಹಾಸ ಹೊಂದಿದೆ. ಇದು ಮ್ಯಾಸಬೇಡರ ಆರಾಧನಾ ದೈವವಾಗಿದ್ದು, ಸಸ್ಯಾಹಾರ ಮತ್ತು ಮಾಂಸಾಹಾರ ಎಡೆ ನೀಡುವ ಪದ್ಧತಿ ಬಹಳ ವಿನೂತನ ರೀತಿಯಾಗಿದೆ. ಜಾತಿಭೇದವಿಲ್ಲದ ಜನಕ್ಕೆ ಶ್ರೀನಿವಾಸ ತಿರುಪತಿ ತಿಮ್ಮಪ್ಪನ ಭಕ್ತನನ್ನು ನೆನಪಿಸಿಕೊಳ್ಳುವಂಥ ಅನುಗ್ರಹ ದಯಪಾಲಿಸುವ ಸ್ವಾಮಿ ಎನಿಸಿಕೊಂಡಿರುವ ಕ್ಷೇತ್ರ ಇದಾಗಿದೆ.

ಮ್ಯಾಸನಾಯಕರ ಸಾಂಸ್ಕೃತಿಕ ನಾಯಕ ಜಗಳೂರಜ್ಜ ಶೈವನಾದರೂ ಆತ ತಿರುಪತಿಯ ಗೋವಿಂದನ ಜೊತೆ ನಡೆಸಿದ ಸಂವಾದದಿಂದ ಜಗಳೂರಜ್ಜ ಮತ್ತು ವೆಂಕಟೇಶ್ವರನ ವ್ಯಕ್ತಿತ್ವಗಳು ಅಭಿನ್ನವಾದವುಗಳು. ಇಲ್ಲಿನ ಸಮಾಗಮ ಆತ್ಮದ ಮಟ್ಟದಲ್ಲಿ ನಡೆಯುತ್ತದೆ. ಇದು ದೈವ

ಭಕ್ತನೆನ್ನದೆ ಒಂದು ಪ್ರಾಂಜಲ ಅಲೌಕಿಕ ನೆಲೆಯಲ್ಲಿ ಎರಡು ಚೈತನ್ಯಗಳು ಭಿನ್ನತೆಯನ್ನು ನಿರಾಕರಿಸುವ ಸ್ಥಿತಿ. ಇದು ವೈದಿಕ ಅದ್ವೈತವಾದಕ್ಕೆ ವ್ಯತಿರಿಕ್ತವಾದದ್ದು. ವೈದಿಕ ಅದ್ವೈತವಾದವು ಈ ಎರಡೂ ನೆಲೆಗಳನ್ನು ಬೆಸೆದಂತೆ ಮಾಡಿ ದೂರ ಸರಿಸಿದರೆ ಶೂದ್ರ ಅದ್ವೈತವಾದವು ಆರಂಭದಲ್ಲಿ ಎರಡೂ ನೆಲೆಗಳನ್ನು ಭಿನ್ನತೆಯ ಮಟ್ಟದಲ್ಲಿ ತೂಗಿ ನಂತರ ಅವನ್ನು ಅಭಿನ್ನವಾಗಿಸುತ್ತದೆ. ಸೈದ್ಧಾಂತಿಕವಾಗಿಯೂ ಈ ಎರಡು ಅದ್ವೈತವಾದಗಳು ಭಿನ್ನವಾದವುಗಳು. ಆದ್ದರಿಂದ ಶೈವ "ಅದ್ವೈತದ ಈ ಸ್ಥಿತಿಯ ವಿಶೇಷ ಎಂದರೆ ಜ್ಞಾನ ಮತ್ತು ಭಕ್ತಿಯ ನಡುವಣ ಮಾರ್ಗಗಳನ್ನು ಒರೆಸಿ ಹಾಕುತ್ತದೆ." ಭಕ್ತಿ ಭಾವುಕ ಸ್ಥಿತಿ ತಲುಪಿ ಪ್ರಶ್ನಿಸುವ ವೈಚಾರಿಕ ಸ್ಥಿತಿಯಿಂದ ದೂರ ಸರಿದು ಢಾಂಬಿಕವಾಗುತ್ತದೆ. ಮೌಢ್ಯ ಕವಿಯುತ್ತದೆ. ಭಕ್ತಿಗೆ ಜ್ಞಾನದ, ಅನುಭಾವದ ಬೇವು ಬೆಲ್ಲವನ್ನು ಸವರಿದವರು ಈ ಶೈವಾದ್ವೈತಗಳು. ಜಗಳೂರಜ್ಜ ವೆಂಕಟೇಶ್ವರನ ಭಕ್ತನಾದರೂ ವೆಂಕಟೇಶ್ವರನ ಸ್ಥಾಪಿತ ಪರಂಪರೆಯಲ್ಲಿ ಜ್ಞಾನದ ಬೆಳಕಿನಲ್ಲಿ ಪರೀಕ್ಷೆ ಮಾಡುತ್ತಾನೆ. ವೆಂಕಟೇಶ್ವರನ ಭಕ್ತರ ಅವೈಚಾರಿಕ ಬೂಟಾಟಿಕೆಗಳು ವಿಪರೀತವಾದಾಗ ಆ ಧಾರೆಯಲ್ಲಿಯೇ ಹುಟ್ಟಿದ ಜಗಳೂರಜ್ಜನೆಂಬ ಅನುಭಾವಿ ತನ್ನ ಆಧ್ಯಾತ್ಮಿಕ ಪ್ರತಿಭೆಯಿಂದ ದಂಗೆಯೊಂದನ್ನು ಸೃಷ್ಟಿಸುತ್ತಾನೆ. ಈತನಿಗೆ ಭಕ್ತಿ ಮತ್ತು ವೈಚಾರಿಕತೆಯ ಮಧ್ಯೆ ಕಂದರಗಳಿಲ್ಲ. ಮ್ಯಾಸಬೇಡರು ಜಗಳೂರಜ್ಜ ಮತ್ತು ವೆಂಕಟೇಶ್ವರನ ಮಧ್ಯೆ ವ್ಯತ್ಯಾಸಗಳನ್ನು ಕಲ್ಪಿಸಿಕೊಳ್ಳುವುದೇ ಇಲ್ಲ. ಆದರೂ ಜಗಳೂರಜ್ಜ ಗೋವಿಂದನ ವ್ಯಕ್ತಿತ್ವಕ್ಕೆ ವ್ಯತಿರಿಕ್ತವಾಗಿ ಬದುಕಿದವನು. ನಾಗಬೆತ್ತ, ಬಲಮುರಿ ಶಂಖಧಾರಿಯಾದ ಈತ ನಮ್ಮ ನಾಥಸಿದ್ಧರನ್ನು ನೆನಪಿಸುತ್ತಾನೆ. ಈತ ತಿರುಪತಿಗೆ ಹೊರಟ ಗೋವಿಂದನ ಭಕ್ತರನ್ನು ವಿಡಂಬಿಸಿ ಅವರಿಂದ ಘಾಸಿಗೊಂಡು ಮತ್ತೆ ಪವಾಡ ಮೆರೆದವನು. ಹೀಗೆ ಬಲಿಷ್ಠ ಸಾಂಸ್ಕೃತಿಕ ಸ್ಮೃತಿಗಳಿಂದ ತಮ್ಮ ದಂಗೆಯ ದನಿಗಳನ್ನು ಹುರಿಗೊಳಿಸಿಕೊಂಡವರು ಜಗಳೂರಜ್ಜ ಎಂದು ಹೇಳಬಹುದು. ಚಳ್ಳಕೆರೆಯ ಸಮೀಪದಲ್ಲಿ ಪುಣ್ಯಕ್ಷೇತ್ರವಿದ್ದು ಪ್ರತಿನಿತ್ಯ ಪುಣ್ಯಕಾರ್ಯಗಳು ನಡೆಯುತ್ತವೆ. ಅದು ಹಿಂದೆ ಬಾಲಕನಾಗಿದ್ದಾಗ ಏಳೆಡೆ ಸರ್ಪದರ್ಶನ ಕೊಟ್ಟಸ್ಥಳ ಹುತ್ತ ಇಂದಿಗೂ ಇದೆ. ಈ ಸಮಾಧಿಗೆ ಬಂದು ಹೋಗುವ ಭಕ್ತರು ದೇವಾಲಯ ನಿರ್ಮಿಸಿದ್ದಾರೆ. ಸಮೀಪದಲ್ಲಿ ಹರಿಯುವ ಹಳ್ಳಕ್ಕೆ ಒಂದು ಕೆರೆಯನ್ನು ಕಟ್ಟಲಾಗಿದೆ. ಪ್ರತಿ ಸೋಮವಾರ ಇಲ್ಲಿ ಪರವು ಮಾಡುವುದನ್ನು ನೋಡಬಹುದು. ಹುತ್ತದ ಸಮಾಧಿಯ ಅಕ್ಕಪಕ್ಕ ಸಣ್ಣ ಪುಟ್ಟ ಕಲ್ಲುಗುಡ್ಡಗಳಿಗೆ. ಎಲ್ಲಾ ಮತದವರು ಪೂಜಿಸುತ್ತಾರೆ. ಭಕ್ತರ ಅನುಕೂಲಕ್ಕಾಗಿ ಕಲ್ಯಾಣ ಮಂಟಪ ಇತರೆ ಮಂಟಪಗಳನ್ನು ಕಟ್ಟಲಾಗಿದೆ.

### ಬೋಸೆದೇವರ ದೇವಾಲಯ ಬೋಸೆದೇವರಹಟ್ಟಿ

ಸಂಪೂರ್ಣ ಬಯಲು ಸೀಮೆಯಲ್ಲಿ ನೆಲಸಿರುವ ಬೋಸೆದೇವರ ಗುಡಿಗೆ ಮೊದಲು ಸುತ್ತ ಬೇಲಿಯಿದ್ದು ಗುಡಿಸಲಿನ ಮಧ್ಯ ಬೋಸೆದೇವರ ಪೆಟ್ಟಿಗೆಯಿದೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ಪಶುಪಾಲನೆಯ ಮೇಲೆ ಅಲೆಮಾರಿ ಸಮೂಹವಾಗಿದ್ದಾಗ ತಮ್ಮ ದೇವರನ್ನು

ಸಾಗಿಸುತ್ತಿದ್ದುದರಿಂದ ದೇವರು ಕೂಡ ಸಾಗಿಸಬಹುದಾದ ಪೆಟ್ಟಿಗೆಯಲ್ಲೇ ಇರುತ್ತಿದ್ದ, ಬೋಸೆದೇವರ ಹಟ್ಟಿಯ ಮಧ್ಯೆ ಭಾಗದಲ್ಲಿದ್ದ ಪುಟ್ಟ ಗುಡಿಸಲ ಒಳಗೆ ಒಬ್ಬರೇ ತೂರಿ ಹೋಗುವಷ್ಟು ಜಾಗವಿದ್ದು, ಒಳಗೆ ಸಾರಿಸಿದ ನೆಲದ ಅಂಕಣದಲ್ಲಿ ಒಂದು ತೇವಟಿಗೆ. ಆ ತೇವಟಿಗೆಯ ಮೇಲೆ ಒಂದು ಪೆಟ್ಟಿಗೆ, ಅದೇ ಬೋಸೆ ದೇವರು. ಪೆಟ್ಟಿಗೆಯನ್ನು ನಿತ್ಯ ತೆರೆದು ಪೂಜೆ ಮಾಡುವುದಿಲ್ಲ. ಅದರ ಒಳಗೇನಿದೆ ಎಂಬುದು ಭಕ್ತರಿಗೆ ತಿಳಿದಿರುವುದಿಲ್ಲ. ಆದರೆ ವರ್ಷಕ್ಕೊಮ್ಮೆ ದೇವತೆ ಜಲಧಿಗೆ ಹೋಗುವಾಗ ಅಲ್ಲಿ ಮರೆ ಮಾಡಿಕೊಂಡು ಪೂಜಾರಿ ಪೆಟ್ಟಿಗೆಯನ್ನು ತೆಗೆದು ಒಳಗಿರುವ ದೇವತೆಯನ್ನು ನೀರಿನಲ್ಲಿ ತೊಳೆದು ಮಡಿ ಮಾಡಿ ಮತ್ತೆ ಪೆಟ್ಟಿಗೆಯಲ್ಲಿಟ್ಟು ಮುಚ್ಚಿ ಗುಡಿಸಲಿಗೆ ತಂದರೆ ಮತ್ತೆ ಅದನ್ನು ತೆರೆಯುವುದು ಮುಂದಿನ ವರ್ಷವೇ. ಈ ಬಗೆಯ ವ್ಯವಸ್ಥೆ ಅನೇಕ ಹಟ್ಟಿಗಳಲ್ಲಿ ಇದೆ. ಬುಡಕಟ್ಟಿನವರ ನಡುವೆ ಎಂದೋ ಬದುಕಿ ಸಾಹಸ ಕಾರ್ಯ ಮಾಡಿ ಮಡಿದವನಾಗಿದ್ದರೆ ಆತನ ಆಯುಧ ಪೆಟ್ಟಿಗೆಯೊಳಗೆ ಇರಬಹುದು. ಶೈವ ಮೂಲದ ದೇವತೆಯಾದರೆ ಕರಡಿಂಗೆಯಿರಬಹುದು. ವೈಷ್ಣವ ದೇವತೆಯಾದರೆ ಪೆಟ್ಟಿಗೆಯಲ್ಲಿ ಸಾಲಿಗ್ರಾಮವಿರುತ್ತದೆ. ಬೋಸೆದೇವರ ಪೆಟ್ಟಿಗೆಯಲ್ಲಿ ಸಾಲಿಗ್ರಾಮವಿರುತ್ತದೆ. ಬೋಸೆದೇವರಹಟ್ಟಿಯ ಜನ ತಮ್ಮನ್ನೆಲ್ಲ ಈ ದೇವರ ಹೆಸರಿನಲ್ಲಿಯೇ ನಿರ್ವಚಿಸಿಕೊಳ್ಳುತ್ತಾರೆ. ಉದಾಹರಣೆಗೆ ಬೋಸಯ್ಯ, ಬೋಸನಾಯಕ, ಬೋಸಡು, ಬೋಸಮ್ಮ, ಬೋಸೆಪಾಪಮ್ಮ, ಬೋಸೆಮಲ್ಲಯ್ಯ, ಬೋಸೆಪಾಪಯ್ಯ ಮುಂತಾದ ಹೆಸರುಗಳಿಂದ ತಮ್ಮನ್ನು ನಿರ್ವಚಿಸಿಕೊಳ್ಳುತ್ತಾರೆ. ಈ ಬೋಸೆದೇವರಿಗೆ ಹೊಸದಾಗಿ ಗರ್ಭಗುಡಿ ಮತ್ತು ನವರಂಗವಿರುವ ಗುಡಿಯನ್ನು ನಿರ್ಮಿಸಲಾಗಿದೆ. ಗುಡಿಗೆ ಹೊಸ ಗುಡಿ ನಿರ್ಮಾಣ ಮಾಡಿದ್ದಾರೆ. ಗರ್ಭಗುಡಿ ಮತ್ತು ನವರಂಗ ಮಾತ್ರ ಕಟ್ಟಿದ್ದಾರೆ.

ಉತ್ತರಾಭಿಮುಖವಾಗಿರುವ ಈ ದೇವಾಲಯವನ್ನು ಚಚ್ಚೌಕಕಾರದ ಗರ್ಭಗೃಹದ ಪೀಠದ ಮೇಲೆ ಬೋಸೆದೇವರ ಸಾಲಿಗ್ರಾಮ ಪ್ರತಿಷ್ಠಾಪಿಸಲಾಗಿದೆ. ದ್ವಾರಬಾಗಿಲ ಲಲಾಟದಲ್ಲಿ ಗಣಪನ ಶಿಲ್ಪವಿದ್ದು, ದ್ವಾರವು ವ್ಯಾಳಿ ಶಾಖೆಯಿಂದ ಕೂಡಿದೆ. ದ್ವಾರದಲ್ಲಿ ಶೈವದ್ವಾರಪಾಕರಿದ್ದು, ಕೈಗಳಲ್ಲಿ ಕ್ರಮವಾಗಿ ಅಭಯ, ಡಮರು, ತ್ರಿಶೂಲ ಗದಗಳನ್ನು ಹಿಡಿದಿರುವರು. ತಲೆಯಲ್ಲಿ ಕಿರೀಟವಿದ್ದು, ಕಿವಿಯ್ಯಾಲೆ, ಕಂಠಹಾರ, ತೋಳುಬಂದಿ ಕಾಲ್ಕಡಗ ಧರಿಸುವರು. ಶಿಲ್ಪವೂ ಕಟೀವಸ್ತ್ರಧಾರಿಯಾಗಿದೆ. ಸಭಾಮಂಟಪ ಹೊಂದಿದ್ದು, ನಾಲ್ಕು ಸರಳ ಕಂಬಗಳಲ್ಲಿ ವಿವಿಧ ಶಿಲ್ಪಗಳನ್ನು ಕಂಡಿರಿಸಲಾಗಿದೆ. ಹೊರಭಾಗದಲ್ಲಿ ದೇವಕೋಷ್ಠಕದಲ್ಲಿ ಗಣಪನ ವಿಗ್ರಹವಿದ್ದು, ಕೈಗಳಲ್ಲಿ ಕ್ರಮವಾಗಿ ಅಭಯ, ಶಂಖ, ಹಾವು ಫಲವನ್ನು ಹಿಡಿದಿರುವನು. ಗಣಪತಿಯ ಕೆಳಗಡೆ ಸುಖಾಸನದಲ್ಲಿ ವಿಷ್ಣು ಸರ್ಪದ ಮೇಲೆ ಮಲಗಿರುವನು. ಬಲಭಾಗದಕ್ಕೆ ಅಂಜನೇಯ ಮೂರ್ತಿಯ ಶಿಲ್ಪವಿದೆ. ಎಡಭಾಗಕ್ಕೆ ಗರುಡವಿದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಚಿಕ್ಕ ಶಿಖರವಿದೆ. ಒಟ್ಟಾರೆ ದೇವಾಲಯವು ಇತ್ತೀಚೆಗೆ ನಿರ್ಮಾಣ ಮಾಡಿದ್ದು, ಆಧುನಿಕ ಶೈಲಿಯಲ್ಲಿದೆ.

**ಕೊಲ್ಲಾರಮ್ಮ ದೇವಾಲಯ ಬೋಸದೇವರಹಟ್ಟಿ**

ದೇವಾಲಯವು ಪೂರ್ವಾಭಿಮುಖವಾಗಿದ್ದು, ಚಚ್ಚೌಕಕಾರ ಗರ್ಭಗೃಹವಿದೆ. ಗರ್ಭ ಗುಡಿಯಲ್ಲಿ ಉಯ್ಯಾಲೆ ಮೇಲೆ ಕೊಲ್ಲಾರಮ್ಮ ಮೂರ್ತಿಯನ್ನು ಪ್ರತಿಷ್ಠಾಸಲಾಗಿದೆ. ಸರಳ ರೀತಿಯಲ್ಲಿ ದ್ವಾರಬಾಗಿಲಿದ್ದು, ತೆರೆದ ಸಭಾಮಂಟಪವಿದೆ. ಸಭಾಮಂಟಪದ ಮುಂದೆ ನಾಲ್ಕು ಸರಳ ರೀತಿಯ ಕಂಬಗಳಿವೆ. ದೇವಾಲಯದ ಹೊರಭಾಗದಲ್ಲಿ ದೇವಕೋಷ್ಠಕವಿದ್ದು, ದೇವಿ ಮೂರ್ತಿರ್ಯನ್ನು ಪ್ರತಿಷ್ಠಾಪಿಸಲಾಗಿದೆ. ಎಡ ಮತ್ತು ಬಲಭಾಗದಲ್ಲಿ ಕ್ರಮವಾಗಿ ಅಭಯ, ತ್ರಿಶೂಲ, ಡಮರು ಫಲಗಳನ್ನು ಹಿಡಿದಿದೆ. ಸಿಂಹದ ಮೇಲೆ ಕುಳಿತಿರುವ ಮೂರ್ತಿಗಳನ್ನು ಇಡಲಾಗಿದೆ. ಒಟ್ಟಾರೆ ದೇವಾಲಯವನ್ನು ಇತ್ತೀಚೆಗೆ ನಿರ್ಮಾಣ ಮಾಡಿದ್ದು, ಸಿಮೆಂಟ್ ಮತ್ತು ಇಟ್ಟಿಗೆಗಳಿಂದ ಕಟ್ಟಲಾಗಿದೆ. ಈ ರೀತಿಯ ದೇವಾಲಯಗಳು ಹಟ್ಟಿಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಕೊಲ್ಲಾರಮ್ಮನ ಮೂರ್ತಿಯನ್ನು ಬೆಳ್ಳಿಯಿಂದ ಕೂಡಿದ ಕಿರೀಟ ಹೊಂದಿದ್ದು, ಕಿರೀಟದ ಮೇಲೆ ಸರ್ಪ, ಅದರ ಮೇಲೆ ದೇವಿಯ ಮುಖವಾಡವನ್ನು ಹೊಂದಿರುವುದು ಕೊಲ್ಲಾರಮ್ಮನ ಕೊರಳಿಗೆ ಮಾಂಗಲ್ಯವನ್ನು ಹಾಕಿದ್ದು ಮೂರ್ತಿ ಸುತ್ತಲೂ ವಿವಿಧ ಚಿಕ್ಕ ಮೂರ್ತಿಗಳನ್ನು ಇಡಲಾಗಿದೆ. ಬೋಸೆದೇವರಹಟ್ಟಿಯಲ್ಲಿ ಅಂಜನೆಯ ಮೂರ್ತಿ ಇದೆ. ಇದು ಎರಡು ಅಡಿ ಎತ್ತರ ಒಂದುವರೆ ಅಡಿ ಅಗಲವಿದೆ. ಉತ್ತರಾಭಿಮುಖ ಮಾಡಿ ನಿಂತಿರುವನು. ಬೋಸೆದೇವರ ಅಸುಪಾಸಿನಲ್ಲಿ ಹಿರೆಕೆರೆಯಿದೆ. ಈ ಕೆರೆ ತುಂಬಿದಾಗ ತಪೋತ್ಸವ ನಡೆಯುತ್ತದೆ. ಕೆರೆಯ ಮಧ್ಯಭಾಗದಲ್ಲಿ ತೂಬು ಇದ್ದು ಅದಕ್ಕೆ ಮುಂಭಾಗದಲ್ಲಿ ಬಸವಣ್ಣನ ಗುಡಿಯಿದ್ದು, ಈ ದೇವರುಗಳ ಚಿತ್ರಗಳನ್ನು ಬಿಡಿಸಲಾಗಿದೆ. ಈ ಕೆರೆ ಮೀನುಗಾರಿಕೆ ಹಾಗೂ ಕೃಷಿ ಸಾಂಸ್ಕೃತಿಕವಾಗಿ ಮಹತ್ವವಾದ ಸ್ಥಾನವನ್ನು ಪಡೆದಿದೆ.

**ಗಾದರಿಪಾಲನಾಯಕ ದೇವಾಲಯ ಮೇಗಳಹಟ್ಟಿ**

ಪೂರ್ವಾಭಿಮುಖವಾಗಿರುವ ಗಾದರಿ ಪಾಲನಾಯಕ ದೇವಾಲಯವು ಚೌಚ್ಚೌಕಾಕಾರದ ಗರ್ಭಗೃಹ ತೆರೆದ ಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿ ಕಪ್ಪುಶಿಲೆಯ ಗಾದರಿಪಾಲ ನಾಯಕನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮೂರ್ತಿಯ ಕೈಯಲ್ಲಿ ಬಿಲ್ಲು ಮತ್ತು ಬಾಣವನ್ನು ಹಿಡಿದೆ. ತಲೆಯಲ್ಲಿ ಪೇಟ ಬೆನ್ನ ಹಿಂದೆ ಭತ್ತಲಿಕೆ ಹೊಂದಿದೆ. ಸುತ್ತಲೂ ಅಲಂಕಾರಯುತವಾದ ಪ್ರಭಾವಳಿಯಿದೆ. ಸ್ಥಾನಿಕ ಭಂಗಿಯಲ್ಲಿರುವ ಶಿಲ್ಪವು ಸ್ಥಳೀಯ ನಾಯಕನಾದ ಗಾದರಿಪಾಲನಾಯಕನಾಗಿದೆ. ಅಂತರಾಳದಲ್ಲಿ ನಾಲ್ಕು ಚೌಕಾಕಾರದ ಕಂಬಗಳಿದ್ದು, ಸರಳವಾಗಿದೆ. ತೆರೆದ ಮಂಟಪವನ್ನು ಹೊಂದಿದೆ. ಗರ್ಭಗೃಹದ ಶಿಖರವು ದ್ರಾವಿಡ ಶೈಲಿಯನ್ನು ಹೊಂದಿದ್ದು, ದೇವಾಲಯದ ಸುತ್ತಲೂ ದೇವಕೋಷ್ಠಕಗಳಿದ್ದು, ದೇವಕೋಷ್ಠಕಗಳಲ್ಲಿ ವಿವಿಧ ಮೂರ್ತಿಗಳಿವೆ. ದೇವಾಲಯದ ಮುಂದೆ ಗಾದರಿಪಾಲನಾಯಕನು ಕಟ್ಟೆಯ ಮೇಲೆ ಕುಳಿತಿದ್ದು, ಹಿಂದೆ ಮರದ

ಅಲಂಕಾರಣೆಯನ್ನು ಮಾಡಲಾಗಿದೆ. ಇದು ಸಹ ಪಶುಪಾಲನೆಯನ್ನು ಸಂಕೇತಿಸುತ್ತದೆ. ಒಟ್ಟಾರೆ ಇದರ ಲಕ್ಷಣಗಳನ್ನು ಗಮನಿಸಿದರೆ ಈ ಭಾಗದಲ್ಲಿ ಪಶುಪಾಲನಾ ವೃತ್ತಿ ಪ್ರಮುಖ ವಾಗಿದ್ದು, ಅದನ್ನು ದೇವಾಲಯದ ಶಿಲ್ಪಗಳ ಮುಖಾಂತರ ಬಿತ್ತರಿಸಲಾಗಿದೆ. ಈ ಹಟ್ಟಿಯಲ್ಲಿ ಊರಮಾರಮ್ಮ ಹಾಗೂ ಗೌರಸಂದ್ರ ಮಾರಮ್ಮನಗುಡಿಗಳು ಹಾಗೂ ನಾಗರಶಿಲ್ಪಗಳು ಮತ್ತು ಶಿವಲಿಂಗವಿದೆ.

**ಚಿನ್ನಕುಂತಿ ಓಬಳೇಶ್ವರ ದೇವಾಲಯ ಕೆಳಗಳಹಟ್ಟಿ**

ಪೂರ್ವಾಭಿಮುಖವಾಗಿ ದೇವಾಲಯ ಜಗತಿಯ ಮೇಲೆ ದೇವಾಲಯ ಬುಡಕಟ್ಟು ದೈವಗಳಿಗೆ ಸಂಬಂಧಿಸಿದ ಬಿಲ್ಲಿನಕಾರಥ ಮೂರ್ತಿಯಿದೆ. ಗರ್ಭಗುಡಿಯ ಮೇಲೆ ಶಿಖರವಿದೆ. ಈ ದೇವಾಲಯದ ಸುತ್ತಲೂ ಕಮಲದಲ್ಲಿ ಶಿವ, ಕಾಳಿ, ಮಾರಮ್ಮನ ಚಿತ್ರದ ಶಿಲ್ಪಗಳಿವೆ. ಶಿಖರವೂ ಸರಳ ಶೈಲಿಯಲ್ಲಿದೆ.

**ಮಾರಮ್ಮ ದೇವಾಲಯ ಕೆಳಗಳಹಟ್ಟಿ**

ಪೂರ್ವಾಭಿಮುಖವಾಗಿರುವ ದೇವಾಲಯವು ಸರಳ ಗರ್ಭಗುಡಿ ಅದರಲ್ಲಿ ಮಾರಮ್ಮನ ಮೂರ್ತಿಯಿದೆ. ಗುಡಿಯ ಮೇಲೆ ದ್ರಾವಿಡ ಶೈಲಿಯ ಶಿಖರವಿದ್ದು ಶಾಲಾಶೈಲಿಯಲ್ಲಿದೆ. ದೇವಕೋಷ್ಠಕದಲ್ಲಿ ಸಿಂಹದ ಮೇಲೆ ಕಾಳಿಶಿಲ್ಪ ಕುಳಿತಿದೆ. ದ್ವಾರಬಾಗಿಲು ಸರಳವಾಗಿದ್ದು, ಎರಡು ಕಡೆ ಹೂಕುಂಡಗಳ ಚಿತ್ರವಿದೆ. ಲಲಾಟದಲ್ಲಿ ಐದು ದೇವರುಗಳು ಕ್ರಮವಾಗಿ ಕಾಳಿ, ಲಕ್ಷ್ಮೀ, ಸರಸ್ವತಿ, ಅದರ ಅಸುಪಾಸಿನಲ್ಲಿ ಬೇವಿನಮರದ ಕೆಳಗೆ ಮಣ್ಣಿನ ಮಾರಮ್ಮನ ಮೂರ್ತಿಯಿದೆ ಹಾಗೂ ಶ್ರೀಮಹಾಭಜನೆ ಮಂದಿರವಿದೆ. ಇದರ ಮುಂಭಾಗದಲ್ಲಿ ನಾಗರಶಿಲ್ಪಗಳಿವೆ.

**ಊರಮಾರಮ್ಮ ದೇವಾಲಯ ಕೆಳಗಳಹಟ್ಟಿ**

ಈ ದೇವಾಲಯ ಪೂರ್ವಾಭಿಮುಖವಾಗಿದ್ದು, ಗರ್ಭಗುಡಿಯಲ್ಲಿ ಮಾರಮ್ಮನ ಶಕ್ತಿದೇವತೆಯ ಮೂರ್ತಿಯಿದೆ. ದ್ರಾವಿಡ ಶೈಲಿಯ ಕಂಬ ಮಾದರಿಯ ಶಿಖರವನ್ನು ಹೊಂದಿದೆ. ಶಿಖರದ ಸುತ್ತಲೂ ಯಾವುದೇ ಅಲಂಕರಣೆ ಇಲ್ಲ. ದ್ವಾರಬಾಗಿಲಿನಲ್ಲಿ ಹೂಗಳ ಚಿತ್ರವಿದ್ದು, ಲಲಾಟದಲ್ಲಿ ಕಮಲ, ಸೂರ್ಯ, ಚಂದ್ರರನ್ನು ಖಂಡಿರಿಸಲಾಗಿದೆ. ಐದು ಶಿಲ್ಪಗಳಿವೆ.

**ಮಂಜುನಾಥ ದೇವಾಲಯ ಕೊಮ್ಮನಪಟ್ಟಿ**

ಪೂರ್ವಾಭಿಮುಖವಾಗಿರುವ ದೇವಾಲಯವು ಚೌಕಾಕಾರದ ಗರ್ಭಗೃಹವಿದ್ದು, ಗರ್ಭಗುಡಿಯಲ್ಲಿ ಶಿವಲಿಂಗದ ಮೇಲೆ ನಾಗರಶಿಲ್ಪವಿದೆ. ಗರ್ಭಗುಡಿ ಸುತ್ತಲೂ ಪ್ರದಕ್ಷಣ ಪಥವಿದೆ. ಶಿವಲಿಂಗದ ಮುಂದೆ ನಂದಿ ಶಿಲ್ಪವನ್ನು ಇಡಲಾಗಿದೆ. ಲಲಾಟದಲ್ಲಿ ಸೂರ್ಯ ಚಂದ್ರ ಹಾಗೂ ದ್ವಾರ ಬಾಗಿಲಲ್ಲಿ ವ್ಯಾಳಿ ಶಾಖೆಯನ್ನು ಹೊಂದಿದೆ. ಗರ್ಭಗುಡಿಯ ಎರಡು ಬದಿಗಳಲ್ಲಿ ಗಣೇಶ ಭೈರವನ ಶಿಲ್ಪಗಳಿವೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಶಿಖರವನ್ನು

ಹೊಂದಿದೆ. ದೇವಾಲಯದ ಸುತ್ತಲೂ ದೇವಕೋಷ್ಠಕಗಳಿದ್ದು, ದೇವರುಗಳ ಹಾಗೂ ನಂದಿ ಶಿಲ್ಪಗಳನ್ನು ಕಂಡಿರಿಸಲಾಗಿದೆ. ದೇವಾಲಯದ ಮೇಲೆ ಕುಳಿತ ಭಂಗಿಯಲ್ಲಿರುವ ಈಶ್ವರನ ಮಣ್ಣಿನ ಮೂರ್ತಿ ಇದೆ. ಈ ದೇವಾಲಯಕ್ಕೆ ಸುತ್ತಲೂ ಪೌಳಿ ಇದ್ದು, ಅವರಣದಲ್ಲಿ ತುಳಸಿಗಿಡ ಆನೆಯ ಚಿತ್ರಗಳನ್ನು ಬಿಡಿಸಲಾಗಿದೆ. ಇದು ಇತ್ತೀಚೆಗೆ ನಿರ್ಮಾಣವಾದ ದೇವಾಲಯವಾಗಿದೆ.

**ಕೊಲ್ಲಾರಮ್ಮ ದೇವಾಲಯ ಕೊಮ್ಮನಪಟ್ಟಿ**

ಪೂರ್ವಾಭಿಮುಖವಾಗಿರುವ ಈ ದೇವಾಲಯವು ಜಾಗತಿಯ ಮೇಲೆ ನಿರ್ಮಾಣವಾಗಿದೆ. ಗರ್ಭಗುಡಿಯ ಪೀಠದಲ್ಲಿ ಸಿಂಹದ ಮೇಲೆ ಕುಳಿತ ಭಂಗಿಯಲ್ಲಿರುವ ಕೊಲ್ಲಾರಮ್ಮ ಮೂರ್ತಿಯಿದೆ. ಮೂರ್ತಿಯನ್ನು ಬೆಳ್ಳಿಯ ಮುಖವಾಡವನ್ನು ಧರಿಸಿದೆ. ಮೂರ್ತಿಯ ಎರಡು ಬದಿ ಎಣ್ಣೆಯ ದೀಪಸ್ತಂಭಗಳಿವೆ. ಗರ್ಭಗುಡಿಯಲ್ಲಿ ಯಾವುದೇ ಅಲಂಕಾರವಿರುವುದಿಲ್ಲ. ಗರ್ಭಗುಡಿಯಲ್ಲಿ ಕುಂಭ ಮಾದರಿಯ ಶಿಖರವಿದೆ. ಮುಂಭಾಗದಲ್ಲಿ ದೇವಕೋಷ್ಠಕದಲ್ಲಿ ಕಾಳಿಯ ಶಿಲ್ಪ ಹಿಂಭಾಗದಲ್ಲಿ ಸಿಂಹವಿದೆ. ನಾಲ್ಕು ದಿಕ್ಕುಗಳಲ್ಲಿ ಸಿಂಹ ಕುಳಿತಿರುವ ಭಂಗಿಯಲ್ಲಿ ನಿರ್ಮಾಣ ಮಾಡಲಾಗಿದೆ. ಗರ್ಭಗುಡಿಯ ಮುಂಭಾಗದಲ್ಲಿ ನವಿಲಿನ ಚಿತ್ರ ಮತ್ತು ಗಂಟೆಗಳ ಸರಗಳಿವೆ. ಮುಂಭಾಗದಲ್ಲಿ ಸರಳವಾದ ಎರಡು ಕಂಬಗಳಿವೆ.

**ಶಿವದೇವಾಲಯ ಬಂಡೆಹಟ್ಟಿ**

ಪಶ್ಚಿಮಾಭಿಮುಖವಾಗಿರುವ ಬಸವಣ್ಣನ ಗುಡಿಯ ಕಟ್ಟೆಯ ಮೇಲೆ ನಿರ್ಮಿಸಲಾಗಿದೆ. ಚೌಚಾಕಾರದ ಗರ್ಭಗುಡಿಯಲ್ಲಿ ಏಳುಹಡಿ ಸರ್ಪದ ನಾಗಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಗುಡಿಯ ಮುಂದೆ ಐದು ಅಡಿ ಎತ್ತರದ ಜೋಡು ದೀಪಸ್ತಂಭಗಳಿವೆ. ಅದರ ಮುಂದೆ ಬೃಹತ್ ಹುಣಸೆ ಮರವಿದೆ. ಈ ಮರದ ವಿಶೇಷತೆಯೆಂದರೆ ಮರದ ಬುಡದಲ್ಲಿ ಒಂದು ಕಿರುದಾದ ಕಂಡಿ ಇದೆ. ತಾವು ಮನಸ್ಸಿನಲ್ಲಿ ಅಂದುಕೊಂಡಿದ್ದನ್ನು ಮನುಷ್ಯ ಕಂಡಿಯಿಂದ ತೂರಿ ಬಂದರೆ ಅದು ನೆರವೆರುತ್ತದೆ ಎಂಬುದನ್ನು ಅಲ್ಲಿನ ಜನಪದರ ನಂಬಿಕೆಯಾಗಿದೆ. ಆ ಕಂಡಿಕೆ ತೆಂಗಿನಕಾಯಿ ಹೊಡೆದು ಈ ರೀತಿಯ ಆಚರಣೆ ನಡೆಯುತ್ತದೆ. ಇದರ ಅಂಚಿನಲ್ಲಿ ಬಂಗಾರದೇವರಗುಡ್ಡ ಹಾಗೂ ಸಾಸಲಬಂಡೆಗಳಿವೆ.

**ಬೋರೆದೇವರಗುಡಿ ಬೋರೆದೇವರಹಟ್ಟಿ**

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಚೌಕಾಕಾರದ ಗರ್ಭಗೃಹವನ್ನು ಹೊಂದಿದೆ. ಗರ್ಭಗೃಹದಲ್ಲಿ ಒಡಮೂಡಿದ ಲಿಂಗವಿದೆ. ದ್ವಾರಬಂಧದಲ್ಲಿ ಗಜಲಕ್ಷ್ಮೀ ಶಿಲ್ಪವಿದ್ದು, ದ್ವಾರ ಬಾಗಿಲುಗಳು ಪಂಚಶಾಖೆಗಳಿಂದ ಕೂಡಿದೆ, ದ್ವಾರವನ್ನು ಸಂಪೂರ್ಣವಾಗಿ ಕಂಚಿನ ತಗಡಿನಿಂದ ಮುಚ್ಚಲಾಗಿದೆ. ಗರ್ಭಗೃಹದ ಮುಂದೆ ಪೀಠದ ಮೇಲೆ ಒಂದೂವರೆ ಅಡಿ ಎತ್ತರದ ನಂದಿಶಿಲ್ಪವಿದೆ. ತೆರೆದ ಮುಖಮಂಪಟವಿದ್ದು ಮೇಲೆ ಗೋಪುರವಿದೆ. ಗೋಪುರದಲ್ಲಿ

ಪಶುಪಾಲಕರ ಚಿತ್ರಗಳಿವೆ. ಇವು ಬಹುಶಃ ಯರಮಂಚನಾಯಕನ ಚಿತ್ರಗಳಿರಬಹುದು. ಇವುಗಳಲ್ಲದೆ ಈಶ್ವರ, ಗಣೇಶ, ಗರುಡ, ಆಂಜನೇಯ, ತಿಪ್ಪೇರುದ್ರಸ್ವಾಮಿ, ಚಂಚುಲಕ್ಷ್ಮೀ ದ್ವಾರಪಾಲಕರ ಶಿಲ್ಪಗಳನ್ನು ಇಡಲಾಗಿದೆ. ಗೋಪುರವು ಸುಮಾರು ಇಪ್ಪತ್ತು ಅಡಿ ಎತ್ತರವಿದ್ದು ದ್ರಾವಿಡ ಶೈಲಿಯ ಶಾಖಾ ಶಿಖರವನ್ನು ಹೊಂದಿದೆ. ಶಿಖರದ ಗೋಪುರದ ಮೇಲೆ ಐದು ಕಂಚಿನ ಕಳಶಗಳನ್ನು ಇಟ್ಟಿದ್ದಾರೆ. ಗರ್ಭಗೃಹದ ಮೇಲೆ ಕುಂಭ ಮಾದರಿಯ ಶಿಖರವಿದ್ದು ಸುಮಾರು ಮೂರು ಅಡಿ ಎತ್ತರದ ಕಂಚಿನ ಕಳಶವಿದೆ. ಕುಂಭದ ಸುತ್ತಲೂ ಬೇಡರ ಕಣ್ಣಪ್ಪ, ವಾಲ್ಮೀಕಿ, ಪಶುಪಾಲನೆಗೆ ಸಂಬಂಧಿಸಿದ ಚಿತ್ರಗಳಿವೆ. ಶಿವಲಿಂಗವನ್ನು ಕಂಡರಿಸಲಾಗಿದೆ. ಗೋಪುರ ಮಾದರಿಯು ವಿಜಯನಗರ ಕಾಲದಲ್ಲಿ ಪ್ರಾರಂಭವಾಗಿದ್ದು, ಅದೇ ಮಾದರಿಯ ಲಕ್ಷಣಗಳನ್ನು ಅನುಸರಿಸಿ ಗೋಪುರ ನಿರ್ಮಿಸಲಾಗಿದೆ. ದೇವಾಲಯದ ಗರ್ಭಗೃಹವನ್ನು ಕಲ್ಲಿನಿಂದ ನಿರ್ಮಿಸಿದ್ದು ಶಿಖರ ಮತ್ತು ಗೋಪುರವನ್ನು ಇಟ್ಟಿಗೆ ಸಿಮೆಂಟಿನಿಂದ ನಿರ್ಮಿಸಲಾಗಿದೆ. ದೇವಾಲಯದ ಲಕ್ಷಣಗಳನ್ನು ಗಮನಿಸಿದರೆ ಇತ್ತೀಚೆಗೆ ನಿರ್ಮಾಣ ಮಾಡಿರುವುದನ್ನು ಕಾಣಬಹುದು. ಈ ದೇವಾಲಯದ ಮುಂದೆ ಬೃಹತ್ತಾದ ಆಲದ ಮರವಿದ್ದು ಬುಡದಲ್ಲಿ ಶಿವಲಿಂಗವಿದೆ. ದೇವಾಲಯದ ಪಕ್ಕದಲ್ಲಿ ಸಮುದಾಯ ಭವನವಿದೆ.

ನಾಯಕನಹಟ್ಟಿಯಿಂದ ಎಂಟು ಕಿ.ಮೀ.ದೂರದಲ್ಲಿರುವ ಬೋರೆದೇವರಹಟ್ಟಿ ಗ್ರಾಮದಲ್ಲಿ ಬೋರೆದೇವರ ಗುಡಿಯಿದ್ದು, ಇದೊಂದು ಮ್ಯಾಸನಾಯಕರ ದೇವತೆಯಾಗಿದೆ. ವಿಶೇಷವಾಗಿ ಈ ಗುಡಿಯಲ್ಲಿ ಇತ್ತೀಚೆಗೆ ನಿರ್ಮಾಣಗೊಂಡ ಭೈರವದೇವರು ಬೋರೆದೇವರೆನಿಸಿ ಕೊಂಡಿದ್ದಾನೆ. ಗುಡಿಯೊಳಗೆ ಕುದುರೆಯ ಮೇಲೆ ಕೂತ ವೀರನೊಬ್ಬನ ವಿಗ್ರಹವಿದೆ. ಅದರ ಬಳಿಯೇ ಭೂಮಿಯಿಂದೆ ಹೊರ ಬಂದು ಬಂಡೆಗಲ್ಲು ಇದೆ. ಈ ಹೂತ ಬಂಡೆಗಲ್ಲನ್ನೇ ಬೋರೆ ದೇವರು ಎಂದು ಜನ ತಿಳಿದಿದ್ದಾರೆ. ಇದು ಭೂಮಿಯಿಂದಲೇ ಉದ್ಭವವಾಗಿ, ಬೆಳೆಯುತ್ತಲೇ ಇದೆಯೆಂದು ಜನಪದರು ಹೇಳುತ್ತಾರೆ. ಇದರ ಮೇಲೊಂದು ದಂತ ಕಥೆಯಿದೆ. ಆದಿಯಲ್ಲಿ ಶ್ರೀಶೈಲ ಕಡೆಯಿಂದ ಬೇಡ ನಾಯಕ ಕಂಪಳವೊಂದು ಚಿತ್ರದುರ್ಗ ಸೀಮೆಯ ಕಡೆಗೆ ಬಂದಿತು. ಹಾಗೆ ಬಂದು ಬೀಡು ಬಿಟ್ಟ ಊರು ಊಟಕುಂಟೆ, ಅರಿವಿನದಿದ್ದಿ ಗ್ರಾಮ (ಈಗ ಅವು ಬೇಚರಾಕ್ ಗ್ರಾಮಗಳು) ಅಲ್ಲಿ ಪಾಳೆಯಗಾರನಾಗಿದ್ದವನು ಕೊಡಗಲ ಬೊಮ್ಮಯ್ಯನಾಯಕ. ಇವನಿಗೆ ಯಾರೇ ಆಗಲಿ ತಲೆಗಂದಾಯ, ಗಡಿಗೆ ತುಪ್ಪ ಮೈನೆರೆತ ಹೆಣ್ಣು ತಂದುಕೊಟ್ಟು ಬದುಕಬೇಕು. ಈತನ ಅಟ್ಟಹಾಸ್ಯವು ಅತಿಯಾಗಿದ್ದಿತು. ಆದ್ದರಿಂದ ಅಲ್ಲಿ ನೆಲೆಸಿದ್ದ ಶ್ರೀಶೈಲದ ಕಡೆಯಿಂದ ಬಂದ ದೊಡ್ಡಸೂರನಾಯಕ, ಯರಮಂಚನಾಯಕ, ಪಾಲನಾಯಕ, ದೊಡ್ಡರಾಯ ನಾಯಕ ಇವರು ತಾವು ನೆಲೆಸಿದ್ದ ಜಾಗವನ್ನು ಬಿಟ್ಟು ಈ ಬೋರೆದೇವರಹಟ್ಟಿಯ ಬಯಲಲ್ಲಿ ನೆಲೆಸಿ ಮರದ ಕೆಳಗೆ ಬೀಡುಬಿಟ್ಟರು. ಹೀಗೆಯೇ ಹೆದರಿಕೊಂಡು ಎಷ್ಟು ದೂರ ಹೋಗುವುದೆಂದು, ದೇವರ ದಯೆದಿಂದ ಪಾಳೆಯಗಾರರ ದಬ್ಬಾಳಿಕೆ ಅಡಗಲಿ ಎಂದು ಮಲಗಿದರು. ಹೀಗೆಂದು

ಗುಂಪಿನ ಯಜಮಾನ ಮಲಗಿರುವ ರಾತ್ರಿಯ ಹೊತ್ತಿನಲ್ಲಿ ತಲೆಗೇನೋ ಒತ್ತಿದಂತಾಯಿತು. ಎದ್ದು ನೋಡಿದರೆ ಕಲ್ಲು. ಅದರ ಸುತ್ತ ಮಣ್ಣು ತಳ್ಳಿ ಸಮ ಮಾಡಿ ಮಲಗಿದ. ಆದರೆ ಬೆಳಗಾಗುವ ಹೊತ್ತಿಗೆ ಲಿಂಗ ಉದ್ಭವಿಸಿತ್ತು. ಈಗಲೂ ಆ ಲಿಂಗ ಬೆಳೆಯುತ್ತಲೇ ಇದೆಯೆಂದು ಎಲ್ಲರ ನಂಬಿಕೆ. ಬೋರೆದೇವರು ಆ ಸುತ್ತಿನ ಎಲ್ಲಾ ಪಶುಪಾಲಕ ಬೇಡಕಂಪಳವನ್ನು ರಕ್ಷಿಸಿದ ಎಂಬುದು ಇನ್ನೊಂದು ನಂಬಿಕೆ. ಆದರೆ ಭೂಮಿಯಿಂದ ಮೇಲೆದ್ದು ಕಾಣುವ ಬೋರೆದೇವರಿಗಿಂತ ಅದರ ಬಳಿಯಿರುವ ತುರುಗೋಳ್ ಹಿನ್ನೆಲೆಯಲ್ಲಿ ವೀರನದೇ ನೆನಪಿನ ದೇವಾಲಯ ಅದಿರಬೇಕು. ಆದರೆ ಆತನ ಕಥೆ ಮುಚ್ಚಿ ಹೋಗಿ ಉದ್ಭವಲಿಂಗದ ಕಥೆಯೇ ಪ್ರಧಾನವಾಗಿಬಿಟ್ಟಿದೆ. ನೂತನ ದೇವಾಲಯದಲ್ಲಿ ಗರ್ಭಗುಡಿ, ನವರಂಗ, ಸುತ್ತಲೂ ಪೌಳಿ, ಗೋಪುರದಲ್ಲಿ ಪಶುಪಾಲನೆ, ಸಂಬಂಧಿಸಿದ ಗೋಸಂಪತ್ತು ಚಿತ್ರಗಳನ್ನು ಕಾಣಬಹುದಾಗಿದೆ.

### ಜುಮ್ಮೋಬನಹಳ್ಳಿಮ್ಯಾಸರಹಟ್ಟಿ ಮಯಲಿಮ್ಮ ದೇವಾಲಯ

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿಗೆ ಸೇರಿದ ಹಳ್ಳಿ ಜುಮ್ಮೋಬನಹಳ್ಳಿ ಮ್ಯಾಸರಹಟ್ಟಿ ಹಳ್ಳದ ಮತ್ತೊಂದು ಬದಿಯಲ್ಲಿ ಮ್ಯಾಸನಾಯಕರಹಟ್ಟಿ ಇದೆ. ಹಳ್ಳಿ ಮತ್ತು ಹಟ್ಟಿಯಲ್ಲಿ ಮ್ಯಾಸನಾಯಕರಿದ್ದಾರೆ. ಇಲ್ಲಿ ಎರಡೂ ಕಡೆ ಮಲಿಯಮ್ಮನ ಗುಡಿ ಇದೆ. ಮೂಲತಃ ಹಟ್ಟಿಯಲ್ಲಿ ಅಂದರೆ ಹಳ್ಳದ ಸಮೀಪದಲ್ಲಿ ಮಾತ್ರ ಇತ್ತು. ಕ್ರಮೇಣ ಊರಲ್ಲಿಯೂ ಒಂದು ಗುಡಿ ಕಟ್ಟಿ ಅಲ್ಲಿಯೂ ಮಲಿಯಮ್ಮನನ್ನು ಇರಿಸಿ ಪೂಜಿಸುತ್ತಾರೆ. ಹಳ್ಳದ ಬಳಿ ತೀರಾ ಹಳೆಯ ಗಟ್ಟಿಯಾದ ಒಂದು ಮಣ್ಣಿನ ಕುಳಿತ ಭಂಗಿಯ ಸ್ತ್ರೀಯ ವಿಗ್ರಹವಿದೆ. ಅದಕ್ಕೆ ಬಿಳಿ ಸೀರೆಯನ್ನು ಉಡಿಸಿರುತ್ತಾರೆ. ಗುಡಿಯ ಎದುರುಗಡೆ ಮಾತಂಗಿಯಮ್ಮನ ಗುಡಿಯಿದೆ. ಊರೊಳಗಿರುವ ಗುಡಿಯಲ್ಲಿಯೂ ಇದೇ ಬಗೆಯ ವಿಗ್ರಹವಿದ್ದರೂ ಅದರ ಮುಖವನ್ನು ಮಾತ್ರ ಪೆಟ್ಟಿಗೆಯಲ್ಲಿಟ್ಟು ಪೂಜಿಸುತ್ತಾರೆ. ಉಳಿದ ಭಾಗಗಳನ್ನು ಬೇರ್ಪಡಿಸಿ ಮಾಡಿಗೆ ಕಟ್ಟಿರುತ್ತಾರೆ. ಜಾತ್ರೆಯ ದಿನ ಇವೆಲ್ಲವನ್ನು ಸೇರಿಸಿ ಅದಕ್ಕೊಂದು ಸ್ವರೂಪ ಕೊಡುತ್ತಾರೆ. ಮ್ಯಾಸಬೇಡರ ತಂಡ ಸೊಂಡೂರು ಕಿಂಡಿಯ ಮೂಲಕ ಇತ್ತ ಬರುವಾಗ ಮಲಿಯಮ್ಮನೇ ಮಣ್ಣಿನ ಮಾರಮ್ಮನ ಮೂರ್ತಿಯನ್ನು ಮಾಡಿ ಪೂಜಿಸಿ ಬಂದಿರುತ್ತಾರೆ. ಅದೇ ದಾರಿಯಲ್ಲಿ ನಂತರ ಸಾಗಿ ಬಂದ ಕೊರಚರು ಈ ಮೂರ್ತಿಯನ್ನು ತೆಗೆದುಕೊಂಡು ಬಂದು ಈ ಹಟ್ಟಿಯವರಿಗೆ ತಲುಪಿಸಿದರು. ಹೀಗಾಗಿ ತಮಗೆ ಮಲಿಯಮ್ಮ ಬಂದದ್ದು ಕೊರಚರ ಕಡೆಯಿಂದ ಎಂಬುದು ಹಟ್ಟಿಯವರ ನಂಬಿಕೆ.

ಮೊಳಕಾಲ್ಮುರು ತಾಲ್ಲೂಕಿನಲ್ಲಿ ತುಮಕೂರ್ಲುಹಳ್ಳಿ ಕಾಮರ್‌ನಲ್ಲಿ ಮಲಿಯಮ್ಮನ ದೇವಸ್ಥಾನ ವಿದೆ. ದೇವಸ್ಥಾನದ ಕಟ್ಟೆಯ ಮೇಲೆ ಬೃಹತ್ ಬೇವಿನ ಮರದ ಬುಡದಲ್ಲಿ ದೇವಿಯ ಮಣ್ಣಿನ ಮೂರ್ತಿ ಹಾಗೂ ತ್ರಿಶೂಲವಿದೆ. ಪಕ್ಕದಲ್ಲಿ ಪಾಕಶಾಲೆ ನೀರಿನ ವ್ಯವಸ್ಥೆಗಾಗಿ ಟ್ಯಾಂಕ್ ಇದೆ. ಈ ದೇವಾಲಯದ ಅಸುಪಾಸಿನಲ್ಲಿ ಗಾಡಿಪಾಲಯ್ಯನಹಟ್ಟಿ ಇದೆ.

## ಒಳಮಠ ನಾಯಕನಹಟ್ಟಿ

ನಾಯಕನಹಟ್ಟಿ ಶ್ರೀ ತಿಪ್ಪೇರುದ್ರ ಸ್ವಾಮಿಯ ದೇವಾಲಯವು ಭವ್ಯವಾಗಿದೆ. ಸುಮಾರು ೬೫ ಅಡಿ ಎತ್ತರದ ರಾಜಗೋಪುರ ೭೦ ಅಡಿ ಅಗಲ ಹಾಗೂ ವಿಸ್ತಾರವಾದ ಪ್ರಾಕಾರ ನವರಂಗ, ಗರ್ಭಗುಡಿ ಹೊಂದಿರುವ ಈ ದೇವಾಲಯವೂ ಭಕ್ತರಿಗೆ ಕೈಲಾಸ ಸದೃಶವಾಗುತ್ತದೆ. ದಿವ್ಯವೂ, ಭವ್ಯವೂ ಆಗಿದೆ. ಇದು ಪ್ರಾಕಾರದ ಗೋಡೆ ೨೦ ಅಡಿ ಎತ್ತರವಿದೆ. ಇವುಗಳ ಮೇಲೆ ರಾಮಾಯಣ, ಮಹಾಭಾರತ ಕಥೆಗಳ ಶಿಲ್ಪ, ಚಿತ್ರಕಲೆಯನ್ನು ಕೆತ್ತಲಾಗಿದೆ. ರಾಜ ಗೋಪುರವು ವಿವಿಧ ಪುತ್ತಳಿಗಳನ್ನೊಳಗೊಂಡು ಕಲಾತ್ಮಕವಾಗಿದೆ. ಗರ್ಭಗುಡಿಯ ಚಿಕ್ಕ ಗೋಪುರವು ೩೫ ಅಡಿ ಎತ್ತರ ೪೫ ಅಡಿ ಅಗಲವಿದೆ. ರಾಜಗೋಪುರವನ್ನು ದಾಟಿ ಮುಂದೆ ಹೋದರೆ ನವರಂಗದ ವಿಶಾಲ ಮಂಟಪ, ಅನಂತರ ಕಪ್ಪು ಶಿಲೆಯ ೪ ಕೆತ್ತನೆಯ ಕಂಬಗಳ ಮೇಲೆ ಭುವನೇಶ್ವರಿ ಕಮಲ ಶಿಲ್ಪ ನಯನ ಮನೋಹರ. ಇದರಲ್ಲಿ ಗಿರಿಜಾ ಕಲ್ಯಾಣ ತ್ರಿಪುರ ಸಂಹಾರ ಶಿಲ್ಪಗಳನ್ನು ಕೆತ್ತಲಾಗಿದೆ. ಸುಮಾರು ೩೫೦ ವರ್ಷಗಳ ಹಿಂದೆ ಈ ದೇವಾಲಯಕ್ಕೆ ಅರ್ಧ ಹರಿದಾರಿ ದೂರದಲ್ಲಿದ್ದ ಕೆಮ್ಮಣ್ಣು ದಿಬ್ಬದಲ್ಲಿ ಭೂಗರ್ಭದಲ್ಲಿತ್ತೆಂದೂ, ಶ್ರೀಸ್ವಾಮಿಯ ಸ್ವಪ್ನಾದೇಶದಂತೆ ಇದನ್ನು ಇಲ್ಲಿ ತಂದು ಸ್ಥಾಪಿಸಿದ್ದಾರೆಂದು ಪ್ರತೀತಿ.

ಒಳಮಠ, ಇದು ಮೂಲ ಗದ್ದುಗೆ. ಪ್ರತಿಯೊಂದು ವಿಶೇಷ ಕಾರ್ಯಕ್ರಮಗಳು ಈ ದರ್ಬಾರು ಮಠದಿಂದ ಆರಂಭವಾಗುತ್ತದೆ. ಒಳಮಠದಲ್ಲಿ ವಿಶೇಷ ಮಂಟಪವಿದೆ. ಅದು 'ಭುವನೇಶ್ವರಿಕಮಲ' ಎಂದು ಹೆಸರು. ಒಂದೊಂದು ಶತಮಾನಕ್ಕೆ ಒಬ್ಬೊಬ್ಬರು ಜೀರ್ಣೋದ್ಧಾರ ಮಾಡುವ ಕಾಲಕ್ಕೆ ಒಂದೊಂದು ಶತಮಾನದವರು ವಿಶೇಷವಾಗಿ ಕಟ್ಟಿಸಬೇಕು ಎಂದು ಯೋಜನೆ. ಒಳ್ಳೆಯ ಕಲ್ಲಿಗೆ ತುಂಬಾ ಬೇಡಿಕೆ. ಎಷ್ಟು ದುಡ್ಡು ಕೊಟ್ಟರೂ ಸಿಗುವುದಿಲ್ಲ. ಹೀಗಿರುವ ಸಂದರ್ಭದಲ್ಲಿ ಕೆಲಸವನ್ನು ಹಾಗೆ ಅರ್ಧಕ್ಕೆ ನಿಲ್ಲಿಸಿದಾಗ ರಾತ್ರಿ ವೇಳೆಯಲ್ಲಿ ಸ್ವಾಮೀಜಿಯವರು ಕೆಮ್ಮಣ್ಣಿನ ದಿಬ್ಬದಲ್ಲಿ ಕರಿಕಲ್ಲಿನ ಮಂಟಪವಿದೆ ಎಂದು ಹೇಳಿದರು. ಅದನ್ನು ಹಾಗೆಯೇ ಯಥಾವತ್ತಾಗಿ ತಂದು ಪ್ರತಿಷ್ಠಾಪನೆ ಮಾಡಿರುವುದು ಇಲ್ಲಿನ ಇನ್ನೊಂದು ವಿಶೇಷ. ಇದರ ಒಳಗಡೆ ೪ ಅಡಿಯ ಗೊಂಚಲಿರುವ ಕಮಲದ ಭುವನೇಶ್ವರಿಯಿದೆ.

ಭಾರತದಲ್ಲಿನ ವಾಸ್ತುಶಿಲ್ಪ ತುಂಬಾ ವಿಶೇಷವಾದುದು. ಈ ತರಹದ ಚಿತ್ರ ಎಲ್ಲೂ ಸಿಗುವುದಿಲ್ಲ. ಇದನ್ನು ಬಿಟ್ಟರೆ ಇಂತಹ ಚಿತ್ರ ಸೋಮೇಶ್ವರದಲ್ಲಿದೆ. ಶಿವಪುರಾಣ ಮತ್ತು ಗಿರಿಜಾ ಪುರಾಣದಲ್ಲಿ ಎರಡು ಕಥೆಗಳಿವೆ. ಆ ಕಥೆಗಳನ್ನು ಆಧಾರವಾಗಿಟ್ಟುಕೊಂಡು ದೇವಾಲಯ ರಚನೆ ಮಾಡಿದ್ದಾರೆ. ಆ ಕಲ್ಪನೆಯ ಹಿನ್ನೆಲೆಯಲ್ಲಿ ದೇವಾನುದೇವತೆಗಳು ಇಲ್ಲಿ ನೆಲೆಸಿದ್ದಾರೆ ಎಂಬುದು ಪ್ರತೀತಿ. ಆ ಹಿನ್ನೆಲೆಯಲ್ಲಿ ದೇವಾಲಯದ ಸುತ್ತ ಕೆತ್ತನೆ ಕೆಲಸ ಮಾಡಲಾಗಿದೆ. ಎಲ್ಲಾ ದೇವಾನುದೇವತೆಗಳು ನೆಲೆಸಿರುವ ಕಾರಣಕ್ಕಾಗಿ ಏನೇ ಕೆಲಸ ಕಾರ್ಯಗಳು ನಡೆದರೂ

ಈ ಮಂಟಪದ ಕೆಳಗೆ ನಡೆಯುತ್ತವೆ. ಉದ್ದೇಶ ಇಷ್ಟೇ, ಅಷ್ಟದೇವತೆಯ ಅನುಗ್ರಹವಿದೆ ಎಂಬ ಕಾರಣಕ್ಕಾಗಿ ಜಾತ್ರೆಯ ಕಾರ್ಯದಿಂದ ಹಿಡಿದು ವಾರದ ಉತ್ಸವದ ತನಕ ಎಲ್ಲವೂ ಈ ಮಂಟಪದ ಕೆಳಗೆ ನಡೆಯುತ್ತವೆ. ಮೂಡಲಪಾಯ ಯಕ್ಷಗಾನದ ಸೊಗಡನ್ನು ತೇರಿನಲ್ಲಿ ಸರಳವಾಗಿ ಕೆತ್ತಲಾಗಿದೆ. ಕಾಲಕ್ರಮೇಣ ಭಕ್ತರು ಸಣ್ಣಪುಟ್ಟ ಮಂಟಪಗಳನ್ನು, ದೇವಾಲಯಗಳನ್ನು ನಿರ್ಮಿಸಿದರು. ಗರ್ಭಗುಡಿಯಲ್ಲಿ ಶಿವಲಿಂಗವಿದೆ. ಈಗ ತಿಪ್ಪೇರುದ್ರಸ್ವಾಮಿಯ ಭಾವಚಿತ್ರವನ್ನಿಟ್ಟಿದ್ದಾರೆ. ಗಾರೆಯಿಂದ ಶಿಲ್ಪಗಳನ್ನು ನಿರ್ಮಿಸಿದ್ದು, ಪುರಾಣದ ದೃಶ್ಯಗಳನ್ನು ಮನಮೋಹಕವಾಗಿ ಬಿಡಿಸಲಾಗಿದೆ.

### ಹೊರಮಠ ನಾಯಕನಹಟ್ಟಿ

ನಾಯಕನಹಟ್ಟಿ ಗ್ರಾಮದಲ್ಲಿ ಶ್ರೀ ತಿಪ್ಪೇರುದ್ರಸ್ವಾಮಿಗಳು ಜೀವಂತ ಸಮಾಧಿಯಾದ ಸ್ಥಳದಲ್ಲಿ ಒಂದು ಭವ್ಯವಾದ ದೇವಾಲಯವನ್ನು ಕಟ್ಟಲಾಗಿದೆ. ಇದನ್ನು ಹೊರಮಠವೆಂದು ಕರೆಯುವರು. ದೇವಾಲಯದ ಮಹಾದ್ವಾರದ ಗೋಪುರ ೬೫ ಅಡಿ ಎತ್ತರ, ೨೦ ಅಡಿ ಅಗಲವಿದೆ. ಗೋಪುರದಲ್ಲಿ ಕೆತ್ತನೆಗಳಿವೆ. ಒಳಾವರಣದಲ್ಲಿ ಸುಮಾರು ೩೫ ಅಡಿ ಎತ್ತರ, ೪೫ ಅಡಿ ಅಗಲವಿರುವ ಚಿಕ್ಕ ಗೋಪುರದಿಂದ ಕೂಡಿದ ಮಂದಿರವಿದೆ. ಇದರೊಳಗೆ ನಾಲ್ಕು ಕಪ್ಪುಕಂಬಗಳಿವೆ. ಭುವನೇಶ್ವರಿಯಲ್ಲಿ ಕರಿಯ ಶಿಲೆಯ ಕಮಲವಿದೆ. ಅದರಲ್ಲಿ ಗಿರಿಜಾ ಕಲ್ಯಾಣ, ತ್ರಿಪುರ ಸಂಹಾರ ಮುಂತಾದ ಶಿಲ್ಪಗಳನ್ನು ಕೆತ್ತಿದ್ದಾರೆ. ಹಿತ್ತಾಳೆಯ ಬಾಗಿಲುವಾಡ ಇದೆ. ಇದನ್ನು ದಾಟಿ ಒಳನಡೆದರೆ ತಿಪ್ಪೇರುದ್ರಸ್ವಾಮಿಗಳ ಸಮಾಧಿಯ ಗದ್ದುಗೆಯಿದೆ. ಇದರ ಮೇಲೆ ಸ್ವಾಮಿಗಳ ಬೆಳ್ಳಿಮೂರ್ತಿಯಿದೆ. ದೇವಸ್ಥಾನದ ಒಳ ಪ್ರಾಕಾರದಲ್ಲಿ ತೂಗುಮಂಚದ ಮೇಲೆ ಕೆಂಪಯ್ಯ, ಪ್ರಭುದೇವ ಮತ್ತು ಬಸವಣ್ಣನವರ ಮೂರ್ತಿಗಳಿದ್ದು ಮಧ್ಯದಲ್ಲಿ ತಿಪ್ಪೇಶ ಲಿಂಗವಿದೆ. ಎದುರಿಗೆ ಒಂದು ಚಿಕ್ಕ ಕೆರೆಯಿದೆ. ಮಠದ ಮಹಾದ್ವಾರ ಸುಮಾರು ೪೦ ಅಡಿ ಅಗಲ, ೧೬ ಅಡಿ ಎತ್ತರವಿದೆ. ಒಳಗಡೆ ಸಮಾಧಿ ಇದ್ದು, ಅದರ ಮೇಲೆ ಗುಮ್ಮಟವಿದೆ. ಗದ್ದುಗೆಯ ಮೇಲೆ ಉತ್ತರಾಭಿಮುಖವಾಗಿ ಮೂರ್ತಿಯನ್ನು ಸ್ಥಾಪಿಸಿದ್ದಾರೆ.

### ಗುಹಾಂತರ ದೇವಾಲಯ ಹೊಸಗುಡ್ಡ

ನಾಯಕನಹಟ್ಟಿಯಿಂದ ದಕ್ಷಿಣಕ್ಕೆ ಸುಮಾರು ಆರೇಳು ಕಿ.ಮೀ. ದೂರದ ಹೊಸಗುಡ್ಡ ದೊಣಮಂಡ್ಲರಹಟ್ಟಿ ಬಳಿ ಒಂದು ಗುಹಾಂತರ ದೇವಾಲಯವಿದೆ. ಇದಕ್ಕೆ ಎರಡು ಸುತ್ತಿನ ಕೋಟೆಯಿದೆ. ಒಂದೇ ಕಲ್ಲಿನಲ್ಲಿ ಈ ಗುಹಾಂತರ ದೇವಾಲಯ ನಿರ್ಮಾಣವಾಗಿದೆ. ಇಲ್ಲಿ ಶಿವಲಿಂಗವನ್ನು ಕಾಣಬಹುದು. ಬಸವಣ್ಣನ ವಿಗ್ರಹ ಅತ್ಯಂತ ಸುಂದರವಾಗಿದೆ. ವಿಗ್ರಹದ ಹಿಂದೆ ಆಲದ ಮರವಿದೆ. ಬಸವಣ್ಣನ ಪಾದದಿಂದ ಲಿಂಗಕ್ಕೆ ನೀರು ಹರಿದು ಬರುತ್ತಿತಂತೆ. ಈಗ ಅದು ಹಾಳಾಗಿದೆ. ನೀರು ಬತ್ತಿಲ್ಲ, ಅಲ್ಲಿ ವರ್ಷದಲ್ಲಿ ೩ ಬಾರಿ ವಿಶೇಷ ಪೂಜೆ ನಡೆಯುತ್ತದೆ. ಕಾರ್ತಿಕ ಮಾಸ, ಮಹಾಶಿವರಾತ್ರಿ, ಯುಗಾದಿಯ ದಿನದಂದು ವಿಶೇಷ ಪೂಜೆ ನಡೆಯುವುದನ್ನು ಕಾಣಬಹುದು.

ಗುಹಾಂತರ ದೇವಾಲಯದ ಒಟ್ಟು ಅಳತೆ ಇಪ್ಪತ್ತು ಅಡಿ ಉದ್ದ, ಹದಿನೈದು ಅಡಿ ಅಗಲವಿದೆ. ಇದರ ಒಳಭಾಗದಲ್ಲಿ ಬಣ್ಣದ ಚಿತ್ರ ರಚನೆಗೆ ಹೆಚ್ಚು ಅವಕಾಶವಿದೆ. ದೇವಾಲಯದ ಮುಂಭಾಗಕ್ಕೆ ನಾಲ್ಕು ಕಂಬ, ಒಳಭಾಗದ ಎರಡು ಸಾಲಿನಲ್ಲಿ ನಾಲ್ಕು ಕಂಬಗಳಿವೆ. ಕಂಬದ ಬೋದಿಗೆಗಳು ನಾಲ್ಕು ಕಡೆಗೆ ಚಾಚಿಕೊಂಡಿದ್ದು, ಅವು ಬಾಳೆಯ ಕಾಯಿಯಂತೆ ಹೊರಟಿವೆ. ಒಳಗಿನ ಹನ್ನೆರಡು ಕಂಬಗಳ ಮಧ್ಯೆ ಆರು ನವರಂಗಗಳಿವೆ. ಅದರಲ್ಲಿ ಹೊರಭಾಗಕ್ಕಿರುವ ನವರಂಗಗಳು ತಾವರೆಯಂತೆ ಅರಳಿವೆ. ಅಲ್ಲಿಯೇ ಬಲಗಡೆಯ ನವರಂಗದಲ್ಲಿ ಒಂದು ಕಡೆ ಈಶ್ವರನ ತೊಡೆಯ ಮೇಲೆ ಪಾರ್ವತಿ ಕುಳಿತಿರುವುದು, ಅದರ ಬಲಗಡೆಗೆ ಬ್ರಹ್ಮ ಮಂಡಿಯೂರಿ ನಮಸ್ಕರಿಸುತ್ತಿರುವುದರ ಚಿತ್ರವಿದೆ. ಎಡುಗಡೆಯ ನವರಂಗದಲ್ಲಿ ರಾಮಸೀತೆ ಕೂಳಿತಿದ್ದಾರೆ. ಲಕ್ಷ್ಮಣ ನಿಂತಿದ್ದಾನೆ. ಒಂದು ಕಡೆಯಲ್ಲಿ ಆಂಜನೇಯನ್ನು ಕೈ ಮುಗಿಯುತ್ತಿರುವುದು, ಇನ್ನೊಂದು ಕಡೆ ನಿಂತ ಆಂಜನೇಯನು ಚಾಮರ ಬೀಸುತ್ತಿರುವುದರ ಚಿತ್ರವಿದೆ. ಇವೆರಡರ ಮಧ್ಯದ ನವರಂಗದ ಚಿತ್ರ ಅಪೂರ್ವವಾದುದು. ಒಂದು ಮೂಲೆಗೆ ಗಂಡಭೇರುಂಡ ಪಕ್ಷಿ ಸಿಂಹವನ್ನು ಬಾಯಿಯಲ್ಲಿ ಕಚ್ಚಿಕೊಂಡಿದೆ. ಇನ್ನೊಂದು ಕಡೆಗೆ ಇರುವ ಒಂದು ದೊಡ್ಡ ಪಕ್ಷಿ ಕೊಕ್ಕಿನಲ್ಲಿ ಸೊಂಡಿಲು ಇರುವ ಪ್ರಾಣಿಯನ್ನು ಹಿಡಿದಿದೆ. ಅದೇ ಇನ್ನೊಂದು ಮೂಲೆಯಲ್ಲಿ ಗರುಡ ಹಾವನ್ನು ಹಿಡಿದಿದೆ. ನಾಲ್ಕನೆಯ ಮೂಲೆಗೆ ಗಂಡಬೇರುಡವನ್ನೇ ಹಿಡಿದ ಪಕ್ಷಿಯಿದೆ. ಇದು ಶರಭ ಇರಬಹುದೇ ಎನಿಸುತ್ತದೆ. ಈ ನವರಂಗ ಸಾಲಿಗಿಂತ ಒಳಭಾಗದಲ್ಲಿ ಮೂರು ಮಂಟಪಗಳಿವೆ. ಇಲ್ಲಿ ಮಾಮೂಲಿನಂತೆ ಎರಡು ಕಡೆ ತಾವರೆ ದಳಗಳು ಮಧ್ಯದಲ್ಲಿ ಬಾಳೆಯ ಹೂವು ಹೊರಟಿದೆ. ಗರ್ಭಂಕಣ ಮುಂದೆ ಜಯವಿಜಯರ ಚಿತ್ರವಿದೆ. ಗರ್ಭಾಂಕಣದ ಮೇಲ್ಚಾವಣಿಯೂ ಸುಂದರವಾಗಿದೆ. ಎದುರು ಗೋಡೆಯಲ್ಲಿ ಗೊಡೆಗಂಟಿದಂತೆಯೇ ಕೆತ್ತಿದ ಮೂರು ಸಣ್ಣ ಮಂಟಪಗಳಿವೆ. ಎರಡು ಮಂಟಪ ಖಾಲಿ ಇವೆ. ಹೆಡೆಯ ಸರ್ಪವಿದೆ. ಆ ಸರ್ಪ, ಲಿಂಗ, ಪಾಣಿಪೀಠ, ಇವನ್ನೆಲ್ಲ ಬಳಸಿಕೊಂಡಂತೆ ಅದರ ಬಾಲ ಕೆಳಗೆ ಇಳಿದಿದೆ. ಲಿಂಗ ತೀರ ಚಿಕ್ಕದು. ಐದು ಇಂಚು ಎತ್ತರ ಎರಡು ಇಂಚು ಅಗಲ ಇರಬಹುದಷ್ಟೇ. ಈ ಲಿಂಗವಲ್ಲದೆ ಇದೇ ಗರ್ಭಂಕಣದ ಮಧ್ಯೆದಲ್ಲಿ ಬಳಪದ ಕಲ್ಲಿನಿಂದ ಮಾಡಿದ ದೊಡ್ಡ ಪಾಣಿಪೀಠ ಒಂದು ಅಡಿ ಎತ್ತರದ ಲಿಂಗವಿದ್ದು, ಬಹುಶಃ ಇದನ್ನು ಹೊರಗಿನಿಂದ ತಂದು ಸ್ಥಾಪಿಸಿದಂತಿದೆ.

ದೇವಾಲಯದ ಹೊರಕ್ಕೆ ಬರುತ್ತಾ ಗುಹೆಯ ಮುಂಭಾಗಕ್ಕಿರುವ ಎರಡು ಮತ್ತು ಮೂರನೆಯ ಕಂಬಗಳ ಮೇಲೆ ಒಂದೊಂದು ಚಿತ್ರವಿದೆ. ಒಂದು ಕಂಬದಲ್ಲಿ ನರಸಿಂಹಮೂರ್ತಿ ಇನ್ನೊಂದು ಕಂಬದಲ್ಲಿ ವರಾಹಮೂರ್ತಿ, ಒಂದನೇ ಬಲಪಕ್ಕದ ಕಂಬದಲ್ಲಿ ಬೇಡರ ಕಣ್ಣಪ್ಪನ ಚಿತ್ರ ನಾಲ್ಕನೇ ಎಡ ಕಂಭದಲ್ಲಿ ಪ್ರಾಣಿ ಮತ್ತು ಮನುಷ್ಯನ ಮುಖವುಳ್ಳ ಒಬ್ಬ ವ್ಯಕ್ತಿ ಇದ್ದಾನೆ. ಗುಹೆಯ ಮುಂಭಾಗದಲ್ಲಿ ಮೂರಡಿ ಉದ್ದ ಮತ್ತು ಎರಡು ಅಡಿ ಎತ್ತರದ ಬಸವಣ್ಣನ

ವಿಗ್ರಹವಿದೆ. ಇದು ಬಳಪದ ಕಲ್ಲಿನಲ್ಲಿ ನಿರ್ಮಾಣ ಮಾಡಿದ್ದಾಗಿರದೆ, ಕರಿಕಲ್ಲಿನದಾಗಿದೆ. ನಾಯಕನಹಟ್ಟಿಯ ಬಳಿಯ ಈ ರಾಮದುರ್ಗದ ಗುಹಾಂತ ದೇವಾಲಯ ಚಿತ್ರದುರ್ಗದ ಇತರ ಯಾವುದೇ ಕಡೆ ಇದ್ದಂತಿಲ್ಲ. ಚಿತ್ರದುರ್ಗದಿಂದ ಆಗ್ನೇಯ ದಿಕ್ಕಿಗೆ ಇರುವ ಚಂದ್ರವಳ್ಳಿಯಲ್ಲಿ ಒಂದು ನೆಲಗುಹೆಯಿದೆ. ಆದರೆ ರಚನೆ ಮತ್ತು ರಚನೆಯ ಉದ್ದೇಶ ಎರಡೂ ಬೇರೆಯಾಗಿವೆ. ರಾಮದುರ್ಗದ ಗುಹಾಂತ ದೇವಾಲಯದೊಡನೆ ಇದನ್ನು ಹೊಲಿಸಲು ಬರುವುದಿಲ್ಲ. ಚಿತ್ರದುರ್ಗದ ಗುಡ್ಡ ಬೆಟ್ಟಗಳಲ್ಲಿ ಅಲ್ಲಲ್ಲಿ ಬಂಡೆಯೊಳಗೆ ಆನೆ ನೀರು ಕುಡಿಯಲು ಬೇಕಾಗುವಂಥ ತೊಟ್ಟಿ, ಎಣ್ಣೆ ತುಂಬಿಟ್ಟುಕೊಳ್ಳಲು ಅನುಕೂಲವಾಗುವಂಥ ಕೊಳ ಇತ್ಯಾದಿಗಳನ್ನು ಕೊರೆದಿರುವುದನ್ನು ನೋಡಬಹುದೇ ಹೊರತು ರಾಮದುರ್ಗದ ಮಾದರಿಯ ದೇವಾಲಯ ಮಾತ್ರ ಇರುವುದಿಲ್ಲ.

## ಬಸವಣ್ಣ ದೇವಾಲಯ ಕನ್ನಿಬೋರಯ್ಯನಹಟ್ಟಿ

ದೇವಾಲಯವು ಗರ್ಭಗೃಹ, ಮಂಟಪ ಹಾಗೂ ಇತ್ತೀಚೆಗೆ ವಿಸ್ತಾರಗೊಂಡ ಮುಖ ಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಒಂದೂವರೆ ಅಡಿ ಎತ್ತರದ ನಂದಿ ಶಿಲ್ಪವಿದೆ. ಸಭಾಮಂಟಪದಲ್ಲಿ ಕಂಬಗಳು ಸರಳ ಶೈಲಿಯಲ್ಲಿದ್ದು ಚಚ್ಚೌಕವಾಗಿದೆ. ಮುಖ ಮಂಟಪಕ್ಕೆ ಕೆಂಪು ಹೆಂಚುಗಳನ್ನು ಹೊದಿಸಲಾಗಿದೆ. ಗರ್ಭಗೃಹದ ಮೇಲಿರುವ ಸ್ಥಳೀಯ ಮಾದರಿಯ ಶಿಖರವಿದೆ. ಶಿವ, ಪಾರ್ವತಿ ನಂದಿ ಮತ್ತಿತರ ಗಾರೆ ಶಿಲ್ಪಗಳನ್ನು ಮೂಡಿಸಿ ಅಳವಡಿಸಲಾಗಿದೆ. ದೇವಾಲಯದ ಬಲಬದಿಯ ಗುಡ್ಡದ ಮೇಲೆ ಪಾಳೆಯಗಾರರ ಕಾಲದ ಕೋಟೆ ಅವಶೇಷಗಳಿವೆ. ದೇಗುಲದ ಲಕ್ಷಣಗಳಿಂದ ಪಾಳೆಯಗಾರರು ತಮ್ಮ ಅವಧಿಯಲ್ಲಿ ಕಟ್ಟಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

## ಲಕ್ಷ್ಮೀವೆಂಕಟೇಶ್ವರ ದೇವಾಲಯ ದೇವಪುರದಹಟ್ಟಿ

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಗರ್ಭಗೃಹ, ಸಭಾಮಂಟಪದಲ್ಲಿ ದುಂಡನೆಯ ಕಂಬಗಳಿವೆ. ಗರ್ಭಗೃಹದಲ್ಲಿ ವೆಂಕಟೇಶ್ವರನ ವಿಗ್ರಹವಿದೆ. ಸಭಾಮಂಟಪದಲ್ಲಿ ಮೂರ್ತಿಶಿಲ್ಪಗಳಿವೆ. ಮುಂದೆ ದೀಪಸ್ತಂಭವಿದೆ. ಗರ್ಭಗುಡಿಯ ಮೇಲೆ ಶಿಖರವಿದೆ. ಪ್ರಾಂಗಣದಲ್ಲಿ ವಸತಿಗಳಿವೆ. ದೇವಾಲಯದ ಹಿಂದೆ ಶ್ರೀಮಹಾನ್ ಸದ್ಗುರು ನಾನಾ ಸಾಥ್ ಬಾವಾಜಿ ದೇವಾಲಯವಿದೆ. ಪಕ್ಕದಲ್ಲಿ ರಾಮ ಸೀತಾದೇವಾಲಯ, ಹಿಂಭಾಗದಲ್ಲಿ ಈಶ್ವರನ ವಿಗ್ರಹ, ಸಪ್ತಮಾತೃಕೆಯರ ವಿಗ್ರಹಗಳು ಕಂಡುಬರುತ್ತವೆ. ಇವೆಲ್ಲವು ಆಧುನಿಕ ಕಾಲದಲ್ಲಿ ನಿರ್ಮಾಣ ವಾಗಿದ್ದು ಸರಳ ಶೈಲಿಯಲ್ಲಿವೆ.

## ಬೋರೆದೇವರ ದೇವಾಲಯ ಕಾತ್ರಿಕೇನಹಟ್ಟಿ

ದೇವಾಲಯವು ಸ್ಥಳೀಯ ಕಣಶಿಲೆಯಿಂದ ನಿರ್ಮಾಣಗೊಂಡಿದ್ದು ಸ್ಥಳೀಯ ಪಾಳೆಯ ಗಾರರ ಶೈಲಿಯನ್ನು ಹೋಲುತ್ತದೆ. ಗರ್ಭಗುಡಿ ಸು. ೯ ಅಡಿ ಅಗಲ ೭ ಅಡಿ ಎತ್ತರ

ಹೊಂದಿದೆ. ಗರ್ಭಗುಡಿಯಲ್ಲಿ ಸುಂದರವಾದ ಮತ್ತು ದೊಡ್ಡ ಗಾತ್ರದ ಭೈರವನ ವಿಗ್ರಹವಿದೆ. ಪಕ್ಕದಲ್ಲಿ ಗಣೇಶನ ಮೂರ್ತಿಯಿದೆ. ಇತ್ತೀಚೆಗೆ ಈ ದೇವಾಲಯಕ್ಕೆ ಬಂಡೆಗಳನ್ನು ಹಾಕಿಸಿದ್ದಾರೆ.

### ಬಂಡೆಹಟ್ಟಿ

ಈ ದೇವಾಲಯವು ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಒಳಗೊಂಡಿದೆ. ಇದು ಇತ್ತೀಚಿನ ಕಾಲದಲ್ಲಿ ನಿರ್ಮಿಸಿದ ದೇವಾಲಯ. ಗರ್ಭಗೃಹದಲ್ಲಿ ಕಾಳಿ ವಿಗ್ರಹವಿದೆ. ಮುಖ ಮಂಟಪದಲ್ಲಿ ನೂತನ ಅಲಂಕರಣವಿದೆ. ಗರ್ಭಗೃಹ ಮೇಲೆ ಗುಮ್ಮಟಾಕಾರದ ಶಿಖರವಿದೆ.

### ಕನ್ನಡಮ್ಮ(ಕನ್ನೆರಮ್ಮ) ದೇವಾಲಯ

ಕನ್ನೆರಮ್ಮನ ದೇವಾಲಯವನ್ನು ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಸುಕನಾಸಿ, ತೆರೆದ ನವರಂಗಗಳನ್ನೊಳಗೊಂಡಿದೆ. ಚೌಕಾಕಾರದ ಗರ್ಭಗೃಹದ ಶಿವಲಿಂಗವಿದ್ದು ಇದೊಂದು ಶೈವ ದೇವಾಲಯವಾಗಿದ್ದರೂ ಅಲ್ಲಿನ ಸ್ಥಳೀಯರು ಇದನ್ನು ಕನ್ನಡಮ್ಮ ಕನ್ನೇರಮ್ಮ ದೇವಾಲಯವೆಂದು ಕರೆಯುತ್ತಾರೆ. ಇದಕ್ಕೆ ನಿರ್ದಿಷ್ಟ ಕಾರಣ ತಿಳಿದುಬಂದಿಲ್ಲ. ಇನ್ನು ಹಿರಿಯರು ಈ ದೇವತೆ ಮಲೆನಾಡಿನಿಂದ ಬಂದಳೆಂದು ಹೇಳುತ್ತಾರೆ. ಗರ್ಭಗೃಹ ಮತ್ತು ಸುಕನಾಸಿಗಳ ಲಲಾಟಗಳಲ್ಲಿ ಗಜಲಕ್ಷ್ಮೀಯ ಕೆತ್ತನೆಗಳಿವೆ. ತೆರೆದ ನವರಂಗದ ಸುತ್ತಲೂ ಕಕ್ಷಾಸನಗಳು ಅದರ ಮಧ್ಯದಲ್ಲಿ ಚೌಕಾವೇದಿಕೆ ಮತ್ತು ಲಂಬವಾಗಿರುವ ೪ ಚೌಕಾಕಾರದ ಕಂಬಗಳಿವೆ. ಪೀಠ, ದಂಡ, ದಂಡಾಗ್ರ ಹಾಗೂ ವೃತ್ತಾಕಾರದ ಫಲಕಗಳು ಕೊನೆಯಲ್ಲಿ ಸಾಮಾನ್ಯ ಲಕ್ಷಣದ ಬೋದಿಗೆಗಳಿವೆ. ಈ ನವರಂಗದ ಮಧ್ಯದಲ್ಲಿರುವ ವೇದಿಕೆಯ ಮೇಲೆ ಗರ್ಭಗೃಹದ ಲಿಂಗಕ್ಕೆ ಎದುರಾಗಿ ನಂದಿಯಿದೆ. ಪೂರ್ವಾಭಿಮುಖವಾಗಿರುವ ಈ ದೇವಾಲಯ ವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದ್ದು ಗರ್ಭಗೃಹದ ಮೇಲೆ ಯಾವುದೇ ಶಿಖರವಿಲ್ಲ.

### ಕುರಿಹಟ್ಟಿ ಕೋಟೆಗುಡ್ಡದ ಮಾರಮ್ಮ

ಈ ದೇವಾಲಯವು ಗ್ರಾಮದ ಒಳಗೆ ಇದೆ. ಇದು ಗರ್ಭಗೃಹ, ಸಭಾಮಂಟಪ ಮುಖಮಂಟಪವನ್ನೊಂದಿದೆ. ಸಭಾಮಂಟಪದಲ್ಲಿ ನಾಲ್ಕು ಸಾದಾ ಕೆತ್ತನೆಯ ಕಂಬಗಳಿದ್ದು ಮುಖಮಂಟಪದಲ್ಲಿ ಎರಡು ಸಾದಾ ಕೆತ್ತನೆಯ ಕಂಬಗಳಿವೆ. ಗರ್ಭಗೃಹದ ಲಲಾಟ ಬಿಂಬವು ಸಾದಾ ಕೆತ್ತನೆಯಿಂದ ಕೂಡಿದ್ದು, ಈ ದೇವಾಲಯವು ಸಾಂದರ ಪ್ರದಕ್ಷಿಣಾ ಪಥವನ್ನೊಳ ಗೊಂಡಿರುವುದು. ಇದು ಜಗತಿಯ ಮೇಲೆ ನಿರ್ಮಿಸಲ್ಪಟ್ಟಿದೆ. ಎದುರುಗಡೆ ಗರುಡ ಗಂಬವಿದ್ದು, ವೈಷ್ಣವ ದೇವತೆಗಳ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಜಗತಿ, ಭಿತ್ತಿ, ಮೇಲ್ಚಾವಣಿಯನ್ನೊಂದಿದೆ. ದೇವಾಲಯವು ಪೂರ್ವಾಭಿಮುಖವಾಗಿರುವುದು. ದೇವಾಲಯದ ಎಡ ಪಕ್ಕಗಳಲ್ಲಿ ಆನೆ ಸಿಂಹ ಮುಂತಾದ ಶಿಲ್ಪಗಳನ್ನು ಸರಳ ಶೈಲಿಯಲ್ಲಿ ಬಿಡಿಸಲಾಗಿದೆ.

### ಉಗ್ಗಿನಿಂಗಯ್ಯನಹಟ್ಟಿ ಆಂಜನೇಯ ದೇವಾಲಯ

ಈ ದೇವಾಲಯವು ಗರ್ಭಗೃಹ, ಅಂತರಾಳವನ್ನೊಂದಿದೆ. ಜಗತಿಯ ಮೇಲೆ ನಿರ್ಮಿಸಲ್ಪಟ್ಟ ಇದರ ಗರ್ಭಗೃಹದಲ್ಲಿ ಇತ್ತೀಚೆಗೆ ಕಂಡರಿಸ್ಪಟ್ಟ ಆಂಜನೇಯನ ಶಿಲ್ಪವಿದೆ. ಅಂತರಾಳದಲ್ಲಿ ಆಲಂಕಾರಿಕವಾದ ನಾಲ್ಕು ಕಂಬಗಳಿದ್ದು, ಅದಕ್ಕೆ ಹೊಂದಿಕೊಂಡು ಸೋಪಾನವಿರುವುದು. ಜಗತಿಯ ಮೇಲೆ ನಿರ್ಮಿಸಲ್ಪಟ್ಟ ಇದು ಸಾದಾ ಮೇಲ್ಛಾವಣಿಯನ್ನು ಹೊಂದಿದೆ.

### ರಾಯಾಪುರ ಮ್ಯಾಸರಹಟ್ಟಿ ಕೋಟೆಗುಡ್ಡದ ಮಾರಮ್ಮನ ದೇವಾಲಯ

ಈ ದೇವಾಲಯವು ಏಕಕೂಟ ದೇವಾಲಯವಾಗಿದ್ದು, ಎತ್ತರದ ಜಗತಿಯ ಮೇಲೆ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಅಂತರಾಳ, ಸಭಾಮಂಟಪವನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಬೆಳ್ಳಿಯ ಮಾರಮ್ಮನ ವಿಗ್ರಹವಿದೆ. ಸಭಾಮಂಟಪದಲ್ಲಿ ದೇವಿಗೆ ಸಂಬಂಧಿಸಿದ ಶಿಲ್ಪಗಳನ್ನು ಬಿಡಿಸಲಾಗಿದೆ. ದೇವಾಲಯ ಮೇಲ್ಚಾವಣಿಯು ಸಾದಾ ಕೆತ್ತನೆಯಿಂದ ಕೂಡಿದ್ದು, ಸಭಾ ಮಂಟಪದಲ್ಲಿ ಆರು ಕಂಬಗಳಿವೆ. ಈ ಕಂಬಗಳ ವೈಶಿಷ್ಟ್ಯವೆಂದರೆ ಇವುಗಳೆಲ್ಲಾ ಚೌಕಾಕಾರ ವಾಗಿದ್ದು, ಅರ್ಧ ಕಂಭಗಳನ್ನೊಳಗೊಂಡಿದೆ. ಪುಷ್ಪಬೋದಿಗೆಗಳಿವೆ. ಒಟ್ಟಿನಲ್ಲಿ ಆಲಂಕಾರಿಕ ಕಂಬಗಳಿಂದ ಕೂಡಿದೆ. ದೇವಾಲಯದ ಮುಂದೆ ಬೇವಿನ ಮರ ಅದರ ಬೊಡ್ಡೆಯಲ್ಲಿ ಮಣ್ಣಿ ನಿಂದ ಮಾಡಿದ ಮೂರ್ತಿ ಹಾಗೂ ಬಳೆ ರಾಶಿ ಇದೆ. ಮುಂಭಾಗ ಗರುಡ ಗಂಭವಿದೆ. ಇದನ್ನು ಸಿಡಿಯಾಡಲು ಬಳಸುತ್ತಾರೆ.

### ಸಾಸಲಹಟ್ಟಿ ಯರಗಾಟನಾಯಕ ದೇವಾಲಯ

ಯರಗಾಟನಾಯಕ ಬಾಳಿ ಬದುಕಿನ ಸ್ಥಳ ಇಂದು ಆಧ್ಯಾತ್ಮಿಕ ನೆಲೆಯಾಗಿದೆ. ಅವನು ಓಡಾಡಿದ ಜಾಗಗಳಲ್ಲಿ ದೇವಾಲಯ ಗುಡಿಗಳನ್ನು ನಿರ್ಮಿಸಿದ್ದಾರೆ. ಚಿತ್ರದುರ್ಗಕ್ಕೆ ಸಮೀಪವಿರುವ ಸಾಸಲಹಟ್ಟಿಯಲ್ಲಿ ಬಹು ಸುಂದರವಾದ ಯರಗಾಟನಾಯಕನ ದೇವಾಲಯವಿದೆ. ಎಲ್ಲಾ ಸಮುದಾಯದ ಭಕ್ತರು ಇವನಿಗೆ ನಡೆದುಕೊಳ್ಳುತ್ತಾರೆ. ಅದೇ ರೀತಿ ಮ್ಯಾಸನಾಯಕರ ಹಟ್ಟಿಗಳಲ್ಲಿ ದೇವಾಲಯವನ್ನು ಇವನ ಭಕ್ತರು ನಿರ್ಮಿಸಿಕೊಂಡಿದ್ದಾರೆ.

### ನಲಗೇತನಹಟ್ಟಿ ದಡ್ಲುಮಾರಮ್ಮ ದೇವಾಲಯ

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಚೌಕಾಕಾರದ ಗರ್ಭಗೃಹ ಮತ್ತು ತೆರೆದ ಮಂಟಪವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಕಂಚಿನ ಮಾರಮ್ಮನ ಶಿಲ್ಪವಿದೆ. ಮಂಟಪದಲ್ಲಿ ನಾಲ್ಕು ಕಂಬಗಳಿವೆ. ದೇವಾಲಯದ ಮೇಲೆ ಸುತ್ತಲೂ ದೇವಕೋಷ್ಠಗಳಿದ್ದು, ಮಾರಿಕಾಂಬ, ಲಕ್ಷ್ಮೀ, ಸರಸ್ವತಿ, ಸಿಂಹದ ಮೂರ್ತಿಗಳಿವೆ. ಕಾಳಿ, ಶಿವ, ಕೃಷ್ಣ, ಕುಂಭಕಾರದ ಶಿಖರದಲ್ಲಿವೆ. ಶಾಲಾ ಮಾದರಿಯ ಚಿಕ್ಕ ಗೋಪುರವಿದೆ. ಈ ದೇವಾಲಯವನ್ನು ಇತ್ತೀಚೆಗೆ ನಿರ್ಮಿಸಿದ್ದಾರೆ. ದೇವಾಲಯದ ಪಕ್ಕದಲ್ಲಿ ಪಾಕಶಾಲೆಯಿದೆ.

## ದೇವರೆತ್ತಿನಗೂಡು

ಮ್ಯಾಸ ಮಂಡಲಿಯವರು ಹರಕೆ ಮಾಡಿಕೊಂಡು ಬಿಟ್ಟ ದನಕರುಗಳನ್ನು ದೇವರೆತ್ತುಗಳೆಂದು ಕರೆಯುತ್ತಾರೆ. ಹಾಗೆ ಹರಕೆ ಕಟ್ಟಿಕೊಂಡು ಆಯಾ ಹಟ್ಟಿಯವರೆಲ್ಲ ಬಿಟ್ಟ ರಾಸುಗಳ ಒಂದು ಗುಂಪನ್ನು ಯಾವುದೋ ಒಂದು ಅರಣ್ಯದಲ್ಲಿ ಬಿಟ್ಟು ದನದ ಗೂಡು ಹಾಕಿಕೊಂಡು ಮೇಯಿಸಲು ಮೂರ್ನಾಲ್ಕು ಜನ ವ್ಯಕ್ತಿಗಳು ನೇಮಿಸಲ್ಪಡುತ್ತಾರೆ. ಅವರನ್ನು ಬೇಡನಾಯಕ ಸಮೂಹದವರು ಎತ್ತಿನ ಕೀಲಾರಿಗಳೆಂದು ಕರೆಯುತ್ತಾರೆ.

ನಲಗೇತನಹಟ್ಟಿಯಲ್ಲಿ ಇನ್ನೂರು ದೇವರೆತ್ತುಗಳಿವೆ. ಈ ದೇವರೇತ್ತುಗಳಿಗೆ ನೂತನವಾಗಿ ಅಡವಿಹಂಚಿನಲ್ಲಿ ಒಂದು ಪೌಳಿ ನಿರ್ಮಿಸಿದ್ದಾರೆ. ದೇವರೆತ್ತುಗಳನ್ನು ಅದರಲ್ಲಿ ತರಬುತ್ತಾರೆ. ಪೌಳಿ ಮಧ್ಯದಲ್ಲಿ ಲೋಬಾನ ಹಾಕಲು ಒಂದು ಬೆಂಕಿ ಕಿಂಡಿಯಿದೆ. ಮಧ್ಯದಲ್ಲಿ ಚೌಕಾಕಾರದ ಒಂದು ಗುಡಿಯಿದೆ. ಗುಡಿಯಲ್ಲಿ ನಂದಿಯ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಬಲಭಾಗದಲ್ಲಿ ಕಿಲಾರಿಗಳಿಗೆ ಒಂದು ಚಿಕ್ಕ ಮನೆ ನಿರ್ಮಿಸಿದ್ದಾರೆ. ದೇವರೆತ್ತುಗಳ ಪೌಳಿಯ ಮುಂದೆ ನೀರಿನ ತೊಟ್ಟಿ ಹಾಗೂ ಹುಲ್ಲು ಮೇಯಲು ಅನುಕೂಲವಾಗುವಂತೆ ಗ್ವಾದಲಿ ನಿರ್ಮಿಸಿದ್ದಾರೆ. ದೇವರೆತ್ತುಗಳ ಹಾಕಿದ ಸಗಣಿಯನ್ನು ಗುಡ್ಡೆಗಳಾಗಿ ಹಾಕಿದ್ದಾರೆ. ಸಗಣಿಗೆ ಮ್ಯಾಸನಾಯಕರನ್ನು ಪೂಜ್ಯನೀಯ ಭಾವನೆ ಇದೆ. ಅದನ್ನು ವ್ಯವಸಾಯಕ್ಕೆ ಬಳಸುವುದಿಲ್ಲ. ಇಂಥ ಬೂದಿದಿಬ್ಬಗಳು ಈ ಪರಿಸರದಾದ್ಯಂತ ಕಾಣಸಿಗುತ್ತವೆ. ಇವುಗಳನ್ನು ಮುತ್ತಿಗಾರರ ಬೊಟ್ಟು ಎಂದು ತಿಳಿದು ಪೂಜೆಯ ಸಮಯದಲ್ಲಿ ಬಳಸುತ್ತಾರೆ. ದೇವರೆತ್ತುಗಳ ಪಾಳಿ ಪಕ್ಕ ಒಂದು ಸಮುದಾಯ ನಿರ್ಮಾಣ ಹಂತದಲ್ಲಿದೆ.

## ನಲಗೇತನಹಟ್ಟಿ ಚನ್ನಕೇಶವ ದೇವಾಲಯ

ಈ ದೇವಾಲಯವು ಉತ್ತರಾಭಿಮುಖವಾಗಿದ್ದು ತೆರೆದ ಮುಖಮಂಟಪವಿದೆ. ಗರ್ಭಗುಡಿಯಲ್ಲಿ ಬಿಲ್ಲಿನಾಕಾರಾದ ಬಂಗಾರದೇವರ ಮೂರ್ತಿಯಿದೆ. ದೇವಾಲಯದ ಮೇಲೆ ಕೀರ್ತಿಮುಖದ ದೇವಕೋಷ್ಠದಲ್ಲಿ ಕೃಷ್ಣನು ಸರ್ಪದ ಮೇಲೆ ಮಲಗಿರುವನು. ಎರಡು ಕಡೆ ದ್ವಾರಪಾಲಕರ ಶಿಲ್ಪಗಳಿವೆ. ಎದುರಿಗೆ ಅಂಜನೇಯ ಮತ್ತು ಗರುಡನ ಮೂರ್ತಿಯಿದೆ. ದೇವಕೋಷ್ಠದ ಎರಡು ಬದಿಯಲ್ಲಿ ಪಶುಪಾಲನೆಯ ಚಿತ್ರಗಳಿವೆ. ಈಶ್ವರ, ನಾರಾಯಣ ನಾಯಕನಹಟ್ಟಿ ತಿಪ್ಪೇಸ್ವಾಮಿಯ ಶಿಲ್ಪಗಳಿವೆ. ರಾಮ ಲಕ್ಷ್ಮಣ, ಸೀತೆಯ, ಗಣೇಶ, ಸೃಷ್ಟಿ ಆಂಜನೇಯ ಚಿತ್ರಗಳಿವೆ. ಗರ್ಭಗೃಹದ ಮೇಲೆ ದ್ರಾವಿಡಶೈಲಿಯ ಶಿಖರವಿದೆ. ಶಿಖರದ ಸುತ್ತಲೂ ಗರುಡ, ಅಂಜನೇಯ, ಗಣಪ, ಕಾಳಿ ವಿವಿಧ ದೇವದೇವತೆಯರ ಹಾಗೂ ಲೈಂಗಿಕ ಶಿಲ್ಪಗಳನ್ನು ಇಡಲಾಗಿದೆ. ಒಟ್ಟಾರೆ ದೇವಾಲಯದ ಲಕ್ಷಣಗಳನ್ನು ಗಮನಿಸಿದರೆ ಇತ್ತೀಚೆಗೆ ನಿರ್ಮಾಣಗೊಂಡಂತೆ ಕಾಣುತ್ತದೆ.

ಚಳ್ಳಕೆರೆ ತಾಲ್ಲೂಕು, ನಾಯಕನಹಟ್ಟಿ ಹೋಬಳಿ, ನಲಗೇತನಹಟ್ಟಿಯಲ್ಲಿ ಇರುವ ಬುಡಕಟ್ಟು ದೇವತೆ ಚನ್ನಕ್ಯಾಸಯ್ಯ. ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡ ಸಮೂಹದಲ್ಲಿ ದಾಸಪಂಥದ

ಒಂದು ಗುಂಪು ಇದೆ. ಮೂಲತಃ ಮ್ಯಾಸಬೇಡರು ಶೈವಪಂಥೀಯರು, ಶ್ರೀಶೈಲ ಮಲ್ಲಿಕಾರ್ಜುನ ತಮ್ಮ ಕುಲಮೂಲ ದೇವತೆ ಎಂದು ಹೇಳಿಕೊಳ್ಳುತ್ತಾರೆ. ಆದರೆ ಹದಿನೈದನೇ ಶತಮಾನದಲ್ಲಿ ಭಕ್ತಿಪಂಥದ ಪ್ರಭಾವ ಈ ಸಮೂಹದ ಮೇಲಾಗಿದೆ. ಇದರಿಂದ ಮೊಳಕಾಲ್ಮೂರು ತಾಲ್ಲೂಕು, ಕಂಪಳದೇವರಹಟ್ಟಿಯಲ್ಲಿ ನಡೆಯುವ ಮ್ಯಾಸಬೇಡರ ಜಾತ್ರೆ ವೈಷ್ಣವ ಭಕ್ತಿ ಪಂಥದ ಹಿನ್ನೆಲೆಯಲ್ಲೇ ಇರುತ್ತದೆ. ಇಲ್ಲಿ ಪ್ರಮುಖ ಪಾತ್ರ ವಹಿಸುವವರು ಶಂಖ, ಬನವಾಸಿ, ಜಾಗಟೆ ಹಿಡಿದ ದಾಸ ಪಂಥದವರು. ಬೇಡ ನಾಯಕ ಸಮೂಹದಲ್ಲಿ ಇವರನ್ನು ದಾಸರಿ ಬೆಡಗು ಎಂತಲೇ ಹೇಳುತ್ತಾರೆ. ಬೇರೆ ಬೇರೆ ಹಟ್ಟಿಗಳಿಂದ ತಂದ ದೇವತೆಗಳನ್ನು ಲಕ್ಕಿ ಬರಲು, ಅಂದರೆ ವಿಷ್ಣುವಿಗೆ ಪ್ರಿಯವಾದ ಸಸ್ಯ ಸಮೂಹದಲ್ಲಿ ಕಟ್ಟಿದ ಗುಡಿಸಲಲ್ಲಿಟ್ಟು ಒಂಬತ್ತು ದಿನಗಳ ಕಾಲ ಜಾತ್ರೆ ನೆರವೇರಿಸುತ್ತಾರೆ. ಆ ಜಾತ್ರೆಯಲ್ಲಿ ಎತ್ತುಗಳದೇ ಪ್ರಮುಖ ಪಾತ್ರ. ಆ ಎತ್ತುಗಳನ್ನು ದೇವರೆಂದು ಮ್ಯಾಸಬೇಡರು ತಿಳಿಯುತ್ತಾರೆ. ಹೀಗೆ ಮ್ಯಾಸಬೇಡರು ಆರಾಧಿಸುವ ವಿಷ್ಣು ಪಂಥದ ದೇವತೆ ಚನ್ನಕ್ಯಾಸಯ್ಯ. ಚನ್ನಕೇಶವ ಬೇಡರ ಬುಡಕಟ್ಟು ಹಟ್ಟಿಯನ್ನು ಪ್ರವೇಶಿಸಿದ್ದು ಕುತೂಹಲಕರ ಸಂಗತಿ. ಆದರೆ ನಲಗೇತನಹಟ್ಟಿಯ ಚನ್ನಕೇಶವನ ಗುಡಿಯಲ್ಲಿ ಕೇಶವನ ವಿಗ್ರಹದ ಆರಾಧನೆಯೇನೂ ನಡೆಯುವುದಿಲ್ಲ. ಅಲ್ಲಿ ಪೂಜೆಗೊಳ್ಳುವುದು ಬಿಲ್ಲು, ಬಾಣ ಮತ್ತು ಕತ್ತಿ. ಅವುಗಳನ್ನೇ ಚನ್ನಕ್ಯಾಸಯ್ಯನೆಂದು ಪೂಜಿಸುತ್ತಾರೆ. ತಮ್ಮ ನಡುವೆ ಆಗಿ ಹೋದ ವೀರರನ್ನು ಗೌರವಿಸುವ ಬುಡಕಟ್ಟು ಸಮೂಹ ಅಂಥವನೊಬ್ಬನನ್ನು ವಿಷ್ಣು ದೇವತೆಯೊಡನೆ ಸಮೀಕರಿಸಿ ಆರಾಧಿಸಿ ಬರುತ್ತಿರಬಹುದಷ್ಟೇ. ಹಾಗೆಯೇ ಜಗಳೂರು, ಚಳ್ಳಕೆರೆ ತಾಲೂಕಿನ ಮ್ಯಾಸಬೇಡರು ಜಗಳೂರಜ್ಜ ಎಂಬ ಇನ್ನೊಬ್ಬ ವೈಷ್ಣವ ಪಂಥದ ಸಂತನನ್ನು ಆರಾಧಿಸುವುದೂ ತಿಳಿದುಬರುತ್ತದೆ. ಈತನ ಮೇಲಿರುವ ದಂತಕಥೆಯಲ್ಲಿ, ಇವನು ತಿರುಪತಿ ತಿಮ್ಮಪ್ಪನ ಭಕ್ತನಾಗಿದ್ದು, ಅಲ್ಲಿಗೆ ಯಾತ್ರೆ ಹೋಗಿ ಬಂದದ್ದಾಗಿಯೂ ತಿಳಿದುಬರುತ್ತದೆ.

**ಎತ್ತಿನ ಕಿಲಾರಿಗಳ ದೇವಾಲಯ ನಲಗೇತನಹಟ್ಟಿ**

ಚನ್ನಕೇಶವ ದೇವಾಲಯದ ಎಡಭಾಗದಲ್ಲಿ ಎತ್ತಿನ ಕೀಲಾರಿಗಳ ದೇವಾಲಯವಿದೆ. ಪಶ್ಚಿಮಾಭಿಮುಖವಾಗಿದೆ. ಚೌಕಾಕಾರದ ಗರ್ಭಗೃಹ ಹೊಂದಿದ್ದು, ದ್ವಾರಬಂಧದಲ್ಲಿ ದೇವರುಗಳ ಶಿಲ್ಪವಿದ್ದು, ದ್ವಾರಬಾಗಿಲು ಏಕಶಾಲೆಯಿಂದ ಕೂಡಿದೆ. ದ್ವಾರ ಬಾಗಿಲ ಮೇಲೆ ಶ್ರೀ ಕೃಷ್ಣನ ಮೂರ್ತಿಯಿದೆ. ದೇವಾಲಯದ ಗೋಪುರದ ಮೇಲೆ ಕೃಷ್ಣನ ಮೂರ್ತಿ ಇದ್ದು ಸಪ್ತ ಅಶ್ವಗಳ ಮೇಲೆ ಸವಾರಿ ಮಾಡುವಂತಿದೆ. ದೇವಾಲಯದ ನಾಲ್ಕು ಬದಿಯಲ್ಲಿ ನಂದಿಶಿಲ್ಪವನ್ನು ಇಡಲಾಗಿದೆ. ಮುಂಭಾಗದಲ್ಲಿ ಬಂದ್ರಿ ಕಡ್ಡಿಗಳಿಂದ ತಯಾರಿಸಿದ ತಡಿಕೆಯನ್ನು ಇಟ್ಟಿದ್ದಾರೆ.

**ಬೊಮ್ಮದೇವರ ಗುಡಿ ನಲಗೇತನಹಟ್ಟಿ**

ಚನ್ನಕೇಶವ ಮತ್ತು ಗಾದ್ರಿಪಾಲನಾಯಕ ದೇವರುಗಳು ಒಂದೇ ಗುಡಿಯೊಳಗೆ ಕುಳಿತಿವೆ. ಈ ಗುಡಿಗೆ ಒಂದು ಪೌಳಿ ಇದೆ. ಈ ಪೌಳಿಯೊಳಗೆ ಪೂರ್ವಭಾಗದಲ್ಲಿ ಮಂದ ಬೊಮ್ಮದೇವರ ಗುಡಿ ಸರಳ ಶೈಲಿಯಲ್ಲಿ ನಿರ್ಮಾಣವಾಗಿದೆ.

### ರಾಮಮಂದಿರ ಎತ್ತಿನಹಟ್ಟಿ

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು, ಚಿಕ್ಕದಾದ ಗರ್ಭಗುಡಿಯ ಪೀಠದ ಮೇಲೆ ಲಕ್ಷ್ಮಣ, ಶ್ರೀರಾಮ, ಸೀತೆ ವಿಗ್ರಹಗಳ ಮುಂದೆ ಆಂಜನೇಯನ ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಈ ವಿಗ್ರಹಗಳನ್ನು ಕೃಷ್ಣಶಿಲೆಯಲ್ಲಿ ಕೆತ್ತಲಾಗಿದೆ. ಮುಖಮಂಟಪದ ಗೋಡೆಯಲ್ಲಿ ದೇವಕೋಷ್ಠ ನಿರ್ಮಿಸಿ ಆಂಜನೇಯನನ್ನು ಎಡಭಾಗದಲ್ಲಿ ಗೋಡೆಯ ದೇವಕೋಷ್ಠದಲ್ಲಿ ಸುಬ್ರಹ್ಮಣ್ಯ, ಗಣಪತಿ, ಲಕ್ಷ್ಮಣ, ಶ್ರೀರಾಮ, ಸೀತೆ ಇವರಿಗೆ ನಮಸ್ಕರಿಸುವ ಆಂಜನೇಯನನ್ನು ಸಿಮೆಂಟಿನಿಂದ ನಿರ್ಮಿಸಲಾಗಿದೆ. ಗರ್ಭಗುಡಿಯ ಮೇಲೆ ಚೌಕಾಕಾರದ ಶಿಖರವನ್ನು ನಿರ್ಮಿಸಿರುತ್ತಾರೆ. ದೇವಸ್ಥಾನದ ಮುಂದೆ ದೀಪಸ್ತಂಭವಿದ್ದು ಅದಕ್ಕೆ ಸುತ್ತಲೂ ಸೋಪಾನ ಇರುತ್ತದೆ. ವರ್ಷಕ್ಕೊಮ್ಮೆ ಶ್ರೀರಾಮನವಮಿಯಲ್ಲಿ ಶ್ರೀರಾಮೋತ್ಸವವನ್ನು ಸಡಗರದಿಂದ ಆಚರಿಸಲಾಗುತ್ತದೆ.

### ಅಂಜನೇಯ ದೇವಾಲಯ ಎತ್ತಿನಹಟ್ಟಿ

ಈ ದೇವಸ್ಥಾನವು ಹಿರೇಕಾವಲಿಗೆ ಹೋಗುವ ರಸ್ತೆಯ ಬಲಭಾಗದಲ್ಲಿದೆ. ದೇವಾಲಯವು ದಕ್ಷಿಣಾಭಿಮುಖವಾದ ಬಂಡೆಗಲ್ಲಿನ ಮೇಲೆ ವೀರಾಂಜನೇಯನನ್ನು ಬಿಡಿಸಲಾದ ಈ ವಿಗ್ರಹವು ಸುಮಾರು ಮೂರು ಅಡಿ ಉದ್ದ ಎರಡು ಅಡಿ ಅಗಲವನ್ನು ಹೊಂದಿದೆ. ಈ ವಿಗ್ರಹವು ವಿಜಯನಗರ ನಂತರ ಕಾಲದ ಅಂದರೆ ೧೭-೧೮ನೇ ಶತಮಾನದ್ದು ಗರ್ಭಗುಡಿಯ ಮುಂದೆ ಅರ್ಧ ಮಂಟಪವಿದ್ದು ಎರಡು ಕಂಬಗಳಿರುತ್ತವೆ.

### ಚೌಡೇಶ್ವರಿ ದೇವಾಲಯ ಹಿರೆಕಾವಲ್

ದೇವಾಲಯವು ಸರಳ ಗರ್ಭಗುಡಿಯಿಂದ ಕೂಡಿದ್ದು, ಗರ್ಭಗೃಹದಲ್ಲಿ ಚೌಡೇಶ್ವರಿ ಸುಮಾರು ಎರಡೂವರೆ ಅಡಿ ಎತ್ತರದ ಕುಳಿತ ವಿಗ್ರಹವಿದೆ. ಅದರ ಮುಂಭಾಗದಲ್ಲಿ ಮುಖ ಮಂಟಪವು ಕಗ್ಗಲ್ಲಿನಿಂದ ಮಾಡಲ್ಪಟ್ಟಿದೆ. ಮುಖಮಂಟಪವು ಮಧ್ಯದಲ್ಲಿ ನಾಲ್ಕು ಕಂಬಗಳಿಂದಲೂ, ಮುಂಭಾಗದಲ್ಲಿ ನಾಲ್ಕು ಕಂಬಗಳಿಂದಲೂ ಅಲಂಕರಿಸಲ್ಪಟ್ಟಿದೆ. ಕಂಬಗಳನ್ನು ಇತ್ತೀಚೆಗೆ ಕೆತ್ತಲಾಗಿದ್ದರೂ ವಿಜಯನಗರ ಶೈಲಿಯಲ್ಲಿ ಕೆತ್ತಿ ಹಳೆಯ ಶೈಲಿಯನ್ನು ಅನುಸರಿಸಲಾಗಿದೆ. ಮುಖಮಂಟಪವು ಮುಂಭಾಗ ತೆರೆದ ಮಂಟಪವಾಗಿದೆ. ಮುಖಮಂಟಪಕ್ಕೆ ಸುಮಾರು ಹತ್ತು ಅಡಿ ದೂರದಲ್ಲಿ ದೀಪಸ್ತಂಭವಿದೆ. ದೇವಾಲಯದ ಮುಂಭಾಗದಲ್ಲಿ ಚಿಕ್ಕಗುಡಿಯಿದ್ದು, ಸಣ್ಣ ಚೌಡೇಶ್ವರಿ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗೃಹದ ಮೇಲೆ ಕುಂಭಾಕಾರದ ಸರಳ ಶಿಖರವಿದೆ. ಮುಂಭಾಗದ ಬಲಬದಿಯಲ್ಲಿ ಬೇವಿನ ಮರದ ಕೆಳಗಡೆ ಹರಕೆಯ ಬಳೆ ರಾಶಿ ಹಾಗೂ ಸಿಡಿಮರದ ಕಂಬವಿದೆ. ವರ್ಷಕ್ಕೊಮ್ಮೆ ಇಲ್ಲಿ ಜಾತ್ರೆ ನಡೆಯುತ್ತದೆ. ಈ ಕಾನನದ ತುಸು ದೂರದಲ್ಲಿ ಒಂದು ಬಾವಿಯಿದೆ. ಈ ಬಾವಿ ಇಂದಿಗೂ ಬತ್ತದಿರುವುದು ಸ್ಥಳೀಯರಿಂದ

ತಿಳಿದುಬರುತ್ತದೆ. ಆಸುಪಾಸಿನ ಹಟ್ಟಿಯ ಚೌಡಮ್ಮ ದೇವತೆಗಳು ಈ ಬಾವಿಗೆ ಬಂದು ಗಂಗೆಪೂಜೆ ಮಾಡಿಕೊಂಡು ಬರುವ ಪ್ರತೀತಿ ಇದೆ.

**ಕಾಟಪ್ಪನಹಟ್ಟಿ ಚಳ್ಳಕೇರಮ್ಮ ದೇವಾಲಯ**

ಇದೊಂದು ಶಕ್ತಿ ದೇವತೆಯ ಆರಾಧನೆಯ ಸ್ವರೂಪ ಎನ್ನಬಹುದು. ಬಹುಶಃ ಬಹಳಷ್ಟು ಜನ ಚಳ್ಳಕೇರಮ್ಮನ ಮೂಲಮೂರ್ತಿಯನ್ನು ನೋಡಿಯೇ ಇಲ್ಲವೆಂದು ಕಾಣುತ್ತದೆ. ಹೊರಗಿನ ಅಲಂಕಾರವನ್ನು ಸರಿಸಿ ನೋಡಿದರೆ ಆಶ್ಚರ್ಯವೆಂಬಂತೆ ಕೇವಲ ಒಂದು ಸ್ತ್ರೀಯ ರುಂಡವಿರುವ ವಿಗ್ರಹ ಮಾತ್ರ ಇದೆ. ಇದನ್ನೇ ಚಳ್ಳಕೇರಮ್ಮ ಅನ್ನುತ್ತಾರೆ. ಇದರ ಪಕ್ಕದಲ್ಲೇ ನಾಗರ ಹೆಡೆಯ ಪ್ರಭಾವಳಿ ಇರುವ ಮತ್ತೊಂದು ರುಂಡವಿರುವ ವಿಗ್ರಹವಿದ್ದು, ಇದನ್ನು ಬಿಡಾರದಮ್ಮ ಎನ್ನುತ್ತಾರೆ. ಅಚ್ಚರಿಯ ಸಂಗತಿ ಏನೆಂದರೆ ಇವೆರಡೂ ವಿಗ್ರಹಗಳನ್ನು ಒಂದೇ ಪೀಠದಲ್ಲಿ ಸ್ಥಾಪಿಸಿದ್ದಾರೆ. ಹೀಗಾಗಿ ಇದೊಂದು ಶಕ್ತಿ ಆರಾಧನೆಯ ಪ್ರಾಚೀನ ನೆಲೆ ಇರಬಹುದೇ ಎಂಬ ಅನುಮಾನಗಳನ್ನು ಹುಟ್ಟುಹಾಕುತ್ತದೆ. ಸುಮಾರು ಒಂದೂವರೆ ಅಡಿ ಎತ್ತರ ಇರುವ ಈ ಸ್ತ್ರೀ ರುಂಡದ ವಿಗ್ರಹಗಳು ನಮ್ಮನ್ನು ಪ್ರಾಚೀನ ನೆಲೆಯತ್ತ ಕೊಂಡೊಯ್ದರೆ ಆಶ್ಚರ್ಯವಿಲ್ಲ.

ಕೆಲವು ವಿದ್ವಾಂಸರು ಈ ವಿಗ್ರಹಗಳನ್ನು ಜೈನ ಯಕ್ಷಿಯರು ಇರಬಹುದು ಎಂದು ಊಹಿಸುತ್ತಾರೆ. ಬಿಡಾರದಮ್ಮ ಎಂದು ಹೇಳುವ ವಿಗ್ರಹಕ್ಕೆ ಮಾತ್ರ ನಾಗರಹೆಡೆಯ ಪ್ರಭಾವಳಿ ಇದ್ದು, ಚಳ್ಳಕೇರಮ್ಮ ಎಂದು ಹೇಳುವ ವಿಗ್ರಹಕ್ಕೆ ಆ ಬಗೆಯ ಯಾವ ಪ್ರಭಾವಳಿಯೂ ಇಲ್ಲದಿರುವುದು ಸೋಜಿಗವನ್ನು ಉಂಟುಮಾಡಿದೆ. ಅದೊಂದು ನಾಗದೇವತೆಯ ವಿಗ್ರಹ ಇರಬಹುದೇ? ಈಗಾಗಲೇ ಅಲ್ಲಿದ್ದಿರಬಹುದಾದ ನಾಗದೇವತೆಯ ವಿಗ್ರಹದ ಪಕ್ಕದಲ್ಲೇ ಚಳ್ಳಕೇರಮ್ಮನ ವಿಗ್ರಹವನ್ನು ಪ್ರತಿಷ್ಠಾಪಿಸಿ, ಈಗಾಗಲೇ ಅಲ್ಲಿದ್ದ ದೇವಾಲಯವನ್ನು ವಿಸ್ತರಿಸಿ ಅಭಿವೃದ್ಧಿಪಡಿಸಿರಬಹುದೇ? ಹೀಗೆ ನಮ್ಮನ್ನು ಊಹೆಗಳ ಲೋಕಕ್ಕೆ ಒಯ್ಯುತ್ತದೆ.

ಇಡೀ ದೇವಸ್ಥಾನದ ವಾಸ್ತುಶಿಲ್ಪವನ್ನು ಗಮನಿಸಿದರೆ ಇದು ವಿಜಯನಗರೋತ್ತರ ಶೈಲಿಯದು ಅನಿಸುತ್ತದೆ. ಸಿಂಹ ಮುಖದ ಚಿತ್ರ ಒಂಟಿ ಸಮೇತ ಕಂಬದ ಆಕೃತಿ ಇದನ್ನು ಬೆಂಬಲಿಸುತ್ತದೆ. ಬಹುಶಃ ಇದು ಕ್ರಿ.ಶ. ೧೮೦೦ ಆಸುಪಾಸಿನಲ್ಲಿ ನಿರ್ಮಾಣವಾದಂತೆ ತೋರುತ್ತದೆ. ಈ ದೇವಸ್ಥಾನದ ಕಲ್ಲುಕಂಬಗಳ ತುಂಬ ಅನೇಕ ಸಿದ್ಧಭಂಗಿಯ ದಾಡಿ ಇರುವ ಸಿದ್ಧಪುರುಷರ ಚಿತ್ರಗಳೇ ಇರುವುದನ್ನು ನೋಡಿದರೆ ಇದೊಂದು ಶಾಕ್ತ ಪಂಥದ ಸಿದ್ಧರ ಕೇಂದ್ರವಾಗಿದ್ದಿರಬಹುದೇ ಎಂಬ ಅನುಮಾನಗಳೂ ಹಾದು ಹೋಗುತ್ತದೆ. ಈ ದೇವಾಲಯದ ಶಿಲ್ಪಕಲಾ ಚಾತುರ್ಯವೆಲ್ಲ ಕಂಬಗಳಲ್ಲೇ ಅಡಗಿದೆ. ಕಂಬದ ನಾಲ್ಕು ಬದಿಗಳಲ್ಲಿ ಭೈರಾಗಿ, ಆಮೆ, ಮೀನು ಮೊಲ, ಹಾವು, ನವಿಲು, ವೃಷಭ, ಇಲಿ, ಗಿಣಿ, ಕೋತಿ, ಸಿಂಹ ನಂದಿ, ಹೂಜಿ, ಕೃಷ್ಣಹುಲಿ, ಮನುಷ್ಯ(ಪುರುಷ) ಮುಖದ ಪಶು ಇಂಥ ಚಿತ್ರಗಳನ್ನೇ ಕಡೆಯಲಾಗಿದೆ. ಹನುಮಂತ, ಗಣಪತಿಯ

ಚಿತ್ರಗಳೂ ಇವೆ. ದೇವಸ್ಥಾನದ ಹೊರಕವಚದಲ್ಲಿ ಸಿಂಹ, ಸರ್ಪ ನುಂಗುತ್ತಿರುವ ಸಿಂಹ, ಹುಲಿಸವಾರಿ ಮಾಡುತ್ತಿರುವ ನರಸಿಂಹ, ಎರಡು ದೇಹ ಒಂದು ತಲೆಯ ಸಿಂಹ, ಚತುರ್ಮುಖ ನಂದಿ, ಮೃದಂಗ ಬಾರಿಸುತ್ತಿರುವ ಕಲಾವಿದನಂಥ ಅಪರೂಪದ ಚಿತ್ರಗಳೂ ಇವೆ.

ಗರ್ಭಗುಡಿಯ ಹೊರಗೆ ಬಲಪಕ್ಕದಲ್ಲಿ ವೀರಭದ್ರ ಸ್ವಾಮಿಯನ್ನು ಸ್ಥಾಪಿಸಲಾಗಿದ್ದು ಅದಕ್ಕೂ ನಿತ್ಯಪೂಜೆ ಸಲ್ಲುತ್ತದೆ. ಇವನನ್ನು ಚಳ್ಳಕೇರಮ್ಮನ ತಮ್ಮನೆಂದು ಕರೆಯಲಾಗುತ್ತದೆ. ನವರಂಗದ ಮೇಲ್ಚಾವಣಿಯಲ್ಲಿ ಕಮಲ, ಅದರ ಸುತ್ತ ಗಿಣಿಯ ಸಾಲು ಕೆತ್ತಲಾಗಿದ್ದು, ವಿವಿಧ ಭಂಗಿಗಳಲ್ಲಿರುವ ಎಂಟು ಬಗೆಯ ಸಿದ್ಧರ ಚಿತ್ರಗಳನ್ನು ಮೇಲ್ಚಾವಣಿಯ ಮುಚ್ಚುಕಲ್ಲುಗಳ ಮೂಲೆಗಳಲ್ಲಿ ಬಿಡಿಸಲಾಗಿದೆ. ಕೂರ್ಮ ಮತ್ತು ಮೀನಿನ ಮೇಲೆ ಕುಳಿತ ಸಿದ್ಧರು, ಸರ್ಪದ ಹೆಡೆಯ ಮೇಲೆ ಕುಳಿತ ಸಿದ್ಧರ ಚಿತ್ರಗಳನ್ನು ನೋಡಬಹುದು.

ನವರಂಗದಿಂದ ಮುಂದಕ್ಕೆ ವಿಶಾಲವಾದ ಮುಖಮಂಟಪವೂ ಇದ್ದು ಇದರಲ್ಲಿ ಅನೇಕ ಬಗೆಯ ಚಿತ್ರಗಳನ್ನು ಕೆತ್ತಲಾಗಿದೆ. ದ್ವಾರದ ಎರಡೂ ಬದಿಯಲ್ಲಿ ದ್ವಾರಪಾಲಕಿಯರ ವಿಗ್ರಹಗಳನ್ನು ಕಡೆಯಲಾಗಿದ್ದು, ಇದೊಂದು ಶಕ್ತಿ ಆರಾಧನೆಯ ಕೇಂದ್ರವೆಂದು ಧೃಡಪಡಿಸುತ್ತದೆ. ಈ ದ್ವಾರಕ್ಕೆ ಹೊಂದಿಕೊಂಡೇ ಆನೆ ಚಿತ್ರದ ಸೋಪಾನಗಳನ್ನು ನಿರ್ಮಿಸಿದ್ದಾರೆ. ಹೀಗೆ ಪುಟ್ಟ ಕಲಾ ಶಾಲೆಯ ಅನುಭವವನ್ನು ಮೂಡಿಸುತ್ತದೆ.

ಚಳ್ಳಕೇರಮ್ಮನ ಮೂಲಮೂರ್ತಿ ಸೌಮ್ಯಭಾವದಿಂದ ಕೂಡಿದ್ದರೆ, ಈಕೆಯನ್ನು ಅಲಂಕಾರದಿಂದ ಮುಚ್ಚಿ ಹೊರಗೆ ಕಂಗೊಳಿಸುವ ಮೂರ್ತಿ ಮತ್ತೆ ಸೌಮ್ಯಮೂರ್ತಿಯೇ ಆಗಿದೆ. ಗರ್ಭಗುಡಿಯ ಮೇಲೆ ನಿರ್ಮಿಸಿರುವ ಶಿಖರ ಪ್ರಾರಂಭದಲ್ಲಿ ಚಚ್ಚೌಕವಾಗಿದ್ದು ನಾಲ್ಕು ಸಿಂಹದ ಆಕೃತಿಗಳನ್ನು ನಿರ್ಮಿಸಲಾಗಿದೆ. ಮೇಲಕ್ಕೆ ಹೋದಂತೆ ಶಿಖರ ವೃತ್ತಾಕಾರವಾಗಿ ಗುಮ್ಮಟದ ಆಕಾರವನ್ನು ತಳೆದು, ತುದಿಯಲ್ಲಿ ಕಂಚಿನ ಕಳಸದೊಂದಿಗೆ ಕಂಗೊಳಿಸುತ್ತಾ ಆಕರ್ಷಕವಾಗಿ ಕಾಣುತ್ತದೆ. ಪ್ರತಿಯೊಂದು ಮೂರ್ತಿಗೂ ಕರ್ಣಕುಂಡಲಗಳು, ಹಾರಗಳು, ಬಳೆಗಳು, ವೈವಿಧ್ಯಮಯ ಕೇಶವಿನ್ಯಾಸಗಳಿವೆ. ಈ ಮಾನವ ಶಿಲ್ಪಗಳ ಮುಖಭಾವ, ಮುದ್ರೆ ಹಾಗೂ ಅವರು ಆಸೀನರಾಗಿರುವ ವಾಹನಗಳು ದಿಕ್ಪಾಲಕರಿಗೆ ಸಂಬಂಧಿಸಿದಂತೆ ಕಾಣುವುದಿಲ್ಲ ವಾದುದರಿಂದ ಕುತೂಹಲ ಕೆರಳಿಸಿ ವಿಚಾರಪರರನ್ನಾಗಿ ಮಾಡುತ್ತದೆ. ಈ ಶಿಲ್ಪಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಯೋಗಸಿದ್ಧನಾಥರ ಸಾಮ್ಯತೆ ಕಂಡುಬರುತ್ತದೆ. ವಿಜಯ ನಗರೋತ್ತರ ಕಾಲದಲ್ಲಿ ನಾಥಪಂಥವು ವೀರಶೈವ ಹಾಗೂ ವೈದಿಕಪಂಥಗಳ ಸಮಾವೇಶದ ಸಂದಿಗ್ಧ ಕಾಲದಲ್ಲಿ ಈ ದೇವಾಲಯ ನಿರ್ಮಾಣವಾಗಿದೆ ಎಂದು ಹೇಳಬಹುದು.

## ನಲ್ಲಜರುವ ಓಬಳೇಶ್ವರ ದೇವಾಲಯ ದಿದ್ದಲುಪಲ್ಲಿ

ದೇವಾಲಯವು ಪೂರ್ವಾಭಿಮುಖವಾಗಿದ್ದು ಚೌಕಾಕಾರದ ಗರ್ಭಗೃಹವನ್ನು ಹೊಂದಿದೆ. ಗರ್ಭಗೃಹದಲ್ಲಿ ಓಬಳೇಶ್ವರ ಅಣ್ಣ ತಮ್ಮ ಪೀಠದ ಮೇಲೆ ಸಾಲಿಗ್ರಾಮ ಪ್ರತಿಷ್ಠಾಪಿಸಲಾಗಿದೆ.

ಸಾಲಿಗ್ರಾಮದಲ್ಲಿ ಬೆಳ್ಳಿಯ ಚಿಕ್ಕ ಚಿಕ್ಕ ಮೂರ್ತಿಗಳಾದ ಹಾವು, ಕೊಡೆ, ಏಳುಸರ್ಪದ ಎಡೆ, ತ್ರಿಶೂಲ, ದೇವಿಯರ ಮೂರ್ತಿಗಳಿವೆ. ಮುಂಭಾಗದಲ್ಲಿ ಪಶುಪಾಲನೆಗೆ ಸಂಬಂಧಿಸಿದ ಪರಿಕರಗಳಿವೆ. ಎಡಮುರಿ ಮತ್ತು ಬಲಮುರಿಗಳಿವೆ. ಸರಳ ಬಾಗಿಲಶಾಖೆಯನ್ನು ಹೊಂದಿದೆ. ತೆರೆದ ಅಂತರಾಳ ಹೊಂದಿದ್ದು, ತೆರೆದ ಮಂಟಪದಲ್ಲಿ ನಾಲ್ಕು ಪೂರ್ಣ ನಾಲ್ಕು ಅರೆಗಂಬಗಳನ್ನು ಹೊಂದಿದೆ. ಕಂಬಗಳಲ್ಲಿ ಯಾವುದೇ ಶಿಲ್ಪಗಳಿರದೆ ಸರಳವಾಗಿದೆ. ದೇವಾಲಯದಲ್ಲಿ ಮುಂದೆ ಎಂಟು ಚೌಕ ಕಂಬಗಳಲ್ಲಿ ಚೌಕ ದಿಂಡು ಬೋದಿಗೆಯನ್ನು ಹೊಂದಿದೆ. ಚೌಕದಲ್ಲಿ ವಿವಿಧ ದೇವತೆಗಳ ಮೂರ್ತಿಶಿಲ್ಪಗಳನ್ನು ಕಂಡರಿಸಲಾಗಿದೆ. ದೇವಾಲಯದ ಮೇಲೆ ಶೇಷಶಯನದಲ್ಲಿ ಏಳು ಅಡಿ ಎಡೆ ಸರ್ಪದ ಮೇಲೆ ಮಲಗಿರುವ ಮಣ್ಣಿನ ಮೂರ್ತಿಶಿಲ್ಪವಿದೆ. ಮೇಲೆ ಬ್ರಹ್ಮನ ಶಿಲ್ಪವಿದ್ದು, ಕೆಳಗಡೆ ದ್ವಾರಪಾಲಕರ ಶಿಲ್ಪವನ್ನು ಮಾಡಲಾಗಿದೆ. ಎದುರುಗಡೆ ಗರುಡ, ಬಲಗಡೆ ಜಂಬುನಾಥ ಶಿಲ್ಪವಿದೆ. ಗರ್ಭಗೃಹದ ಮೇಲೆ ದ್ರಾವಿಡ ಶೈಲಿಯ ಕುಂಭ ಮಾದರಿಯ ಶಿಖರವಿದೆ. ಶಿಖರದಲ್ಲಿ ಗರುಡ ಆಂಜನೇಯ, ಗಣಪ ಸ್ವಾಮಿಯ, ದೇವಿಯ ಶಿಲ್ಪಗಳು ಶಿಖರದ ದೇವಕೋಷ್ಠಕ ಮೇಲ್ಭಾಗದಲ್ಲಿವೆ. ಶಿಖರದ ಮೇಲ್ಭಾಗದಲ್ಲಿ ಐದು ಕಂಚಿನ ಕಳಶಗಳನ್ನು ಇಟ್ಟಿದ್ದಾರೆ. ಒಟ್ಟಾರೆ ದೇವಾಲಯದ ಲಕ್ಷಣಗಳನ್ನು ಗಮನಿಸಿದರೆ ದೇವಾಲಯವು ಇತ್ತೀಚೆಗೆ ನಿರ್ಮಾಣಗೊಂಡಿರುವುದು ತಿಳಿದುಬರುತ್ತದೆ.

**ಅಂಜನೇಯ ದೇವಾಲಯ ದಿದ್ದಲುಪಲ್ಲಿ**

ದೇವಾಲಯವು ದಕ್ಷಿಣಾಭಿಮುಖವಾಗಿದ್ದು ಚೌಕಾಕಾರದ ಗರ್ಭಗೃಹ ಹೊಂದಿದ್ದು, ಗರ್ಭಗೃಹದಲ್ಲಿ ಆಂಜನೇಯನ ಮೂರ್ತಿಯಿದೆ. ಸಾಮಾನ್ಯವಾಗಿ ಎಲ್ಲಾ ಊರುಗಳಲ್ಲಿ ಕಂಡುಬರುವಂತೆ ಈ ದೇವಾಲಯಮೂ ಕೂಡ ಊರ ಕೊನೆಭಾಗದಲ್ಲಿದ್ದು, ದೇವಾಲಯದ ಮುಂದೆ ಐದು ಅಡಿ ಎತ್ತರದ ದೀಪಸ್ತಂಭವಿದೆ. ಆಂಜನೇಯನ ದೇವಾಲಯಗಳು ಪಾಳೆಯಗಾರರ ಕಾಲದಲ್ಲಿ ಹೆಚ್ಚು ಕಂಡುಬರುತ್ತವೆ. ದೇವಾಲಯದ ಲಕ್ಷಣಗಳನ್ನು ನೋಡಿದರೆ ಪಾಳೆಯಗಾರರ ಕಾಲದಲ್ಲಿ ನಿರ್ಮಾಣಗೊಂಡಿರುವುದನ್ನು ಕಾಣಬಹುದು.

**ಈಶ್ವರ ದೇವಾಲಯ ಈಶ್ವರಮಟ್ಟಿ**

ಈ ದೇವಾಲಯವು ಪೂರ್ವಾಭಿಮುಖವಾಗಿದ್ದು ಚೌಕಾಕಾರದ ಗರ್ಭಗೃಹ ಹೊಂದಿದ್ದು ಗರ್ಭಗೃಹದಲ್ಲಿ ಈಶ್ವರಲಿಂಗವನ್ನು ಪ್ರತಿಷ್ಠಾಪಿಸಲಾಗಿದೆ. ಗರ್ಭಗುಡಿಯಲ್ಲಿ ಎರಡು ಅಡಿ ಎತ್ತರದ ಶಿವಲಿಂಗವಿದ್ದು, ಮರುಳುಶಿಲೆಯಲ್ಲಿದೆ. ಶಿವಲಿಂಗವು ಪೀಠದ ಮೇಲೆ ಇದ್ದು, ಪಾಣಿವಟ್ಟವು ಜಲಹಾರಿ ಬ್ರಹ್ಮಭಾಗವನ್ನು ಹೊಂದಿದೆ. ಶಿವಲಿಂಗದ ಮುಂದೆ ಚಿಕ್ಕ ನಂದಿ ಮೂರ್ತಿಯಿದೆ. ದೇವಾಲಯವನ್ನು ಇತ್ತೀಚೆಗೆ ನಿರ್ಮಾಣವಾಗಿದೆ.

### ಪಾಳು ದೇವಾಲಯ(ನಾಯಕನಹಟ್ಟಿ)

ಈ ದೇವಾಲಯವು ಸಂಪೂರ್ಣವಾಗಿ ನಾಶವಾಗಿದ್ದು ಮಧ್ಯದಲ್ಲಿ ಶಿವಲಿಂಗ ಹಾಗೂ ಎದುರುಗಡೆ ನಂದಿ ಮೂರ್ತಿಯಿದೆ. ಶಿವಲಿಂಗವು ಒಂದು ಅಡಿ ಎತ್ತರವಾಗಿದ್ದು ಚೌಕಾಕಾರದ ಪಾಣಿವಟ್ಟ, ಜಲಹಾರಿ ಬ್ರಹ್ಮಭಾಗವನ್ನು ಹೊಂದಿದೆ. ನಂದಿಮೂರ್ತಿಯು ಎರಡು ಅಡಿ ಎತ್ತರವಾಗಿದ್ದು ಕೊರಳಿಗೆ ಗಂಟಾಸರ, ಕಾಲುಕಡಗಗಳನ್ನು ಕಂಡರಿಸಲಾಗಿದೆ.

### ಕಪ್ಪಡಬಂಡೆಹಟ್ಟಿ ಯರಮಂಚಯ್ಯ ವೀರಗಲ್ಲು

ಕೋನಸಾಗರ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಸೇರಿದ ಕಪ್ಪಡಬಂಡೆಹಟ್ಟಿ ಬಳಿ ಇರುವ ವೀರಗಲ್ಲು ಇದೆ. ಪಶುಪಾಲನೆಯನ್ನು ಕೈಗೊಂಡು ಜೀವನ ಸಾಗಿಸುವ ಮ್ಯಾಸನಾಯಕರ ಪಂಗಡಕ್ಕೆ ಸೇರಿದ ಯರಮಂಚಯ್ಯ ಎಂಬುವವನು ತನ್ನ ಕುರಿಮಂದೆಯ ಮೇಲೆ ಎರಗಿದ ಚಿರತೆಯನ್ನು ನಿರಾಯುಧನಾಗಿ ಎದುರಿಸುತ್ತಿದ್ದು, ಅವನ ನಾಯಿಯು ಚಿರತೆಯ ಕಾಲನ್ನು ಹಿಡಿದುಕೊಳ್ಳುವುದರ ಮೂಲಕ ತನ್ನ ಒಡೆಯನಿಗೆ ಸಹಕರಿಸುತ್ತದೆ. ಇದರ ಅಧ್ಯಯನ ನಡೆಸಿದ ಶೇಷಶಾಸ್ತ್ರಿಗಳು ವೀರಗಲ್ಲಿನ ಶಿಲ್ಪ ಸಾಧಾರಣದ್ದೇ ಆದರೂ ಬೇಟೆಯ ಪ್ರಸಂಗವನ್ನು ಶಿಲ್ಪದಲ್ಲಿ ಸಹಜವಾಗಿ ಮೂಡಿಸಲಾಗಿದೆ ಎಂದು ಮೆಚ್ಚಿದ್ದಾರೆ. ಇಂಥ ಇಪ್ಪತ್ತನೆಯ ಶತಮಾನದ ಕಾಲಘಟ್ಟದಲ್ಲಿ ಬೇಡ ಸಮುದಾಯದವರು ವೀರಗಲ್ಲನ್ನು ನೆಟ್ಟಿರುವುದು ಕುತೂಹಲದ ಸಂಗತಿ ಎಂದು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ.

## ಮನೆ, ಗುಡಿಸಲು ನಿರ್ಮಾಣ

ಸ್ವಂತ ಭೂಮಿಯನ್ನು ಹೊಂದಿದ್ದು ನೀರಾವರಿ ವ್ಯವಸ್ಥೆಯನ್ನು ಮಾಡಿಕೊಂಡ ಕುಟುಂಬಗಳ ಮನೆಗಳು ಮಾಳಿಗೆ ಮನೆಗಳಾಗಿವೆ. ಬಯಲುಸೀಮೆಯ ಮ್ಯಾಸನಾಯಕ ಹಟ್ಟಿಗಳಲ್ಲಿ ಮಣ್ಣಿನ ಮನೆಗಳನ್ನೇ ಹೆಚ್ಚಾಗಿ ಕಾಣಬಹುದು. ಇವು ದೀರ್ಘಾವಧಿಯವರೆಗೂ ಬಾಳಿಕೆ ಬರುತ್ತವೆ. ಕೆಲವರಿಗೆ ಇಂಥ ಮನೆಗಳು ತಮ್ಮ ಹಿರಿಯರಿಂದ ಬಂದಿವೆ. ಇಂದು ಈ ಮನೆಗಳ ನಿರ್ವಹಣೆಗೂ ಕೆಲವರು ಅಸಮರ್ಥರಾಗಿದ್ದಾರೆ. ಸ್ವಲ್ಪ ಭೂಮಿಯನ್ನು ಹೊಂದಿದ್ದು, ಜೀವನ ನಿರ್ವಹಣೆಗೆ ಕಷ್ಟವಾಗಿ ಕೂಲಿ ಮಾಡಿಕೊಂಡಿರುವ ಕುಟುಂಬಗಳು ಮಣ್ಣಿನ ಗೋಡೆಯ ಗುಡಿಸಲುಗಳನ್ನು ಕಟ್ಟಿಕೊಂಡಿದ್ದಾರೆ. ಇವರಿಗಿಂತ ಕೆಳಮಟ್ಟದಲ್ಲಿರುವ ಸಣ್ಣಪುಟ್ಟ ಕೆಲಸವನ್ನು ನಿರ್ವಹಿಸುವ ಕೆಲವರು ನೆರಿಕೆ ಗುಡಿಸಲುಗಳಲ್ಲಿ ವಾಸವಾಗಿದ್ದಾರೆ. ಮಾಳಿಗೆ ಮನೆಯನ್ನು ಬಿಟ್ಟರೆ ಇವೆರಡು ಮನೆಗಳು ರಚನೆಯಲ್ಲಿ ಸರಳವಾಗಿವೆ. ಮಾಳಿಗೆ ಮನೆಗಳು ನಿರ್ಮಾಣಕ್ಕೆ ಬೇರೆ ಪ್ರದೇಶಗಳಿಂದ ವಸ್ತುಗಳನ್ನು ತರಬೇಕು. ಆದರೆ ಕೆಳಗಿನ ಗುಡಿಸಲುಗಳು ನೆರಿಕೆ ಗುಡಿಸಲುಗಳ ಮನೆಗಳನ್ನು ಕಟ್ಟಲು ಪ್ರಕೃತಿಯಲ್ಲಿ ಸಿಗುವ ವಸ್ತುಗಳನ್ನೇ ಬಳಸಿಕೊಂಡು ಮನೆ ಕಟ್ಟುತ್ತಾರೆ. ಇದರಿಂದಾಗಿ ಮನೆ ಕಟ್ಟಲು ತಗಲುವ ವೆಚ್ಚವು ಕಡಿಮೆ. ಇಂದು ಕೆಲವು ಶ್ರೀಮಂತರು

ಹೊರ ಊರಿನಿಂದ ಸಿಮೆಂಟು, ಮಂಗಳೂರು ಹೆಂಚು, ಇಟ್ಟಿಗೆ, ಕಲ್ಲುಗಳನ್ನು ತಂದು ಮನೆ ಕಟ್ಟಿಕೊಳ್ಳುತ್ತಿದ್ದಾರೆ. ಮ್ಯಾಸನಾಯಕರು ನಾನೂರು, ಐನೂರು ವರ್ಷಗಳ ಹಿಂದೆಯೇ ವಲಸಿಗರಾಗಿ ಬಂದ ಹಾಗೂ ಸರ್ಕಾರದ ಅರಣ್ಯ ನೀತಿಯಿಂದಾಗಿ ಒಂದೆಡೆ ನೆಲೆಸಿರುವುದರಿಂದ ಹಿಂದಿನ ತಲೆ ಮಾರಿನವರು ಇವರಿಗೆ ಮಾಳಿಗೆ ಮನೆಗಳನ್ನು ಬಿಟ್ಟು ಹೋಗಿದ್ದಾರೆ. ಜೋಪಡಿಗಳನ್ನು ಕೈಬಿಟ್ಟು ಮನೆ ನಿರ್ಮಾಣ ಕಾರ್ಯಕ್ಕೆ ಸಿದ್ಧರಾಗಿದ್ದಾರೆ. ಸರ್ಕಾರ ನೀಡುವ ಇಂದಿರಾ ಆವಾಜ್ ಆಶ್ರಯ, ಅಂಬೇಡ್ಕರ್, ಬಸವ ವಸತಿ ಯೋಜನೆಗಳಿಂದ ಮನೆ ಕಟ್ಟಿಕೊಳ್ಳುತ್ತಾರೆ. ಇದರಲ್ಲಿಯೂ ಸರಿಯಾದ ಫಲಾನುಭವಿಗಳಿಗೆ ಮನೆ ಸಿಗುವುದಿಲ್ಲ. ರಾಜಕೀಯ ಹಸ್ತಕ್ಷೇಪದಿಂದಾಗಿ ದುಂಬಾಲು ಬಿದ್ದು ಮನೆ ಗಿಟ್ಟಿಸಿಕೊಳ್ಳುತ್ತಿದ್ದಾರೆ.

ಇವರ ಮನೆಗಳಲ್ಲಿ ದನದಹಟ್ಟಿ, ದನದಕ್ಕಿ, ಗ್ವಾದ್ಲಿ, ಮೂಮುಸರಿಬಾನಿ, ಅಟ್ಟ ಮುಂತಾದವುಗಳನ್ನು ಕಾಣಬಹುದು. ಕೆಲವರು ಆಡುಗಳನ್ನು ಸಾಕಿಕೊಂಡಿರುವ ಕಾರಣ ಅವರ ಮನೆಗಳಲ್ಲಿ ಆಡಿನ ಹಟ್ಟಿಗಳನ್ನು ಕಟ್ಟಿಕೊಂಡಿರುವರು. ಇವರು ತಮ್ಮ ಕಬ್ಬಿಣದ ಕೃಷಿ ಸಾಮಾನುಗಳನ್ನು ಮನೆಯೊಳಗೆ ಮೂಲೆಗಳಲ್ಲಿ ಮತ್ತು ಮರದ ನೇಗಿಲು, ಕುಂಟೆ ಬಂಡಿಗಳನ್ನು ಮನೆಯ ಹೊರಗೆ ಇಟ್ಟುಕೊಳ್ಳುವರು. ಹಗ್ಗ, ಮೂಗುದಾರಗಳನ್ನು, ಚಪ್ಪರದ ಇಂಡಿಗಿಗಳಿಗೆ ಕಟ್ಟಿರುತ್ತಾರೆ. ಇವು ಮ್ಯಾಸರು ಕೃಷಿಕರಾಗಿ ಪರಿವರ್ತಿತರಾಗಿರುವುದನ್ನು ಸೂಚಿಸುತ್ತದೆ. ಇವರು ಬಹುಹಿಂದೆ ಬೇಟೆಯನ್ನು ಆಡುತ್ತಿದ್ದರು ಎಂಬುದಕ್ಕೆ ಆಧಾರ ಸಿಕ್ಕುತ್ತದೆ.

**ಮನೆ ಕಟ್ಟುವ ತಂತ್ರಜ್ಞಾನ**

ಮನೆಯ ಶಾಶ್ವತತೆಯ ಬಗ್ಗೆ ಬೇಡರು ವಹಿಸುವ ಕಾಳಜಿಯನ್ನು ಅರಿತುಕೊಳ್ಳಲು ಪ್ರಯತ್ನಿಸಲಾಗಿದೆ. ಬಹುಹಿಂದೆ ಬೇಡರು ತಮ್ಮ ಮನೆಯನ್ನು ತಾವೇ ಕಟ್ಟಿಕೊಳ್ಳುತ್ತಿದ್ದರಂತೆ. ಆದರೆ ಇಂದು ವಡ್ಡರು, ಉಪ್ಪಾರರು ಮುಸ್ಲಿಮರು ಇವರ ಮನೆಗಳನ್ನು ಕಟ್ಟುತ್ತಿದ್ದಾರೆ. ಹೀಗಾಗಿ ಇದರಿಂದ ಹಿಂದಿನ ಮನೆಕಟ್ಟುವಿಕೆಯ ತಂತ್ರವನ್ನು ತಿಳಿಯುವುದು ಕಷ್ಟಸಾಧ್ಯವಾಗಿದೆ. ವಡ್ಡ, ಉಪ್ಪಾರ ಮತ್ತು ಮುಸ್ಲಿಮರು ಕಟ್ಟಿದ ಮನೆಗಳು ಆಧುನಿಕ ಅಭಿಯಂತರರು ಮನೆ ಕಟ್ಟುವಂತೆಯೇ ಏಕಮಾದರಿಯ ರಚನಾವಿನ್ಯಾಸವನ್ನು ಒಳಗೊಂಡಿದೆ. ಇಂದು ಬೇಡರ ಮನೆಕಟ್ಟುವ ತಂತ್ರಜ್ಞಾನದ ಮಾಹಿತಿ ದೊರೆಯುವುದಿಲ್ಲ. ಕ್ಷೇತ್ರವ್ಯಾಪ್ತಿಯಲ್ಲಿ ವೃತ್ತಾಕಾರದ ಪೌಳಿಗಳು ಹಿಂದಿನ ಮನೆಗಳ ಮಾದರಿಯಾಗಿರಬೇಕು ಎಂದು ಊಹಿಸಬಹುದಾಗಿದೆ.

ಮನೆಕಟ್ಟುವ ಪ್ರಾರಂಭದಲ್ಲಿ ಜಾಗ ಅಳತೆ ಮಾಡಿಕೊಂಡು ಆಯ ನಿರ್ಧರಿಸಿ ಬುನಾದಿಯನ್ನು ತೋಡುತ್ತಾರೆ. ಸಾಮಾನ್ಯವಾಗಿ ಬೇಡರ ಮನೆಗಳ ಉದ್ದ ಮತ್ತು ಅಗಲ ಬೆಸ ಸಂಖ್ಯೆಯಾಗಿರುತ್ತದೆ. ಉದಾಹರಣೆಗೆ ಮನೆಯ ಉದ್ದ ೧೧ ಆಗಿದ್ದರೆ ಅಗಲ ೯ ಆಗಿರುತ್ತದೆ. ಮಣ್ಣಿನ ಗೋಡೆಗಳಿಗೆ ೩ ಅಥವಾ ೪ ಅಡಿ ಬುನಾದಿ ತೋಡುತ್ತಾರೆ.

ಗುಡಿಸಲು ಅಥವಾ ನೆರಿಕೆಗಳಿಗೆ ಅರ್ಧ ಅಥವಾ ಒಂದು ಅಡಿ ತೋಡುತ್ತಾರೆ. ಬುನಾದಿಯನ್ನು ಕಾಡುಗಲ್ಲುಗಳನ್ನು ಹಾಕಿ ಮುಚ್ಚಿ ಮೇಲ್ಭಾಗದಲ್ಲಿ ಹಸಿ ಯೆಂಡೆಗಳಿಂದ ಗೋಡೆ ಕಟ್ಟುತ್ತಾರೆ. ಈ ಗೋಡೆ ಸುಮಾರು ೪ ಅಡಿ ಇರುತ್ತದೆ. ಗೋಡೆ ಅರ್ಧ ಮೇಲೆ ಬಂದಾಗ ಬಾಗಿಲ ಚೌಕಟ್ಟನ್ನು ಮತ್ತು ಕಿಟಕಿಗಳನ್ನಿಡುತ್ತಾರೆ. ಇದರ ಮೇಲೆ ಮತ್ತೆ ಗೋಡೆಯನ್ನು ಕಟ್ಟಿ, ತೊಲೆ ತೀರುಗಳನ್ನಿಟ್ಟು, ಚಾಪೆ ಹಾಕಿ ಬೇವಿನ ಸೊಪ್ಪನ್ನು ಹಾಕಿ ಹಾಳು ಮಣ್ಣು ಅಥವಾ ಕೆಂಪು ಮಣ್ಣನ್ನು ಹಾಕುತ್ತಾರೆ. ಮಳೆಗೆ ಬೆಳಕಿಂಡಿ ಅಥವಾ ಗವಾಕ್ಷಿಯನ್ನು, ಹೊಗೆ ಕಿಂಡಿಯನ್ನು ಮಾಡಿಕೊಂಡಿರುತ್ತಾರೆ. ಹೊರಕೆಲಸ ಮುಗಿದ ನಂತರ ಮನೆಯ ಒಳಗೆ ಒಲೆಯನ್ನಿಟ್ಟು ನಂತರ ನೆಲವನ್ನು ಸಮತಟ್ಟು ಮಾಡಿಕೊಳ್ಳುತ್ತಾರೆ. ಮಣ್ಣಿನ ಮನೆಗಳಿಗೆ ಕೇವಲ ಗೋಡೆಗಳಷ್ಟೇ ಅಲ್ಲದೆ ಕಂಬಗಳು ಸಹ ಆಧಾರವಾಗಿರುತ್ತವೆ. ಮಣ್ಣಿನ ಅಥವಾ ಮಾಳಿಗೆ ಮನೆಗಳಿಗೆ ಅಂಕಣದ ಮನೆಗಳು ಎಂದು ಕರೆಯುತ್ತಾರೆ. ಸುಮಾರು ೬ ಅಡಿಗೆ ಒಂದು ಕಂಬವನ್ನು ಕೂಡಿಸುತ್ತಾರೆ. ಇಂಥ ಚೌಕಾಕಾರದ ನಾಲ್ಕು ಕಂಬಗಳು ಸೇರಿ ಒಂದು ಅಂಕಣವಾಗುತ್ತದೆ. ಮಾಳಿಗೆ ಮನೆಯನ್ನು ಚೌಕಾಕಾರದ ಅಥವಾ ಆಯತಾಕಾರದಲ್ಲಿ ಕಟ್ಟಬಹುದು.

ಗುಡಿಸಲು ಮನೆಯನ್ನು ಕಟ್ಟುವ ವಿಧಾನ ಸ್ವಲ್ಪಮಟ್ಟಿಗೆ ಬದಲಾಗುತ್ತದೆ. ಮೊದಲು ಸುತ್ತಲಿನ ನಾಲ್ಕು ಗೋಡೆಯನ್ನು ಕಟ್ಟಿಕೊಳ್ಳುತ್ತಾರೆ. ಮಧ್ಯದ ಗೋಡೆಗಳು ಎಂಟೊಂಬತ್ತು ಅಡಿಗಳಿದ್ದರೆ ಕೊನೆ(ಪಕ್ಕದ)ಯ ಎರಡು ಗೋಡೆಗಳು ನಾಲ್ಕು ಅಥವಾ ಐದು ಅಡಿ ಎತ್ತರವಾಗಿರುತ್ತದೆ. ಗೋಡೆಯನ್ನು ಕಟ್ಟಿದ ನಂತರ ಗುಡಿಸಲು ಮಧ್ಯದಲ್ಲಿ ಎರಡು ಅಥವಾ ಮೂರು ಕಂಬಗಳನ್ನು ನೆಟ್ಟು, ಗೋಡೆ ಮತ್ತು ಕಂಬಗಳ ಮೇಲೆ ದೊಡ್ಡದಾದ ಅಡ್ಡಬಲಗನ್ನಿಡು ತ್ತಾರೆ. ಈ ಅಡ್ಡಬಲಗಿನ ಮತ್ತು ಗೋಡೆಯ ಆಧಾರದ ಮೇಲೆ ತೀರುಗಳನ್ನು ಹಾಕುತ್ತಾರೆ. ತೀರುಗಳ ಮಧ್ಯ ಸಣ್ಣ ಸಣ್ಣ ಇಂಡಿಗಿ ಬರಲನ್ನು ಕಟ್ಟುತ್ತಾರೆ. ನಂತರ ತಾಳೆ ಅಥವಾ ತೆಂಗಿನ ಗರಿಗಳನ್ನು ಹಾಕಿ ಮೇಲೆ ಕಾಂಶಿಹುಲ್ಲು ಇಲ್ಲವೇ ಕಬ್ಬಿನ ಒಗಡನ್ನು ಹಾಕಿ ಸೋರದಂತೆ ಮಾಡುತ್ತಾರೆ. ಸಾಮಾನ್ಯವಾಗಿ ಗುಡಿಸಲುಗಳು ಆಯಾತಾಕಾರವಾಗಿಯೇ ಕಟ್ಟಲ್ಪಟ್ಟಿರುತ್ತವೆ. ಈ ಗುಡಿಸಲುಗಳಿಗೆ ಮುಂದಿನಿಂದ ಅಥವಾ ಪಕ್ಕದಿಂದ ಬಾಗಿಲುಗಳನ್ನು ಮಾಡಲಾಗಿರುತ್ತದೆ.

## ಮನೆ ಕಟ್ಟಲು ಬಳಸುವ ಸಲಕರಣೆಗಳು

ಇಂದು ಮನೆ ಕಟ್ಟಿಕೊಳ್ಳುವಾಗ ವ್ಯಕ್ತಿ ಪರಾವಲಂಬಿಯಾಗಬೇಕಾಗಿದೆ. ವಡ್ಡರ, ಉಪ್ಪಾರರ, ಮುಸ್ಲಿಮರ, ಕಂಬಾರರ, ಕಮ್ಮಾರರ, ಬಡಗಿಗಳ, ಸುಣ್ಣಗಾರರ ಸಹಾಯವನ್ನು ಪಡೆಯುವುದು ಆವಶ್ಯಕವಾಗಿದೆ. ನೆರಿಕೆ ಅಥವಾ ಗುಡಿಸಲಿನ ಮನೆಯನ್ನು ಕಟ್ಟಿಕೊಳ್ಳುವಾಗ ಇಷ್ಟು ಜನರ ಸಹಾಯ ಬೇಕಿಲ್ಲದಿದ್ದರೂ ವಡ್ಡರು, ಬಡಗಿಗಳು ಅವಶ್ಯಕವಾಗಿದ್ದಾರೆ. ಆಧುನಿಕ ಮನೆ, ಸಾಂಪ್ರದಾಯಿಕ ಮಾಳಿಗೆ ಮನೆ ಕಟ್ಟಿಕೊಳ್ಳಲು ಮೇಲೆ ಸೂಚಿಸಿದ ಎಲ್ಲ ವರ್ಗದವರ ನೆರವು ಅಗತ್ಯವಾಗಿದೆ. ಬೇಡರಲ್ಲಿ ಮನೆಗಳನ್ನು ವಡ್ಡರೇ ಕಟ್ಟುವುದರಿಂದ ಕ್ಷೇತ್ರಕಾರ್ಯದಲ್ಲಿ ವಡ್ಡರು

ಬಳಸುವ ಉಪಕರಣಗಳ ಹೆಸರನ್ನು ಸೂಚಿಸಿದರು. ಮನೆ ಕಟ್ಟಲು ಸ್ಥಳ ಆಯ್ಕೆ ಮಾಡಿಕೊಂಡಾಗ ನೆಲದ ಮಟ್ಟವನ್ನು ಅಳತೆ ಮಾಡಲು ನೀರಮಟ್ಟವನ್ನು ಬಳಸುತ್ತಾರೆ. ಮನೆಯ ಉದ್ದ ಅಗಲ ವನ್ನು ಗಜಕಡ್ಡಿ ಅಥವಾ ಅಳತೆ ಪಟ್ಟಿಯಿಂದ ಅಳತೆ ಮಾಡಿದ ನಂತರ ನಾಲ್ಕು ಕಡೆ ಹಗ್ಗ ಅಥವಾ ದಾರಕಟ್ಟಿ ಬುನಾದಿ ತೆಗೆಯುವರು. ಗೋಡೆ ಕಟ್ಟುವಾಗ ಇಂಗ್ಲೀಷಿನ 'ಎಲ್' ಆಕಾರದ ಮೂಲೆ ಮಟ್ಟ(ಮಟ್ಟಲಿಗಿ)ವನ್ನು ಬಳಸುತ್ತಾರೆ. ಗೋಡೆ ಅಂಕುಡೊಂಕಾಗದಂತೆ ನೋಡಿಕೊಳ್ಳಲು ತೂಕದ ಗುಂಡನ್ನು ಬಳಸುತ್ತಾರೆ. ಗೋಡೆಯ ಮೂಲೆಗಳು ಸೇರುವಲ್ಲಿ ಇಟ್ಟಿಗೆ ಅಥವಾ ಕಲ್ಲನ್ನು ಸರಿಯಾಗಿ ಹೊಂದಿಸಲು ಸುತ್ತಿಗೆಯನ್ನು ಬಳಸುವರು. ಗೋಡೆಯ ಕೆಸರು, ಸಿಮೆಂಟು ಮೆತ್ತಲು ತ್ಯಾಪಿಯನ್ನು ಮತ್ತು ಗೋಡೆ, ನೆಲ ಸಮತಟ್ಟುಗೊಳಿಸಲು ಕರಂಡಿ ಅಥವಾ ಚೆಕ್ಕೆಯನ್ನು ಉಪಯೋಗಿಸುತ್ತಾರೆ. ಇವಲ್ಲದೆ ಗುದ್ದಲಿ, ಚಲಿಕೆ, ಪುಟ್ಟಿ, ಕೊಡ ಇತ್ಯಾದಿ ವಸ್ತುಗಳು ಮನೆ ಕಟ್ಟಲು ಬೇಕಾಗುತ್ತದೆ. ಮನೆಗೆ ಸಂಬಂಧಿಸಿದ ಮರಗೆಲಸವನ್ನು ಬಡಗಿಗಳು ಮಾಡುವುದರಿಂದ ಬಾಗಿಲು, ಕಿಟಕಿ, ಕಂಬ, ತೊಲಿ, ತೀರು ಮುಂತಾದವುಗಳನ್ನು ಮಾಡಲು ತಮ್ಮದೇ ಆದ ಉಪಕರಣಗಳಿವೆ. ಮೊಳೆ ಸುತ್ತಿಗೆ, ಸ್ಕ್ರೂಡ್ರೈವ್, ಅಳತೆಪಟ್ಟಿ, ಉಜ್ಗೋಡ್, ಗಾಳಿ ಉಳಿ, ಗೀಚ್‌ಕಡ್ಡಿ, ಗಾಡಿ ಎಚ್ಗೋಡ್, ಗರಗಸಗಳನ್ನು ಬಳಸಿಕೊಳ್ಳುತ್ತಾರೆ.

## ಮನೆ ಕಟ್ಟಲು ಬೇಕಾಗುವ ಸಂಪನ್ಮೂಲಗಳು

ಗುಡಿಸಲು ಕಟ್ಟಿಕೊಳ್ಳಲು ಯಂಡೆ, ಕೆಸರು ಅಥವಾ ಮಣ್ಣು, ಮರ, ಹುಲ್ಲು, ಗರಿ, ಸೆಗಣಿ, ಸುಣ್ಣ, ಕೆಮ್ಮಣ್ಣಿನ ಅವಶ್ಯಕತೆಯಿದೆ. ಇವು ಹಳ್ಳಿಯ ಸುತ್ತಲಿನ ಪರಿಸರದಲ್ಲಿಯೇ ದೊರೆಯುತ್ತದೆ. ಆದರೆ ಇವು ದೀರ್ಘಕಾಲ ಬಾಳಿಕೆ ಬರುವುದಿಲ್ಲ. ವರ್ಷಕ್ಕೊಮ್ಮೆ ಮಳೆಗಾಲಕ್ಕಿಂತ ಮುಂಚೆಯೇ ಗುಡಿಸಲನ್ನು ದುರಸ್ತಿ ಮಾಡಿಸಬೇಕು.

ಮಾಳಿಗೆ ಮನೆ ಕಟ್ಟಲು ಹಸಿಯಂಡೆ ಇಟ್ಟಿಗೆ, ಮರಮುಟ್ಟು, ಚಾಪೆ, ಮಣ್ಣು, ಕರ್ಲು, ಕಡಪಕಲ್ಲು, ಕಾಡಗಲ್ಲು ಇತ್ಯಾದಿಗಳನ್ನು ಬಳಸುತ್ತಾರೆ. ಇಂಥ ಮನೆಗಳನ್ನು ಕಟ್ಟಲು ಖರ್ಚು ಹೆಚ್ಚು ತಗಲುತ್ತದೆ. ಆದರೆ ದೀರ್ಘಕಾಲದವರೆಗೆ ಬಾಳಿಕೆ ಬರುತ್ತದೆ. ಎರಡು ಅಥವಾ ಮೂರು ವರ್ಷಕ್ಕೆ ಮಾಳಿಗೆಯ ಮೇಲೆ ಕರ್ಲು ಹಾಕಬೇಕಾಗುತ್ತದೆ. ಮಾಳಿಗೆ ಮೇಲಿನ ಹುಲ್ಲನ್ನು ವರ್ಷಕ್ಕೊಮ್ಮೆ ಕೀಳಿಸಬೇಕು. ಇಂದು ಸಿಮೆಂಟು, ಕಬ್ಬಿಣ, ಉಕ್ಕು, ಮಂಗಳೂರು ಹೆಂಚು ಮುಂತಾದ ಆಧುನಿಕ ವಸ್ತುಗಳಿಂದ ಮನೆ, ನಿರ್ಮಿತಗೊಳ್ಳುತ್ತಿದ್ದರೂ ಹಟ್ಟಿಗಳಲ್ಲಿ ಮನೆಯ ಸಾಂಪ್ರದಾಯಿಕ ಮಾದರಿ ಉಳಿಸಿಕೊಂಡು ಬಂದಿದೆ.

## ಮನೆ ಕಟ್ಟುವಾಗ ನಡೆಯುವ ಆಚರಣೆಗಳು

ಮನೆ ನಿರ್ಮಾಣದಲ್ಲಿ ಯಾವುದೇ ವಿಘ್ನಗಳು ನಡೆಯದಿರಲಿ ಎಂದು ಅನೇಕ ಆಚರಣೆಗಳನ್ನು ಮಾಡಲಾಗುತ್ತದೆ. ಬೇಡರಲ್ಲಿ ಮುಖ್ಯವಾಗಿ ಮೂರು ಆಚರಣೆಗಳನ್ನು ಮಾಡುತ್ತಾರೆ.

## ಗುದ್ದಲಿ ಪೂಜೆ

ಮನೆ ಕಟ್ಟಲು ಸ್ಥಳವನ್ನು ಆಯ್ಕೆ ಮಾಡಿಕೊಂಡ ನಂತರ ಪಂಚಾಂಗ ಕೇಳಿ ದಿನ ಗಂಟೆ ನಿರ್ಧರಿಸಿಕೊಂಡು, ಅವರು ಯಾವ ದಿಕ್ಕಿಗೆ ಹೇಳುತ್ತಾರೆಯೋ ಆ ದಿಕ್ಕಿನಲ್ಲಿ, ಹೆಚ್ಚಾಗಿ ಈಶಾನ್ಯದ ಮೂಲೆಯಲ್ಲಿ ಐದು ಕಲ್ಲುಗಳನ್ನಿಟ್ಟು ಮನೆಕಟ್ಟಲು ಬಳಸುವ ಸಲಕರಣೆಗಳನ್ನಿಟ್ಟು ಪೂಜೆ ಮಾಡಿ ನಂತರ ಬುನಾದಿ ತೆಗೆದು ಬುನಾದಿಯಲ್ಲಿ ಸ್ವಲ್ಪ ಬಂಗಾರ, ಬೆಳ್ಳಿಯ ಚೂರುಗಳನ್ನು ಹಾಕಿ, ಹಾಲು ತುಪ್ಪ ಹಾಕಿ, ಕಾಯಿ ಒಡೆಯುವರು. ಗುದ್ದಲಿಯ ಪೂಜೆ ಮನೆಯ ಕಟ್ಟುವಿಕೆಯ ಆರಂಭದ ಪೂಜೆ. ಈ ದಿನ ಕೆಲವರು ಮನೆಯನ್ನು ಕಟ್ಟುವ ವಡ್ಡರಿಗೆ ಬೇಳೆಕಾಳು, ಅಕ್ಕಿ, ಬೆಲ್ಲ, ಹಣವನ್ನು ಕೊಡುವರು. ಮ್ಯಾಸನಾಯಕರು ಈ ಪೂಜೆಯ ಸಂದರ್ಭದಲ್ಲಿ ಮನೆಯ ಏಳಿಗೆ ಹೊಂದಲಿ ಎಂದು ಲೋಬಾನಕ್ಕೆ ಏರಿಕೆಯ ಪುಡಿಯನ್ನು ಹಾಕಿ ಹೊಗೆ ಮಾಡಿ ಮನೆ ಏಳಿಗೆ ಹೊಂದಲಿ ಎಂದು ಪೂಜಿಸುತ್ತಾರೆ.

## ಬಾಗಿಲಪೂಜೆ

ಬುನಾದಿ ಹಾಕಿ, ಗೋಡೆ ಕಟ್ಟುವಾಗ ಎರಡು, ಮೂರು ಅಡಿ ಗೋಡೆ ಬಂದಾಗ ಬಾಗಿಲು ಚೌಕಟ್ಟನ್ನಿಡುವರು. ಮೊಟ್ಟಮೊದಲಿಗೆ ತಲೆಬಾಗಿಲನ್ನಿಡುವರು. ಈ ಬಾಗಿಲ ಕೆಳಗೆ ಮುತ್ತು, ರತ್ನ, ಬಂಗಾರ ಬೆಳ್ಳಿ, ಕಾಸುಗಳನ್ನಿಟ್ಟು, ಪೂಜೆ ಮಾಡುವರು. ನಂತರ ಬಾಗಿಲು ಚೌಕಟ್ಟಿಗೆ ಪೂಜೆ ಮಾಡುವರು. ಈ ಸಂದರ್ಭದಲ್ಲಿ ವಡ್ಡರಿಗೆ ಕೊಡುವಂತೆ ಬಡಗಿಗಳಿಗೂ ಧಾನ್ಯ, ಹಣ, ವಸ್ತ್ರಗಳನ್ನು ನೀಡುತ್ತಾರೆ.

## ಗೃಹಪ್ರವೇಶ

ಕೆಂಪು ಮನೆಯ ಮೇಲ್ಚಾವಣಿ ಹಾಕುವಾಗ ಕೆಲಸಕ್ಕೆ ಬಂದ ಕೂಲಿಗಳಿಗೆ ಊಟ ಹಾಕಿಸುವ ಪದ್ಧತಿಯಿದೆ. ಆದರೆ ಹೆಚ್ಚಿನ ಜನ ಬಾಗಿಲುಪೂಜೆಯ ನಂತರ ಮನೆಯೆಲ್ಲ ಕಟ್ಟಿ ಮುಗಿದ ಮೇಲೆ ಮನೆ ಪ್ರವೇಶಿಸುವಾಗ ಒಲೆಪೂಜೆ ಮಾಡಿ ಹಾಲುಕ್ಕಿಸಿ, ಬಂಧು ಬಳಗದವರಿಗೆ, ಸ್ನೇಹಿತರಿಗೆ ಊಟ ಹಾಕಿಸುವರು. ಆಗ ಮನೆಗೆ ದೃಷ್ಟಿ ತಾಗಬಾರದು ಎಂದು ತಲೆಬಾಗಿಲ ಒಳಗೆ ಮಂತ್ರಿಸಿದ ತೆಂಗಿನಕಾಯಿ, ನಿಂಬೆಹಣ್ಣನ್ನು ಬಟ್ಟೆಯೊಳಗಿಟ್ಟು ಕಟ್ಟುತ್ತಾರೆ.

ಮೇಲೆ ಹೇಳಿದ ಎಲ್ಲಾ ಆಚರಣೆಗಳು ಬೇಡ ಜನಾಂಗದಲ್ಲಿ ಇತ್ತೀಚೆಗೆ ಸೇರಿಕೊಂಡಿವೆ. ಅಂದರೆ ಬೇರೆ ಸಂಸ್ಕೃತಿಗಳ ಪ್ರಭಾವಕ್ಕೆ ಒಳಗಾದಂತೆ ಇಂಥ ಆಚರಣೆಗಳು ಸೇರ್ಪಡೆಯಾದವು. ಮೂಲತಃ ಮ್ಯಾಸನಾಯಕರು ಮನೆ ಕಟ್ಟಿಕೊಳ್ಳುವಾಗ ಆಚರಿಸುವ ಆಚರಣೆಗಳ ಬಗ್ಗೆ ಮಾಹಿತಿ ದೊರೆಯಲಿಲ್ಲ.

**ಮನೆಗೆ ಸಂಬಂಧಿಸಿದ ಕೆಲವು ನಂಬಿಕೆಗಳು**

೧. ಗುಡಿಗೆ ಹೋಗಿ ಮನೆಗೆ ಬಂದಾಗ ಕಾಲು ತೊಳೆಯದೆ ಒಳಬರಬೇಕು.

೨. ಹನುಮನ ದಿಕ್ಕಿಗೆ ಮನೆ ಬಾಗಿಲಿಡಬಾರದು.

೩. ಗುಡಿಯ ಎದುರಿಗೆ ಮನೆ ಇರಬಾರದು. ಆ ಮನೆ ಏಳಿಗೆಗೆ ಬರುವುದಿಲ್ಲ.

೪. ಮನೆಯೊಳಗೆ ಚಪ್ಪಲಿಯನ್ನು ಹಾಕಿಕೊಂಡು ಹೋಗಬಾರದು.

೫. ಒಲೆಯನ್ನು ಒದೆಯಬಾರದು.

೬. ಒರಳಿನ ಮೇಲೆ ಕೂಡಬಾರದು.

೭. ಹೊಸ್ತಿಲಿಗೆ ಬೇವಿನಮರ ಬಳಸುವಂತಿಲ್ಲ.

೮. ಹೊಸ್ತಿಲ ಮೇಲೆ ಕೂಡಬಾರದು.

೯. ಒಲೆ ಹತ್ತಿಸುವಾಗ ಪೂಜೆ ಮಾಡಿ ಹತ್ತಿಸಬೇಕು.

೧೦. ಮೂರು ಒಲೆ ಹಾಕಬಾರದು.

೧೧. ಉತ್ತರ, ಪೂರ್ವಕ್ಕೆ ತಲೆ ಮಾಡಿ ಮಲಗುವಂತಿಲ್ಲ.

೧೨. ಪಶ್ಚಿಮ, ದಕ್ಷಿಣಕ್ಕೆ ಕಾಲು ಮಾಡಿ ಮಲಗಬಾರದು.

೧೩. ರಾತ್ರಿ ಕಸಗೂಡಿಸಿ ಮನೆಯಿಂದ ಹೊರ ಹಾಕಬಾರದು

೧೪. ಮ್ಯಾಸನಾಯಕರ ಮನೆಯೊಳಗೆ ಕೋಳಿ ಬರಬಾರದು.

೧೫. ಹುಟ್ಟಿದಾಕ್ಷಣ ಮಕ್ಕಳನ್ನು ಮೊರದಲ್ಲಿ ಮಲಗಿಸಬೇಕು.

೧೬. ಹುಟ್ಟಿದ ಮಗುವನ್ನು ಮೊರದಲ್ಲಿಟ್ಟು ಪಶ್ಚಿಮಕ್ಕೆ ತಲೆ, ಪೂರ್ವಕ್ಕೆ ಕಾಲು ಮಾಡಿ ಮಲಗಿಸಬೇಕು.

**ಮನೆಯ ಅಲಂಕಾರ**

ಮ್ಯಾಸನಾಯಕರ ಹಟ್ಟಿಗಳಲ್ಲಿ ಎರಡು ಅಥವಾ ಮೂರಕ್ಕಿಂತ ಹೆಚ್ಚಿನ ಕೋಣೆಗಳು ಸಾಮಾನ್ಯವಾಗಿ ಕಂಡುಬರುವುದಿಲ್ಲ. ಒಂದೇ ಕೋಣೆಯಿದ್ದು, ಅಡ್ಡಗೋಡೆಗಳು ಮನೆಯನ್ನು ಅಡುಗೆಮನೆ, ಬಚ್ಚಲುಮನೆ, ನಡುಮನೆ, ಪಡಸಾಲೆ ಎಂದು ವಿಭಾಗಿಸುತ್ತೇವೆ. ಬಡತನದ ಜೀವನವನ್ನು ನಡೆಸುವ ಇವರು ಅಲಂಕಾರಕ್ಕಿಂತ ಉಪಯುಕ್ತತೆಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ದುಬಾರಿಯಾದ ಅನಾವಶ್ಯಕ ಆಲಂಕಾರಿಕ ವಸ್ತುಗಳನ್ನು ತಂದು ಮನೆಯನ್ನು ಅಂದಗೊಳಿಸುವ ಪ್ರಯತ್ನ ಮಾಡುವುದಿಲ್ಲ.

ಇವರು ಮನೆಯನ್ನು ಅಲಂಕರಿಸಲು ಬಳಸುವ ವಸ್ತುಗಳು ಸಹ ನಿಸರ್ಗದಲ್ಲಿ ಸಿಗುವ ವಸ್ತುಗಳೇ. ಸುಣ್ಣ, ಸಗಣಿ, ಕೆಮ್ಮಣ್ಣು, ಅರಿಶಿನ, ಕುಂಕುಮ, ಮಾವಿನತೋರಣ, ಬೇವಿನ ಸೊಪ್ಪು ಮುಂತಾದವುಗಳಿಂದ ಮನೆಯನ್ನು ಅಂದವಾಗಿಸಿಕೊಳ್ಳುತ್ತಾರೆ. ವಾರಕ್ಕೆ ಒಮ್ಮೆ ಸೆಗಣಿ ಸಾರಿಸಿ ಗುಡಿಸಲನ್ನು ಸ್ವಚ್ಛವಾಗಿಟ್ಟುಕೊಳ್ಳುತ್ತಾರೆ. ಹುಣ್ಣಿಮೆ, ಅಮಾವಾಸ್ಯೆಯೆಂದು ಗುಡಿಸಲು, ಅಂಗಳಗಳನ್ನು ಸಾರಿಸಿ, ಹೊಸ್ತಿಲಿಗೆ ಕೆಮ್ಮಣ್ಣು(ಜಾಜು) ಅಥವಾ ಉರಿಮಂಜನ್ನು ಹಚ್ಚಿ ಅರಿಶಿಣ, ಕುಂಕುಮವನ್ನಿಟ್ಟು ಸಿಂಗಾರಗೊಳಿಸುತ್ತಾರೆ. ಮ್ಯಾಸನಾಯಕರಲ್ಲಿ ಈ ಪದ್ಧತಿ ಹೆಚ್ಚಾಗಿ ಕಂಡು ಬರುತ್ತದೆ. ಹೊಸ್ತಿಲಿಗೆ ವಿಭೂತಿ ಕುಂಕುಮ ಮುಂತಾದವುಗಳನ್ನು ಹಚ್ಚಿದರೂ ರಂಗೋಲಿಯ ಬಳಕೆ ಕಡಿಮೆ ಪ್ರಮಾಣದಲ್ಲಿದೆ.

ಸುಣ್ಣವನ್ನು ಉಪಯೋಗಿಸುವ ಮನೆಗಳವರು ಹಬ್ಬ ಹರಿದಿನಗಳಲ್ಲಿ ಅಥವಾ ಮೈಲಿಗೆ ಕಳೆದುಕೊಳ್ಳುವಾಗ ಸುಣ್ಣ ಹಚ್ಚಿಸುತ್ತಾರೆ. ವಾರ ವಾರ ಸುಣ್ಣವನ್ನು ಹಚ್ಚುವುದಿಲ್ಲ. ಸಾಮಾನ್ಯವಾಗಿ ಗುಡಿಸಲು ಮನೆಗಳಿಗಿಂತ ಮಾಳಿಗೆ ಮನೆಗಳಲ್ಲಿ ಸುಣ್ಣದ ಬಳಕೆಯಿದೆ. ಈ ಮನೆಗಳು ಸ್ವಲ್ಪ ವಿಶಾಲವಾಗಿರುವುದರಿಂದ ಗುಡಿಸಲುಗಳಂತೆ ವಾರಕ್ಕೊಮ್ಮೆ ಸುಣ್ಣ ಬಳಿಯುವುದು ಕಷ್ಟ.

ಹಬ್ಬ ಹರಿದಿನಗಳಲ್ಲಿ ಜಾತ್ರೆಗಳಲ್ಲಿ ಜೋಳದ ತೆನೆ, ಸಜ್ಜೆತೆನೆ, ಕಬ್ಬು, ಸೂರ್ಯಕಾಂತಿ ಮುಂತಾದವುಗಳನ್ನು ತಂದು ಬಾಗಿಲ ಚೌಕಕ್ಕೆ ನಿಲ್ಲಿಸುತ್ತಾರೆ. ಮಾವಿನ ತೋರಣವನ್ನು ಕಟ್ಟಿ ಅಲಂಕರಿಸಿರುತ್ತಾರೆ. ಕೆಲವು ಮನೆಗಳಲ್ಲಿ ಮಾತ್ರ ಚಿತ್ತಾರದ ಬಾಗಿಲ ಚೌಕಟ್ಟುಗಳಿವೆ. ಅದರಲ್ಲಿ ಗಿಣಿ ಹೂಬಳ್ಳಿಗಳನ್ನು, ಸೂರ್ಯ, ಚಂದ್ರರನ್ನು ಕೆತ್ತಿಸಿದ್ದಾರೆ. ತಲೆ ಬಾಗಿಲಿನ ಎರಡು ಕಡೆಗಳಲ್ಲಿ ಸೆಗಣಿ ಅಥವಾ ಮಣ್ಣಿನಿಂದ ಮಾಡಿದ ಬಸವನ ಮುಖಗಳನ್ನಿಟ್ಟಿರುತ್ತಾರೆ. ಮನೆಯೊಳಗೆ ಪ್ರವೇಶಿಸಿದ ತಕ್ಷಣ ಸಿಗುವ ಗೋಡೆಯ ಮೇಲೆ ದೇವರ ಮತ್ತು ಕುಟುಂಬದ ಸದಸ್ಯರ ಫೋಟೋಗಳು ವಿರಾಜಿಸುತ್ತಿರುತ್ತವೆ. ಆಧುನಿಕತೆಯ ಸೊಗಡಿನಿಂದಾಗಿ ಇಂದು ಹಟ್ಟಿಯ ಮನೆಗಳಲ್ಲಿ ಮದಕರಿನಾಯಕ ವಾಲ್ಮೀಕಿ ಬೇಡರಕಣ್ಣಪ್ಪ, ಕುಮಾರರಾಮ, ವೆಂಕಟೇಶ್ವರ ಸುದೀಪ್, ಪ್ರಭಾಸ್ ಮೊದಲಾದವರ ಚಿತ್ರಗಳು ಕಾಣಸಿಗುತ್ತವೆ.

ಮ್ಯಾಸನಾಯಕರ ಹಟ್ಟಿಗಳಲ್ಲಿ ಪ್ರತಿದಿನ ಬೆಳಗ್ಗೆ ಒಲೆಗಳನ್ನು ತೊಳೆದು ಬೂದಿಯಿಂದಲೇ ವಿಭೂತಿ ಹಚ್ಚಿ ಅಡುಗೆ ಮಾಡಲು ಸಿದ್ಧ ಮಾಡಿಕೊಳ್ಳುತ್ತಾರೆ. ಅವರು ಸೇರಿಸಿಟ್ಟ ಅಡಕಲಗಡಿಗೆಗಳು, ನೆಲುವಿನ ಮೇಲಿರುವ ಮಡಿಕೆಗಳು, ಅಡ್ಡಗೋಡೆಯ ಮೇಲಿಟ್ಟ ವಸ್ತುಗಳು ಇವೆಲ್ಲವೂ ಮನೆಗೆ ತನ್ನದೇ ಆದ ಸೌಂದರ್ಯವನ್ನು ತಂದುಕೊಡುತ್ತವೆ.

ಇವರ ಜೀವನಕ್ರಮಗಳನ್ನು ನೋಡಿದಾಗ ಅನೇಕ ವಿಷಯಗಳು ಗಮನಕ್ಕೆ ಬಂದಿವೆ. ಆಧುನಿಕತೆ ಅವರನ್ನು ತಟ್ಟಿದ್ದರೂ ಹಿಂದಿನ ತಮ್ಮ ಸಂಪ್ರದಾಯ ಆಚರಣೆಗಳನ್ನು ಸಂಪೂರ್ಣ ಬಿಟ್ಟುಕೊಟ್ಟಿಲ್ಲ ಎಂಬುದು ಈ ಅಧ್ಯಯನದಿಂದ ಸ್ಪಷ್ಟವಾಗುತ್ತದೆ. ಮ್ಯಾಸನಾಯಕರು ಗುಂಪಾಗಿ

ಒಂದೆಡೆ ಮನೆಗಳನ್ನು ಕಟ್ಟಿಕೊಂಡು ಬದುಕುತ್ತಿದ್ದಾರೆ. ಅವರು ತಮ್ಮ ಹಿಂದಿನ ಅನೇಕ ಆಚರಣೆಗಳನ್ನು ಈಗಲೂ ಪಾಲಿಸುತ್ತಿರುವುದು ಕಂಡುಬರುತ್ತದೆ. ಇಡೀ ಆಧುನಿಕತೆ ಅವರ ಮೇಲೆ ಅಥವಾ ಆಚರಣೆಗಳ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿಲ್ಲವೆಂಬುದು ಗೋಚರ ವಾಗುತ್ತದೆ.

**ರಾಮದುರ್ಗದ ಕೋಟೆ**

ಚಳ್ಳಕೆರೆ ನಗರದಿಂದ ವಾಯವ್ಯಕ್ಕೆ ೨೪ ಕಿ.ಮೀ. ದೂರದಲ್ಲಿರುವ ಗ್ರಾಮದ ದಕ್ಷಿಣಕ್ಕೆ ಅರ್ಧ ಕಿ.ಮೀ. ದೂರದಲ್ಲಿ ಕೋಟೆಯನ್ನು ನಿರ್ಮಿಸಿದ್ದಾರೆ. ಇದೊಂದು ಬಂಡೆಗಲ್ಲಿನ ಗಿರಿ ದುರ್ಗವಾಗಿದ್ದು ಅಷ್ಟೇನೂ ಎತ್ತರವಿಲ್ಲದ ನಿಧಾನವಾಗಿ ಏರುತ್ತಿರುವ ಕಲ್ಲಿನ ಬೆಟ್ಟದ ಮೇಲೆ ಕೋಟೆಯನ್ನು ನಿರ್ಮಿಸಲಾಗಿದೆ. ಈ ಗುಡ್ಡವನ್ನು ಹೊಸಗುಡ್ಡ, ರಾಯದುರ್ಗದ ಗುಡ್ಡ ಎಂದು ಸ್ಥಳೀಯರು ಕರೆಯುತ್ತಾರೆ. ಈ ಗುಡ್ಡವು ಇಂದು ನಿರ್ಜನವಾದ ಪ್ರದೇಶದಲ್ಲಿ ಇದ್ದು ಎರಡು ಸುತ್ತಿನ ಕೋಟೆಯಿದೆ. ಮೊದಲನೇ ಸುತ್ತಿನ ಕೋಟೆಯಲ್ಲಿ ೧೧ ಬತೇರಿಗಳಿದ್ದು, ೪ ವೃತ್ತಾಕಾರದ ಹಾಗೂ ೭ ಚೌಕಾಕಾರವಾಗಿರುವ ಬತೇರಿಗಳಿವೆ. ಎರಡನೇ ಸುತ್ತಿನ ಕೋಟೆ ೫ ಬತೇರಿಗಳು, ಅರಮನೆ ಎಂದೆನಿಸುವ ದೊಡ್ಡ ಮನೆಯ ತಳಪಾಯವಿದೆ ಹಾಗೂ ೫ ಪುಷ್ಕರಿಣಿಗಳನ್ನು ಹೊಂದಿವೆ. ಪುಷ್ಕರಿಣಿಗಳಲ್ಲಿ ೩ ನೈಸರ್ಗಿಕವಾದವು ಮತ್ತು ಎರಡು ಪೂರ್ಣವಾದವು. ಹಾಗೆಯೇ ಗುಡ್ಡದ ಕೆಳಗೆ ೨ ಪುಷ್ಕರಿಣಿಗಳನ್ನು ವಿವಿಧ ಅಳತೆಯ ಕಲ್ಲು, ವಿವಿಧ ನಮೂನೆ ಶಿಲ್ಪಗಳನ್ನು ಬಳಸಿ ನಿರ್ಮಿಸಿದ್ದಾರೆ.

ಈ ಕೋಟೆಯು ಆಯತಾಕಾರದಲ್ಲಿದೆ. ಉತ್ತರ ಮತ್ತು ದಕ್ಷಿಣ ಭಾಗದ ಗೋಡೆಗಳಲ್ಲಿ ಮಹಾದ್ವಾರಗಳಿವೆ. ಪೂರ್ವ ದಿಕ್ಕಿನ ಗೋಡೆಗೆ ಮೆಟ್ಟಿಲುಗಳಿರುವ ಪ್ರದೇಶದಲ್ಲಿ ಬಾಗಿಲು ಇತ್ತೆಂದು ಅವಶೇಷಗಳು ಸೂಚಿಸುತ್ತವೆ. ನಾಲ್ಕು ಮೂಲೆಗಳಲ್ಲಿ ವೃತ್ತಾಕಾರದ ಬುರುಜುಗಳಿವೆ. ಪೂರ್ವ ಗೋಡೆಯಲ್ಲಿ ಒಂದು, ದಕ್ಷಿಣ ಗೋಡೆಯಲ್ಲಿ ಎರಡು ಮತ್ತು ಪಶ್ಚಿಮದ ಗೋಡೆಯಲ್ಲಿ ಮೂರು ಹೀಗೆ ಚೌಕಾಕಾರದ ಬುರುಜುಗಳಿವೆ.

ಕೋಟೆಯ ಗೋಡೆಯನ್ನು ಕಟ್ಟುವ ಶೈಲಿ ಸಾಮಾನ್ಯವಾಗಿದ್ದು, ಕೆಳ ನಾಲ್ಕು ಸ್ತರಗಳಲ್ಲಿ ದಪ್ಪದ ಚೌಕದ ಕಲ್ಲುಗಳನ್ನು ಉಪಯೋಗಿಸಿ ಅದು ಮೇಲೆ ಏರಿದಂತೆ ಚಿಕ್ಕದಾದ ಕಲ್ಲುಗಳ ಬಳಕೆಯಾಗಿದೆ. ಗಾರೆ, ಗಚ್ಚು, ಮಣ್ಣಿನ ಮಿಶ್ರಣಗಳಿಂದ ಕಲ್ಲಿನ ಸ್ತರಗಳು ಭದ್ರವಾಗಿ ಒಂದಕ್ಕೊಂದು ಅಂಟಿಕೊಳ್ಳುವಂತೆ ಮಾಡಲಾಗಿದೆ. ಗೋಡೆಯ ಒಳಗಡೆ ಉತ್ತರಭಾಗದಲ್ಲಿ ಅನೇಕ ಕಟ್ಟಡಗಳ ಅವಶೇಷಗಳಿವೆ. ಒಳಕೋಟೆಯು ಒಂದನೇ ಸುತ್ತಿನ ಕೋಟೆಯ ದಕ್ಷಿಣ ಭಾಗದಲ್ಲಿದೆ. ಮೊದಲನೇ ಸುತ್ತಿನ ಕೋಟೆಯ ಪಶ್ಚಿಮ ಭಾಗದಲ್ಲಿ ಪಶ್ಚಿಮಕ್ಕೆ ಮುಖ ಮಾಡಿರುವಂತೆ ಒಂದು ಗುಹಾಲಯವನ್ನು ಗ್ರಾನೈಟ್ ಕಲ್ಲನ್ನು ಕೆತ್ತಿದ್ದಾರೆ. ಗರ್ಭಗೃಹ, ನವರಂಗ, ಅಂತರಾಳ ವಿನ್ಯಾಸದಲ್ಲಿ ಶಿವಪುರಾಣ

ಹೇಳುವ ಶಿವ ಪಾರ್ವತಿ, ವರಾಹ, ಮಹಿಷಮರ್ದಿನಿ, ನರಸಿಂಹ ಇತ್ಯಾದಿಗಳ ಶಿಲ್ಪಗಳಿವೆ. ಗರ್ಭಗುಡಿಯಲ್ಲಿ ರಾಮೇಶ್ವರಲಿಂಗವಿದೆ.

## ರಾಮದುರ್ಗದ ಕೋಟೆಯ ಪರಿಸರದಲ್ಲಿ ಕಂಡುಬರುವ ಸ್ಮಾರಕಗಳು

### ಪುಷ್ಕರಿಣಿಗಳು

ಗುಡ್ಡವು ಇಂದು ನಿರ್ಜನವಾದ ಪ್ರದೇಶದಲ್ಲಿ ಇದ್ದು, ಆಕರ್ಷಕ ಪುಷ್ಕರಣೆಗಳನ್ನು ತನ್ನ ಒಡಲಲ್ಲಿ ಇಟ್ಟುಕೊಂಡಿದೆ. ಎರಡು ಸುತ್ತಿನ ಕೋಳಿ ಮೊಟ್ಟೆಯಾಕಾರದ ಕೋಟೆ, ಬತೇರಿಗಳು, ಗುಹಾಂತರ ದೇವಾಲಯ ವಿಶೇಷವಾಗಿ ಕಂಡುಬರುತ್ತದೆ.

### ಒಂದನೇ ಪುಷ್ಕರಿಣಿ

ಗುಡ್ಡವನ್ನು ಹತ್ತಲು ಪ್ರಯಾಣ ಬೆಳೆಸಿದರೆ ಗುಡ್ಡದ ಪಕ್ಕದಲ್ಲೇ ಇಳಿಜಾರಾದ ಪ್ರದೇಶದಲ್ಲಿ ಅಂದರೆ ಕೋಟೆಯ ವಾಯವ್ಯಕ್ಕೆ ಬಲಭಾಗದಲ್ಲಿ ಎರಡು ಪುಷ್ಕರಿಣಿಗಳಿವೆ. ಒಂದನೆಯ ಪುಷ್ಕರಿಣಿಯು ಗುಡ್ಡಕ್ಕೆ ಪೂರ್ವ ಪಶ್ಚಿಮವಾಗಿದ್ದು, ಬಿಳಿ ಗ್ರಾನೈಟ್ ಕಲ್ಲುಗಳನ್ನು ನಯಗೊಳಿಸಿಕೊಂಡು ೨ ಅಡಿ, ೧ ಅಡಿ, ೧.೧/೨ ಅಡಿ ಚಚ್ಚೌಕಾರದ ೬ ಇಂಚು ದಪ್ಪದ ಕಲ್ಲುಗಳನ್ನು ಬಳಸಿಕೊಂಡು ೧೪ ಅಡಿ ಉದ್ದ, ೧೪ ಅಡಿ ಅಗಲದ ಚಚ್ಚೌಕಾಕಾರದ ೭ ಅಡಿ ಆಳದ ಪುಷ್ಕರಿಣಿ ನಿರ್ಮಿಸಿದ್ದಾರೆ. ಇದಕ್ಕೆ ಇಳಿಜಾರಾದ ಮೆಟ್ಟಿಲುಗಳನ್ನು ನಿರ್ಮಿಸಿದ್ದಾರೆ.

### ಎರಡನೆಯ ಪುಷ್ಕರಿಣಿ

ಈ ಪುಷ್ಕರಿಣಿಯನ್ನು ಪೂರ್ವ, ಪಶ್ಚಿಮವಾಗಿ ೧೬ ಅಡಿ ಉದ್ದ ೭ ಅಡಿ ಆಳದಲ್ಲಿ ಚಚ್ಚೌಕಾಕಾರದಲ್ಲಿ ನಿರ್ಮಿಸಿದ್ದಾರೆ. ಈ ಪುಷ್ಕರಿಣಿಯನ್ನು ಬಿಳಿ ಗ್ರಾನೈಟ್ ಕಲ್ಲನ್ನು ನಯಗೊಳಿಸಿ ಇಂದಿನ ಸಿಮೆಂಟಿನ ಇಟ್ಟಿಗೆಯ ಹಾಗೆ ೨ ಅಡಿ, ೧ ಅಡಿ ೧/೨ ಅಡಿ ೧/೪ ಅಡಿ(ಉದ್ದಗಲದ) ಚಚ್ಚೌಕಾಕಾರದ ಕಲ್ಲುಗಳನ್ನು ತಯಾರು ಮಾಡಿ ನಿರ್ಮಿಸಿದ್ದಾರೆ. ಪುಷ್ಕರಿಣಿಗೆ ಗುಡ್ಡದ ಬುಡದ ಕಡೆಯಿಂದ ಇಳಿಜಾರಾದ ಮೆಟ್ಟಿಲುಗಳನ್ನು ಆಕರ್ಷಕವಾಗಿ ನಿರ್ಮಿಸಿದ್ದಾರೆ. ಈ ಪುಷ್ಕರಿಣಿಯಲ್ಲಿ ಈ ಮೂರ್ತಿಶಿಲ್ಪಗಳು ಇದ್ದು ಒಂದಕ್ಕಿಂತ ಒಂದು ಭಿನ್ನವಾಗಿವೆ.

ಒಂದನೇ ಶಿಲ್ಪ-ವೀರಭದ್ರನ ಮೂರ್ತಿಶಿಲ್ಪ

ಎರಡನೆಯ ಶಿಲ್ಪ-ಭೈರವನ ಮೂರ್ತಿಶಿಲ್ಪ

ಮೂರನೆಯ ಶಿಲ್ಪ-ಷಣ್ಮುಖನ ಮೂರ್ತಿಶಿಲ್ಪ

ನಾಲ್ಕನೆಯ ಶಿಲ್ಪ-ಗಣೇಶನ ಮೂರ್ತಿಶಿಲ್ಪ

ಐದನೆಯಶಿಲ್ಪ-ನಾಗಲಿಂಗ ಮೂರ್ತಿಶಿಲ್ಪ

ಇಷ್ಟೊಂದು ವೈಭವದಿಂದ ಕೋಟೆ ಪುಷ್ಕರಿಣಿಗಳನ್ನು ದೇವಾಲಯಗಳನ್ನು ನಿರ್ಮಿಸಿದವರು ಈ ಪ್ರದೇಶದಲ್ಲಿ ಆಳ್ವಿಕೆಯನ್ನು ನಡೆಸಿದ ನಾಯಕನಹಟ್ಟಿಯ ಪಾಳೆಯಗಾರರೇ ಆಗಿದ್ದಾರೆ ಎಂದು ತಿಳಿಯಬಹುದು. ನಾಯಕನಹಟ್ಟಿಯ ಬಖೈರಿನ ಪ್ರಕಾರ ಕ್ರಿ.ಶ. ೧೬೦೦ರ ಸಮಯದಲ್ಲಿ ಬೋಡಿಮಲ್ಲಪ್ಪನಾಯಕನ ಕಾಲದಲ್ಲಿ ನಿರ್ಮಾಣವಾಗಿದೆ ಎಂದು ಉಲ್ಲೇಖಿಸಿದೆ.

## ೪.೨. ವೀರಗಲ್ಲು

### ಯರಮಂಚಯ್ಯನ ವೀರಗಲ್ಲು ಕಪ್ಪಡಬಂಡೆಹಟ್ಟಿ

ಯರಮಂಚಯ್ಯ ವಂಶಸ್ಥನಾದ ಪೆದ್ದಯ್ಯ ಮ್ಯಾಸಬೇಡರ ಒಬ್ಬ ವೀರ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲ್ಲೂಕಿನ ಕಪ್ಪಡಬಂಡೆಹಟ್ಟಿ ಪರಿಸರದಲ್ಲಿ ಈತನೊಬ್ಬ ದನಗಾಹಿಯಾಗಿದ್ದ. ಮಂದಲವಾರು ಗೋತ್ರಕ್ಕೆ ಸೇರಿದ ಕರಿನಾರು ಬೆಳಗಿನವನು.[೧೧] ಈತನನ್ನು ಸ್ಥಳೀಯರು ಪೆದ್ದಯ್ಯ ಎಂದು ಕರೆಯುತ್ತಾರೆ. ಇವರ ನೇರ ಸಂತತಿ ಇಲ್ಲವಾದರೂ ಸಹೋದರ ಸಂತತಿ ಬೆಳೆದುಬಂದಿದೆ. ಈವರೆಗೆ ಯರಮಂಚಯ್ಯನೆಂದು ತಪ್ಪಾಗಿ ಈತನನ್ನು ಕರೆಯಲಾಗುತ್ತಿತ್ತು. ಶಾಸನದಲ್ಲಿ ಪೆದ್ದಯ್ಯನೆಂದು ಉಲ್ಲೇಖಿಸಲಾಗಿದೆ.

### ವೀರನ ಸಾಧನೆ

ಇಪ್ಪತ್ತನೇ ಶತಮಾನದ ಆರಂಭ ಪೆದ್ದಯ್ಯ ಬದುಕಿ ಬಾಳಿದ ಕಾಲಾವಧಿ. ಕುರಿಮಂದೆಯ ಮೇಲೆ ದಾಳಿ ಮಾಡಿದ ಚಿರತೆಯನ್ನು(ಹುಲಿ) ಹಟ್ಟಿಯ ವೀರ ಪೆದ್ದಯ್ಯನು ಕೋನಸಾಗರ ಗುಡ್ಡದ ಹತ್ತಿರ ಕಲ್ಲಿನಿಂದ ಕಾದಾಡಿಕೊಂದು ತಾನು ಸಹ ಹತನಾದನು. ಈ ಸ್ಮರಣಾರ್ಥ ವೀರಗಲ್ಲನ್ನು ನೆಡಲಾಗಿದೆ. ಪಿತೃ ಆರಾಧನೆಗೆ ಭವ್ಯ ಇತಿಹಾಸವಿರುವ ಭಾರತದಲ್ಲಿ ಬೇಡರು ಇಂದಿಗೂ ಈ ಪದ್ಧತಿಯನ್ನು ಉಳಿಸಿಕೊಂಡು ಬಂದಿರುವುದನ್ನು ಗಮನಿಸಬಹುದು. ಈ ವೀರನ ವೀರಗಲ್ಲಿನ ಬಗ್ಗೆ ಡಾ.ಆರ್.ಶೇಷಶಾಸ್ತ್ರಿ ಅವರು 'ಕೋನಸಾಗರದ ಎರಮಂಚಯ್ಯನ ವೀರಗಲ್ಲಿನ ಶಿಲ್ಪ ತೀರಾ ಸಾಧಾರಣವೇ ಆಗಿದ್ದರೂ, ಬೇಟೆಯನ್ನು ತುಂಬಾ ಸಹಜವಾಗಿ ಶಿಲ್ಪಿ ಬಿಡಿಸಿದ್ದಾನೆ. ಯರಮಂಚಯ್ಯನ ಮೇಲೆ ಎರಗಿದ ಚಿರತೆ, ಅದನ್ನು ಧೈರ್ಯದಿಂದ ಎದುರಿಸುತ್ತಿರುವ ಯರಮಂಚಯ್ಯ ಅವನಿಗೆ ಸಹಾಯ ಮಾಡಲು ಚಿರತೆಯ ಮೇಲೆ ಆಕ್ರಮಣ ಮಾಡಲು ನೆಗೆಯುತ್ತಿರುವ ನಾಯಿಗಳ ಚಿತ್ರ ಪರಿಣಾಮಕಾರಿಯಾದ ರೀತಿಯಲ್ಲಿ ಮೂಡಿಬಂದಿದೆ[೧೨] ಎಂದಿದ್ದಾರೆ.

ಮೊಳಕಾಲ್ಮುರು ತಾಲೂಕಿನ ಕೋನಸಾಗರ ಕೆರೆಯ ಅಂಗಳದಲ್ಲಿರುವ ನೇರ್ಲಹಳ್ಳಿ ಗ್ರಾಮ ಪಂಚಾಯಿತಿಗೆ ಸೇರಿದ ಕಪ್ಪಡಬಂಡಹಟ್ಟಿ ಪಕ್ಕದಲ್ಲಿ ಈ ವೀರಗಲ್ಲಿದೆ. ವೀರಗಲ್ಲನ್ನು

ಸಣ್ಣದಾದ ಕಲ್ಲುಬಂಡೆಗಳ ಗುಡಿಯಲ್ಲಿ ನಿಲ್ಲಿಸಿದ್ದಾರೆ. ನಾಲ್ಕೂವರೆ ಅಡಿ ಎತ್ತರ ಮೂರೂವರೆ ಅಡಿ ಅಗಲ, ೫ ಅಡಿ ಗುಡಿಯ ಎತ್ತರವಿದ್ದು ಇದರೊಳಗೆ ೩ ಬಂಡೆಗಳಿವೆ. ವೀರಗಲ್ಲು ಪೂರ್ವಾಭಿಮುಖವಾಗಿದೆ. ವೀರಗಲ್ಲಿನ ಪೂರ್ವಕ್ಕೆ ಕೋನಸಾಗರದ ಬೆಟ್ಟದ ಸಾಲಿನ ತಿಮ್ಮಪ್ಪನ ಗುಡ್ಡವಿದೆ. ಪಶ್ಚಿಮಕ್ಕೆ ಓದ್ನೋಬಯ್ಯನಹಟ್ಟಿ ಮತ್ತು ಸುತ್ತಲೂ ಬೆಳವಿನಮರದಹಟ್ಟಿ, ಸುಂಕದಾರಹಟ್ಟಿ ಕೂಡ್ಲಿಗರಟ್ಟಿ, ಕೊಂಡ್ಲಳ್ಳಿಹಟ್ಟಿ ಬಂಡೆಕೆಳಗಳಹಟ್ಟಿ, ಕಪ್ಪಡಬಂಡೆಹಟ್ಟಿ, ಸಣ್ಣಪಾಪಯ್ಯನಹಟ್ಟಿ, ಮೆಕರ್ಲಓಬಯ್ಯನಹಟ್ಟಿ ಮತ್ತು ಜಂಗಳಿಸೂರಯ್ಯನಹಟ್ಟಿ ಮುಂತಾದ ಹಟ್ಟಿಗಳು ನೇರ್ಲ ಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಗೆ ಬರುತ್ತದೆ. ಇಲ್ಲಿನ ಬಹುತೇಕ ಸಮುದಾಯಗಳು ಪಶು ಪಾಲನೆಯನ್ನು ಪ್ರಧಾನ ವೃತ್ತಿಯಾಗಿ ಅಳವಡಿಸಿಕೊಂಡಿರುತ್ತವೆ. ಕೋನಸಾಗರದಿಂದ ಓದ್ನೋ ಬಯ್ಯನಹಟ್ಟಿಗೆ ಹೋಗುವ ದಾರಿ ಪಕ್ಕದಲ್ಲಿ ವೀರಗಲ್ಲಿದ್ದು, ಕರಿನಾರು ಆವುಲಯ್ಯನ ಹೊಲದ ಬದುವಿನಲ್ಲಿ ಗುಡಿ ಕಟ್ಟಲಾಗಿದೆ.[೧೩] ಹಿಂದೆ ಇದರ ಸುತ್ತಲೂ ಕಾಡು ಬೆಳೆದಿದ್ದು ಇಂದು ಕೃಷಿ ಚಟುವಟಿಕೆಗಳಿಂದ ಕಾಡು ಬಯಲಾಗಿದೆ.

ಆಧುನಿಕ ಕಾಲಘಟ್ಟದಲ್ಲಿ ಬೇಡ ಸಮುದಾಯದವರು ವೀರಗಲ್ಲು ನೆಟ್ಟಿರುವುದು ಅಪೂರ್ಣ ಸಂಗತಿ. ಇಲ್ಲಿನ ವಿವರವು ಅಷ್ಟೇ ಕುತೂಹಲಭರಿತವಾಗಿದೆ. ಹಟ್ಟಿಗೆ ನುಗ್ಗಿ ಕುರಿಗಳನ್ನು ಕೊಂದು ಹೊತ್ತು ಹೋಗುತ್ತಿದ್ದ ಚಿರತೆಯೊಂದಿಗೆ ಹೋರಾಡಿ ಪ್ರಾಣವನ್ನು ನೀಗಿಕೊಂಡ ಯರ್ರಿಪಾಪಯ್ಯನ ಹೆಸರಿನಲ್ಲಿ ಹಟ್ಟಿಯವರೆಲ್ಲ ಸೇರಿ 'ಪರುವು' ಮಾಡಿ ಕಲ್ಲನ್ನಿರಿಸಿದರು. ಚಿರತೆಯೊಂದಿಗೆ ಹೋರಾಡಿ ಎಂಟು ಹತ್ತು ದಿವಸಗಳವರೆಗೆ ಬದುಕಿದ ಯರ್ರಿಪಾಪಯ್ಯ ರಾವುಮಟ್ಟಿ ಪಿಂಗಳ ಸಂವತ್ಸರ ಚೈತ್ರಮಾಸದ ಎರಡನೇ ಶುಕ್ರವಾರದಲ್ಲಿ ತೀರಿಕೊಂಡ ಸಂಗತಿ ತಿಳಿದುಬರುತ್ತದೆ.[೧೪] ಇಲ್ಲಿ ಯರ್ರಿಪಾಪಯ್ಯ, ಎರಮಂಚಯ್ಯ ಎಂಬ ಹೆಸರುಗಳಿಂದ ಕರೆದರೂ, ಅವರು ಪೆದ್ದಯ್ಯನ ತಾತನ ಗುಡಿ ಎನ್ನುವುದರಿಂದ ಹೋರಾಡಿ ಮಡಿದ ವೀರನ ಹೆಸರು ಪೆದ್ದಯ್ಯನೆಂಬುದು ಸ್ಪಷ್ಟ.

ಓರ್ವ ವ್ಯಕ್ತಿ ಚಿರತೆ ಬಾಯಿಗೆ, ಕೊರಳಿಗೆ ಕೈ ಹಾಕಿ ಎಡಗಾಲನ್ನು ಚಿರತೆಯ ಬಲಗಾಲಿನ ಬೆರಳುಗಳ ಮೇಲೆ ಇಟ್ಟಿದ್ದಾರೆ. ಎರಡು ನಾಯಿಗಳು ಚಿರತೆಯನ್ನು ಅಲ್ಲಲ್ಲಿ ಕಚ್ಚಿ ಬೊಗಳುವ ದೃಶ್ಯವಿದೆ. ಸ್ಥಳೀಯ ಕಣಶಿಲೆಯಿಂದ ರಚಿತವಾದ ಇದಕ್ಕೆ ಸುಮಾರು ೭೦ ವರ್ಷಗಳೆಂದು ಹೇಳಲಾಗಿದೆ.[೧೫] ವೀರಗಲ್ಲು ಕೆತ್ತಿದವರಿಗೆ ಒಂದು ಹಸುವನ್ನು ಕೊಟ್ಟಿದ್ದರಂತೆ. ಈ ಹಿನ್ನೆಲೆಯಲ್ಲಿ ಆಲೋಚಿಸುವುದಾದರೆ ಬೇಡರ ಬುಡಕಟ್ಟಿನಲ್ಲಿ ಇಂಥ ಎಷ್ಟೋ ಪ್ರಸಂಗಗಳು ನಡೆದಿರಬೇಕು. ವೀರಗಲ್ಲು ಕೆತ್ತುವವರು ಮತ್ತು ದಾಖಲೆ ಮಾಡುವವರು ವಿರಳವಾಗಿದ್ದರಿಂದ ಮೇಲ್ವರ್ಗದವರೇ ಬರೆಯಬೇಕಾಗಿದ್ದರಿಂದ ಈ ಜನಾಂಗದ ಅಪೂರ್ವ ಸಂಗತಿಗಳನ್ನು ಮರೆಮಾಚಿರಬಹುದು. ಎರಮಂಚಯ್ಯನ ತಂಗಿ(ಪೆದ್ದಯ್ಯ) ಹಿರೇಹಳ್ಳಿ ಪಾಪಮ್ಮ ಎಂಬುವರು ಈಗ್ಗೆ ೧೫ ವರ್ಷಗಳ ಹಿಂದೆ ಮೃತಳಾದಳಂತೆ. ಯರಮಂಚಯ್ಯನ ಮೊಮ್ಮಕ್ಕಳಾದ ಸಣ್ಣಬೋರಯ್ಯ

ಮತ್ತು ಕಾಟಯ್ಯ ಎಂಬುವರು ಈಗಲೂ ಇದ್ದಾರೆ.[೧೬] ಈ ಪೆದ್ದಯ್ಯ ಅಜ್ಜನ ಮೊಮ್ಮಗನೇ ಇಂದಿನ ಪೂಜಾರಿ. ಆತನ ಹೆಸರು ಓಬಯ್ಯ, ಪತ್ನಿ ಮಾರಕ್ಕ. ಈ ವೀರಗಲ್ಲನ್ನು ನಾಯಕ ಜನಾಂಗದವರು ಪೂಜಿಸುತ್ತಾರೆ.[೧೭] ಹಬ್ಬ ಹರಿದಿನಗಳಲ್ಲಿ ಹೊಸಬಟ್ಟೆ ಉಟ್ಟು ಹಣ್ಣು ಕಾಯಿ ಹೊಡಿಸಿಕೊಂಡು ಹೋಗುವರು.[೧೮] ಈ ವೀರನ ಸ್ಮರಣಾರ್ಥ ಇಂದಿಗೂ ರೂಢಿ ಸಂಪ್ರದಾಯ ಗಳನ್ನು ಉಳಿಸಿಕೊಂಡು ಬಂದಿದ್ದಾನೆ. ಎರಡು ತಲೆಮಾರುಗಳಿಂದಲೂ ಸ್ಥಳೀಯ ಚರಿತ್ರೆಯನ್ನು ಹೊಂದಿರುವ ಈ ಕರಿನಾರಿನ ವಂಶವು ಅಷ್ಟೇ ಪ್ರಮುಖವಾದುದು.

### ಕಂಚವ್ವ-ಕಾಮವ್ವರ ವೀರಗಲ್ಲು

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನಾಯಕನಹಟ್ಟಿ ಹೋಬಳಿಗೆ ಸೇರಿದ ಗ್ರಾಮವೇ ಚನ್ನಬಸಯ್ಯನಹಟ್ಟಿ. ಈ ಊರಿನ ಹೊರಗೆ ಪೂರ್ವಭಾಗಕ್ಕಿರುವ ಶಿಥಿಲಗೊಂಡ ಗುಡಿಯೊಳಗಿರುವ ಮಾಸ್ತಿಕಲ್ಲು ಕಂಚವ್ವ ಕಾಮವ್ವರದ್ದು ಆಗಿದೆ. ಸಹೋದರಿಯರಿಬ್ಬರೂ ಖಡ್ಗ ಹಿಡಿದು ನಿಂತಿರುವುದನ್ನು ನೋಡಿದರೆ ವೀರಮಾಸ್ತಿಯ ಲಕ್ಷಣವನ್ನು ತೋರ್ಪಡಿಸುತ್ತದೆ. ಇಬ್ಬರ ನಡುವೆ ವೃತ್ತಾಕಾರದ ಚಕ್ರವಿದೆ. ಒಬ್ಬರು ಕೆಳಗೆ ಇನ್ನೊಬ್ಬರು ಮೇಲ್ಭಾಗದಲ್ಲಿ ನಿಂತಿರುವುದು ಗಮನಾರ್ಹವಾಗಿದೆ.

ಅಕ್ಕತಂಗಿಯರಿಬ್ಬರೂ ಸಹಗಮನ ಆಚರಿಸುವುದು ಕಂಡುಬರುತ್ತದೆ. ಸ್ಥಳೀಯವಾಗಿ ಇತರ ಎಲ್ಲಾ ಐತಿಹಾಸಿಕ ಆಕರಗಳಿಂದ ಹೇಳುವುದಾದರೆ ಈ ಮಾಸ್ತಿಕಲ್ಲು ಮ್ಯಾಸಬೇಡರ ಮಹಾಪುರುಷ ಗಾದರಿಪಾಲನಾಯಕನ ಪತ್ನಿಯರಾದ ಕೆಂಚವ್ವ ಮತ್ತು ಕಾಮವ್ವರದು. ಇದರ ಕಾಲಮಾನ ಸ್ವಾಶ್ರೀ||ವಿ|| ಶಾಲಿವಾಹನ ಶಕ ೫೨೫ ಸಾ||(೬೦೩) ಮಾ|| ಶುದ್ಧ ೨ರಲ್ಲಿ ಇರಬಹುದೆಂದು ಊಹಿಸಲಾಗಿದೆ. ಗಾದ್ರಿ ಪಾಲನಾಯಕ, ಶುಕ್ಲಮಲ್ಲನಾಯಕ, ಯರಮಂಚನಾಯಕರ ಸಮಕಾಲೀನ ವ್ಯಕ್ತಿ. ಹೀಗಾಗಿ ಇವರ ಕಾಲಮಾನ ಹೆಚ್ಚು ಕಡಿಮೆ ಒಂದೇ ಆಗಿರುವುದಿಲ್ಲ. ಇತ್ತೀಚೆಗೆ ಗೌಡಗೆರೆ ಕುರುಬರು ಇದನ್ನು ಪೂಜಿಸುತ್ತಾರೆಂದು ತಿಳಿದುಬರುತ್ತದೆ.

### ವೀರಗಲ್ಲು, ನನ್ನಿವಾಳ

ಈ ವೀರಗಲ್ಲು ನನ್ನಿವಾಳದ ಅಡವಿ ಅಂಚಿನಲ್ಲಿದೆ. ಒಂದು ಹಂತದಲ್ಲಿರುವ ಈ ವೀರಗಲ್ಲು ಕುದುರೆಯ ಮೇಲೆ ನಿಂತಿರುವ ವೀರ. ಎಡಗೈಯಲ್ಲಿ ಗುರಾಣಿ ಬಲಗೈಯಲ್ಲಿ ಖಡ್ಗವನ್ನು ಹಿಡಿದು ಹೋರಾಟಕ್ಕೆ ಹೊರಟು ನಿಂತಿರುವಂತಿದೆ. ಕುದುರೆಗೆ ವಿವಿಧ ಆಭರಣಗಳನ್ನು ಹಾಕಿ ಅಲಂಕಾರ ಮಾಡಿರುವರು. ಕುದುರೆಯ ಮುಂದೆ ಇಬ್ಬರು ಬುಡಕಟ್ಟು ಸ್ತ್ರೀಯರು ಅರತಿಯನ್ನು ಹಿಡಿದು ಕಳಹಿಸಿ ಕೊಡುವಂತೆ ಇದೆ. ಸ್ತ್ರೀಯರು ಬಳೆ, ತೊಳಬಂದಿ, ಕಂಠಹಾರ, ಕಿವಿಯೋಲೆಯನ್ನು ಧರಿಸಿರುವರು. ಒಬ್ಬ ಸ್ತ್ರೀಯು ಬಲಗೈಯಲ್ಲಿ ಒಂದು ಬಟ್ಟೆಯ ಗಂಟನ್ನು ಹಿಡಿದಿರುವಂತೆ ಇದೆ. ವೀರನ ಹಿಂದೆ ಒಬ್ಬ ಸೇವಕ ಛತ್ರಿಯಾಕಾರದ ವಸ್ತುವನ್ನು ಹಿಡಿದಿರುವನು.

ಈ ವೀರಗಲ್ಲನ್ನು ಸೂಕ್ಷ್ಮವಾಗಿ ಗಮನಿಸಿದಾಗ ನನ್ನಿವಾಳದ ದೊರೆ ಯರಮಂಚನಾಯಕ ಬಲಗೈ ಬಂಟನಿರಬಹುದು. ವೀರಗಲ್ಲಿನ ಸುತ್ತಮುತ್ತಲಿನ ನನ್ನಿವಾಳದ ದೊರೆ ಸಂಬಂಧಿಕರ ಸಮಾಧಿಗಳಿವೆ.

## ೪.೩. ಶಾಸನಗಳು

ರೊಪ್ಪ ಗ್ರಾಮದ ಗೌರಿಗುಂಪಿನಲ್ಲಿರುವ ಕ್ರಿ.ಶ. ೧೯೯೫ರ ಶಿಲಾಶಾಸನವು "ಗೋವಿಂದರಾಮನೆಂದು ನಮೂದಿಸಿದೆ."[೧೯] ಇವನು ನಿಡಗಲ್ಲಿನ ಚೋಳಮನೆತನದ ರಾಜನಾದರೂ, ಶಾಸನವನ್ನು ಹಾಕಿಸಿದ ಉದ್ದೇಶವೇನೆಂದು ತಿಳಿಯುವುದಿಲ್ಲ. ಬ್ರಹ್ಮಗಿರಿ ಬೆಟ್ಟದ ತ್ರಿಶ್ಯಂಕೇಶ್ವರ ದೇವಾಲಯದ ರಂಗಮಂಟಪದಲ್ಲಿರುವ ಕ್ರಿ.ಶ. ೧೨೭೮ರ ನಿಡಗಲ್ಲು ಚೋಳರ ಶಿಲಾಶಾಸನವು ಗೋವಿಂದ, ಇರಾಂಗೋಳ ಬೋಗ ಮತ್ತು ಬಿಜ್ಜಳದೇವಿ ಎಂಬ ದಂಪತಿಗಳನ್ನು, ಅಲ್ಲದೆ ಈ ದಂಪತಿಗಳ ಮಗನಾದ ಬಮ್ಮಭೂಪಾಲ ಇನ್ನೂ ಮೊದಲಾದವರನ್ನು ಉಲ್ಲೇಖಿಸಿದೆ. ಈ ಬಮ್ಮಭೂಪಾಲನು ನಿಡಗಲ್ಲು ಕೋಟೆ ಮತ್ತು ಕಣಿಕಲ್ಲು ನಾಡಿನ ರೊಪ್ಪಮಂಡಲದ(ಈಗಿನ ಮೊಳಕಾಲ್ಮೂರು ತಾಲ್ಲೂಕಿನ ಚಿನ್ನಹಗರಿನದಿ–ನಾಗಸಮುದ್ರ ಪರಿಸರ) ಹನೆಯ ಕೋಟೆಯನ್ನು ಆಳುತ್ತಿದ್ದನು. ಅಲ್ಲದೆ ಈ ಹನೆಯ ಕೋಟೆಯನ್ನು ಬಮ್ಮಭೂಪಾಲನ ಮಂತ್ರಿಯಾದ ಬೈಚಣ (ಬೀಚಣಂ)ನು ಕ್ರಿ.ಶ. ೧೦೭೮ರಲ್ಲಿ ನಿರ್ಮಿಸಿರುವುದನ್ನು ಈ ಶಾಸನವು ಒಳಗೊಂಡಿದೆ.[೨೦] ರೊಪ್ಪದ (ಬ್ರಹ್ಮಗಿರಿ ಬಳಿ) ಬಡಕಲುಕುಂಟೆ ಬಳಿಯ ಗುಂಡಿನ ಮೇರುವ ಕ್ರಿ.ಶ.೧೯೯೦ರ ನಿಡಗಲ್ಲು ಚೋಳ ಶಿಲಾಶಾಸನವು ಮಲ್ಲಬೊಮ್ಮದೇವನಿಗೆ ಬಿಜಣದೇವ, ಬೈರದೇವ, ಇರುಂಗಳದೇವ, ಬವಂತಿಗದೇವರೆಂಬ ನಾಲ್ವರು ಮಕ್ಕಳಿದ್ದು, ಆರುಂಬಡ ಗ್ರಾಮದ ರಾಜಗುರುವಾದ ಧರ್ಮ ಸುಕುಮಾರ ಪಂಡಿತ ಶ್ರೀದೇವೇಂದ್ರ ಗುರುವಿಗೆ ಆ ನಾಲ್ವರು ಮಕ್ಕಳಲ್ಲೊಬ್ಬನಾದ ಸುಕುಮಾರ ಬಿಜಣದೇವನು ಶ್ರೀ ಬ್ರಹ್ಮೇಶ್ವರ ಮತ್ತು ರೊಡ್ಡಗ್ರಾಮಗಳ ಗೋವುಗಳನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಅಲ್ಲದೆ ಧರ್ಮ ಪ್ರತಿಪಾದಕರಾದ ಚಂದಿಸೆಟ್ಟಿ, ಬೆನಕಸೆಟ್ಟಿ, ಪಟ್ಟಣಸ್ವಾಮಿ ಗೌಡ, ಕೇಶವ ಸೆಟ್ಟಿ, ಮರಿಕೇಸೆಗೌಡ, ಮಾದಗೌಡ, ಪೆಂದಯ್ಯ, ಹೆಗ್ಗಡೆ, ಬಿಗಿಬೇರ, ಬೊಮ್ಮ ಗೌಡರನ್ನು ಉಲ್ಲೇಖಿಸಿದೆ.[೨೧] ಇಲ್ಲಿ ಪ್ರಸ್ತಾಪಿಸಿರುವ ಬ್ರಹ್ಮೇಶ್ವರ ಮತ್ತು ರೊಡ್ಡಗಳು ಈಗಿನ ಬ್ರಹ್ಮಗಿರಿ ಹಾಗೂ ರೊಪ್ಪಗಳಿರಬಹುದು. ಆದರೆ ಈ ಶಿಲಾಶಾಸನದಲ್ಲಿ ಕಾಲಮಾನದ ಉಲ್ಲೇಖವಿಲ್ಲದಿದ್ದರೂ ಹುಲ್ಲೂರು ಶ್ರೀನಿವಾಸ ಜೋಯಿಸರು ಕ್ರಿ.ಶ. ೧೯೯೦ರಲ್ಲಿ ಇದನ್ನು ರಚಿಸಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೨೨]

ನೊಳಂಬ ಅಥವಾ ನೊಳಂಬ ಪಲ್ಲವರ ಮನೆತನವು ಕರ್ನಾಟಕವನ್ನು ಆಳಿದ ಅನೇಕ ಪ್ರಮುಖ ರಾಜಮನೆತನಗಳಲ್ಲಿ ಒಂದು. ಕಂಚಿಯ ಪಲ್ಲವರ ವಂಶದೊಂದಿಗೆ ಮೂಲವನ್ನು ಕಲ್ಪಿಸಿಕೊಳ್ಳುವ ಈ ಮನೆತನವು ಕ್ರಿ.ಶ. ೮ನೇ ಶತಮಾನದಿಂದ ಸು. ೧೧ನೇ ಶತಮಾನದವರೆಗೆ ಆಳ್ವಿಕೆ ನಡೆಸಿದೆ. ಕ್ರಿ.ಶ. ೭೩೫ರಲ್ಲಿ ಚಿತ್ರದುರ್ಗ ಜಿಲ್ಲೆಯನ್ನೊಳಗೊಂಡಂತೆ ದಾವಣಗೆರೆ ಜಿಲ್ಲೆಯ

ಹರಿಹರ, ಜಗಳೂರು ದಾವಣಗೆರೆಗಳನ್ನೊಳಗೊಂಡ ನೊಳಂಬರಿಗೆ ಸಾಸಿರ ಎಂಬ ಸಣ್ಣ ಪ್ರಾಂತ್ಯದ ಮೇಲೆ ಆಡಳಿತವನ್ನು ಪ್ರಾರಂಭಿಸಿದರು.[೨೩] ನಂತರ ಕ್ರಿ.ಶ. ೯೦೦ರ ಹೊತ್ತಿಗೆ ನೊಳಂಬವಾಡಿ ೩೨೦೦೦ ಎಂಬ ವಿಶಾಲ ಪ್ರಾಂತ್ಯಕ್ಕೆ ಸಾಮ್ರಾಜ್ಯವನ್ನು ವಿಸ್ತರಿಸಿದರು.[೨೪] ಇವರು ರಾಜಕೀಯ ಆವಶ್ಯಕತೆಗಳಿಗೆ ಅನುಗುಣವಾಗಿ, ರಾಷ್ಟ್ರಕೂಟ, ಗಂಗ, ಚಾಲುಕ್ಯ ಮುಂತಾದ ರಾಜಮನೆತನಗಳೊಂದಿಗೆ ರಾಜಕೀಯ ಹಾಗೂ ವೈವಾಹಿಕ ಸಂಬಂಧಗಳನ್ನು ಬೆಳೆಸಿದರು.

ನೊಳಂಬವಾಡಿ ೩೨೦೦೦ ಎಂಬ ಪ್ರಾಂತ್ಯವು ಅಷ್ಟೇನೂ ವಿಸ್ತಾರವಾಗಿರದಿದ್ದರೂ ಚಿಕ್ಕದಾಗಿರಲಿಲ್ಲ. ಈ ಪ್ರಾಂತ್ಯವು ಚಿತ್ರದುರ್ಗ ಜಿಲ್ಲೆಯ ಪ್ರದೇಶವನ್ನು ಒಳಗೊಂಡಂತೆ ಬೆಂಗಳೂರು, ಕೋಲಾರ, ತುಮಕೂರು, ಕಡೂರು, ಅನಂತಪುರ, ಧರ್ಮಪುರ ಹಾಗೂ ಚಿತ್ತೂರು ಜಿಲ್ಲೆಗಳನ್ನು ಒಳಗೊಂಡ ಭಾಗವಾಗಿದ್ದಿತು.[೨೫] ಇತ್ತೀಚೆಗೆ ದೊರೆತ ಶಾಸನಗಳಿಂದ, ಹಳೆಯ ಶಿವಮೊಗ್ಗ ಜಿಲ್ಲೆಯ ಭಾಗಗಳು ಸಹ ನೊಳಂಬವಾಡಿ ೩೨೦೦೦ದಲ್ಲಿ ಸೇರಿಕೊಂಡಿರುವುದು ತಿಳಿದುಬರುತ್ತದೆ.[೨೬] ಇಷ್ಟೊಂದು ವಿಸ್ತಾರವಾದ ಪ್ರಾಂತ್ಯವನ್ನು ನೊಳಂಬರು ತಮ್ಮ ಆಡಳಿತದ ಅನುಕೂಲಕ್ಕಾಗಿ ಅನೇಕ ಭಾಗಗಳನ್ನಾಗಿ ವಿಂಗಡಿಸಿದ್ದರು. ಅಂತಹ ವಿಂಗಡಣೆಗಳೆಂದರೆ ವಾಡಿ, ನಾಡು, ಊರು, ವಳ್ಳಿ, ಹಳ್ಳಿ ಇಂತಹ ಭಾಗಗಳ ಹೆಸರು ಅವರ ಶಾಸನಗಳಿಂದ ಕಂಡುಬಂದಿದೆ.[೨೭] ಶಾಸನಗಳಲ್ಲಿ ಉಲ್ಲೇಖಿತವಾಗಿರುವ ಅಮ್ಮವಳ್ಳಿ ಮುದರಿಕಲ್ಲು, ನೀರಗುಂಡನಾಡು, ನೊಳಂಬರಿಗೆ ೧೦೦೦ ಇವು ಆಡಳಿತದ ವಿಭಾಗಗಳಾದರೆ ಹಿರೇಮಧುರೆ, ಚಿಕ್ಕಮಧುರೆ, ದೊಡ್ಡುಳ್ಳಾರ್ಥಿ, ಗಂಜಿಗಟ್ಟೆ, ಬಾಗೇನಾಳು, ಧರ್ಮಪುರ, ಐಮಂಗಲ, ಸಿದ್ಧಾಪುರ, ಮೊಳಕಾಲ್ಮೂರು, ತುರುವನೂರು ಮುಂತಾದ ಗ್ರಾಮಗಳು ನೊಳಂಬರ ಶಾಸನಗಳನ್ನು ಹೊಂದಿದ ಗ್ರಾಮಗಳಾಗಿವೆ.[೨೮]

**ಹಟ್ಟಿ ಪಾಳೆಯಗಾರರು**

ಚಿತ್ರದುರ್ಗ ಜಿಲ್ಲೆಯನ್ನು ಆಳ್ವಿಕೆ ಮಾಡಿದ ಪಾಳೆಯಪಟ್ಟುಗಳಲ್ಲಿ ಚಳ್ಳಕೆರೆ ತಾಲೂಕಿನ ನಾಯಕನಹಟ್ಟಿಯೂ ಒಂದಾಗಿತ್ತು. ನಾಯಕನಹಟ್ಟಿಯನ್ನು ತಮ್ಮ ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸಿದ ಇವರನ್ನು ಹಟ್ಟಿ ಪಾಳೆಯಗಾರರೆಂದು ಕರೆಯಲಾಗುತ್ತದೆ. ಹಿಂದೆ ಈ ಊರನ್ನು ಕಟ್ಟಿಸಿದವನು ಕೋಟಿ ಮಲ್ಲನಾಯಕನೆಂಬುವನು. ಈತನ ಮೂಲ ಒಂದು ರೀತಿಯ ಜನಪದ ಕಥೆಯ ರೂಪದಲ್ಲಿ ಪ್ರಾರಂಭವಾಗುತ್ತದೆ. ನಾಯಕನಹಟ್ಟಿ ಬಖೈರಿನ ಪ್ರಕಾರ ಈ ಮಲ್ಲನಾಯಕನು ಶ್ರೀಶೈಲಪರ್ವತದ ಬಳಿಯ ಕರಮಲೆ ಮತ್ತು ಕೊಮ್ಮಮಲೆಗಳ ಸಮೀಪ ನೆಲೆಸಿದ್ದು, ಅಸಂಖ್ಯಾತ ತುರುಕರುಗಳ ಒಡೆಯನಾಗಿದ್ದನು. ಒಮ್ಮೆ ಈ ಪ್ರದೇಶ ಭೀಕರ ಕ್ಷಾಮಕ್ಕೆ ತುತ್ತಾದ ನಂತರ ಈತ ತನ್ನ ೧೨ ಪೆಟ್ಟಿಗೆ ದೇವರು, ೧೨೦೦ ಪಶುಗಳೊಂದಿಗೆ ಹಾಗೂ ೫೦೦ ಜನ ಮ್ಯಾಸರು ಮತ್ತು ತನ್ನ ಆರು ಜನ ಅಣ್ಣ ತಮ್ಮಂದಿರೊಡನೆ ಹುಲ್ಲು ನೀರು ಹುಡುಕುತ್ತಾ ಇಂದಿನ ನಾಯಕನಹಟ್ಟಿಯ ಬಳಿ ಬಂದು ನೆಲೆ ನಿಂತನು. ಈ

ಪ್ರದೇಶದಲ್ಲಿ ಬೆಳೆದಿದ್ದ ಕಾಡನ್ನು ಕಡಿದು ಹಟ್ಟಿಯನ್ನು ಹಾಕಿಕೊಂಡು ಇಲ್ಲಿ ನೆಲೆಸಿದನು. ಆದರೆ ದೊರೆಗಳ ಅನುಮತಿಯಿಲ್ಲದೆ ಹಟ್ಟಿ ಹಾಕಿಕೊಂಡಿದ್ದ ಇವನನ್ನು ವಿಜಯನಗರದ ಅರಸರು ಈತನ ಮೇಲೆ ಯುದ್ಧ ಮಾಡಲು ಸೈನ್ಯವನ್ನು ಕಳುಹಿಸಿದರು. ಈ ಸೈನ್ಯವನ್ನು ಮಲ್ಲನಾಯಕರ ದನಕರುಗಳು ವಿಜಯನಗರದ ಸೈನ್ಯದ ಮೇಲೆ ನುಗಿದ್ದಾಗ ಸೈನ್ಯ ದಿಕ್ಕೆಟ್ಟು ಓಡಿ ಹೋಗುತ್ತದೆ. ತರುವಾಯ ಈತನ ಸಾಹಸವನ್ನು ಮೆಚ್ಚಿ ವಿಜಯನಗರದವರು ಈತನಿಗೆ ಹಟ್ಟಿ ಕಟ್ಟಿಕೊಳ್ಳಲು ಮಾನ್ಯತೆ ನೀಡುತ್ತಾರೆ. ಜೊತೆಗೆ ಧರ್ಮದ ಆಡಳಿತವನ್ನು ಇವನಿಗೆ ವಹಿಸುವುದರ ಮೂಲಕ ಪಾಳೆಯಗಾರರ ಪದವಿ ನೀಡಿದರೆಂದು ತಿಳಿದುಬರುತ್ತದೆ."[೨೯]

ಹಟ್ಟಿ ಮಲ್ಲಪ್ಪನಾಯಕನ ತರುವಾಯ ಬಂದ ಈ ಮನೆತನದ ಪಾಳೆಯಗಾರರಲ್ಲಿ ಅತ್ಯಂತ ಪ್ರಸಿದ್ಧಿ ಪಡೆದವನೆಂದರೆ ಬೋಡಿ ಮಲ್ಲಪ್ಪನಾಯಕ ಎಂಬುವನು. ಈತನ ಕಾಲದಲ್ಲಿ ನಾಯಕನಹಟ್ಟಿ ತನ್ನ ಸರ್ವತೋಮುಖ ಬೆಳವಣಿಗೆಯನ್ನು ಕಾಣುತ್ತದೆ. ಇವನಿಗೆ ಚಿತ್ರದುರ್ಗದ ಚಿಕ್ಕಣ್ಣನಾಯಕನ ತಂಗಿ ಸಂರ್ಜಮ್ಮ ನಾಗತಿಯನ್ನು ಕೊಟ್ಟು ಮದುವೆ ಮಾಡಲಾಯಿತು. ಬಹುಶಃ ಚಿತ್ರದುರ್ಗ ಪಾಳೆಯಗಾರರು ಈತನಿಗೆ ಸಹಕರಿಸಿದಂತೆ ಕಂಡುಬರುತ್ತದೆ.[೩೦] ಈತನು ವಿಜಯನಗರದ ಅರಸರಿಗೆ ಸೇವೆ ಸಲ್ಲಿಸಿದ್ದರಿಂದಲೂ, ಜಟ್ಟಿಯೊಬ್ಬನನ್ನು ಸೋಲಿಸಿ ತನ್ನ ಬಲ ಪ್ರದರ್ಶನ ಮಾಡಿದ್ದರಿಂದಲೂ ಅವನಿಗೆ ಭೀಮ ಎಂಬ ಬಿರುದು ನೀಡಿ ಗೌರವಿಸ ಲಾಯಿತು. ಇದರ ಜ್ಞಾಪಕಾರ್ಥವಾಗಿ ಮಲ್ಲಪ್ಪನು ನಾಯಕನಹಟ್ಟಿ ಪ್ರದೇಶದಲ್ಲಿ ೭ ಕೆರೆಗಳು ಹಾಗು ೭ ಪುರಗಳನ್ನು ಕಟ್ಟಿಸಿದಂತೆ ಕಂಡುಬರುತ್ತದೆ. ಅವುಗಳೆಂದರೆ ೧. ಭೀಮನಕೆರೆ, ೨. ಹಿರೇಕೆರೆ, ೩. ಚಿಕ್ಕೆರೆ, ೪. ರಾಮಸಾಗರ ಕೆರೆ, ೫. ವರವಿನಕೆರೆ, ೬. ಹೊಸಕೆರೆ, ೭. ನಾಯಕನ ಕೆರೆ. ಇದೇ ರೀತಿ ೧. ಕಾಶೀಪುರ, ೨. ಗಿಡ್ಡಾಪುರ, ೩. ಮಲ್ಲಾಪುರ, ೪. ಬಸವಾಪುರ, ೫. ಬುಧಾಪುರ, ೬. ಮಹದೇವಪುರ, ೭. ಗೌರಿಪುರ ಎಂಬ ಪುರಗಳನ್ನು ಸ್ಥಾಪಿಸಿದನು. ಇವುಗಳಲ್ಲಿ ಕೆಲವು ಈಗಲೂ ಅಸ್ತಿತ್ವದಲ್ಲಿವೆ. ಗೌರಿಪುರದಲ್ಲಿ ಗೌರಿಶಂಕರ ದೇವಸ್ಥಾನ ಈತನ ಅವಧಿಯಲ್ಲಿಯೇ ನಿರ್ಮಾಣವಾಗಿರುವುದೆಂದು ಹೇಳಲಾಗಿದೆ.[೩೧]

ಬೋಡಿಮಲ್ಲಪ್ಪನಾಯಕರ ನಂತರ ಬಂದ ಮಲ್ಲಪ್ಪನಾಯಕನೆಂಬುವನು ರಾಯದುರ್ಗದ ಬೊಮ್ಮನಾಯಕನ ಪ್ರಾರ್ಥನೆಯಂತೆ ೨೦೦೦ ಕೆಂಪು ಮತ್ತು ೧೦೦೦ ಹಸುಗಳನ್ನು ಒದಗಿಸಿದನಂತೆ ಅದಕ್ಕೆ ಪ್ರತಿಯಾಗಿ ಬೊಮ್ಮನು ಮೊಳಕಾಲ್ಮೂರು ಬೆಟ್ಟವನ್ನು ಮಲ್ಲಪ್ಪನಾಯಕನಿಗೆ ಬಿಟ್ಟುಕೊಟ್ಟನು. ಮಲ್ಲಪ್ಪನಾಯಕನು ಈ ಬೆಟ್ಟದ ಮೇಲೆ ಕೋಟೆಕೊತ್ತಲಗಳನ್ನು ನಿರ್ಮಿಸಿದನು.[೩೨]

ತರುವಾಯ ಚಿತ್ರದುರ್ಗವನ್ನು ವಶಪಡಿಸಿಕೊಳ್ಳುವವರೆಗೆ ನಾಯಕನಹಟ್ಟಿಯು ಚಿತ್ರದುರ್ಗ ಪಾಳೆಯಗಾರರ ಅಧೀನದಲ್ಲಿಯೇ ಇದ್ದಿತು. ನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಅಧೀನಕ್ಕೊಳಪಟ್ಟಿತು.[೩೩]

ಮೊಳಕಾಲ್ಮೂರು ಬೆಟ್ಟದ ಮೇಲೆ ದೊರಕಿರುವ ಶಾಸನವೊಂದು ಹಟ್ಟಿ ಪಾಳೆಯಗಾರರಿಗೆ ಸಂಬಂಧಿಸಿದ್ದು, ಈ ಶಾಸನದಲ್ಲಿ ಮಲ್ಲಪ್ಪನಾಯಕನು ತನ್ನ ತಾಯಿ ಲಕ್ಷ್ಮಮ್ಮ ನಾಗತಿಯ ಹೆಸರಿನಲ್ಲಿ ಕೆರೆ ಕಟ್ಟಿಸಿದನೆಂದು ಹೇಳುತ್ತದೆ.[೩೪] ಬಸವನ ಬಾಗಿಲ ಬಳಿಯಿರುವ ಮತ್ತೊಂದು ಶಾಸನವು ಕೋಟೆ ಬಾಗಿಲು ಕಾಯುವವನಿಗೆ ಸಂಬಂಧಿಸಿದೆ. ಈ ಶಾಸನವು 'ಕೋಟೆ ಬಾಗಿಲ ಕಾಯುವವನು ದಾರಿ ತಪ್ಪಿದರೆ ಹೊಟ್ಟೆ ಬಗಿಸಿ ತಲೆ ಒಡಿ ಸೂಲಕ್ಕೆ ಹಾಕಿಸಲಾಗುತ್ತದೆಂಬ' ಕಟ್ಟಪ್ಪಣೆಯನ್ನು ಕುರಿತು ಸಾರುತ್ತದೆ.[೩೫] ಚಳ್ಳಕೆರೆಯ ಮತ್ತೊಂದು ಶಾಸನವು ದತ್ತಿಕೊಟ್ಟ ಬಗ್ಗೆ ವಿವರ ನೀಡುತ್ತದೆ.

ನಾಯಕನಹಟ್ಟಿಯಲ್ಲಿ ಸ್ಥಾಪಿತವಾಗಿರುವ ಶ್ರೀಗುರು ತಿಪ್ಪೇರುದ್ರಸ್ವಾಮಿಯ ಬಗ್ಗೆ ಶಾಸನಗಳಲ್ಲಿ ಅಥವಾ ಬಖೈರಿನಲ್ಲಾಗಲಿ ಯಾವುದೇ ಉಲ್ಲೇಖವಿಲ್ಲವಾದರೂ, ಪಾಳೆಯಗಾರರು ತಿಪ್ಪೇರುದ್ರಸ್ವಾಮಿಯ ಅನನ್ಯ ಭಕ್ತರಾಗಿದ್ದರು ಎಂಬುದನ್ನು ನೂರಾರು ಗೀತೆಗಳು ಸ್ಪಷ್ಟಪಡಿಸುತ್ತವೆ. ಈ ಪಾಳೆಯಗಾರರ ಕುರಿತ ಜಾನಪದ ಗೀತೆಗಳು ಕೂಡ ಸಾಕಷ್ಟಿವೆ.[೩೬] ಹಟ್ಟಿ ಮಲ್ಲಪ್ಪನಾಯಕನು ಕಟ್ಟಿದ ಕೆರೆ, ಪುರಗಳ ಕೆಲಸ ಕಾರ್ಯಗಳಲ್ಲಿ ತಿಪ್ಪೇಸ್ವಾಮಿ ಅಪಾರ ಆಸಕ್ತಿ ಹೊಂದಿದ್ದು 'ಮಾಡಿದವರಿಗೆ ನೀಡು ಭಿಕ್ಷೆ' ಎನ್ನುವ ಸೂತ್ರದಿಂದ ಎಲ್ಲರನ್ನೂ ಅಳೆದು ನೋಡುತ್ತಿದ್ದರಂತೆ. ಸಮಕಾಲೀನ ಸಮಸ್ಯೆಗೆ ಪರಿಹಾರ ಕಂಡುಹಿಡಿಯುವಲ್ಲಿ ತಿಪ್ಪೇಸ್ವಾಮಿ ನಿಪುಣನಾಗಿದ್ದನು. ಹಟ್ಟಿಯ ಆಳ್ವಿಕೆಗೆ ಮಲ್ಲಪ್ಪನಾಯಕ ಅಣಿಯಾಗಲು ತಿಪ್ಪಯ್ಯನ ಪ್ರೋತ್ಸಾಹ ಮುಖ್ಯವೆನಿಸಿತ್ತು.[೩೭]

### ೪.೪. ಸ್ಮಾರಕಗಳು

ಕೊಡಗಬೊಮ್ಮಯ್ಯ ಸತ್ತ ನಂತರ ಅವನನ್ನು ದೈವತ್ವಕ್ಕೇರಿಸಿದ ಮ್ಯಾಸಬೇಡರ ಬುಟ್ಟಗ ಲೋರು ಬೆಡಗಿನವರು ದೇವರೆಂದು ಇಂದಿಗೂ ಆರಾಧಿಸುತ್ತಾರೆ. ಅವರ ಸ್ಮರಣಾರ್ಥ ಗುಡಿ, ದೇವಾಲಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಕೂಡ್ಲಿಗಿ, ಚಳ್ಳಕೆರೆ, ಮೊಳಕಾಲ್ಮೂರು, ಚಿತ್ರದುರ್ಗ ಮತ್ತು ಜಗಳೂರು ತಾಲ್ಲೂಕುಗಳಲ್ಲಿ ಇವನ ದೇವಾಲಯಗಳಿವೆ. ಕಾಂಶಿ ಹುಲ್ಲಿನಿಂದ ನಿರ್ಮಿಸಿದ ಹಳೆಯ ಕಾಲದ ದೇವಾಲಯ ಮತ್ತು ಇತ್ತೀಚಿನ ಬೆಣಚುಕಲ್ಲಿನ ದೇವಾಲಯಗಳು ಸೇರಿದಂತೆ ಆಧುನಿಕತೆಗೆ ಮಾರುಹೋಗಿ ಸಿಮೆಂಟ್ ಕಟ್ಟಡಗಳು ಹೆಚ್ಚಾಗಿವೆ. ಕೂಡ್ಲಿಗಿ ತಾಲೂಕಿನ ಬೊಮ್ಮದೇವರು ಮತ್ತು ಗೌರಸಮುದ್ರದ ಬೊಮ್ಮದೇವರು ಪ್ರಮುಖ ದೇವಾಲಯಗಳಾಗಿವೆ. ನೂರಾರು ಊರುಗಳಲ್ಲಿ ಬೇಡರ ಕೇರಿಯೊಳಗೆ ಈತನ ದೇವಾಲಯಗಳಿರುವುದುಂಟು.

ಕೊಡಗಲ ಬೊಮ್ಮನು ವಾಸಿಸಿದ ಸ್ಥಳವಾದ ಊಟಕುಂಟೆಯಲ್ಲಿ ಅವನು ಕಟ್ಟಿಸಿದ ಬೃಹತ್ ಕೋಟೆ, ಅರಮನೆ, ಕೆರೆ, ಬಾವಿ, ಮನೆಗಳು ಪ್ರಮುಖವಾದವು. ಬೃಹತ್ ಗಾತ್ರದ ಬೆಟ್ಟದ ಮೇಲೆ ಕೋಟೆ ಕಟ್ಟಿ, ಅದರೊಳಗಿನ ಗವಿಗಳನ್ನು ಅರಮನೆ, ವಾಸದ ಮನೆಗಳನ್ನು ಮಾಡಿಕೊಂಡಿದ್ದನೆಂದು ಕಾಣುತ್ತದೆ. ಕೋಟೆಯ ನಾಲ್ಕು ದಿಕ್ಕುಗಳಿಗೆ ರಕ್ಷಕರ ಅಥವಾ ಕಾವಲುಗಾರರ

ನಿವೇಶನಗಳಿವೆ. ಕಳ್ಳತನದ ಆಕಳುಗಳನ್ನು ತರುಬುವ ಬಂಡೆಯಿದೆ. ಹೀಗೆ ಇಲ್ಲಿ ವಿವಿಧ ರೀತಿಯ ಸ್ಮಾರಕಗಳು ಕಂಡುಬರುತ್ತವೆ.

**ಬುಡ್ಡೆಕಲ್ಲುಗಳು**

ಮ್ಯಾಸನಾಯಕರ ಯಾವುದೇ ಒಂದು ಗ್ರಾಮ, ಹಟ್ಟಿ, ಹಳ್ಳಿ, ಪಟ್ಟಣ ನಗರಗಳಿಗೆ ಒಂದು ಮಹಾದ್ವಾರವಿದ್ದಂತೆ ಆಯಾ ಊರಿಗೊಂದು ಬುಡ್ಡೆಗಲ್ಲು ಇದ್ದೆ ಇರುತ್ತದೆ. ಊರಿಗೆ ಬುಡ್ಡೆಕಲ್ಲು ಪ್ರಧಾನವಾಗಿರುತ್ತದೆ ಮತ್ತು ಇಡೀ ಗ್ರಾಮಕ್ಕೆ ಅದು ಭೂಷಣ ಪ್ರಾಯವಾಗಿ ಪರಿಣಮಿಸುತ್ತದೆ. ಊರಿನ ಅನಿಷ್ಟತೆಗಳನ್ನು ತೊಲಗಿಸಲು ಈ ಬುಡ್ಡೆಕಲ್ಲು ಸಹಾಯಕಾರಿಯಾಗುತ್ತ ದೆಂಬ ನಂಬಿಕೆ ದಟ್ಟವಾಗಿ ಬೇರೂರಿದೆ.

ಬೇಡರು ತಮ್ಮ ಊರಿನ ಒಬ್ಬ ಸಾಂಸ್ಕೃತಿಕ ವೀರನಿಂದ, ತುರುಕರುಗಳು ನೆಲೆ ನಿಂತ ಸ್ಥಳಕ್ಕೆ ಸದ್ಗುಣ ಸಂಪನ್ನ, ಧೈರ್ಯಶಾಲಿ, ಅಪ್ರತಿಮ ವೀರ ಮುಂತಾದ ಗುಣಗಳುಳ್ಳ ಸಾಹಸಿಗನ ನಾಮಾಂಕಿತದಿಂದ ಅವರು ನೆಲೆ ನಿಂತ ಸ್ಥಳಕ್ಕೆ ಬುಡ್ಡೆಕಲ್ಲನ್ನು ನೆಡುತ್ತಾರೆ. ನೆಟ್ಟಾದ ಮೇಲೆ ಆ ಸ್ಥಳಕ್ಕೆ ಅಥವಾ ಹಟ್ಟಿಗೆ ನೆಟ್ಟ ವ್ಯಕ್ತಿಯ ಹೆಸರನ್ನು ಇಡಲಾಗುತ್ತದೆ. ಜರಿಮಲೆ ಸಂಸ್ಥಾನದ ವಂಶಾವಳಿಯಲ್ಲಿ ಒಂದು ಉಲ್ಲೇಖ ಈ ರೀತಿ ಬರುತ್ತದೆ. "ಮೂರು ದೇಶದ ಸಮುಸ್ಥಾನೀಕರೂ ಮುವ್ವತ್ತು ಸಾವಿರ ಪೇಟೆಸ್ತರೂ ಕಲಿತೂ ಈ ಸಿಂಹಾಸನವನ್ನು ನಿರ್ಮಾಣ ಮಾಡಿ ಪದ ಕಾಣಿಕೆಯಿಟ್ಟು ಈ ದೇವಸ್ಥಾನ ಮರುಳಾಧ್ಯನ ಭಾಗ ತಮ್ಮದೇ ಯಿರುತ್ತದೆಯೆಂದು ಹೊರಟು ಹೋಗುತ್ತಾರೆ. ಯಿತ್ತಲಾಗಿ ಭೂಮರಾಜರು ದೇಶ ಸಾಧನೆ ಮಾಡಿಕೊಂಡು ಬಂದೂ ಕಲಿಗದ್ದಿಯಾ ಹೊತ್ತು ಮರಿಯಾದಿ ಜನಗಳಿಗೆ ಮರಿಯಾದಿ ನಡೆಸಿ ಮಹಾಸ್ವಾಮಿ ಯಾಕೆ...ದೊಡನೆಯಿದ್ದರೂ ಆರು ಮಂದಿ ಅಂಣತಮ್ಮಗಳೂ ಹೋಗಿ ತಮ್ಮ ತಂದಿಯ ಮುಂದೆ ಈ ವೃತ್ತಂತವಂ ಹೇಳಿ ಭೂ ಸಮುದ್ರವನ್ನು ಬಿಟ್ಟು ಬೇಂಟೆಯಾಡಿದ ಬಂದೂಮಾಯದ ಗುರುಗಳೂ ಚಿತ್ತದಿಂದಾ ಮಂಡಲವಂ ಬಂದು ಯಿದ್ದ ವುಗ್ಗಿಯನ್ನು ವಯಿಸಿ ಬುಡ್ಡೆಕಲ್ಲು ನಿರ್ಮಾಣ ಮಾಡಿದ್ದು ಚಿತ್ರಬಾನು ಕಾರ್ತಿಕ ಶುರ್ಧ ಬುಧಣವಾರ ಜರಿಮಲೆಯಂದು ಭಟ್ಟ(ರಿ)ಹಾಯವನ ಕೂಡಾ ೨(ಎರಡು)ಸಾರಿ ಕೂರಿಸಿ ಮುಂದೆ ಕೋಟೆ ಕೊತ್ತಳು, ಭಾವಿಕೆರೆ ಗ್ರಾಮಭಕ್ತಿಗೆ ೪೮ ಲಕ್ಷ ವರಹಂ ತರಿಸಿ ಪಟ್ಟ ತಯಾರು ಮಾಡಿದ ೧೦ ವರ್ಷಕ್ಕೆ ವುಲ್ಲು ಕೊಡಿಸಿ ರಾಜ್ಯವನ್ನು ಸಾರಾನೆ ಮಾಡಿದ್ದು"[೩೮]ಎಂದು ತಿಳಿಸಲಾಗಿದೆ.

ಇದಲ್ಲದೆ "ವಿಕ್ರಮನಾಮ ಕಾರ್ತಿಕ ಶುದ್ಧ ೧೦ ಗುರುವಾರ ಮುಹೂರ್ತ ದಶನಾಮ ವರ್ತ್ತಿಯಲ್ಲಿ ವುಜೀಯಿನಿ ಯಂಬ ನಾಮ ಮಾಡಿ ಹನ್ನೆರಡು ಮಂದಿ ಆಯಗಾರರನ್ನು ನಿರ್ನಮವಂ ಮಾಡಿ ಉತ್ತರ ದಿಕ್ಕಿನಲ್ಲಿ ಬುರ್ಜು ಕಟ್ಟಿಸಿ ಆ ಸ್ಥಳದಲ್ಲಿ ವುಗ್ಗಿ ಮನೆಯಂದೂ ಹೆಸರು ಕರೆದೂ ವುಗ್ಗಿ ಶಾಸ್ತ್ರವಂ ಮಾಡಿ ಶಾಸ್ತ್ರೀಕರಿಂದ ಬುಡ್ಡೆಕಲ್ಲು ಪೂಜರಿಂದ ನಿರ್ನಯವಂ

ಮಾಡಿ ಮಾಯದ ಸ್ವಾಮಿಯಾದ ಕಂಚಿ ದೇಶದಿಂದ ತಂದ ಮಳೆ ಬಗ್ಗೆ ಚನ್ನಬಸವ ಸ್ವಾಮಿಗಳನ್ನು ಪಟ್ಟಾಭಿಷೇಕ ಮಾಡುವುದಕ್ಕೆ ಹರಪನಹಳ್ಳಿ ಚಿತ್ರದುರ್ಗ, ಜರಿಮಲೆ ಸಂಸ್ಥಾನದವರು ಭಾಗವಹಿಸಿದ್ದು ತಿಳಿದುಬರುತ್ತದೆ.

ಬುಡ್ಡೆಕಲ್ಲಿನ ವಿಶಿಷ್ಟ ರೂಢಿ ಸಂಪ್ರದಾಯಗಳೊಂದಿಗೆ ಅಂದಿನ ಚರಿತ್ರೆಯ ಘಟನೆಗಳು ಕೂಡ ಸಹಾಯಕವಾಗಬಲ್ಲವು. ಚಿನ್ನಹಗರಿ ನದಿ ದಂಡೆಯ ಮೇಲಿರುವ ಹೂಡೇಂನಲ್ಲಿ ವಿಶಿಷ್ಟವಾದ ಬುಡ್ಡೆಕಲ್ಲೊಂದಿದೆ. ಇದನ್ನು ಯಂತ್ರದ ಕಲ್ಲು ಎನ್ನುತ್ತಾರೆ. ಭೂತದ ಲಕ್ಷಣವಿರುವ ಶಿಲ್ಪವನ್ನು ಕೆತ್ತಿ ಊರಿನ ದ್ವಾರಬಾಗಿಲಿನ(ಕಮಾನುದ್ವಾರ) ಎಡಭಾಗಕ್ಕೆ ನಿಲ್ಲಿಸಲಾಗಿದೆ. ಬುಡ್ಡೆಕಲ್ಲು ನೆಲದಲ್ಲಿದ್ದು ಊರಿನ ಮಹಾದ್ವಾರ ಅಥವಾ ಮುಂಭಾಗದಲ್ಲಿರುತ್ತದೆ. ಈ ಭಾಗದಲ್ಲಿ ಇಂಥ ಕಲ್ಲುಗಳಿಗೆ ಪ್ರಾಚೀನ ಕಾಲದಿಂದ ಮನ್ನಣೆ ದೊರಕಿದ್ದು, ಕರ್ನಾಟಕದ ಕೆಲವು ರಾಜಸಂತತಿಗಳು ಸ್ಥಾಪನೆಯಾಗಿದ್ದು, ಸ್ವಾಮಿಗಳು ಬುಡ್ಡೆಕಲ್ಲನ್ನು ಹೂಳಿದ್ದರಿಂದ ಎಂಬ ಮಾತು ಆಗಾಗ ಪುನರಾವರ್ತನೆಯಾಗುತ್ತದೆ. ನೂರಾರು ಗ್ರಾಮಗಳಲ್ಲಿರುವ ಬುಡ್ಡೆಕಲ್ಲುಗಳೂ ದುಂಡಾಗಿದ್ದು, ಉದ್ದ, ಓರೆಯಾಗಿದ್ದುದು ಕಂಡುಬರುತ್ತವೆ. ಇವುಗಳನ್ನು ಊರಿಗೆ ಕಷ್ಟನಷ್ಟಗಳು ಬಾಧಿಸದಿರಲೆಂಬ ನಂಬಿಕೆಯಿಂದ ಇಟ್ಟಿರಬೇಕು. ಗ್ರಾಮದ ಶ್ರೇಷ್ಠ ವ್ಯಕ್ತಿಯಿಂದ ಬುಡ್ಡೆಕಲ್ಲನ್ನು ಹಾಕಿಸುತ್ತಾರೆ. ಇಲ್ಲಿನ ಬುಡ್ಡೆಕಲ್ಲುಗಳು ಆ ಹಟ್ಟಿಯ ಸ್ಥಾಪಕನಿಂದ ನಿರ್ಮಾಣಗೊಂಡು ವಿಶಿಷ್ಟ ಸ್ಥಾನ ಪಡೆದಿವೆ. ಸಾಂಸ್ಕೃತಿಕವಾಗಿ ಇವು ಬುಡಕಟ್ಟು ಜನರ ನೆಲೆ ಗಡಿ ಹಾಗೂ ಸರಹದ್ದನ್ನು ಸೂಚಿಸುತ್ತವೆ.

ಈ ಪರಿಸರದ ಬುಡ್ಡೆಕಲ್ಲುಗಳಿಗೆ ವಿಶೇಷ ಪೂಜೆ ನಡೆಯುತ್ತದೆ. ಯುಗಾದಿಯಲ್ಲಿ ಬೇಟೆಯಾಡಿ ತಂದ ಪ್ರಾಣಿಯ ಬಾಲ ಮತ್ತು ಕಿವಿಗಳ ಸ್ವಲ್ಪ ಭಾಗವನ್ನು ಕತ್ತರಿಸಿ ಬುಡ್ಡೆಕಲ್ಲಿಗೆ ಪೂಜೆ ಮಾಡಿ ಹೂಣುತ್ತಾರೆ. ಇದನ್ನು ಹುಲುಸು ಎಂದು ಕರೆಯುವರು. ಕೆಲವೊಂದು ವಿಶೇಷ ಸಮಯದಲ್ಲಿ ಕಡಿದ ಕೋಣ ಅಥವಾ ಕುರಿಯ ಯಕೃತ್ತಿನೊಂದಿಗೆ ಬೇಯಿಸಿದ ಜೋಳವನ್ನು ಕಲಿಸಿ ಊರ ಸುತ್ತಮುತ್ತ ಹೊಲಗಳಲ್ಲಿ ಹಾಕುತ್ತಾರೆ. ಇದರ ಉದ್ದೇಶ ಊರು ಸಮೃದ್ಧಿಯಾಗಿರಲೆಂದು ಇದಕ್ಕೆ ಹುಲುಸು ಎನ್ನುವರು.

ದೇವತೆಗೆ ಬಲಿ ಕೊಟ್ಟ ಪ್ರಾಣಿಯ ರಕ್ತವನ್ನು ಗಡಿಬಲಿಯ ಶೇಷಾನ್ನದಲ್ಲಿ ಕಲಿಸಿ ಮಾಡಿದ ಪ್ರಸಾದಕ್ಕೆ ಹುಲುಸೆನ್ನುತ್ತಾರೆ. ಈ ಪ್ರಸಾದವನ್ನು ರೈತರು ತಮ್ಮ ಹೊಲದಲ್ಲಿ ಹೂಳುತ್ತಾರೆ. ಇದರಿಂದ ಬೆಳೆ ಹುಲುಸಾಗಿ ಬೆಳೆಯುವುದೆಂಬ ನಂಬಿಕೆ ಅವರದು. ಬಲಿ ಸಮರ್ಪಣೆಯಿಂದ ನಿಶ್ಚೇಷ್ಟಿತವಾದ ಭೂತಗಳು ಸಂತೃಪ್ತಗೊಂಡು ಮಾನವನ ಹಿತರಕ್ಷಣೆಗಾಗಿ ಶ್ರಮಿಸುವವು. ಹೊಲದಲ್ಲಿ ಹುಲುಸು ಪ್ರಸಾದವನ್ನು ಹುಗಿದರೆ ಫಲಸಮೃದ್ಧಿಯಾಗುವುದೆಂಬ ನಂಬಿಕೆ ಇದೆ.

ಮಾರಮ್ಮನ ಜಾತ್ರೆಯಲ್ಲಿ ಕೋಣ ಬಲಿ ನಂತರ ಮಾಡುವ ಆಚರಣೆ ಕೋಣನ ಬಲಿ. ನಂತರ ಗುಡಿಯ ಪಕ್ಕದಲ್ಲಿ ಊರಿನ ಎಲ್ಲಾ ಮನೆಗಳಿಂದ ಬಾಡಿನಿಂದ ಚರಗದ ಅನ್ನ

ಸಿದ್ಧವಾಗಿರುತ್ತದೆ. ಅದಕ್ಕೆ ಕಡಿದ ಕೋಣನ ರಕ್ತ ಬೆರೆಸುತ್ತಾರೆ. ಅದನ್ನೇ ಚರಗ ಎನ್ನುತ್ತಾರೆ. ತೆಲುಗಿನಲ್ಲಿ ಇದನ್ನು ಸ್ವರಗ ಎಂದು ಕರೆಯುತ್ತಾರೆ.

ಅ ಚರಗದ ಪುಟ್ಟಿಯನ್ನು ಕೆಲವರು ಬೆನ್ನ ಮೇಲೆ ಹೊತ್ತರೆ ಇನ್ನು ಕೆಲವರು ಹಿಂದಿನಿಂದ ಚೆಲ್ಲುತ್ತ ಅಮ್ಮನ ಗದ್ದಿಗೆಯ ಸುತ್ತ ಮೂರು ಸುತ್ತು ಬರುತ್ತಾರೆ. ಕೆಲವೆಡೆ ಊರಿನ ಸುತ್ತಲೂ ಹಾಗೂ ಹೊಲಗದ್ದೆಗಳಿಗೂ ಚೆಲ್ಲುತ್ತಾ ಬರುತ್ತಾರೆ. ಹೀಗೆ ಚೆಲ್ಲುವ ಚರಗವನ್ನು ಬೇರೆ ಊರಿನವರು ತೆಗೆದುಕೊಂಡು ಹೋದರೆ, ಅವರ ಊರಿನ ಬೆಳೆ ಹುಲುಸುವುದೆಂಬ ನಂಬಿಕೆಯಿದೆ. ಆಗ ಈ ಊರಿನವರು ಮಾಡಿದ ಇಡೀ ಜಾತ್ರೆಯ ಫಲ ಆ ಊರವರಿಗೆ ಹೋಗಿ ಬಿಡುತ್ತದೆ. ಚರಗವನ್ನು ಒಯ್ಯುವಾತ ತಾನು ಒಯ್ಯುತ್ತಿರುವ ಬಗ್ಗೆ ಕೂಗಿ ಹೇಳಿ ಒಯ್ಯಬೇಕು. ಆಗ ಈ ಊರವರು ಅವನನ್ನು ಬೆನ್ನಟ್ಟಿ ಹೋಗಿ ಹೊಡೆದು ಇಲ್ಲವೆ ಹಿಡಿದು ತಂದು ಅಮ್ಮನಿಗೆ ಅವನನ್ನೇ ಬಲಿಕೊಟ್ಟು ಅವನ ರಕ್ತದಿಂದ ಮತ್ತೆ ಚೆರಗ ಚೆಲ್ಲಬೇಕಂತೆ. ಆದರೆ ಆತ ತನ್ನೂರ ಗಡಿ ಸೇರಿದರೆ ಏನೂ ಮಾಡುವಂತಿಲ್ಲ. ಚರಗ ಚೆಲ್ಲುವ ಸಮಯದಲ್ಲಿ ರಕ್ಷಣೆಗಾಗಿ ಮಚ್ಚು ಕುಡುಗೋಲು ಇಟ್ಟುಕೊಂಡು ಬುಡ್ಡೆಕಲ್ಲಿನ ಸುತ್ತ ಹಾಗೂ ಮಾರಮ್ಮನ ಗುಡಿ ಸುತ್ತಲೂ ಕಾಯುತ್ತಿರುತ್ತಾರೆ. ಇಲ್ಲಿಯೂ ಸಹ ಊರಿನ ಗುಂಪಿನವರು ಒಂದೊಂದು ರೀತಿಯ ಕಾರ್ಯವನ್ನು ವಹಿಸುತ್ತಾರೆ. ಬುಡ್ಡಕಲ್ಲಿಗೆ ಕಾಲರಾ, ಸಿಡುಬು, ದಡಾರ, ಸೀತಾಲ, ಅಮ್ಮ ಬಂದಾಗ ಮಗುವಿಗೆ ಸ್ನಾನ ಮಾಡಿಸಿ ಬೇವಿನ ಸೊಪ್ಪು ಬುಡಕಟ್ಟಿಗೆ ಹಾಕಿ ಶಾಂತಿ ಮಾಡುತ್ತಾರೆ. ಏಳನೇ ದಿನ ಅಥವಾ ಒಂಬತ್ತನೇ ದಿನ ಅಥವಾ ಹನ್ನೊಂದನೆಯ ದಿನ ಶಾಂತಿ ಮಾಡುವುದನ್ನು ಗಮನಿಸಬಹುದು. ಹೆಣ್ಣು ಮೈನೆರೆದಾಗ, ಶವ ತೆಗೆದುಕೊಂಡು ಹೋಗುವಾಗ ಹಾಗೂ ಮದುವೆ ಸಮಯದಲ್ಲಿ ಬುಡ್ಡೆಕಲ್ಲಿನ ಮೂಲಕ ಹಾಯ್ದು ಹೋಗುತ್ತಾರೆ.

**ಗುಡಿ**

ದೇವಾಲಯಕ್ಕೆ ಗುಡಿ ಎಂದು ಹೆಸರು. ಕರ್ನಾಟಕದಲ್ಲಿ ಎಲ್ಲಾ ಗ್ರಾಮದೇವತೆಗಳಿಗೂ ಗುಡಿಗಳಿಲ್ಲ. ಕೆಲವಕ್ಕೆ ಮರದ ಬುಡವೇ ಗುಡಿ. ಅದೇ ಹೆಸರಿನಿಂದ ಅವುಗಳ ನಿರ್ದೇಶನ. ಆಲದಮಾರದಮ್ಮ, ಬೇವಿನಮಾರಮ್ಮ ಎಂದೇ ಅಂಥ ದೇವತೆಗೆ ಹೆಸರು. ಮಣ್ಣಿನಿಂದ ಕಟ್ಟಿದ ತುಂಡುಗೋಡೆಯ ಮೇಲೆ ಕಲ್ಲುಚಪ್ಪಡಿ ಮಗುಚಿರುವುದು, ಬೇಯಿಸಿದ ದೊಡ್ಡ ಬೋಗುಣಿ ಮಗುಚಿರುವುದು, ಯಾವ ರಕ್ಷಣೆಯೂ ಇಲ್ಲದೆ ಬಯಲಲ್ಲಿರುವುದು, ಮರದ ತಾಳಿನಲ್ಲಿರುವುದು. ಕೆಲವು ದೇವತೆಗಳ ಸ್ಥಿತಿ. ಶ್ರೀಮಂತರಿರುವ ಊರಿನಲ್ಲಿ ಗ್ರಾಮದೇವತೆ ಗುಡಿ ಭರ್ಜರಿಯಾಗಿರುತ್ತದೆ. ತಮ್ಮನ್ನು ಕಾಪಾಡುವ ಗ್ರಾಮದೇವತೆಗೆ ಒಳ್ಳೆಯ ಗುಡಿ ಇರಬೇಕೆಂಬುದು ಗ್ರಾಮಸ್ಥರ ಆಶಯ. ಒಂದು ಊರಿನಲ್ಲಿ ಉತ್ತಮ ದರ್ಜೆಯ ಒಂದು ಗುಡಿಯಾದರೂ ಇರುತ್ತದೆ. ಗುಡಿಯೂ ಗ್ರಾಮದೇವತೆಯ ವಿಗ್ರಹವನ್ನು ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸುತ್ತಾರೆ.

ಕ್ಷೇತ್ರವ್ಯಾಪ್ತಿಯಲ್ಲಿ ಸಾಕಷ್ಟು ಮಾರಮ್ಮನ ಗುಡಿಗಳು ಸರ್ವೇ ಸಾಮಾನ್ಯವಾಗಿ ಬೇವಿನ ಮರದ ಸುತ್ತಲೂ ಒಂದು ಚಿಕ್ಕ ಕಟ್ಟೆ ಕಟ್ಟಿ ಅದರ ಮೇಲೆ ಮಣ್ಣಿನ ಮೂರ್ತಿಯನ್ನು ಕೂರಿಸಿರುತ್ತಾರೆ. ಉದಾಹರಣೆಗೆ ಮಲಿಯಮ್ಮ(ಗಾಡಿಪಾಲಯ್ಯನಹಟ್ಟಿ, ಮಲಿಯಮ್ಮನಹಟ್ಟಿ) ಯರಬಳ್ಳಿ ಮಾರಮ್ಮ(ಕಾಕಿಪಾಲಯ್ಯನಹಟ್ಟಿ) ಗಡ್ಡನನಮಾರಮ್ಮ ಮಲಿಯಮ್ಮನಹಟ್ಟಿ, ಗೌರಸಂದ್ರ ಮಾರಮ್ಮ(ಕೆಳಗಳಹಟ್ಟಿ) ಗಡ್ಡದಬೋರಯ್ಯನಹಟ್ಟಿ, ಶನಿವಾರದಬೋರಯ್ಯನಹಟ್ಟಿ, ಉಗ್ಗಿನಿಂಗಯ್ಯನ ಹಟ್ಟಿ ಮುಂತಾದ ಅನೇಕ ಹಟ್ಟಿಗಳಲ್ಲಿ ಈ ತರಹದ ಗುಡಿಗಳನ್ನು ಗುರುತಿಸ ಬಹುದು.

**ಹಟ್ಟಿಮಲ್ಲಪ್ಪನಾಯಕನ ಸಮಾಧಿ ನಾಯಕನಹಟ್ಟಿ**

ಸಮಾಧಿಯು ಪೂರ್ವಾಭಿಮುಖವಾಗಿದ್ದು, ಕಲ್ಲಿನಲ್ಲಿ ನಿರ್ಮಾಣ ಮಾಡಲಾಗಿದೆ. ಬಾಗಿಲು ವಾಡದಲ್ಲಿ ಕಮಲದ ಚಿತ್ರವಿದೆ. ಸಮಾಧಿಯು ಒಳಗೆ ಶಿವಲಿಂಗವನ್ನು ಇಟ್ಟಿದ್ದು ಎರಡು ಅಡಿ ಎತ್ತರದ ಶಿವಲಿಂಗವು ಚೌಕಾಕಾರದ ಪಾಣಿವಟ್ಟವು ಜಲಹಾರಿ ಬ್ರಹ್ಮಭಾಗವನ್ನು ಹೊಂದಿದೆ. ಸಮಾಧಿಯ ಮುಂದೆ ಭಗ್ನಗೊಂಡಿರುವ ಮೂರು ಅಡಿ ಎತ್ತರದ ನಂದಿಶಿಲ್ಪವಿದೆ. ನಂದಿಶಿಲ್ಪವು ಆಕರ್ಷಕವಾಗಿದ್ದು, ಕೊರಳಿಗೆ ಭುಜಕ್ಕೆ ಗಂಟಾಸಾರ, ಚೈನು, ಬೆನ್ನು ಪಟ್ಟಿ, ಕಾಲುಕಡಗವನ್ನು ಕಂಡರಿಸಲಾಗಿದೆ. ಹಟ್ಟಿಮಲ್ಲಪ್ಪನಾಯಕನ ಸಮಾಧಿಯಲ್ಲಿ ಇತ್ತೀಚೆಗೆ ಶಿವಲಿಂಗ ಮತ್ತು ನಂದಿಮೂರ್ತಿಯನ್ನು ತಂದಿಟ್ಟಿರಬಹುದು. ಸಮಾಧಿಯು ಸಂಪೂರ್ಣವಾಗಿ ಕಲ್ಲುಗಳಿಂದ ಕಟ್ಟಿದ್ದು ಸುಸ್ಥಿತಿಯಲ್ಲಿವೆ. ಮುಂದಿನ ದ್ವಾರಬಾಗಿಲು ಮಾತ್ರ ಹಾಳಾಗಿದೆ.

**ನಾಯಕನಹಟ್ಟಿ ದೊರೆ ಮಲ್ಲಪ್ಪನಾಯಕರ ಸಮಾಧಿ**

ಚೌಕಾಕಾರದ ಸಮಾಧಿಯ ದ್ವಾರಬಾಗಿಲು ಪಂಚಶಾಖೆಗಳಿಂದ ಕೂಡಿದೆ. ದ್ವಾರಬಂಧದಲ್ಲಿ ಕಮಲದ ಚಿತ್ರವಿದೆ. ದ್ವಾರದ ಎರಡು ಕಡೆ ಪೂರ್ಣಕುಂಭವನ್ನು ಕಂಡರಿಸಲಾಗಿದೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯು ಗಂಟಾಸರ, ಚೈನು, ಕಾಲುಕಡಗಗಳನ್ನು ಹೊಂದಿದೆ. ನಂದಿಯು ಪೀಠದ ಮೇಲೆ ಮಲಗಿದ್ದು ಕಪ್ಪು ಶಿಲೆಯಲ್ಲಿದೆ. ಸಮಾಧಿಯು ಸಂಪೂರ್ಣವಾಗಿ ಕಲ್ಲಿನಿಂದ ನಿರ್ಮಾಣ ಮಾಡಿದ್ದು ಇಂದಿಗೂ ಸಹ ಸುಸ್ಥಿತಿಯಲ್ಲಿದೆ.

**ಬ್ರಹ್ಮನಂದಾ ಅವಧೂತರ ಮಠ(ಬೋಸೆದೇವರಹಟ್ಟಿ)**

ಈ ಮಠವು ಉತ್ತರಾಭಿಮುಖವಾಗಿದ್ದು, ಚೌಕಾಕಾರದ ಗರ್ಭಗುಡಿ, ತೆರೆದ ಮಂಟಪವಿದೆ. ಗರ್ಭಗುಡಿಯಲ್ಲಿ ಪೀಠದ ಮೇಲೆ ಪದ್ಮಾಸನದಲ್ಲಿ ಕುಳಿತಿರುವ ಬ್ರಹ್ಮಾನಂದಾ ಅವಧೂತರ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಮಠದ ದ್ವಾರದಲ್ಲಿ ಕಮಲ, ಸೂರ್ಯ, ಚಂದ್ರ, ದ್ವಾರಪಾಲಕರ ಶಿಲ್ಪಗಳಿವೆ. ದ್ವಾರದ ಎರಡು ಕಡೆ ಚಿಕ್ಕ ದೇವಕೋಷ್ಠಗಳಿವೆ. ಮಠದ ಮುಂದೆ ಹದಿನೈದು ಅಡಿ ಎತ್ತರದ ದೀಪಸ್ತಂಭವಿದೆ. ಮಠದ ಬಲಗಡೆ ಸಜೀವ ಸಮಾಧಿಯ ಸ್ಥಳವಿದೆ. ಮಠದ ಮೇಲೆ

ಕುಂಭ ಮಾದರಿಯ ಶಿಖರವಿದ್ದು ಮಠದ ನಾಲ್ಕು ಕಡೆ ಮಣ್ಣಿನ ನಂದಿಶಿಲ್ಪವನ್ನು ಇಡಲಾಗಿದೆ. ವರ್ಷಕ್ಕೊಮ್ಮೆ ಭಕ್ತರು ಬಂದು ಪರವು ಮಾಡುವುದನ್ನು ಕಾಣಬಹುದು. ಗಂಗಾವತಿ, ಕೊಪ್ಪಳ, ಸಂಡೂರು, ಬಳ್ಳಾರಿಯ ಕೆಲವು ಭಾಗಗಳಲ್ಲಿ ಪವಾಡ ಮೆರೆಸಿದ ಬಗ್ಗೆ ತಿಳಿಯುತ್ತದೆ.

**ಕಟ್ಟೆಮನೆ**

ಮ್ಯಾಸನಾಯಕರ ಪ್ರಮುಖರು ತಮ್ಮ ಸಮುದಾಯದ ಅಭಿವೃದ್ಧಿಗಾಗಿ ಮತ್ತು ರಕ್ಷಣೆಗಾಗಿ ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳುತ್ತಿದ್ದರು. ಅವುಗಳಲ್ಲಿ ಕಟ್ಟೆಮನೆಗಳನ್ನು ಸ್ಥಾಪಿಸುವ ವಿಚಾರವು ಸೇರಿದೆ. ದೊರೆ ಮತ್ತು ದಳವಾಯಿಗಳು ಸೇರಿ, ಬೇಡ ಜನಾಂಗದಲ್ಲಿ ಉದ್ಭವಿಸ ಬಹುದಾದ ಜಾತಿ ಕಲಹ, ಕೋಮು ಗಲಭೆ, ಗೋತ್ರಗಳ ಕಲಹ, ಗುರು ಪೂಜಾರಿಗಳಲ್ಲಿ ಹಾಗೂ ಆಯಾಯ ದೇವರಿಗೆ ಆಯಾಯ ಗೋತ್ರಕ್ಕೆ ಸಂಬಂಧಿಸಿದ ವಿವಾದಗಳನ್ನು ಪರಿಹರಿಸಿಕೊಳ್ಳಲು ಇವರು ಕಟ್ಟೆಮನೆಗಳನ್ನು ಸ್ಥಾಪಿಸಲು ಯೋಜನೆ ರೂಪಿಸಿದ್ದರು.[೩೯] ಇದು ಬೇಡ ಸಮುದಾಯಗಳ ನ್ಯಾಯಾಂಗ ವ್ಯವಸ್ಥೆಯ ಇನ್ನೊಂದು ಮುಖವಾಗಿತ್ತೆಂದು ಪರಿಚಯಿಸುತ್ತದೆ. ಮ್ಯಾಸಬೇಡರು ಒಂದು ಕುಲ, ಹಟ್ಟಿ ಮತ್ತು ದೇವಸ್ಥಾನಗಳಿಗೆ ಗುಡಿಕಟ್ಟೆ ಇದ್ದರೆ, ಇಂತಹ ಅನೇಕ ಗುಡಿಕಟ್ಟೆಗೆ ಒಂದು ಕಟ್ಟೆಮನೆ ಇರುತ್ತದೆ.

ಯರಮಂಚಿನಾಯಕನ ಸಂಗಡ ಅವನ ಸಹೋದರರಾದ ಗಾದರಿ ಪಾಲನಾಯಕ ರಪ್ಪಲಸೂರಿ ಮುಂತಾದವರು ತಾವು ಹೊಂದಿದ ಪಶುಗಳೊಡನೆ ಪಯಣ ಬೆಳೆಸಿದರು. ಇವರ ಜತೆ ಮೂರು ಲಕ್ಷ ಮ್ಯಾಸಮಂಡಲದ ಬೇಡರು ಸಹ ಇದ್ದರು. ಇವರು ಗೋದಾವರಿ ನದಿ ತೀರಕ್ಕೆ ಬಂದು ಇಳಿದುಕೊಂಡರು(ಬಹುಶಃ ಇದು ವೇದಾವತಿ ನದಿಯಾಗಿರಬೇಕು. ಏಕೆಂದರೆ ಮ್ಯಾಸಬೇಡರು ವಲಸೆ ಬರುವುದು ಆಂಧ್ರ ಪ್ರದೇಶದಿಂದ. ಕರ್ನಾಟಕದ ಪೂರ್ವಕ್ಕೆ ಇರುವ ಮೊಳಕಾಲ್ಮೂರು ಪ್ರದೇಶಕ್ಕೆ ಅಭಿಮುಖವಾಗಿ ನೆಲಸಮ ಬಂದಿರಬಹುದು). ಆಗ ಮೂರು ಕಟ್ಟೆಮನೆ ಮೂರು ದೇವರುಗಳು ಮತ್ತು ಮೂರು ಜನ ಪೂಜಾರಿಗಳನ್ನು ಅವರು ನೇಮಕ ಮಾಡಿದರು. ಆಡಳಿತವನ್ನು ನೋಡಿಕೊಳ್ಳಲು ಮೂರು ಮಂದಿ ನಾಯಕರನ್ನು, ಮೂರು ಮಂದಿ ದಾಸಯ್ಯರನ್ನು, ಏಳು ಮಂದಿ ಹಿರಿಯರನ್ನು ಮತ್ತು ಎಪ್ಪತ್ತೇಳು ಮನ್ನೆಗಾರರನ್ನು ನೇಮಕ ಮಾಡಿದ್ದರು. ಎಸ್.ಬಿ.ತಿಪ್ಪನಾಯಕ ಅವರು ಆ ಮೂರು ಕಟ್ಟೆ ಮನೆಗಳೆಂದರೆ ಪೆನ್ನೋಬಳ ಕಟ್ಟೆಮನೆ, ಅಹೋಬಲ ದೇವರ ಕಟ್ಟೆಮನೆ ಮತ್ತು ಬುಗ್ಗೋಬಳ ದೇವರ ಕಟ್ಟೆಮನೆ. ಇವುಗಳಿಗೆ ಸುರಪತಿ, ನರಪತಿ, ಗಜಪತಿ ಎಂಬುದಾಗಿ ದೊರೆಗಳನ್ನು ನೇಮಿಸಿದರು ಎಂದಿರುವರು.[೪೦] ಇವುಗಳ ಕಾಲಮಾನ ತಿಳಿದುಬಂದಿಲ್ಲ ಮತ್ತು ಇವುಗಳ ಸ್ಥಾಪನೆ, ಸ್ಥಳ, ವ್ಯಕ್ತಿಗಳ ಬಗೆಗೆ ಕಾಲದ ಪತ್ರಗಳು ಲಭ್ಯವಿಲ್ಲ. ಇಂದಿಗೂ ಸಹ ಇವು ಇಲ್ಲವೆ ಎನ್ನುವುದಕ್ಕೆ ಆಧಾರಗಳಿರುವುದಿಲ್ಲ.

ಆನೆಗೊಂದಿ ಅರಸರನ್ನು ನರಪತಿಗಳೆಂದು ಕರೆಯುತ್ತಿದ್ದುದು ಇತಿಹಾಸದಿಂದ ತಿಳಿದುಬರುತ್ತದೆ. ವಾಸ್ತವವಾಗಿ ಪ್ರಚಲಿತವಿರುವ ಕಟ್ಟೆಮನೆಗಳು ಮೂರು ಮಾತ್ರ. ಮ್ಯಾಸಬೇಡರ ಆ ಮೂರು ಕಟ್ಟೆ ಮನೆಗಳೆಂದರೆ ನನ್ನಿವಾಳ, ಗೋನೂರು ಮತ್ತು ನಾಯಕನಹಟ್ಟಿ. ಈಗಾಗಲೇ ಇವು ಐತಿಹಾಸಿಕವಾಗಿ ಖ್ಯಾತಿ ಪಡೆದಿದ್ದು, ಇವುಗಳ ಪರಿಚಯವಿಲ್ಲಿ ಅನಗತ್ಯ. ಈ ಕಟ್ಟೆಮನೆಗಳು ಅಲ್ಪವಾಗಿ ಸಹ ಸುಲಲಿತವಾಗಿ ಕಾರ್ಯನಿರ್ವಹಿಸುತ್ತವೆ. ಹೀಗಾಗಿ ಎಸ್.ಬಿ.ತಿಪ್ಪನಾಯಕ ಅವರು ಹೇಳುವ ಮೂರು ಕಟ್ಟೆಮನೆಗಳು ಯಾವುಗಳೆಂಬುದು ಜಿಜ್ಞಾಸೆಯಾಗಿದೆ. ಈ ಪೆನ್ನೋಬಳ, ಅಹೋಬಲ ಮತ್ತು ಬುಗ್ಗೋಬಳ ಎನ್ನುವವು ಯಾವ ಪ್ರದೇಶಕ್ಕೆ ಸೇರಿದ್ದವೆಂದು ಮತ್ತು ಅವುಗಳ ಕಾರ್ಯನಿರ್ವಹಣೆ ಬಗ್ಗೆ ಆಧಾರಗಳಿಲ್ಲದ ಕಾರಣ ಬಹುಶಃ ಈ ಮೂರು ಕಟ್ಟೆಮನೆಗಳ ಹೆಸರುಗಳನ್ನೂ ಉತ್ಪ್ರೇಕ್ಷಿಸಿ ನನ್ನಿವಾಳ, ಗೋನೂರು ಮತ್ತು ನಾಯಕನಹಟ್ಟಿಗೆ ಕರೆದಿರಬಹುದೆಂದೂ ಊಹಿಸಲು ಶಕ್ಯವಿದೆ. ಆಂಧ್ರಪ್ರದೇಶದ ಕೆಲವು ಪ್ರಸಿದ್ಧ ಯಾತ್ರಾ ಸ್ಥಳಗಳ ಹೆಸರುಗಳಿವು. ಹೀಗಾಗಿ ಪೆನ್ನೋಬಳ, ಅಹೋಬಲ, ಬುಗ್ಗೋಬಳ ಎನ್ನುವುದನ್ನು ಸಾಂಕೇತಿಕವಾಗಿ ಗುರುತಿಸಬೇಕಾಗಿದೆ.[೪೧] ಈ ಮೂರು ಸ್ಥಳಗಳಲ್ಲಿ ನರಸಿಂಹ ಹೆಸರಿನ ಆರಾಧ್ಯ ದೇವತೆಗಳಿದ್ದು, ಅವುಗಳ ಅನುಯಾಯಿಗಳಲ್ಲಿ ಬೇಡರು ಹೆಚ್ಚಾಗಿದ್ದಾರೆ. ಇವರು ನಮ್ಮ ಪೂರ್ವದ ಸ್ಥಳಗಳನ್ನೇ ಅನುಸರಿಸಿರಬಹುದೆಂಬುದಕ್ಕೆ ಯಾವ ಮಾಹಿತಿಯು ಬೆಳಕು ಚೆಲ್ಲುವುದಿಲ್ಲ.

### ಟಿಪ್ಪಣಿಗಳು

೧. ಪರ್ಸಿಬ್ರೌನ್, **ಇಂಡಿಯನ್ ಆರ್ಕಿಟೆಕ್ಚರ್**(ಬುದ್ದಿಸ್ಟ್ ಆ್ಯಂಡ್ ಹಿಂದೂ ಪಿರಿಮಿಡ್), ೧೯೮೧, ಪು.೩

೨. ಅದೇ,

೩. ಬ್ಯೂನೋಡಗೆನ್ಸ್, **ಮಯವಂತ**, ೧೯೮೫, ಪು.೩೫

೪. ಗೋಪಾಲ ಬಾ.ರಾ., **ವಾಸ್ತು**, ೧೯೯೩, ಪು.೧

೫. ಅದೇ,

೬. ಪ್ರಭಾಕರ್ ಎಂ.ಎನ್., **ದೇವಾಲಯ ಮತ್ತು ಚಂದ್ರಿಕೆ**, ೧೯೯೯, ಪು.೩

೭. ಫಣೇಂದ್ರನಾಥ ಬೋಸ್, **ಪ್ರೀನ್ಸ್‌ಪಾಲ್ ಆಫ್ ಇಂಡಿಯನ್ ಶಿಲ್ಪಶಾಸ್ತ್ರ**, ೧೯೭೮, ಪು.೮

೮. ಪ್ರಭಾಕರ್ ಎಂ.ಎನ್., **ಪೂರ್ವೋಕ್ತ**, ೧೯೯೯, ಪು.೪

೯. ಆಚಾರ್ಯ ಪಿ.ಕೆ., **ಎ ಡಿಕ್ಷನರಿ ಆಫ್ ಹಿಂದೂ ಆರ್ಕಿಟೆಕ್ಚರ್**, ಅಕಾರ್ಡಿಂಗ್ ಟು ಮಾನಸಾರ ಶಿಲ್ಪಶಾಸ್ತ್ರ, ೧೯೩೪, ಪು.೧

೧೦. ಸಂತೆಬೆನ್ನೂರು ಸುಮತೀಂದ್ರ ನಾಡಿಗ **ಜನತಾವಾಣಿ ದಿನಪತ್ರಿಕೆ** ೧೭-೦೧-೧೯೯೯, ಪು.೨

೧೧. ಕರಿನಾರು ಎನ್ನುವುದು ಮ್ಯಾಸನಾಯಕರ ಬೆಡಗು.

೧೨. ಕರನಿ ಗುಡ್ಡಂ ಬೋರಣ|| ಮಗ ಯರ ಪಾಪಯ||

ನುಂ ಮಗ||ಪೆದ್ದ(ನ್ನ)ಯ್ಯ||

ಪಯಿಂಗಳ ನಂಮಸರದ ಚೆಯಿತ್ರ ಸುದ್ಯ||

ಸುಕ್ರವಾರ|| ಪೆದ್ದ(ನ್ನೆ)ಯ್ಯ ಮೃತ್ಯು||

ಎಂದಿದೆ. ಆದ್ದರಿಂದ ಯರಮಂಚಯ್ಯ ಎಂಬ ವ್ಯಕ್ತಿಯಲ್ಲದೆ ಪೆದ್ದಯ್ಯನ ಚಿರತೆಯನ್ನು ಕೊಂದ ಧೀರರು ಆಗಿರುವನು.

೧೩. ಡಾ.ಆರ್.ಶೇಷಶಾಸ್ತ್ರಿ, **ಕರ್ನಾಟಕದ ವೀರಗಲ್ಲುಗಳು,** ೧೯೮೨, ಪು.೨೮೨, ೧೩೭

೧೪. ಎ.ಕೃಷ್ಣಮೂರ್ತಿ, **ಈರ ಸಿರಿಯಣ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ,** ಸಂ. ೬೧, ಸಂ. ೨, ಡಿಸೆಂಬರ್ ೧೯೭೬, ಬೆಂಗಳೂರು, ಪು. ೬೧

೧೫. ಪೂರ್ವೋಕ್ತ, ಪು.೮

೧೬. ಜೆ.ಆರ್.ರಾಮಮೂರ್ತಿ(ಸಂ), **ಮೊಳಗುವ ಕಲ್ಲು,** ೭ನೇ ಚಿತ್ರದುರ್ಗ, ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ, ಮೊಳಕಾಲ್ಮೂರು, ೨ ಮತ್ತು ೪ ಜನವರಿ ೧೯೯೮, ಕೋ.ಶ ವಿಶ್ವನಾಥ ಅವರು ಕಪ್ಪಡಬಂಡಹಟ್ಟಿಯ ಒಂದು ವೈಶಿಷ್ಟ್ಯ: ವೀರಗಲ್ಲು ಲೇಖನದಲ್ಲಿ ಚರ್ಚಿಸಿದ್ದಾರೆ.

೧೭. ವಿರೂಪಾಕ್ಷಿ ಪೂಜಾರಹಳ್ಳಿ, **ಮಧ್ಯಕಾಲೀನ ಕನ್ನಡ ಕಾವ್ಯಗಳಲ್ಲಿ ನಿರೂಪಿತವಾಗಿರುವ ಬೇಟೆ ಮತ್ತು ಬೇಡರ (ಸಂಸ್ಕೃತಿ) ಸಂದರ್ಭಗಳು: ಒಂದು ಚಾರಿತ್ರಿಕ ಅಧ್ಯಯನ.** ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ

೧೮. **ಕರಿನಾರು>ಕರಿನಾಡು : ಒಂದು ಟಿಪ್ಪಣಿ, ವಾಲ್ಮೀಕಿ ಬಂಧು,** ಜನವರಿ ೨೦೦೧, ಧಾರವಾಡ ಪು. ೧೮

೧೯. ಎ.ಕ. ಸಂಪುಟ ೧೧, ಮೊಳಕಾಲ್ಮೂರು ಶಾಸನ ಸಂಪುಟ ೨೭, ಶಾ.ಸಂ.೨೨

೨೦. ಅದೇ, ಶಾ.ಸಂ.೨೦

೨೧. ಅದೇ, ಶಾ.ಸಂ.೨೪

೨೨. ಲಕ್ಷ್ಮಣ್ ತೆಲಗಾವಿ(ಸಂ), ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು, ಪು.೩೧೨

೨೩. ಕೃಷ್ಣಮೂರ್ತಿ ಎಂ.ಎಸ್., ೧೯೮೨, *ನೊಳಂಬಕಾಲದ ಪ್ರಾದೇಶಿಕ ವಿಭಾಗಗಳು*, ಹರತಿಸಿರಿ, ಪು.೧೩೬

೨೪. ಅದೇ, ಪು.೨೬೬

೨೫. ರಾಜಶೇಖರಪ್ಪ ಬಿ., *ಹಿರೇ ಕೋಗಲೂರು ಅಪ್ರಕಟಿತ ಶಾಸನಗಳು*, ಇತಿಹಾಸ ದರ್ಶನ, ಸಂಪುಟ ೧೭, ಪು.೫೦

೨೬. ಎ.ಕ. ಸಂಪುಟ ೧೧, ಚಳ್ಳಕೆರೆ ಶಾಸನ ಸಂಪುಟ ೧೧, ಶಾ.ಸಂ.೩೩

೨೭. ಅದೇ, ಶಾ.ಸಂ.೩೪

೨೮. ಅದೇ, ಶಾ.ಸಂ.೩೫

೨೯. ಲಕ್ಷ್ಮಣ್ ತೆಲಗಾವಿ(ಸಂ), *ಚಿತ್ರದುರ್ಗ ಜಿಲ್ಲೆಯ ಪಾಳೆಯಗಾರರ ಆಳ್ವಿಕೆ*, ಚಂದ್ರವಳ್ಳಿ ಪು.೭೦

೩೦. ವಸು ಎಂ.ವಿ., **ದಕ್ಷಿಣ ಭಾರತದ ಅರಸುಮನೆತನಗಳು**, ಪು.೭೯

೩೧. ಅದೇ, ಪು.೮೧

೩೨. ಲಕ್ಷ್ಮಣ್ ತೆಲಗಾವಿ(ಸಂ), *ನಾಯಕನಹಟ್ಟಿ ಬಖೈರು*, ಚಂದ್ರವಳ್ಳಿ, ಪು.೩೩

೩೩. ರೈಸ್ ಬಿ.ಎಲ್., **ಗೆಜೆಟಿಯರ್, ಸಂಪುಟ ೪**, ಪು.೫೩೬

೩೪. ಎ.ಕ.ಸಂಪುಟ ೧೧, **ಮೊಳಕಾಲ್ಮೂರು** ಶಾ.ಸಂ.೩೭

೩೫. ಅದೇ, ಶಾ.ಸಂ.೩೮

೩೬. ಎ.ಕ.ಸಂಪುಟ ೨, **ಚಳ್ಳಕೆರೆ** ಶಾ.ಸಂ.೨೮

೩೭. ಮುದ್ದೇಬಿಹಾಳ ಆರ್.ಸಿ., **ಬೇಡನಾಯಕರ ಪಾಡು**, ಪು.೭೭

೩೮. ವಿರೂಪಾಕ್ಷಿ ಪೂಜಾರಹಳ್ಳಿ, **ಚಿನ್ನಹಗರಿಸಿರಿ**, ಪು.೪೫

೩೯. ತಿಪ್ಪನಾಯಕ ಎಸ್.ಬಿ., **ನಾಯಕ ಜನಾಂಗದ ಇತಿಹಾಸ**, ಅಪ್ರಕಟಿತ ಹಸ್ತಪ್ರತಿ, ೧೯೯೫ ಪು.೨೬೦

೪೦. ನನ್ನಿವಾಳದ ಕಟ್ಟೆಮನೆ ಕುರಿತು ಚಳ್ಳಕೆರೆಯ ಬಿ.ಪಿ.ವೀರೇಂದ್ರಕುಮಾರ್ ಅವರು ಸಂಶೋಧನೆ ಕೈಗೊಂಡಿದ್ದಾರೆ.

೪೧. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಹೂಡೇಂ ಗ್ರಾಮದ ಬೋಸೆ ಮಲ್ಲನಾಯಕ ಗೋನೂರು ಕಟ್ಟೆ ಮನೆಗೆ ನಾಯಕನಾಗಿದ್ದ. ಈಗ ಮಕ್ಕಳು ಅಧಿಕಾರವನ್ನು ಮುಂದುವರೆಸಿ ಕೊಂಡು ಬಂದಿದ್ದಾರೆ.

ಅಧ್ಯಾಯ ಎಂಟು

# ಪ್ರಸ್ತುತ ಸಂದರ್ಭದಲ್ಲಿ ಹಟ್ಟಿ ಸಂಸ್ಕೃತಿ

ಪ್ರಸ್ತುತ ಸಂದರ್ಭದಲ್ಲಿ ಮ್ಯಾಸನಾಯಕರ ಸಮಕಾಲೀನ ಸ್ಥಿತಿಗತಿ ಭಿನ್ನವಾಗಿದೆ. ಹಟ್ಟಿಗಳು ಆಧುನಿಕತೆಗೆ ಮುಖಾಮುಖಿಯಾಗುತ್ತಿವೆ. ಹಿಂದೆ ಅರಣ್ಯವಾಸಿಗಳಾಗಿ ಕಾಡುಮೇಡುಗಳಲ್ಲಿ ವಾಸಿಸುತ್ತಿದ್ದ ಇವರ ಸದ್ಯದ ಸ್ಥಿತಿಯನ್ನು ಕುರಿತು ಹೇಳುವುದೇನೆಂದರೆ ಇಂದಿಗೂ ಸಹ ಕೆಲವು ಹಟ್ಟಿಗಳಲ್ಲಿ ಜನರ ಸ್ಥಿತಿ ತುಂಬ ಕಷ್ಟದಾಯಕವಾಗಿದೆ. ತಮ್ಮ ಉಪಜೀವನಕ್ಕಾಗಿ ಪರಂಪರೆಯಿಂದ ನಂಬಿಕೊಂಡು ಬಂದ ಬೇಟೆಯು ವರ್ತಮಾನದಲ್ಲಿ ಕಾನೂನುಗಳ ತೊಡಕಿನಿಂದ ಜೀವನದ ದಾರಿಗಳು ಮುಚ್ಚಿದಂತಾಗಿ ಅನಿವಾರ್ಯವಾಗಿ ಬೇರೆ ಕಸುಬನ್ನು ಆಶ್ರಯಿಸಬೇಕಾಗಿ ಬಂದಿದೆ. ಒಂದು ಕಾಲದಲ್ಲಿ ಅಕ್ಷರಜ್ಞಾನದ ಕೊರತೆಯಿಂದ ದೂರ ಉಳಿದಿದ್ದರೂ ಜೀವನ ನಿರ್ವಹಣೆಗಾಗಿ ಬೇಕಾದ ಜ್ಞಾನವನ್ನು ಕೊರತೆಯಿಲ್ಲದೆ ಸಂಪಾದಿಸಿಕೊಂಡಿದ್ದರು. ಇಂದು ಕಾಡು ನಾಡಾಗಿ ಪರಿವರ್ತನೆಯಾಗುತ್ತಿರುವ ಸಂದರ್ಭದಲ್ಲಿ ನಾಡಿನೊಂದಿಗೆ ಸಂಪರ್ಕ ಬೆಳೆಸಿಕೊಂಡು ನಗರ ಪ್ರದೇಶಗಳಿಗೆ ಇಂದಿನ ಯುವಕರು ವಲಸೆ ಹೋಗುತ್ತಿದ್ದಾರೆ. ಹಾಗೆ ಪಟ್ಟಣಗಳಲ್ಲಿ ಸಹ ತಮ್ಮ ಜೀವನ ನಿರ್ವಹಣೆ ಸಾಗಿಸುತ್ತಿದ್ದು, ಉಳಿದವರು ತಮ್ಮ ತಮ್ಮ ಹಟ್ಟಿಗಳಲ್ಲಿ ಹತ್ತು ಹಲವು ಕಸುಬುಗಳನ್ನು ಮಾಡಿಕೊಂಡು ಜೀವನ ಸಾಗಿಸುತ್ತಿದ್ದಾರೆ.

ಈ ಅಧ್ಯಯನ ಕಾಲ ಮಿತಿಯೊಳಗೆ ಕೇವಲ ಎರಡು ಜಿಲ್ಲೆಗಳಲ್ಲಿನ ಮ್ಯಾಸನಾಯಕರನ್ನು ಮಾತ್ರ ಸಂದರ್ಶಿಸಲು ಸಾಧ್ಯವಾಗಿದ್ದು, ಈ ಎರಡು ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮ್ಯಾಸನಾಯಕರ ಆರ್ಥಿಕ ಸ್ಥಿತಿ ತುಂಬಾ ಕಷ್ಟದಾಯಕವಾಗಿರದೆ ಸುಮಾರು ಶೇ. ೫೦ರಷ್ಟು ಜನರು ಸ್ಥಿರಾಸ್ಥಿಯನ್ನು ಹೊಂದಿದವರು ಬಿಟ್ಟರೆ ಇನ್ನು ಶೇ. ೫೦ರಷ್ಟು ಜನ ಕಡುಬಡವರಾಗಿದ್ದು, ಕೇವಲ ಕೂಲಿಯನ್ನು

ಅವಲಂಬಿಸಿ ಬದುಕುವ ಪರಿಸ್ಥಿತಿ ಇವರದ್ದಾಗಿದೆ. ಮಾನವ ಸಮಾಜ ನಿತ್ಯ ಪರಿವರ್ತನಶೀಲವಾದುದು. ಚಲನಶೀಲವಾದುದು. ಯಾವತ್ತೂ ಇಂಥ ಬದಲಾವಣೆಗಳಿಗೆ ಒಳಗಾಗುತ್ತಿರುತ್ತದೆ. ಇದು ಆ ಸಮುದಾಯಗಳ ಜೀವಂತಿಕೆಯ ಲಕ್ಷಣವೂ ಕೂಡ. ಹೀಗೆ ಮಾನವ ಸಮುದಾಯ ಆದಿಮ ಸ್ಥಿತಿಯಿಂದ ಇವತ್ತಿನ ಕಂಪ್ಯೂಟರ್ ಯುಗದವರಿಗೆ ಹಲವು ಸ್ಥಿತ್ಯಂತರಗಳಿಗೆ ಒಳಗಾಗಿದೆ. ಭಾರತ ಸಮಾಜ ಜೀವನ ವಿಶಿಷ್ಟತೆಯಿಂದ ಕೂಡಿದೆ. ಸದ್ಯಕ್ಕೆ ದೇಶದ ಎಲ್ಲ ವಿಚಾರಗಳೂ ವ್ಯವಸ್ಥೆಗಳೂ ಅರೆಬೆಂದ ಕಾಳಿನಂತೆ ನುಂಗಲೂ ಆಗದ, ಉಗುಳಲೂ ಆಗದ ಸ್ಥಿತಿಯಲ್ಲಿವೆ. ಬೆಂಕಿ ಕಂಡು ಹಿಡಿಯುವಿಕೆ ಮನುಷ್ಯಕುಲದ ಇತಿಹಾಸದಲ್ಲಿ ಒಂದು ಹೊಸಯುಗಕ್ಕೆ ನಾಂದಿಯಾದಂತೆಯೇ, ವಿದ್ಯುತ್ ಉತ್ಪಾದನೆ ವಿಜ್ಞಾನಯುಗದ ಇನ್ನೊಂದು ಪ್ರಮುಖ ಘಟ್ಟ. ಬೆಂಕಿ ಮತ್ತು ವಿದ್ಯುತ್ ನಡುವಿನ ಎರಡೂ ಸ್ಥಿತಿಗಳನ್ನು ಉಳಿಸಿಕೊಂಡಿರುವ ಭಾರತದ ಜನಜೀವನವನ್ನು ಸೂಕ್ಷ್ಮವಾಗಿ ಗಮನಿಸಿದರೆ ಇನ್ನೂ ನಮ್ಮ ಗಿರಿಜನರು ಇನ್ನೂ ಬೆಂಕಿಯ ಸ್ಥಿತಿಯಲ್ಲೇ ಮುಂದುವರಿದವರು. ವಿದ್ಯುತ್ ಸ್ಥಿತಿಯಲ್ಲೂ ಇದ್ದಾರೆ ಎಂದು ಸಾಂಕೇತಿಕವಾಗಿ ಹೇಳಬಹುದು ಎನ್ನುವ ಡಾ.ಹಿ.ಚಿ. ಬೋರಲಿಂಗಯ್ಯನವರ ಈ ಮಾತು ತುಂಬಾ ಮಹತ್ವಪೂರ್ಣವಾದುದು.

ಭಾರತೀಯ ಸಮಾಜವೇ ಇಂಥ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿದೆ. ಆಧುನಿಕ ಮಾನವ ಇಂದು ಎಷ್ಟೋ ವಿಷಯಗಳಲ್ಲಿ ವೇಗವಾಗಿ ಚಲಿಸುತ್ತಾನೆ ಅಥವಾ ಸಾಗುತ್ತಾನೆ. ಮಂಗಳಗ್ರಹ ಮತ್ತು ಚಂದ್ರಲೋಕದಲ್ಲಿ ವಾಸ ಮಾಡಲು ಹೊಸ ಅನ್ವೇಷಣೆಗಳನ್ನು ನಡೆಸಿದ್ದಾನೆ. ಬುಡಕಟ್ಟು ಸಮುದಾಯಗಳ ವಾಸ್ತವಲೋಕದ ಬದುಕಿನ ಕಡೆ ಗಮನಿಸಿದರೆ ಅಷ್ಟೇ ಹಿಂದೆ ಹೆಜ್ಜೆಗಳನ್ನು ಹಾಕುತ್ತಿದೆ. ಇವರು ಇನ್ನೂ ಕೂಡ ಅದಿಮ ಸ್ಥಿತಿಯಲ್ಲಿಯೇ ಜೀವನ ನಡೆಸುತ್ತಿದ್ದಾರೆ. ಕೆಲವೊಂದು ಬುಡಕಟ್ಟುಗಳು ಆಧುನಿಕ ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗುತ್ತಾ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿವೆ. ಈ ಸಾಲಿನಲ್ಲಿ ಮ್ಯಾಸನಾಯಕರ ಬುಡಕಟ್ಟು ಪ್ರಮುಖವಾದುದು. ಕರ್ನಾಟಕದ ಮತ್ತು ಭಾರತದ ಯಾವುದೇ ಬುಡಕಟ್ಟು ಸಮುದಾಯವೂ ಕೂಡ ಹಳೆಯದನ್ನು ಬಿಡುವ, ಹೊಸದನ್ನು ತನ್ನದಾಗಿಸಿಕೊಳ್ಳುವಲ್ಲಿ ಅತುರದಿಂದ ತುದಿಗಾಲ ಮೇಲೆ ನಿಂತಿದೆ. ಆದರೆ ಅದು ಸುಲಭ ಸಾಧ್ಯವಿಲ್ಲ. ಗತದ ಜೀವನದ ಚರಿತ್ರೆಯ ಹೆಜ್ಜೆಗಳ ಅರಿವನ್ನು ವರ್ತಮಾನದಲ್ಲಿ ನೆನಪಿಸಿಕೊಳ್ಳುತ್ತಾ ಭವಿಷ್ಯತ್ತಿನ ಕನಸಿನ ದಿನಗಳ ಬದುಕಿಗಾಗಿ ಬಹು ಎಚ್ಚರಿಕೆಯಿಂದ ಎಲ್ಲಾ ಸಮುದಾಯಗಳು ಹೆಜ್ಜೆ ಹಾಕುತ್ತಿವೆ.

ಹತ್ತೊಂಬತ್ತನೆಯ ಶತಮಾನ ಭಾರತೀಯ ಸಮಾಜವನ್ನು ಸತ್ವ ಪರೀಕ್ಷೆಗೆ ಒಡ್ಡಿದ ಕಾಲಮಾನ. ವಸಾಹತು ಆಡಳಿತದ ಜೊತೆಗೆ ಬಂದ ಶಿಕ್ಷಣ ಆಧುನಿಕ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಾಕಷ್ಟು ಪ್ರಭಾವ ಬೀರಿದೆ. ಕೈಗಾರೀಕರಣ ಪ್ರಭಾವವೂ ಕೂಡ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಹಕಾರಿಯಾಗಿದೆ. ಇಂಥ ಬದಲಾವಣೆಗಳಿಗೆ ಒಳಗಾದ

ಭಾರತದ ಅದರಲ್ಲಿ ಕರ್ನಾಟಕದಲ್ಲಿ ನೆಲೆ ನಿಂತಿರುವ ಬುಡಕಟ್ಟುಗಳಿಗೆ ಆಧುನೀಕರಣದ ಪ್ರಭಾವ ನುಂಗಲಾರದ ಬಿಸಿ ತುಪ್ಪದಂತಾಗಿದೆ. ಪರಂಪರೆಯಿಂದ ನಂಬಿಕೊಂಡು ಬಂದ ವೃತ್ತಿಗಳಿಗೆ ಹಾಗೂ ಜೀವನ ಮೌಲ್ಯಗಳಿಗೆ ಆಧುನಿಕತೆಯ ಬಿರುಗಾಳಿ ಗೊಂದಲಕ್ಕೀಡುಮಾಡಿದೆ. ಸುಮಾರು ವರ್ಷಗಳ ಹಿಂದೆ ಆಂಧ್ರದಿಂದ ವಲಸೆ ಬಂದು ಕರ್ನಾಟಕದಲ್ಲಿ ನೆಲೆಸಿರುವ ಇವರು ಇಂದು ಹೆಚ್ಚು ಜನಸಂಖ್ಯೆಯನ್ನು ಹೊಂದಿದ್ದು, ಸ್ವಾವಲಂಬನೆಯಿಂದ ತಮ್ಮದೆ ಆದ ಸ್ವತಂತ್ರ ಬದುಕನ್ನು ಕಟ್ಟಿಕೊಂಡಿದ್ದಾರೆ. ತಮ್ಮ ಸ್ವಂತ ದುಡಿಮೆಯ ಫಲದಿಂದ ಹಂಚಿನ ಮನೆ, ಜಿಂಕ್‌ಶೀಟ್ ಮನೆ ಹಾಗೂ ಆರ್‌ಸಿಸಿ ಮನೆಗಳನ್ನು ಕಟ್ಟಿಕೊಂಡು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಜೀವನ ನಿರ್ವಹಣೆಗಾಗಿ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡು ಬದುಕನ್ನು ಕಟ್ಟಿಕೊಂಡಿದ್ದಾರೆ. ದಿನಬಳಕೆ ವಸ್ತುಗಳಾದ ಮಣ್ಣಿನ ಪಾತ್ರೆಗಳ ಸ್ಥಾನವನ್ನು ಹಿತ್ತಾಳೆ, ಅಲ್ಯೂಮಿನಿಯಂ, ಪಿಂಗಾಣಿ, ಸ್ಟೀಲ್ ಪಾತ್ರೆಗಳು ಆಕ್ರಮಿಸಿಕೊಂಡಿವೆ. ಸೀಮೆಎಣ್ಣೆ ದೀಪಗಳಿಂದ ಬೆಳಕನ್ನು ಪಡೆಯುತ್ತಿದ್ದ ಇವರು ಇಂದು ಭಾಗ್ಯಜ್ಯೋತಿಯಡಿಯಲ್ಲಿ ಎಲ್ಲರ ಮನೆಗಳಲ್ಲಿ ವಿದ್ಯುತ್ ದೀಪದ ಬೆಳಕನ್ನು ಕಾಣುತ್ತಿದ್ದಾರೆ. ಕೆಲವರು ಇನ್ನೂ ಸೀಮೆಎಣ್ಣೆ ಬೆಳಕಿನಲ್ಲೇ ಇದ್ದಾರೆ. ನಗರ ಪ್ರದೇಶದ ಪ್ರಭಾವಕ್ಕೊಳಗಾದ ಕೆಲವು ಯುವಕ, ಯುವತಿಯರೂ ಟೀಶರ್ಟ್, ಜೀನ್ಸ್ ಪ್ಯಾಂಟ್, ಇನ್ನಿತರೆ ರಂಗುರಂಗಿನ ಉಡುಪುಗಳಿಗೆ ಮಾರುಹೋಗಿದ್ದಾರೆ. ಸ್ತ್ರೀಯರು ಚೂಡಿದಾರ, ನೈಟಿ, ಲಂಗ ರವಿಕೆಯಂಥ ಉಡುಪುಗಳನ್ನು ಬಳಸುವುದರ ಜೊತೆ ಸ್ನೋ, ಪೌಡರ್, ಲಿಪ್‌ಸ್ಟಿಕ್‌ನಂಥ ಅಲಂಕಾರ ಸಾಮಗ್ರಿಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಆದರೆ ಹಿರಿಯ ತಲೆಮಾರಿನ ಸ್ತ್ರೀಯರು ಮತ್ತು ಪುರುಷರು ತಮ್ಮ ಮೂಲ ಉಡುಗೆ ತೊಡುಗೆಯ ಹಂತದಲ್ಲಿರುವುದು ಗೋಚರಿಸುತ್ತದೆ. ಹೀಗೆ ಮ್ಯಾಸನಾಯಕರು ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಭೌತಿಕವಾಗಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಂಡುಕೊಂಡಿದ್ದಾರೆ.

ಮ್ಯಾಸನಾಯಕ ಸಮುದಾಯವು ತನ್ನದೇ ಆದ ಮತ್ತು ವ್ಯವಸ್ಥಿತವಾದ ಸಾಂಪ್ರದಾಯಿಕ ಆಡಳಿತ ಕ್ರಮವನ್ನು ಹೊಂದಿದೆ. ಆಧುನಿಕ ಪ್ರಜಾಪ್ರಭುತ್ವದ ರಾಜಕೀಯವಲ್ಲದಿದ್ದರೂ ತಮ್ಮದೇ ಆದ ಸರಳ ಸಂಘಟಿತ ರಾಜಕೀಯ ಕಥನವನ್ನು ಹೊಂದಿರುತ್ತಾರೆ. ಒಂದು ನಿಟ್ಟಿನಲ್ಲಿ ಪ್ರಸ್ತುತ ಸಮುದಾಯ ಆಂತರಿಕ ಮತ್ತು ಬಾಹ್ಯವಾಗಿ ಆನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿ ಅವುಗಳನ್ನು ಪರಿಹರಿಸಿಕೊಳ್ಳಬೇಕಾಗಿದೆ. ಹಾಗೆ ತಮ್ಮ ಪಾವಿತ್ರ್ಯತೆ ಮತ್ತು ರಕ್ಷಣೆಯ ದೃಷ್ಟಿಯಿಂದ ಇದು ಅತ್ಯಾವಶ್ಯಕವಾಗಿ ತಮ್ಮ ಗುಂಪಿನ ನಾಯಕ ಅಥವಾ ಮುಖಂಡನಿಗೆ ಎಲ್ಲಾ ರೀತಿ ಯಿಂದಲೂ ಗೌರವ ಕೊಡುತ್ತಾರೆ. ಗುಂಪಿನ ಮುಖಂಡನನ್ನು ಸಾಮಾನ್ಯವಾಗಿ ಅನುವಂಶೀಯ ವಾಗಿಯೇ ಆಯ್ಕೆ ಮಾಡುತ್ತಾರೆ. ಹಟ್ಟಿಯ ಯಜಮಾನ, ಗೌಡ, ಪೂಜಾರಿ, ತಳವಾರ ಮೊದಲಾದ ಅಧಿಕಾರದ ಹುದ್ದೆಗಳು ಅನುವಂಶೀಯವಾಗಿ ಬರುತ್ತಿದ್ದವು. ಹಟ್ಟಿಯ ಯಾವುದೇ ಒಳಜಗಳಗಳಾದರೂ ಹಟ್ಟಿ ಪಂಚಾಯ್ತಿಯ ಮೂಲಕ ಬಗೆಹರಿಸಿಕೊಳ್ಳುತ್ತಿದ್ದರು. ಗಂಭೀರವಾದ

ವಿಚಾರಗಳಿದ್ದರೆ ಗುಡಿಕಟ್ಟೆ ಮತ್ತು ಕಟ್ಟೆಮನೆಗಳಿಗೆ ಹೋಗುತ್ತಿದ್ದರು. ಬಿಗಿಯಾದ ಕಟ್ಟು ಕಟ್ಟಳೆಯ ದಂಡ ಬಹಿಷ್ಕಾರಗಳಿಗೆ ಹೆದರಿ ಬುಡಕಟ್ಟು ಸಂಸ್ಕೃತಿಯ ಸಾಮಾಜಿಕ ನಿಯಮಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಹಟ್ಟಿಯ ಮುಖಂಡ ಅಥವಾ ಯಜಮಾನ ಪ್ರಾಮಾಣಿಕವಾಗಿ ಮತ್ತು ನಿಷ್ಪಕ್ಷಪಾತವಾಗಿ ಆಡಳಿತಕ್ರಮ ನಡೆಸುತ್ತಿದ್ದ. ಹಟ್ಟಿಯ ಯಾವುದೇ ಹಬ್ಬ, ಜಾತ್ರೆ, ಮದುವೆ, ಮಂಗಳ ಕಾರ್ಯಗಳು ಹಟ್ಟಿಯ ಯಜಮಾನನ ಮುಖಂಡತ್ವದಲ್ಲೇ ನಡೆಯುತ್ತಿದ್ದವು. ತಮ್ಮ ಜನಾಂಗಕ್ಕೋಸ್ಕರ ತ್ಯಾಗ ಬಲಿದಾನಗಳನ್ನು ಮಾಡಿದ ಹಟ್ಟಿಗೌಡರ ಕಥೆಗಳು ಇತಿಹಾಸದಲ್ಲಿ ಪ್ರಸಿದ್ಧವಾಗಿವೆ. ಏನೇ ಕಷ್ಟನಷ್ಟಗಳು ಬಂದರೂ ಸಮುದಾಯದ ಗುಟ್ಟನ್ನು ಹಾಗೂ ಪಾವಿತ್ರ್ಯತೆ ಯನ್ನು ಕಾಪಾಡಿಕೊಳ್ಳುತ್ತಿದ್ದರು. ನ್ಯಾಯ ನಿರ್ಣಯ ಮತ್ತು ರಾಜಕೀಯ ವ್ಯವಸ್ಥೆಯನ್ನು ತಪ್ಪಿಸ್ಥರಿಗೆ ದಂಡ ಶಿಕ್ಷೆ ಹಾಗೂ ಬಹಿಷ್ಕಾರ ವಿಧಿಸುವ ವಿಶೇಷ ಅಧಿಕಾರವನ್ನು ಹಟ್ಟಿಯ ಯಜಮಾನ ಅಥವಾ ಗೌಡನಿಗೆ ಕೊಡಲಾಗಿತ್ತು. ಕೆಲವೊಂದು ಸಲ ಇದರ ರಾಜಕೀಯ ಕಥನ ಹೇಗಿರುತ್ತದೆಂದರೆ ಹಟ್ಟಿಯ ಗೌಡ ನ್ಯಾಯ ತೀರ್ಮಾನ ಮಾಡುವಾಗ ತನ್ನ ಮಗನನ್ನೇ, ಸೊಸೆಯನ್ನೇ ತಪ್ಪಿತಸ್ಥರೆಂದು ತೀರ್ಮಾನಿಸಿ ದಂಡ ಹಾಕುತ್ತಿದ್ದರು.

ಸ್ವಾತಂತ್ರ್ಯನಂತರ ಪ್ರಜಾಪ್ರಭುತ್ವ ಸರ್ಕಾರ ಚುನಾವಣೆ ವ್ಯವಸ್ಥೆ ಜಾರಿಗೆ ತಂದಾಗಲೂ ಕೂಡ ಈ ಬುಡಕಟ್ಟು ಸಮುದಾಯ ಹಟ್ಟಿಯ ಯಜಮಾನ ಅಥವಾ ಗೌಡನ ಮೇಲಿನ ಗೌರವದಿಂದ ಆತ ಸೂಚಿಸಿದ ಪಕ್ಷ ಅಥವಾ ವ್ಯಕ್ತಿಗೆ ಮತ ಹಾಕುತ್ತಾ ಬಂದರು. ಕಾಲಕ್ರಮೇಣ ಹಟ್ಟಿಯ ಮುಖಂಡನೇ ತಮ್ಮ ಸಮುದಾಯಕ್ಕೆ ದ್ರೋಹ ಬಗೆಯಲು ಪ್ರಾರಂಭಿಸಿದಾಗ ವಿದ್ಯಾವಂತ ಯುವಕ ಯುವತಿಯರು ಪ್ರತಿಭಟನೆ ಮಾಡುವ ಸ್ಥಿತಿಗೆ ಬಂದಿದೆ. ನಂತರ ಬುಡಕಟ್ಟು ಸಮುದಾಯ ಒಂದು ಒಗ್ಗಟ್ಟಿನಿಂದ ಬಾಳಿ ಬದುಕುವ ಮನಃಸ್ಥಿತಿಯನ್ನು ಕಳೆದುಕೊಂಡಿದ್ದಾರೆ. ಇದರಿಂದ ಐಕ್ಯತೆ ಎನ್ನುವುದು ಮರೆಯಾಗಿ ವಿಘಟನೆಗಳು ಪ್ರಾರಂಭವಾದವು. ಪ್ರಜಾಪ್ರಭುತ್ವ ನೀತಿ ಮತ್ತು ಧೋರಣೆಗಳನ್ನು ಇವತ್ತು ಸಮುದಾಯದ ಎಲ್ಲಾ ಸದಸ್ಯರು ಅರ್ಥ ಮಾಡಿಕೊಂಡು ತಾವೇ ಚುನಾವಣೆಗೆ ನಿಲ್ಲಲು ಮುಂದಾಗಿದ್ದಾರೆ. ಗ್ರಾಮಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ವಿಧಾನಸಭೆ, ಲೋಕಸಭೆ ಮತ್ತು ರಾಜ್ಯಸಭೆ ಮೊದಲಾದ ಚುನಾವಣೆಯಲ್ಲಿ ಗೆದ್ದು ಹಟ್ಟಿಯಿಂದ ಹಿಡಿದು ದಿಲ್ಲಿಯವರೆಗೂ ಆಡಳಿತ ನಡೆಸುವಂಥ ಹೆಸರಾಂತ ರಾಜಕಾರಣಿಗಳು ಈ ಜಿಲ್ಲೆಗಳಲ್ಲಿ ಜನಿಸಿದ್ದಾರೆ. ಹಾಗೆಯೇ ಕರ್ನಾಟಕದ ತುಂಬಾ ಈ ಸಮುದಾಯದ ಪ್ರತಿಭಾವಂತ ರಾಜಕಾರಣಿ ಗಳಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಮಾಜಿ ಲೋಕಸಭಾ ಸದಸ್ಯರು ಎನ್.ವೈ.ಹನುಮಂತಪ್ಪ ಹಾಗೂ ಮಾಜಿ ಲೋಕಸಭಾ ಸದಸ್ಯ ಶಶಿಕುಮಾರ್ ಇದೇ ಚಿತ್ರದುರ್ಗ ಜಿಲ್ಲೆಯವರು. ಹಾಗೆ ಬಳ್ಳಾರಿ ಜಿಲ್ಲೆಯ ಮಾಜಿ ಸಚಿವರಾದ ಶ್ರೀ ಬಿ.ಶ್ರೀರಾಮುಲು, ಆರೋಗ್ಯ ಸಚಿವರು. ಹಾಗೆಯೇ ಈ ಎರಡೂ ಜಿಲ್ಲೆಗಳ ಹಾಲಿ ಶಾಸಕರು ಇದ್ದಾರೆ. ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಕ್ಷೇತ್ರದ ಮಾಜಿ ಶಾಸಕ ತಿಪ್ಪೇಸ್ವಾಮಿ ಹಾಗೂ ಮೊಳಕಾಲ್ಮೂರು ತಾಲ್ಲೂಕಿನ ಈಗಿನ ಶಾಸಕ ಎಸ್

ತಿಪ್ಪೇಸ್ವಾಮಿ, ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ಶಾಸಕ ನಾಗೇಂದ್ರ, ಕಂಪ್ಲಿಯ ಶಾಸಕ ಸುರೇಶ್ ಬಾಬು, ಸಂಡೂರು ಶಾಸಕ ತುಕಾರಾಂ ಇವರು ಈ ಜಿಲ್ಲೆಗಳಿಂದ ರಾಜಕಾರಣಿಗಳಾಗಿ ಪ್ರಸ್ತುತ ಆಡಳಿತವನ್ನು ನಡೆಸುತ್ತಿದ್ದಾರೆ. ಇನ್ನು ಕರ್ನಾಟಕವನ್ನು ಅವಲೋಕಿಸಿದರೆ ಹಾಲಿ ಹಾಗೂ ಮಾಜಿಗಳು ಹೆಚ್ಚು ಕಡಿಮೆ ಇಲ್ಲಿಯವರೆಗೂ ೪೦ ರಿಂದ ೪೫ ಜನ ಶಾಸಕರು ಹಾಗೂ ಸದಸ್ಯರು ಸಿಗುತ್ತಾರೆ. ಒಟ್ಟಾರೆಯಾಗಿ ನೋಡುವುದಾದರೆ ಒಂದು ಕಾಲದಲ್ಲಿ ಎಲ್ಲೋ ಒಂದು ಗುಡ್ಡಗಾಡಿನಲ್ಲಿ, ಅರಣ್ಯದಲ್ಲಿ ವಾಸಿಸುತ್ತಿರುವ ಈ ಸಮುದಾಯ ಇವತ್ತು ಸ್ವಾತಂತ್ರ್ಯನಂತರದಿಂದ ಇಲ್ಲಿಯವರೆಗೂ ರಾಜಕೀಯ ಕಥನವನ್ನು ಹಿಂತಿರುಗಿ ನೋಡಿದರೆ ಇಷ್ಟು ಜನರು ರಾಜಕೀಯವಾಗಿ ಪ್ರವೇಶಿಸಿದ್ದಾರೆ ಎಂಬುದು ಎಲ್ಲರಿಗೂ ಆಶ್ಚರ್ಯವಾಗುತ್ತದೆ. ಸಮಾಜದಲ್ಲಿ, ರಾಜಕೀಯದಲ್ಲಿ ನಾವೇನು ಕಡಿಮೆ ಇಲ್ಲ ಎಂಬುದನ್ನು ತೋರ್ಪಡಿಸಿಕೊಳ್ಳಲು ಅವರ ಹಿಂದಿನ ಕಥನವನ್ನು ನೋಡಿದರೆ ಗೊತ್ತಾಗುತ್ತದೆ. ನಾಯಕನಾಗುವವರೆಗೆ ಜನಾಂಗ ಬೇಕು. ನಾಯಕನಾದಾಗ ಜನಾಂಗವನ್ನು ಮರೆಯುವ ಸನ್ನಿವೇಶವನ್ನು ಪ್ರಸ್ತುತ ಸಂದರ್ಭದಲ್ಲಿ ಕಾಣುತ್ತೇವೆ. ಇತ್ತೀಚಿನ ರಾಜಕಾರಣದಿಂದ ಹಟ್ಟಿಗಳಲ್ಲಿ ಕ್ಷುಲ್ಲಕ ಕಾರಣಗಳಿಗಾಗಿ ಹೊಡೆದಾಟ ಪರಸ್ಪರ ವಿರೋಧಗಳನ್ನು ಕಾಣಬಹುದಾಗಿದೆ.

ಶಿಕ್ಷಣವು ಒಂದು ಸಾಮಾಜಿಕ ಬದಲಾವಣೆಯ ಶಕ್ತಿಯಾಗಿದೆ. ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು, ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುತ್ತದೆ. ಶಿಕ್ಷಣವು ವ್ಯಕ್ತಿ ಅಂತಸ್ತಿನ ನಿರ್ಧಾರಕ ಅಂಶವಾಗಿದೆ. ಒಂದು ದೇಶದ ಸಮುದಾಯದ ಸರ್ವತೋಮುಖ ಅಭಿವೃದ್ಧಿಯು ಶಿಕ್ಷಣವನ್ನು ಅವಲಂಬಿಸಿದೆ. ಶಿಕ್ಷಣವಿಲ್ಲದ ವ್ಯಕ್ತಿ ವೈಯಕ್ತಿಕ ವಾಗಿಯೇ ಆಗಲಿ, ಸಾಮಾಜಿಕವಾಗಿಯೇ ಆಗಲಿ, ಉನ್ನತಿಯಾಗಲು ಸಾಧ್ಯವಿಲ್ಲ. ವ್ಯಕ್ತಿಯ ಮತ್ತು ಸಮಾಜದ ಆರ್ಥಿಕ ಸಾಮಾಜಿಕ ಮತ್ತು ರಾಜಕೀಯ ಹಿಂದುಳಿದಿರುವಿಕೆಗೆ ಶಿಕ್ಷಣದ ಕೊರತೆಯೇ ಕಾರಣವಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ವ್ಯಕ್ತಿ ಸಮಾಜದಲ್ಲಿ ಮತ್ತು ಸಮಾಜದ ಮುಖ್ಯವಾಹಿನಿಯಲ್ಲಿ ಮಿಳಿತವಾಗಬೇಕಾದರೆ ಶಿಕ್ಷಣ ಅತ್ಯಂತ ಅಗತ್ಯವಾಗಿದೆ. ನಾಗರಿಕ ಪ್ರಪಂಚದಿಂದ ಪ್ರತ್ಯೇಕವಾಗಿ ಹಟ್ಟಿ ಕಟ್ಟಿಕೊಂಡು ವಾಸಿಸುವ ಮ್ಯಾಸನಾಯಕರಿಗೆ ಒಂದು ಕಾಲದಲ್ಲಿ ಶಿಕ್ಷಣ ನುಂಗಲಾರದ ತುತ್ತಾಗಿತ್ತು. ಆದರೆ ಈಗ ಸುಲಭವಾಗಿ ಕಲಿಯಲು ಎಲ್ಲಾ ಅನುಕೂಲತೆಗಳಿವೆ. ಬಡತನ, ಅಜ್ಞಾನ ಮತ್ತು ಮೂಢನಂಬಿಕೆ ಮೊದಲಾದ ಕಾರಣಗಳಿಂದಾಗಿ ಮಕ್ಕಳಿಗೆ ಶಿಕ್ಷಣ ಕೊಡುವುದಕ್ಕಿಂತ ಹೆಚ್ಚಾಗಿ ಕೂಲಿ ಕಳಿಸುವುದಕ್ಕೆ ಪಾಲಕರೇ ಬೆಂಬಲಿಸುತ್ತಾರೆ.

ಕೂಡ್ಲಿಗಿ, ಮೊಳಕಾಲ್ಮೂರು, ಸಂಡೂರು, ಚಳ್ಳಕೆರೆಯಂಥ ಪ್ರದೇಶದಲ್ಲಿ ವಾಸಿಸುವ ಹಟ್ಟಿಗಳನ್ನು ಈಗಲೂ ಸಹ ಕೆಲವರಿಗೆ ಕನ್ನಡವೇ ಸರಿಯಾಗಿ ಮಾತನಾಡಲಿಕ್ಕೆ ಬರುವುದಿಲ್ಲ. ಸರ್ಕಾರದ ಪಠ್ಯಪುಸ್ತಕಕ್ಕೂ ಅವರ ಆಡುವ ಭಾಷೆಗೂ ಬಹಳ ಅಂತರವಿದೆ. ಕನ್ನಡ ಮತ್ತು ತೆಲುಗನ್ನು ಎರಡೂ ಭಾಷೆಗಳನ್ನು ಅಪಭ್ರಂಶವಾಗಿ ಬಳಸುತ್ತಾರೆ. ಊಟ, ಬಟ್ಟೆ, ಪುಸ್ತಕದ

ಕೊರತೆಯಿಂದ ಪಾಲಕರ ಬೇಜವಾಬ್ದಾರಿತನದಿಂದ ಮತ್ತು ಶಿಕ್ಷಕರ ಅಸಡ್ಡೆತನದಿಂದ ಶ್ರೀಮಂತರ ಮಕ್ಕಳ ಪಕ್ಕದಲ್ಲಿ ಸರಿ ಸಮಾನವಾಗಿ ಕುಳಿತುಕೊಳ್ಳುವ ಸಂಕೋಚ ಭಾವನೆಯಿಂದಾಗಿ ಮಕ್ಕಳು ಶಾಲೆಯನ್ನು ತಪ್ಪಿಸುತ್ತಾರೆ. ರಾಜ್ಯದ ೩೦ ಜಿಲ್ಲೆಗಳಲ್ಲಿಯೂ ಬೇಡ ಸಮುದಾಯ(ಪರಿಶಿಷ್ಟ ಪಂಗಡ) ಜನಸಂಖ್ಯೆಯಿದ್ದು, ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭ರಷ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆಯಿದೆ. ಈ ಸಮುದಾಯದ ಸಾಕ್ಷರತೆಯ ಪ್ರಮಾಣ ಶೇ. ೪೮ರಷ್ಟು. ಇದರಲ್ಲಿ ಶೇ. ೬೦ ಪುರುಷರು, ಶೇ. ೩೭ ಮಹಿಳೆಯರ ಸಾಕ್ಷರತೆಯಿದೆ. ಸರ್ಕಾರ ತಂದಿರುವ ಅಕ್ಷರ ದಾಸೋಹ ಕಾರ್ಯಕ್ರಮ ಸರಿಯಾದ ಕಾರ್ಯಕ್ರಮವಾದರೂ ಬಹಳಷ್ಟು ಮಕ್ಕಳು ಅದರಿಂದ ಉಪಯೋಗ ಪಡೆಯುತ್ತಿಲ್ಲ. ಕಾರಣ ಅಲ್ಲಿನ ವ್ಯವಸ್ಥೆಯಿಂದಾಗಿದೆ. ಹಾಗೆಯೇ ಉಚಿತ ಸೈಕಲ್ ವಿತರಣೆಯು ಕೂಡ ತೀರಾ ಕಳಪೆ ಮಟ್ಟದ ಸೈಕಲುಗಳು ಅಬ್ಬರ ಪ್ರಚಾರದಿಂದ ಬಿಡುಗಡೆಯಾಗುತ್ತವೆ. ಅದರೆ ಮನೆಗೆ ಹೋಗುವುದರೊಳಗೆ ಯಾವುದಾದರೂ ಒಂದು ಭಾಗವಾದರೂ ಮುರಿದಿರುತ್ತದೆ. ಇವುಗಳನ್ನು ಮಕ್ಕಳು ಬಳಸದೆ ತನ್ನ ಪೋಷಕರು ಅವುಗಳಿಂದ ಉಪಯೋಗ ಪಡೆಯುತ್ತಿರುವುದು ಕಂಡುಬರುತ್ತದೆ.

ಪಶುಪಾಲನೆ ಮತ್ತು ಕೃಷಿ ಎರಡನ್ನೇ ನಂಬಿ ಜೀವಿಸುತ್ತಿರುವ ಮ್ಯಾಸನಾಯಕರಲ್ಲಿ ಬಾಲ ಕಾರ್ಮಿಕ ಪದ್ಧತಿ ಅಧಿಕವಾಗಿದೆ. ಏಳೆಂಟು ವರ್ಷದ ಮಕ್ಕಳು ಶಾಲೆ ಬಿಟ್ಟು ದನಕುರಿ ಮೇಕೆಗಳ ಹಿಂದೆ ತಿರುಗುವ ದೃಶ್ಯ ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಒಂದು ವೇಳೆ ಮಕ್ಕಳು ಶಾಲೆಗೆ ಹೋಗುತ್ತಿದ್ದರೂ ಸುಗ್ಗಿ ಮತ್ತು ಬೇಸಾಯದ ಕಾಲದಲ್ಲಿ ಮಕ್ಕಳನ್ನು ಶಾಲೆಗೆ ಕಳಿಸುವುದಿಲ್ಲ. ಕೃಷಿ ಪ್ರಧಾನ ಅವಿಭಕ್ತ ಕುಟುಂಬಗಳಲ್ಲಿ ಮಕ್ಕಳ ಶ್ರಮ ಅಗತ್ಯವಾಗಿದೆ. ಅವಿಭಕ್ತ ಕುಟುಂಬದಲ್ಲಿ ವ್ಯಕ್ತಿಯ ಲಿಂಗ, ವಯಸ್ಸು ಮತ್ತು ಪ್ರತಿಭೆಗೆ ತಕ್ಕಂತೆ ಕೆಲಸಕಾರ್ಯಗಳನ್ನು ಹಂಚಿಕೊಡುವುದರಿಂದ ಚಿಕ್ಕ ಮಕ್ಕಳನ್ನು ಎತ್ತಿಕೊಳ್ಳುವುದು, ಅಡಿಸುವುದು, ಕುಡಿಯಲು ನೀರು ತರುವುದು, ಹೊಲಗದ್ದೆಗಳಿಗೆ ಬುತ್ತಿ ಕೊಟ್ಟು ಬರುವುದು ಮುಂತಾದ ಸಣ್ಣಪುಟ್ಟ ಕಾರ್ಯಗಳಿಗೆ ಮಕ್ಕಳನ್ನು ಬಳಸಿಕೊಳ್ಳುತ್ತಾರೆ. ಹೊಸದುರ್ಗ, ಹೊಳಲ್ಕೆರೆ, ಹಿರಿಯೂರು ಚಿತ್ರದುರ್ಗ, ಹೊಸಪೇಟೆ, ಬಳ್ಳಾರಿ ಮೊದಲಾದ ತಾಲ್ಲೂಕುಗಳಲ್ಲಿ ಶೈಕ್ಷಣಿಕವಾಗಿ ಮುಂದುವರೆದ ಹಟ್ಟಿಗಳಿವೆ. ಹಾಗೆಯೇ ಕೂಡ್ಲಿಗಿ, ಸಂಡೂರು, ಮೊಳಕಾಲ್ಮುರು, ಚಳ್ಳಕೆರೆ ಕೆಲವು ಪ್ರದೇಶಗಳಲ್ಲಿ ಶೈಕ್ಷಣಿಕವಾಗಿ ಹಿಂದುಳಿದ ಹಟ್ಟಿಗಳೂ ಸಹ ಇವೆ. ಕೆಲವು ಪ್ರದೇಶಗಳಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ನೋಡದೆ ಇರುವಂಥ ಜನತೆ ಹಟ್ಟಿಗಳಲ್ಲಿದ್ದಾರೆ. ಅದರೂ ಸಹ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುತ್ತಿದ್ದಾರೆ.

ಹಿಂದುಳಿದ ಮ್ಯಾಸನಾಯಕರು ಜಾಗೃತಗೊಂಡು ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ವಿದ್ಯಾಪ್ರಸಾರ ಮಾಡುತ್ತಿದ್ದಾರೆ. ಬಳ್ಳಾರಿಯಲ್ಲಿ ಜಿಲ್ಲಾ ವಾಲ್ಮೀಕಿ ವಿದ್ಯಾಭಿವೃದ್ಧಿ ಸಂಘದಿಂದ ಶಿಕ್ಷಣ ಸಂಸ್ಥೆಗಳು ಸ್ಥಾಪನೆಗೊಂಡವು. ಚಿತ್ರದುರ್ಗದಲ್ಲಿ ಶಿಕ್ಷಣ ಸಂಸ್ಥೆಗಳು, ವಾಲ್ಮೀಕಿ ವಿದ್ಯಾಸಂಸ್ಥೆ, ಜಿಲ್ಲಾ ಮದಕರಿನಾಯಕ ವಿದ್ಯಾಸಂಸ್ಥೆ ಇತ್ಯಾದಿ ಸಂಘ ಸಂಸ್ಥೆಗಳು ಗಿರಿಜನರ ಶೈಕ್ಷಣಿಕ

ಕೊರೆತೆಯನ್ನು ನೀಗಿಸುವಲ್ಲಿ ಸಫಲವಾಗಿವೆ. ಉತ್ತರ ಕರ್ನಾಟಕದ(ಗೋಕಾಕ್) ಏಕೈಕ ಗಿರಿಜನರ ಶಿಕ್ಷಣ ಸಂಸ್ಥೆಯಾದ ಲಕ್ಷ್ಮೀ ಎಜುಕೇಷನ್ ಸೊಸೈಟಿಯು ಇಲ್ಲಿನ ಜನರಿಗೆ ಅನೇಕ ರೀತಿಯಲ್ಲಿ ನೆರವಾಗಿದೆ. ಬೀದರ್, ಗುಲಬರ್ಗಾ, ರಾಯಚೂರುಗಳಲ್ಲಿ ಸಹ ಸಣ್ಣಪುಟ್ಟ ಸಂಸ್ಥೆಗಳಿದ್ದು, ಪದವಿ ಪಡೆಯಲು ಅನುಕೂಲವಾಗಿವೆ. ಬಳ್ಳಾರಿ ಜಿಲ್ಲೆಯ ಕೆಲ ಗ್ರಾಮಗಳಲ್ಲಿ ಈ ಸಮುದಾಯಕ್ಕೆ ಸೇರಿದ ಶಿಕ್ಷಣ ಸಂಸ್ಥೆಗಳನ್ನು ತೆರೆದಿರುವುದು ಕಂಡುಬರುತ್ತದೆ.[೧]

ಇವರು ವಾಸಿಸುವ ಕೆಲವು ಹಟ್ಟಿಗಳಲ್ಲಿ ಕೆಲಸ ಮಾಡುತ್ತಿರುವ ಶಿಕ್ಷಕರಾಗಲಿ ಅಥವಾ ಶಿಕ್ಷಣ ಇಲಾಖೆಯಾಗಲಿ ಪ್ರಾಮಾಣಿಕವಾಗಿ ಕೆಲಸ ಮಾಡುತ್ತಿಲ್ಲ. ಕಾರಣ ಹಟ್ಟಿಗಳು ನಗರದಿಂದ ದೂರ ಇರುವುದು. ಕೆಲವೊಂದು ಶಿಕ್ಷಕರು, ಕೃಷಿ, ವ್ಯಾಪಾರ, ಬಡ್ಡಿ ವ್ಯವಹಾರ ಮತ್ತು ಮದ್ಯಪಾನ ಮಾಡುವ ಪ್ರವೃತ್ತಿಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ.

ಕರ್ನಾಟಕದ ಇತರೆ ಜಿಲ್ಲೆಗಳಿಗೆ ಹೋಲಿಕೆ ಮಾಡಿದರೆ ಶಿಕ್ಷಣ ಕ್ಷೇತ್ರದಲ್ಲಿ ಈಗಲೂ ಹಟ್ಟಿಗಳಿಂದ ಕೂಡಿದ ಈ ಎರಡೂ ಜಿಲ್ಲೆಗಳು ತುಂಬಾ ಹಿಂದುಳಿದಿವೆ. ನಗರ ಪಟ್ಟಣಗಳಲ್ಲಿ ವಾಸಿಸುವಂಥವರು ಶಿಕ್ಷಣವನ್ನು ಸರಿಯಾಗಿ ಸದುಪಯೋಗ ಪಡೆದುಕೊಳ್ಳುತ್ತಿದ್ದಾರೆ. ಹಟ್ಟಿಗಳಲ್ಲಿ ಇನ್ನೂ ಹಳೆಯ ಕಾಲದ ಗೊಡ್ಡು ಸಂಪ್ರದಾಯಗಳಿಂದ ಮಕ್ಕಳನ್ನು ಸರಿಯಾಗಿ ಶಾಲೆಗೆ ಕಳಿಸುವುದಿಲ್ಲ. ಅಲ್ಲಿಂದ ಬಂದಿರುವ ವಿದ್ಯಾರ್ಥಿಗಳನ್ನು ಬುಡಕಟ್ಟಿನ ಹಿನ್ನೆಲೆಯಿಂದ ಬಡತನ, ಅನಕ್ಷರತೆ ಕಟ್ಟುನಿಟ್ಟಿನ ಸಂಪ್ರದಾಯಗಳ ಸೆಳೆತಕ್ಕೆ ಸಿಕ್ಕು ಶಾಲೆ ಬಿಡುವುದು, ಅನುತ್ತೀರ್ಣರಾಗುವುದೇ ಹೆಚ್ಚು. ಎಸ್.ಎಸ್.ಎಲ್.ಸಿ., ಪಿಯುಸಿ ವಿದ್ಯಾಭ್ಯಾಸ ಮಾಡುವವರ ಸಂಖ್ಯೆ ಅಧಿಕ. ಹೀಗಾಗಿ ಬಡತನ, ದಾರಿದ್ರ್ಯ, ಅಜ್ಞಾನ, ಪರಾವಲಂಬನೆ, ಗುಲಾಮತನ, ದಾಸ್ಯಪ್ರವೃತ್ತಿ ಪ್ರಮುಖವಾಗಿವೆ. ಇವುಗಳನ್ನು ನಿರ್ನಾಮ ಮಾಡಿ ಮೇಲೇಳಲು ಜಾಗೃತಗೊಳಿಸುವ ಅವಶ್ಯಕತೆ ಇದೆ. ಮ್ಯಾಸ ನಾಯಕರ ಮಕ್ಕಳು ಹೆಚ್ಚಾಗಿ ಕೂಲಿ ಕೆಲಸಕ್ಕೆ ಹೋಗುವುದು ಸಾಮಾನ್ಯ ಸಂಗತಿ. ಹೀಗಾಗಿ ಶಿಕ್ಷಣದಲ್ಲಿ ಪರಿವರ್ತನೆಗೊಂಡ ಸಮುದಾಯಗಳನ್ನು ನೋಡಿ ಇಂದು ಮ್ಯಾಸನಾಯಕರು ಶಾಲೆ ಕಾಲೇಜುಗಳ ಹಂತಕ್ಕೆ ತಲುಪಿದ್ದಾರೆ. ಇಂದು ಪದವಿ ಸ್ನಾತಕೋತ್ತರ ಪದವಿ, ಬಿ.ಇಡಿ ಪಡೆಯುತ್ತಿರುವವರಂತೂ ಹೆಚ್ಚು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇಷ್ಟೆಲ್ಲ ಶಿಕ್ಷಣ ಪಡೆಯಲು ಉಚಿತ ವಸತಿ ನಿಲಯಗಳಿರುವುದು ಸಹಾಯಕವಾಗಿದೆ. ಅದೇ ರೀತಿ ಕಾನೂನು, ವೈದ್ಯಕೀಯ, ಇಂಜನಿಯರಿಂಗ್ ಮುಂತಾದ ತಾಂತ್ರಿಕ ಕೋರ್ಸ್‌ಗಳಲ್ಲಿ ಇವರಿಗೆ ಮೀಸಲಾತಿ ಸೌಲಭ್ಯವಿರುವುದರಿಂದ ಅನುಕೂಲವಾಗಿದೆ.

ಸಂಸ್ಕೃತಿ ಬದಲಾವಣೆ ಎಲ್ಲ ಬಗೆಯ ಏರಿಳಿತಗಳನ್ನು ಕೈಚೆಲ್ಲಿ ಅಥವಾ ಅಸಹಾಯಕ ದೈನ್ಯ ಸ್ಥಿತಿಯಿಂದಲೇ ಸ್ವೀಕರಿಸುತ್ತದೆ ಎಂದು ಹೇಳಿದರೆ ತಪ್ಪಾಗುತ್ತದೆ. ಸ್ವೀಕರಣ ಮತ್ತು ಪ್ರತಿರೋಧಗಳು ಏಕಕಾಲದಲ್ಲಿ ಆ ಕೋಶದ ಒಳಗೆ ಸನ್ನದ್ಧವಾಗಿರುತ್ತದೆ. ಹೀಗೆ ಸ್ಥಿತ್ಯಂತರಕ್ಕೆ ಭಾರತದ ಸಮುದಾಯಗಳು ಮಿಶ್ರ ಪ್ರತಿಕ್ರಿಯೆಯ ಮೂಲಕ ಸಂವೇದಿಸಿದ್ದು ಗಮನಾರ್ಹ

ಸಂಗತಿ. ಈ ಸ್ವೀಕರಣ ಮತ್ತು ಪ್ರತಿರೋಧಗಳು ಸಮುದಾಯಗಳ ಬದಲಾವಣೆಗೆ ಅರ್ಥಪೂರ್ಣವಾಗಿ ಅನ್ವಯಿಸುವ, ಬೆಸೆಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತದೆ. ಸ್ವೀಕರಿಸುವಾಗ ಆಳದಲ್ಲಿನ ಚಾರಿತ್ರಿಕ ಹಸಿವು ಪ್ರತಿರೋಧಿಸುವಾಗ ಕಾಡುವ ಅನನ್ಯತೆಯ ಭಯ ಇವೆರಡೂ ಒಂದು ಸಮುದಾಯದ ಸಂಸ್ಕೃತಿ ಆಳದಲ್ಲಿ ತುಡಿತವನ್ನು ಒಂದು ಅರ್ಥಪೂರ್ಣ ಲೆಕ್ಕ ಹೊಂದಿಸಿವೆ. ಹೀಗೆ ಒಂದು ಸಂಸ್ಕೃತಿಯು ಸ್ಥಿತ್ಯಂತರಗಳ ಸವಾಲುಗಳನ್ನು ಸ್ವೀಕರಿಸುವಾಗ ಬೌದ್ಧಿಕವಾಗಿ ಚಿಂತಿಸುವ ಜೊತೆಗೆ ಪ್ರತಿರೋಧದ ವೈಚಾರಿಕ ದಿಟ್ಟತನವನ್ನು ಮೈಗೂಡಿಸಿಕೊಂಡಿರು ತ್ತದೆ. ಸ್ವಕೀಯ ದರ್ಶನಗಳ ಜೊತೆ ತಾನು ಪಡೆದ ಅನ್ಯಜ್ಞಾನವನ್ನು ಸಂಯೋಜಿಸುವ ವಿಶಿಷ್ಟಗುಣ ಭಾರತದ ಬಹುಪಾಲು ಸಮುದಾಯಗಳಾಗಿವೆ.

ಸಂಸ್ಕೃತಿ ಎನ್ನುವುದು ಒಳಿತು ಕೆಡಕುಗಳು ಸಂಭವಿಸುವ ನಿರಂತರ ಹರಿವು. ಆ ಹರಿವು ಹರಿಯುತ್ತಲೇ ಕೆಡಕುಗಳನ್ನು ಕಳಚಿ ತಿಳಿಯಾಗುತ್ತದೆ. ಇಂಥ ಚಾರಿತ್ರಿಕ ಹರಿವಿಗೆ ಈ ರೀತಿಯ ಪರಿಷ್ಕರಣೆಯ ಗುಣ ಕಾಲದ ಒತ್ತಡದಿಂದ ಸಹಜವಾಗಿಯೇ ಆಗುತ್ತದೆ. ಹೀಗಾಗಿ ಸಂಸ್ಕೃತಿಯನ್ನು ಕಾಯ್ದುಕೊಳ್ಳಬೇಕೆನ್ನುವ ಮನುಷ್ಯ ಪ್ರಯತ್ನ ಮತೀಯ ಅಹಂಕಾರದಿಂದ ಬೋಧಿಸಲ್ಪಟ್ಟಿರುತ್ತದೆ. ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ವತಂತ್ರ ಘಟಕವಲ್ಲ. ಅದು ಸಮುದಾಯದ ಅಂತಃ ಸತ್ವ ಕಾಲದ ಒತ್ತಡಗಳು, ಪ್ರಭಾವಗಳು ಹೇಗೆ ಸಮುದಾಯದ ಮೇಲೆ ಬದಲಾವಣೆಗಳ ಅನಿವಾರ್ಯತೆಯನ್ನು ತರುತ್ತವೋ ಅವೆಲ್ಲಾ ಸಂಸ್ಕೃತಿ ತನ್ನಷ್ಟಕ್ಕೆ ತಾನು ಸ್ಥಿತ್ಯಂತರಗಳಿಗೆ ಒಳಗಾಗುತ್ತದೆ.

ಈ ಸ್ಥಿತ್ಯಂತರಗಳಿಗೆ ಒಳಗಾಗುತ್ತಿರುವ ಬುಡಕಟ್ಟು ಸಮುದಾಯಗಳಲ್ಲಿ ಮ್ಯಾಸಬೇಡರ ಬುಡಕಟ್ಟು ಸಮುದಾಯ ಕೂಡ ಪ್ರಮುಖವಾದುದು. ಈ ಸಮುದಾಯವು ಇಂದು ಸಂಸ್ಕೃತೀಕರಣ, ಆಧುನೀಕರಣ ಮತ್ತು ಮತಾಂತರಕ್ಕೆ ಒಳಗಾಗಿ ಬದಲಾವಣೆಯ ಲಕ್ಷಣಗಳು ಕಂಡುಬರುತ್ತಿವೆ. ಹಾಗಾಗಿ ಇಲ್ಲಿ ಈ ಮೂರು ಪ್ರಮುಖ ಅಂಶಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಕೆಳಸ್ತರದ ಆದಿವಾಸಿ ಅಥವಾ ಬುಡಕಟ್ಟು ಸಮುದಾಯಗಳು ತಮ್ಮ ರೂಢಿ ಸಂಪ್ರದಾಯ ಪದ್ಧತಿ ಸಂಸ್ಕಾರ, ಕ್ರಿಯಾವಿಧಿ, ಆದರ್ಶಜೀವನ ವಿಧಾನಗಳನ್ನು ಮೇಲ್ಜಾತಿಯವರ ರೀತಿ ನೀತಿಗಳಿಗೆ ಅನುಗುಣವಾಗಿ ಬದಲಾಯಿಸಿಕೊಳ್ಳುವ ಪ್ರಕ್ರಿಯೆಯನ್ನು ಸಂಸ್ಕೃತೀಕರಣ ಎನ್ನುವರು. ಅಂದರೆ ಸಾಮಾಜಿಕ ಹಾಗೂ ಸಂಸ್ಕೃತಿಯ ಸಂಚಲನೆಯ ಪ್ರಕ್ರಿಯೆಯಾಗಿದೆ. ಕೆಳಜಾತಿಗಳು ತಾವು ಕಂಡ ಪ್ರಬಲ ಹಾಗೂ ಪ್ರತಿಷ್ಠಿತ ಮೇಲ್ಜಾತಿಗಳ ಅನುಕರಣೆಯ ಮೂಲಕ ತಮ್ಮ ಅಂತಸ್ತನ್ನು ಹೆಚ್ಚಿಸಿಕೊಳ್ಳುವುದು. ಇಂಥ ಪದ್ಧತಿಯನ್ನು ಅನುಸರಿಸುವ ಸಮುದಾಯಗಳಲ್ಲಿ ಮ್ಯಾಸಬೇಡರ ಸಮುದಾಯ ಒಂದಾಗಿದೆ. ಮ್ಯಾಸಬೇಡರ ಸಮುದಾಯದವರು ಇತ್ತೀಚೆಗೆ ಸಂಸ್ಕೃತೀಕರಣಗೊಳ್ಳುತ್ತಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮ್ಯಾಸನಾಯಕರ ಹಟ್ಟಿಗಳಲ್ಲಿ ಕಂಡುಬಂದಿದೆ. ಮ್ಯಾಸನಾಯಕಹಟ್ಟಿಗಳಲ್ಲಿ ಹೆಚ್ಚಾಗಿ ಜನರು ಅಯ್ಯಪ್ಪಸ್ವಾಮಿಯನ್ನು ಆರಾಧಿಸುತ್ತಾರೆ. ಅಯ್ಯಪ್ಪಸ್ವಾಮಿಯನ್ನು ಆರಾಧನೆ ಮಾಡುತ್ತಲೇ ಆತನ ಹೆಸರಿನಲ್ಲಿ ಮಾಲೆಯನ್ನು ಹಾಕುತ್ತಾರೆ.

ಈ ಮಾಲೆಯನ್ನು ಹಾಕುವುದರಿಂದಾಗಿ ಮದ್ಯಪಾನ ಮಾಡುವುದು, ಪ್ರಾಣಿಬಲಿಯನ್ನು ಕೊಡುವುದು ಮುಂತಾದವುಗಳನ್ನು ಕೈಬಿಟ್ಟು ಮೇಲ್ವರ್ಗದ ರೀತಿ ನೀತಿಗಳನ್ನು ಕ್ರಿಯಾವಿಧಿಗಳನ್ನು ಹಾಗೂ ಜೀವನಕ್ರಮವನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಮೇಗಳಹಟ್ಟಿ ಪಾಲಯ್ಯ ಎಂಬುವರನ್ನು ಸಂದರ್ಶನಕ್ಕೊಳಪಡಿಸಿದಾಗ ಅವರು ಹೇಳುವ ರೀತಿ ಹೀಗಿತ್ತು. ನಾನು ಅಯ್ಯಪ್ಪಸ್ವಾಮಿ ಮಾಲೆಯನ್ನು ಐದು ವರ್ಷಗಳಿಂದ ಹಾಕುತ್ತಾ ಬಂದಿದ್ದೇನೆ. ಜೊತೆಗೆ ನನ್ನ ಸ್ನೇಹಿತರು ಹದಿನೈದು ಜನ ಇದ್ದಾರೆ. ಅವರು ಕೂಡ ಮಾಲೆಯನ್ನು ಹಾಕುತ್ತಾರೆ. ನಾವು ಮಾಲೆಯನ್ನು ಹಾಕಿದ ಕೂಡಲೇ ಮನೆಯಲ್ಲಿ ಊಟ ಮಾಡುವುದಿಲ್ಲ. ನಾವೇ ಹೊರಗಡೆ ಮಾಡಿಕೊಳ್ಳುತ್ತೇವೆ. ಆಗಿನಿಂದ ಮಾಂಸವನ್ನು ತಿನ್ನುವುದಿಲ್ಲ. ಮಾಲೆ ಹಾಕಿದಾಗಿನಿಂದ ಮಾಲೆಯನ್ನು ತೆಗೆಯುವವರೆಗೆ ನಮಗೆ ಹನ್ನೆರಡರಿಂದ ಹದಿನೈದು ಸಾವಿರ ಖರ್ಚು ಬರುತ್ತದೆ.[೨] ಪಾಲಯ್ಯ ಹೇಳುವ ಮಾತುಗಳನ್ನು ಗಮನಿಸಿದರೆ ಇವರ ಆಹಾರಪದ್ಧತಿಯು ಸಂಪೂರ್ಣವಾಗಿ ಬದಲಾದಂತೆ ಕಾಣುತ್ತದೆ. ಜೊತೆಗೆ ಇವರು ಸಸ್ಯಾಹಾರಿಗಳಾಗಿರುವುದು ಪ್ರಮುಖವಾಗಿ ಎದ್ದು ಕಾಣುತ್ತದೆ. ಹಾಗೆ ಅಯ್ಯಪ್ಪಸ್ವಾಮಿಯ ಫೋಟೊವನ್ನು ಮನೆಯಲ್ಲಿ ತಂದು ಪೂಜಿಸುತ್ತಿರುವುದು ತಿಳಿಯಬಹುದಾಗಿದೆ. ಹಾಗೆ ಕೇವಲ ಒಂದು ತಿಂಗಳಿನಲ್ಲಿಯೇ ಹನ್ನೆರಡರಿಂದ ಹದಿನೈದು ಸಾವಿರ ಖರ್ಚು ಮಾಡುತ್ತಿರುವುದು ವಿಷಾದಕರ ಸಂಗತಿ. ಏಕೆಂದರೆ ಒಂದು ವರ್ಷ ದುಡಿದರೂ ಸಹ ಅಷ್ಟು ಹಣ ಗಳಿಸುವುದು ಕಷ್ಟ. ಇಂತಹದರಲ್ಲಿ ಸಾಲ ಮಾಡಿ ಮೇಲ್ವರ್ಗದ ದೈವಗಳನ್ನು ಆಚರಿಸುವುದು ಎದ್ದುಕಾಣುತ್ತದೆ. ಇದೇ ಪರಂಪರೆಯನ್ನು ಇನ್ನೂ ಕೆಲವು ಮ್ಯಾಸನಾಯಕರ ಹಟ್ಟಿಗಳಲ್ಲಿ ಕಾಣಬಹುದು. ಮಾಲೆ ತೆಗೆದ ನಂತರ ಪುನಃ ಮೊದಲಿನಂತೆಯೇ ಏನೂ ಬದಲಾಗದೆ ಶೇ.೯೦ರಷ್ಟು ಜನ ವರ್ತಿಸುತ್ತಾರೆ. ಈಗೀಗ ಮ್ಯಾಸ ಸಮುದಾಯದಲ್ಲಿ ಪಾಂಡುರಂಗಸ್ವಾಮಿ ಮಾಲೆ ಹಾಕುವುದು ಹೆಚ್ಚಾಗಿ ಕಾಣಬಹುದು. ಇಲ್ಲಿಯೂ ಪಂಢರಾಪುರ ಯಾತ್ರೆಗೆ ಹೋಗುತ್ತಾರೆ.

ನೌಕರ ವರ್ಗದವರು ಇತ್ತೀಚೆಗೆ ಮೇಲ್ವರ್ಗದ ಸಮುದಾಯಗಳ ದೈವಾರಾಧನೆಯನ್ನು ಆರಾಧಿಸುತ್ತಿರುವ ಇನ್ನೊಂದು ಉದಾಹರಣೆಯನ್ನು ಇಲ್ಲಿ ನೋಡಬಹುದು. ಮ್ಯಾಸಬೇಡರ ಸಮುದಾಯದ ನೌಕರಶಾಹಿ ವರ್ಗದವರು ಇತ್ತೀಚೆಗೆ ಪಟ್ಟಣಗಳಂಥ ಪ್ರದೇಶಗಳಲ್ಲಿ ನೆಲೆಸುತ್ತಲೇ ಸತ್ಯನಾರಾಯಣ ಪೂಜೆಯನ್ನು ಮಾಡಿಸುತ್ತಿರುವುದು ಪ್ರಮುಖವಾಗಿ ಕಂಡುಬಂದಿದೆ. ಬೋರಯ್ಯ ಶಿಕ್ಷಕರು, ಚಳ್ಳಕೆರೆ ಇವರನ್ನು ವಿಚಾರಿಸಿದಾಗ ಅವರು ಈ ರೀತಿ ಹೇಳಿದರು. ನಾವು ಸತ್ಯನಾರಾಯಣ ಪೂಜೆಯನ್ನು ಮೂರು ವರ್ಷಗಳಿಂದ ಮಾಡಿಸುತ್ತೇವೆ. ಈ ಪೂಜೆಗೆ ಬ್ರಾಹ್ಮಣರು ಬರುತ್ತಾರೆ. ಪೂಜೆಗೆ ಹೆಚ್ಚು ಕಡಿಮೆ ಹದಿನೈದರಿಂದ ಹದಿನಾರು ಸಾವಿರ ಖರ್ಚಾಗುತ್ತದೆ. ಈ ಪೂಜೆ ಮಾಡಿಸಿದಾಗಿನಿಂದ ನಾವು ಮಾಂಸವನ್ನು ತಿನ್ನುವುದಿಲ್ಲ. ನಾವು ಪ್ರತಿವಾರ ಆತನ ಫೋಟೋಕ್ಕೆ ಪೂಜೆ ಮಾಡುತ್ತೇವೆ[೩] ಎಂಬ ಇವರ ಮಾತುಗಳಲ್ಲಿ ಪ್ರಮುಖವಾಗಿ ತಿಳಿಯುವುದೇನೆಂದರೆ

ಮೇಲ್ವರ್ಗದ ದೈವಾರಾಧನೆಯ ಮೂಲಕ ನಗರದಲ್ಲಿ ಬ್ರಾಹ್ಮಣರು ಪೂಜೆಗೆ ಬರುತ್ತಿರುವುದು ಹಾಗೆ ಮಾಂಸ ಆಹಾರ ತ್ಯಜಿಸಿ ಬೇಟೆಯನ್ನು ಉಪಕಸುಬಾಗಿ ಬಿಡುತ್ತಿರುವುದು, ಹಾಗೆಯೇ ಮದುವೆ ಮುಂತಾದ ಆಚರಣೆಗಳಲ್ಲಿ ಸಹ ಬ್ರಾಹ್ಮಣರ ಪೌರೋಹಿತ್ಯವಹಿಸುವುದು ಅಂದರೆ ಬ್ರಾಹ್ಮಣರೇ ಶ್ರೇಷ್ಠ ಎಂದು ಭಾವಿಸಿದ್ದಾರೆ. ಆರ್ಥಿಕತೆಯಲ್ಲಿ ಸುಧಾರಣೆಯಾದಂತೆಲ್ಲಾ ತಮ್ಮ ರೂಢಿಸಂಪ್ರದಾಯ, ಆಹಾರಪದ್ಧತಿಯನ್ನು ತನಗೆ ಅರಿವಿಲ್ಲದೆ ಬಿಡುತ್ತಿರುವುದು ಪ್ರಮುಖವಾಗಿ ಕಂಡುಬರುತ್ತದೆ. ಇದೇ ರೀತಿ ಹೊಸಮನೆಯ ಗೃಹಪ್ರವೇಶಕ್ಕೆ ಹಾಗೂ ಮದುವೆಯಂಥ ಸಂದರ್ಭದಲ್ಲಿ ನಗರಗಳಲ್ಲಿ ವಾಸಿಸುವಂಥವರು ಹೆಚ್ಚು ಬ್ರಾಹ್ಮಣರನ್ನೇ ಪೂಜೆ ಪುನಸ್ಕಾರಗಳಿಗೆ ಕರೆಯುತ್ತಾರೆ. ಇತ್ತೀಚೆಗೆ ಅಂಥ ಪರಂಪರೆ ಜಾಸ್ತಿಯಾಗುತ್ತಿದೆ.

ಸಂಸ್ಕೃತೀಕರಣದ ಪ್ರಮಾಣ ಬೇಡರಲ್ಲಿ ಆರ್ಥಿಕವಾಗಿ ಉತ್ತಮಸ್ಥಿತಿಯಲ್ಲಿರುವವರಲ್ಲಿ ಹೆಚ್ಚಾಗಿದೆ. ತಮ್ಮ ಆರ್ಥಿಕ ಸ್ಥಿತಿಗತಿಗನುಗುಣವಾಗಿ ತಮ್ಮ ಜೀವನ ವಿಧಾನವನ್ನು ಬದಲಾಯಿಸಿ ಕೊಳ್ಳುತ್ತಾರೆ. ಇಂಥ ಒತ್ತಡವೇ ಸಂಸ್ಕೃತೀಕರಣಕ್ಕೆ ಕಾರಣವಾಗಿದೆ. ಕೆಲವು ಹಟ್ಟಿಗಳಲ್ಲಿ ಮಠಗಳಿಗೆ ನಡೆದುಕೊಳ್ಳುವ ಸಂಪ್ರದಾಯವಿದೆ. ಇವರು ಸಹ ಸಂಪೂರ್ಣವಾಗಿ ಸಸ್ಯಾಹಾರಿಗಳಾಗಿದ್ದಾರೆ. ಬಹುತೇಕ ಹಟ್ಟಿಗಳಲ್ಲಿ ಲಿಂಗಾಯಿತರ ಆಚರಣೆ ಅನುಸರಿಸುತ್ತಾರೆ. ಕೆಲವರು ಮಾಂಸಹಾರವನ್ನು ತ್ಯಜಿಸಿದ್ದಾರೆ. ಇಲ್ಲಿ ಲಿಂಗಾಯಿತರನ್ನು ಅನುಸರಿಸಬೇಕೆಂಬ ಒತ್ತಡ ಕೆಲಸ ಮಾಡಿದೆ. ಬಹುಸಂಖ್ಯಾತ ಜತೆಗಿನ ಹೊಂದಾಣಿಕೆಗೆ ಬದುಕೇ ಹೀಗೆ ಪರಿವರ್ತಿಸಿದೆ. ಇದೊಂದು ಸಹಜವಾಗಿ ನಡೆಯುತ್ತಿರುವ ಸಂಸ್ಕೃತೀಕರಣ ಎಂತಲೂ ಕರೆಯಬಹುದು.

## ಆಧುನೀಕರಣ

ಆಧುನೀಕರಣ ಸಾಮಾಜಿಕ ಚಲನೆಯ ಪ್ರಕ್ರಿಯೆಯಾಗಿದೆ. ಇದಕ್ಕೆ ಹಲವಾರು ಆಯಾಮ ಗಳಿವೆ. ಸಮಾಜದ ವಿವಿಧ ಹಂತದಲ್ಲಿ ಇದರ ಬಳಕೆಯಾಗುತ್ತದೆ. ವೈಯಕ್ತಿಕವಾಗಿ, ಸಾಮೂಹಿಕ ವಾಗಿ ಹಾಗೂ ಸಾಮಾಜಿಕವಾಗಿ ಪಸರಿಸಿದೆ. ಅಲ್ಲದೆ ಆರ್ಥಿಕ, ರಾಜಕೀಯ, ತಾಂತ್ರಿಕ ಶಿಕ್ಷಣ ಹಾಗೂ ಆಡಳಿತ ಮುಂತಾದವುಗಳಲ್ಲಿ ಆಧುನೀಕರಣ ಹಬ್ಬಿದೆ. ಮಾನವನ ಒಳಿತಿಗಾಗಿ ವೈಜ್ಞಾನಿಕ ನಿಲುವು ಸಕಾರಾತ್ಮಕ ವಿಚಾರಧಾರೆ ಹಾಗೂ ವಸ್ತುಪ್ರಾಧಾನ್ಯ ನಿಲುವಿನ ಜೀವನ ಕ್ರಮವನ್ನು ಪ್ರತಿನಿಧಿಸುವ ಒಂದು ಪ್ರಕ್ರಿಯೆಯಾಗಿದೆ. ಇದು ಮೂಢನಂಬಿಕೆಗಳನ್ನು ಸರಿಸಿ ಕಾರಣಗಳನ್ನು ಮನಗಂಡು ಪರಿಣಾಮಗಳನ್ನು ಚಿಂತಿಸಿ ಒಳಿತು ಕೆಡಕುಗಳನ್ನು ಅವಲೋಕಿಸಿ ತನ್ನ ಸಾಮರ್ಥ್ಯದ ಮೇಲೆ ವಿಶ್ವಾಸಗೈದು ಸುಸಂಸ್ಕೃತ ನಾಗರಿಕ ಜೀವನಕ್ಕೆ ನೀಡುವ ಪ್ರಕ್ರಿಯೆಯೇ ಆಧುನೀಕರಣವಾಗಿದೆ.

ಆಧುನೀಕರಣದಿಂದ ಇಂದು ಬುಡಕಟ್ಟು ಸಮುದಾಯವಾದ ಮ್ಯಾಸನಾಯಕರು ತನ್ನ ಆದಿಮ ಕಾಲಕ್ಕೆ ಹೋಲಿಸಿಕೊಂಡರೆ ಇಂದು ಬದಲಾಗಿರುವ ಲಕ್ಷಣಗಳು ಕಂಡುಬರುತ್ತಿವೆ.

ಮೊದಲನೆಯದಾಗಿ ಹಿಂದೆ ಕಾಡಿನ ಅಂಚಿನಲ್ಲಿ ಕಾಡುಗಳಲ್ಲಿ ವಾಸಿಸುತ್ತಿರುವ ಸಮುದಾಯ ಇಂದು ಕಾಡುಗಳನ್ನು ಹೊರತುಪಡಿಸಿ ಪ್ರತ್ಯೇಕವಾದ ಹಟ್ಟಿಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದಾರೆ. ಜೊತೆಗೆ ಇತರೆ ಸಮುದಾಯಗಳೊಂದಿಗೆ ಬೆರತು ಕೊಡುಕೊಳ್ಳುವಿಕೆ ಸಂಬಂಧಗಳನ್ನು ಬೆಳೆಸಿಕೊಂಡಿರುವುದು ಪ್ರಮುಖವಾಗಿ ಕಂಡುಬರುತ್ತಿದೆ. ಕೆಲವು ಹಟ್ಟಿಗಳಲ್ಲಿ ಪರಸ್ಪರ ಸಹಕಾರದಿಂದ ಬಾಳುತ್ತಾರೆ. ಅವರೊಂದಿಗೆ ಅಣ್ಣ ತಮ್ಮಂದಿರು, ಅಕ್ಕ ತಂಗಿಯರು ಮಾವ–ಅಳಿಯ, ಚಿಕ್ಕಪ್ಪ–ದೊಡ್ಡಪ್ಪ ಅತ್ತೆ ಸೊಸೆ ಎಂಬ ಬಾಂಧವ್ಯವನ್ನು ಬೆಳೆಸಿಕೊಂಡದಲ್ಲದೆ ಜೊತೆಗೆ ಕೆಲವರು ಅನ್ಯ ಸಮುದಾಯಗಳ ಭಾಷೆಗಳನ್ನು ಕಲಿತಿದ್ದಾರೆ. ಲಂಬಾಣಿ, ಮುಸ್ಲಿಮರ ಜೊತೆಗೆ ಸಂಬಂಧವಲ್ಲದೆ ಅವರ ಭಾಷೆ ಕಲಿತಿದ್ದಾರೆ.

ಕೃಷಿಪದ್ಧತಿಯಲ್ಲಿ ಬದಲಾವಣೆಯ ಲಕ್ಷಣಗಳು ಕಂಡುಬರುತ್ತಿವೆ. ಹಿಂದೆ ರೈತನು ಉಳುಮೆ ಮಾಡಲು ವಾರಗಟ್ಟಲೆ ಎತ್ತುಗಳನ್ನು ಬಳಸಿಕೊಂಡು ಉಳುಮೆ ಮಾಡುತ್ತಿದ್ದ. ಹಾಗೆಯೇ ಬಿತ್ತನೆ ಮತ್ತು ಕೊಯ್ಲು ಕೊಯ್ಯುವ ಸಂದರ್ಭದಲ್ಲಿ ಹತ್ತು ಅಥವಾ ಹನ್ನೆರಡು ಜನ ಮಹಿಳೆಯರು ಮತ್ತು ಐದಾರು ಜನ ಪುರುಷರು ಹದಿನೈದು ದಿನಗಟ್ಟಲೆ ಕೆಲಸ ಮಾಡುತ್ತ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದರು. ಇದರಿಂದ ಹತ್ತಾರು ಕುಟುಂಬಗಳು ಬದುಕುತ್ತಿದ್ದವು. ಆದರೆ ಇಂದು ಆಧುನೀಕರಣದ ಪ್ರಭಾವದಿಂದಾಗಿ ಯಾಂತ್ರೀಕರಣವಾಗಿದೆ. ವಿವಿಧ ಬಗೆಯ ಯಂತ್ರಗಳು ಬಂದು ಉಳುಮೆ ಮಾಡುವುದು, ಬಿತ್ತನೆ ಮಾಡುವುದು, ಕೊಯ್ಲು ಕೊಯ್ಯುವುದು, ನಾಟಿ ಮಾಡುವುದು ಮುಂತಾದ ಕೆಲಸವನ್ನೆಲ್ಲ ಯಂತ್ರ ಮಾಡುತ್ತಿದೆ. ಹಿಂದೆ ಒಕ್ಕಲು ತುಳಿಸುವುದನ್ನು ವಾರಗಟ್ಟಲೆ ಮಾಡುತ್ತ ಅದರ ಮೂಲಕ ತಮ್ಮ ದಣಿವನ್ನು ಮರೆಯುವ ಹಾಡುಗಳನ್ನು ಹಾಡುತ್ತಿದ್ದರು. ಆದರೆ ಇಂದು ಮಿಷನ್ ಬಂದಿದ್ದರಿಂದ ಒಂದೇ ದಿನದಲ್ಲಿ ಮುಗಿಸಿಕೊಂಡು ತಮ್ಮ ಕಾಳುಕಡ್ಡಿಗಳನ್ನು ಮನೆಗೆ ಸೇರಿಸಿಕೊಳ್ಳುತ್ತಾರೆ. ಹಾಗೆ ಬರಗಾಲದಂಥ ಸಂದರ್ಭದಲ್ಲಿ ಜನರಿಗಾಗಿ ಕೆರೆ, ಕುಂಟೆ, ರಸ್ತೆ ಮುಂತಾದವುಗಳ ಮಣ್ಣಿನ ಕೆಲಸಕ್ಕೆ ಜನರನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಆದರೆ ಇಂದು ಕೇವಲ ಒಂದು ಜೆಸಿಬಿ ಯಂತ್ರ ಮಾಡಿ ಮುಗಿಸುತ್ತದೆ. ಎರಡನೆಯದಾಗಿ ಆಧುನೀಕರಣದಿಂದ ಶಿಕ್ಷಣ ಪಡೆಯುತ್ತಿದ್ದಾರೆ. ಶಿಕ್ಷಣ ಹಿಂದೆ ಕೇವಲ ಮೇಲ್ವರ್ಗ ಮೇಲ್ಜಾತಿಗಳಿಗೆ ಮಾತ್ರ ಸೀಮಿತವಾಗಿತ್ತು. ಶಿಕ್ಷಣಕ್ಕೆ ಮುಕ್ತವಾದ ವ್ಯವಸ್ಥೆ ಇರಲಿಲ್ಲ. ಬ್ರಿಟಿಷರ ಅವಧಿಯ ನಂತರ ಆಧುನೀಕರಣ ಪ್ರಾರಂಭವಾಗಿ ಜಾತಿ, ವರ್ಗ, ಭೇದ ಭಾವವಿಲ್ಲದೆ ಸಮಾನತೆ ಮತ್ತು ಮಾನವೀಯತೆಯ ಮೌಲ್ಯದ ಗುಣಗಳನ್ನು ಬೆಳೆಸಿಕೊಂಡಿದ್ದಾರೆ. ಕಾಲ ಬದಲಾದಂತೆಲ್ಲಾ ಮಂದಗತಿಯಿಂದ ತೀವ್ರಗತಿಯೆಡೆಗೆ ಈ ಪ್ರಕ್ರಿಯೆ ಸಾಗುತ್ತ ಜರುಗಿತ್ತು. ಇಂಥ ಸಂದರ್ಭದಲ್ಲಿ ಶಿಕ್ಷಣವನ್ನು ಪಡೆಯುತ್ತಿರುವ ಮ್ಯಾಸಬೇಡರ ಬುಡಕಟ್ಟು ಇಂದು ಪ್ರಗತಿಯತ್ತ ಸಾಗುವ ಲಕ್ಷಣಗಳು ಕಂಡುಬರುತ್ತಿವೆ. ಪ್ರಸ್ತುತ ಸರ್ಕಾರ ವಿವಿಧ ಸೌಲಭ್ಯಗಳನ್ನು ಒದಗಿಸುವುದರಿಂದ ಪ್ರತಿಯೊಂದು ಕುಟುಂಬವು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳಿಸುತ್ತಿದ್ದಾರೆ.

ಉಚಿತ ಪಠ್ಯಪುಸ್ತಕ, ಊಟದ ವ್ಯವಸ್ಥೆ ಇರುವುದರಿಂದ ಶಿಕ್ಷಣಕ್ಕೆ ಆದ್ಯತೆ ನೀಡುತ್ತಿದ್ದಾರೆ. ಇಂದಿನ ಯುವಕ ಯುವತಿಯರು ಶಿಕ್ಷಣ ಕಲಿತು ಸರ್ಕಾರಿ ಉದ್ಯೋಗದಲ್ಲಿ ತೊಡಗಿಸಿಕೊಂಡಿದ್ದಾರೆ. ಇದರಿಂದ ಹಟ್ಟಿಯಲ್ಲಿರುವ ವಾತಾವರಣವನ್ನು ಉದ್ಯೋಗದಲ್ಲಿ ತೊಡಗಿಸಿಕೊಂಡವರು ಬದಲಾಯಿಸಲು ಪ್ರಯತ್ನಿಸುತ್ತಾರೆ. ಜೊತೆಗೆ ನಗರದ ಸಂಸ್ಕೃತಿಯನ್ನು ಹಟ್ಟಿಗಳಲ್ಲಿ ಬೆಳೆಸಲು ಪ್ರಯತ್ನಿಸುತ್ತಾರೆ. ಶಿಕ್ಷಣದಿಂದ ಕೇವಲ ಒಂದು ಉಪಯೋಗವಲ್ಲದೆ ಹಲವಾರು ಉಪಯೋಗಗಳುಂಟಾಗುತ್ತವೆ. ಹಾಗೆ ಆರ್ಥಿಕ ರಾಜಕೀಯ ಸ್ಥಿತಿಗತಿಯನ್ನು ಸುಧಾರಿಸಲು ಶಿಕ್ಷಣ ಅತ್ಯಗತ್ಯವಾಗಿ ಬೇಕಾಗಿರುವಂತದ್ದಾಗಿರು ತ್ತದೆ. ಜೊತೆಗೆ ಇಂದಿನ ಮಹಿಳೆಯರು ಪ್ರಜ್ಞಾವಂತರಾಗಿ ತಮ್ಮ ಆರ್ಥಿಕತೆಗೆ ಅನುಸಾರಕ್ಕಾಗಿ ಸ್ತ್ರೀಶಕ್ತಿ ಸಂಘಗಳನ್ನು ಕಟ್ಟಿಕೊಂಡು ಆರ್ಥಿಕತೆಯನ್ನು ಸುಧಾರಿಸಿಕೊಳ್ಳುತ್ತ ಬ್ಯಾಂಕುಗಳ ಮೂಲಕ ವ್ಯವಹಾರ ಮಾಡಲು ಮುಂದಾಗುತ್ತಾರೆ. ಇದರಿಂದ ಸಮುದಾಯದ ಮಹಿಳೆಯರಲ್ಲಿಯೂ ಆತ್ಮವಿಶ್ವಾಸದ ಮನೋಭಾವನೆ ಬೆಳೆಯಲು ಸಹಕಾರಿಯಾಗುತ್ತದೆ ಎಂದು ಹೇಳಬಹುದು. ಇಂದು ಶ್ರೀಕ್ಷೇತ್ರ ಧರ್ಮಸ್ಥಳ ಮಂಜುನಾಥ, ಆಂಧ್ರಮೂಲದ ಸಂಸ್ಥೆಗಳು ಹಣದ ವಹಿವಾಟುಗಳನ್ನು ಸಂಘಗಳೊಂದಿಗೆ ಇಟ್ಟುಕೊಂಡಿವೆ. ಮೂರನೆಯದಾಗಿ ಆಧುನೀಕರಣ ಪ್ರಭಾವದಿಂದಾಗಿ ಇಂದು ಮ್ಯಾಸಬೇಡರ ಹಟ್ಟಿಗಳಲ್ಲಿ ಪತ್ರಿಕೆ, ರೇಡಿಯೋ, ದೂರದರ್ಶನ ಮುಂತಾದವುಗಳ ಪ್ರಭಾವವಾಗಿದೆ. ಗುರುತಿಸಲು ಮನೆಗಳಿದ್ದರೂ ಕೆಲವರು ಟಿ.ವಿ.ಯನ್ನು ತಂದು ನೋಡುವ ಪರಂಪರೆಯನ್ನು ಬೆಳೆಸಿಕೊಂಡಿದ್ದಾರೆ. ಇದರೊಂದಿಗೆ ಹೊರಜಗತ್ತಿನಲ್ಲಿ ನಡೆಯುವ ವಿಷಯಗಳೆಲ್ಲವೂ ಗೊತ್ತಾಗುತ್ತದೆ. ಕೆಲವು ಮ್ಯಾಸನಾಯಕರ ಹಟ್ಟಿಗಳಿಗೆ ಸಾರಿಗೆ ಸಂಪರ್ಕವಿರಲಿಲ್ಲ. ಇಂಥ ಸಂಪರ್ಕವಿಲ್ಲದ ಹಟ್ಟಿಗಳಲ್ಲಿ ಬದುಕು ತುಂಬಾ ಕಷ್ಟಕರವಾಗಿತ್ತು. ಈಗ ಸಾರಿಗೆ ಸಂಪರ್ಕವಾಗಿದೆ. ಸುಲಭವಾಗಿ ಆರೋಗ್ಯ ಕೇಂದ್ರಕ್ಕೆ ತಲುಪಲು ಅನುಕೂಲಕರವಾಗಿದೆ.

ನಾಲ್ಕನೆಯದಾಗಿ ಸಾರ್ವತ್ರಿಕ ಕಾನೂನು ಇಂದು ಬಹುತೇಕ ಸಮುದಾಯಗಳಿಗೆ ಸಾರ್ವತ್ರಿಕ ಕಾನೂನಿನಿಂದ ಅನುಕೂಲಕರವಾಗಿದೆ. ಹಿಂದೆ ಸಮಾಜದಲ್ಲಿ ನಡೆಯುತ್ತಿರುವ ದಬ್ಬಾಳಿಕೆ, ದೌರ್ಜನ್ಯ, ಮಹಿಳೆಯರಿಗಾಗುವ ಶೋಷಣೆ ಮುಂತಾದವುಗಳ ಪ್ರಭಾವ ಇಂದು ತುಂಬಾ ಕಡಿಮೆಯಾಗಿದೆ. ಏಕೆಂದರೆ ಇಂಥ ಕೃತ್ಯವೆಸಗುವವರನ್ನು ಪೊಲೀಸ್ ವ್ಯವಸ್ಥೆಯು ಶಿಕ್ಷೆಗೆ ಒಳಪಡಿಸುತ್ತಿದ್ದರಿಂದ ಬಹುತೇಕ ಇಂಥ ಪ್ರಕರಣಗಳು ಕಡಿಮೆಯಾಗುತ್ತಿವೆ ಎಂದು ಹೇಳಬಹುದು.

ಒಟ್ಟಾರೆಯಾಗಿ ಆಧುನೀಕರಣ ಪ್ರಭಾವದಿಂದಾಗಿ ಸಾಂಸ್ಕೃತಿಕ ಆಚರಣೆಗಳಲ್ಲಿ ಬದಲಾವಣೆಯ ಲಕ್ಷಣಗಳು ಕಂಡುಬರುತ್ತವೆ. ಮದುವೆ ಮುಂಜಿಯಂಥ ಸಂದರ್ಭದಲ್ಲಿ ಊಟದ ವ್ಯವಸ್ಥೆಯು ಬದಲಾಗಿದೆ. ಶಾಮಿಯಾನ, ರೇಡಿಯೋ, ಸೀರಿಯಲ್ ಸೆಟ್ ಮುಂತಾದವುಗಳನ್ನು ಹಾಕುವುದರ ಮೂಲಕ ಸಂಭ್ರಮಿಸುತ್ತಾರೆ. ಹಲವಾರು ಸಾಂಸ್ಕೃತಿಕ ಆಚರಣೆಗಳಲ್ಲಿ ಬದಲಾವಣೆಗಳನ್ನು ಕಾಣುತ್ತೇವೆ. ಈ ಬದಲಾವಣೆಗೆ ಕಾರಣ ಆಧುನೀಕರಣ ಎಂದು ಹೇಳಬಹುದು.

ಆಧುನಿಕ ಸೌಲಭ್ಯಗಳು ದೊರೆತು ಬೇಡ ಸಮುದಾಯ ಬದಲಾದಂತೆ ಕಂಡರೂ ಆರ್ಥಿಕ ದೃಷ್ಟಿಕೋನದಿಂದ ನೋಡಿದರೆ ತೀರ ಸಂಕಷ್ಟದ ಸ್ಥಿತಿ ಇರುವುದನ್ನು ಗಮನಿಸಬಹುದು. ಬೇಡರಲ್ಲಿ ಕೃಷಿಯಾಧಾರಿತ ಹಟ್ಟಿಯ ಬಡವರು ಆಧುನಿಕತೆಯನ್ನು ಶಾಪವೆಂದು ಭಾವಿಸಿದರೆ ಇದೇ ಸಮುದಾಯದಲ್ಲಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವವರಿಗೆ ಆಧುನಿಕತೆ ವರವಾಗಿ ಪರಿಣಮಿಸಿದೆ. ಎಲ್ಲವನ್ನು ಕೊಂಡುಕೊಳ್ಳುವ ಕೊಳ್ಳುಬಾಕ ಸಂಸ್ಕೃತಿಗೆ ಅನಿವಾರ್ಯವಾಗಿ ಒಗ್ಗಿಕೊಳ್ಳಲೇಬೇಕಾಗಿರುವುದರಿಂದ ಬೇಡ ಸಮುದಾಯದ ಬಹುಪಾಲು ಕೃಷಿಯಾಧರಿತ ಬಡತನ ರೇಖೆಯಲ್ಲಿರುವವರಿಗೆ ಆರ್ಥಿಕ ಅಸಮಾನತೆ ಹೆಚ್ಚಾಗುತ್ತಿದೆ. ಬದುಕಿನ ನಿರ್ವಹಣೆಯ ವೆಚ್ಚ ದುಡಿಮೆಯ ವೆಚ್ಚಕ್ಕಿಂತ ಹೆಚ್ಚಾಗಿದೆ. ಇದು ಆಧುನಿಕತೆಯು ಉಂಟುಮಾಡಿದ ದೊಡ್ಡ ಕಂದಕವಾಗಿದೆ.

ಆಧುನಿಕತೆಯ ಮೋಹಕ್ಕೆ ಸಿಕ್ಕ ಬೇಡ ಸಮುದಾಯದ ಯುವ ಜನಾಂಗ ನಗರದತ್ತ ಉದ್ಯೋಗ ಅರಸಿ ಹೊರಟಿದ್ದಾರೆ. ಮೊಳಕಾಲ್ಮುರು ತಾಲೂಕಿನ ಮ್ಯಾಸರಹಟ್ಟಿ, ಬೆಳವಿನಮರದ ಹಟ್ಟಿ, ಕಪ್ಪಡಬಂಡೆಹಟ್ಟಿ ಮುಂತಾದ ಹಟ್ಟಿಗಳ ಮೂನ್ನೂರಕ್ಕೂ ಹೆಚ್ಚು ಹುಡುಗರು ಬೆಂಗಳೂರಿಗೆ ದುಡಿಯುವುದಕ್ಕೆ ಹೋಗಿರುವುದಾಗಿ ತಿಳಿದುಬರುತ್ತದೆ. ಅಂದರೆ ಬೇಡರ ಹಟ್ಟಿಗಳಲ್ಲಿ ಇಂದು ಯುವಕರೇ ಕಾಣದಂತಾಗಿದೆ. ಇವರಲ್ಲಿ ಬಹುಪಾಲು ಯುವಕರು ದುಶ್ಚಟಗಳಿಗೆ ಬಲಿಯಾಗಿ, ತೀರ ಬೇಜವಾಬ್ದಾರಿ ಬದುಕು ನಡೆಸುತ್ತಾರೆ. ಇಂಥವರು ಮತ್ತೆ ಹಟ್ಟಿಗೆ ಬಂದರೂ ಕೃಷಿಯನ್ನು ಮಾಡದೆ ಸೋಮಾರಿಗಳಾಗುತ್ತಾರೆ. ಈ ಸಮಸ್ಯೆ ಕೇವಲ ಬೇಡ ಸಮುದಾಯವೊಂದಕ್ಕಲ್ಲದೆ ಎಲ್ಲಾ ಕೆಳಸಮುದಾಯಗಳ ಸ್ಥಿತಿಯೂ ಆಗಿದೆ.

ಹೀಗೆ ಆಧುನಿಕತೆ ಸಕಾರಾತ್ಮಕ ಪರಿಣಾಮ ಬೀರಿದ್ದಕ್ಕಿಂತ ನಕಾರಾತ್ಮಕ ಪರಿಣಾಮವನ್ನು ಬೀರಿದ್ದೇ ಹೆಚ್ಚು. ಆಧುನಿಕತೆ ಸೃಷ್ಟಿಸಿದ ಮಾರುಕಟ್ಟೆ ವ್ಯವಸ್ಥೆಯು ಹೊರಗಿರುವ ಎಲ್ಲಾ ಸಮುದಾಯಗಳಿಗೂ ಆಧುನಿಕತೆಯೊಂದು ಶಾಪವೇ ಆಗಿದೆ.

## ಅನ್ಯ ಧರ್ಮದ ಆರಾಧನೆ

ಮ್ಯಾಸನಾಯಕರು ಪ್ರಸ್ತುತ ಸಂದರ್ಭದಲ್ಲಿ ಮೊಹರಂ ಹಬ್ಬವನ್ನು ಹೆಚ್ಚು ವಿಜೃಂಭಣೆಯಿಂದ ಆಚರಿಸುವರು. ಮ್ಯಾಸನಾಯಕರ ಕೆಲವು ಹಟ್ಟಿಗಳಲ್ಲಿ ಮೊಹರಂ ಎಂದರೆ ಗೊತ್ತಿಲ್ಲ. ಕೆಲವರು ಗೊತ್ತಿದ್ದರೂ ಅದು ಮುಸ್ಲಿಮರ ಹಬ್ಬ ಎಂದು ನಿರಾಕರಿಸುತ್ತಿದ್ದಾರೆ. ಸಾಮಾನ್ಯವಾಗಿ ಬರಿಯ ಮ್ಯಾಸನಾಯಕರೆ ವಾಸಿಸುವ ಹಟ್ಟಿಗಳನ್ನು ಹೊರತುಪಡಿಸಿದರೆ ಉಳಿದ ಎಲ್ಲಾ ಸಮುದಾಯದವರಿಂದ ಕೂಡಿರುವಂಥ ಊರುಗಳೆಲ್ಲ ಮೊಹರಂ ಹಬ್ಬವನ್ನು ಆಚರಿಸುವುದರಲ್ಲಿ ಮುಂದಾಳತ್ವವನ್ನು ಇವರೇ ವಹಿಸಿರುವಂತೆ ಕಾಣುತ್ತದೆ. ಗುದ್ಲಿಪೂಜೆ ಮಾಡಿದಾಗಿನಿಂದ ಹಿಡಿದು ಹಬ್ಬ ಮುಗಿಯುವ ತನಕ ಇವರದೇ ಮೇಲುಗ್ಯೆ ಎನ್ನಬಹುದು. ಈ ಹಬ್ಬಕ್ಕೆಂದೇ ಯುವಕರು ಹೊಸಬಟ್ಟೆಗಳನ್ನು ಹಾಕಿಕೊಳ್ಳುತ್ತಾರೆ. ರಾತ್ರಿಯೆಲ್ಲ ಕುಣಿಯುತ್ತಾರೆ. ಕುಣಿಯಲಿಕ್ಕೆ ಹಾಡುಗಳನ್ನು ಮುಂಚೆಯೇ

ತಾಲೀಮು ಮಾಡುತ್ತಾರೆ. ಸುಮಾರು ಹದಿನೈದು ಇಪ್ಪತ್ತು ದಿನಗಳ ಕಾಲ ಹಟ್ಟಿಗಳಲ್ಲಿ ಸಂಭ್ರಮವೋ ಸಂಭ್ರಮ ಇರುತ್ತದೆ. ಎಲ್ಲಾ ಸಮುದಾಯಗಳೊಂದಿಗೆ ಬೆರೆತು ಈ ಹಬ್ಬವನ್ನು ಹೆಚ್ಚು ವಿಜೃಂಭಣೆಯಿಂದ ಆಚರಿಸುತ್ತಾರೆ. ಈ ಹಬ್ಬದ ಅಗ್ನಿಕುಂಡಕ್ಕೆ ಗಾಡಿಗಳ ಮೂಲಕ ದೊಡ್ಡ ದೊಡ್ಡ ಮರಗಳನ್ನು ಕಡಿದು ತರುವರು. ಇವರ ಮುಂದಾಳತ್ವದಲ್ಲಿ ಆದರೆ ಸ್ವತಃ ಈ ಸಮುದಾಯದ ಹಬ್ಬಗಳನ್ನು ಈ ರೀತಿ ಮಾಡುವುದಿಲ್ಲ. ಈ ಹಬ್ಬವನ್ನು ಆಚರಿಸುವ ಪ್ರಮುಖ ಹಟ್ಟಿಗಳೆಂದರೆ ಕಾಟಪ್ಪನಾಯಕನಹಟ್ಟಿ, ನಾಯಕನಹಟ್ಟಿ ಬೋಸೆದೇವರಹಟ್ಟಿ, ಬುಡ್ನಹಟ್ಟಿ ಇನ್ನೂ ಮುಂತಾದ ಹಟ್ಟಿಗಳಲ್ಲಿ ನೋಡಬಹುದು.

ಮೊಹರಂ ಹಬ್ಬದಲ್ಲಿ ಮ್ಯಾಸನಾಯಕರು ಬೇಡರ ಕಣ್ಣಪ್ಪನ ವೇಷ ಹಾಕುವ ಪದ್ಧತಿ ಈ ಭಾಗದಲ್ಲಿದೆ. ಈ ವೇಷದ ಬಗ್ಗೆ ಇರುವ ಜನಪದವಂತೂ ತುಂಬಾ ಕುತೂಹಲಕಾರಿಯಾಗಿದೆ. ಮಹಮದನ ಮೊಮ್ಮಕ್ಕಳನ್ನು ಸೈತಾನನ ಕಡೆಯವರು ಬೆನ್ನಟ್ಟಿ ಬಂದಾಗ ಅವರು ಇರಾಕ್‌ನ ಕರ್ಬಲಾ ಪ್ರದೇಶದಿಂದ ಓಡಿಬರುತ್ತಾರಂತೆ. ಹೀಗೆ ಮಹಮದ್ ಪೈಗಂಬರ್ ಮೊಮ್ಮಗನ ಪ್ರಾಣಭಯದಿಂದ ಓಡಿ ಬರುವಾಗ ಬೇಟೆ ಆಡುತ್ತಿದ್ದ ಬೇಡನೊಬ್ಬ ಆ ಮಗುವನ್ನು ಎತ್ತಿಕೊಂಡು, ಆ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಬೆನ್ನಟ್ಟಿ ಬಂದಿದ್ದು, ಸೈತಾನನ ಕಡೆಯ ಅಧರ್ಮೀಯರನ್ನು ಕೊಂದನಂತೆ. ಹಾಗಾಗಿ ಮುಸ್ಲಿಂ ಬಾಲಕನನ್ನು ಬೇಡನೊಬ್ಬ ರಕ್ಷಿಸಿರುವುದರಿಂದ ಅದರ ನೆನಪಿಗಾಗಿ ಮೊಹರಂನಲ್ಲಿ ಈಗಲೂ ಬೇಡರ ಕಣ್ಣಪ್ಪನ ವೇಷ ಧರಿಸಿ ಕುಣಿಯುವ ಪದ್ಧತಿ ಇರುವುದನ್ನು ನೋಡಬಹುದು.

ಮೊಹರಂನಲ್ಲಿ ಮ್ಯಾಸ ಸಮುದಾಯ ಪಾಲ್ಗೊಳ್ಳುವುದನ್ನು ನೋಡಿದರೆ ಧಾರ್ಮಿಕ ಸಾಮರಸ್ಯಕ್ಕೆ ಜಾತಿ ಸಾಮರಸ್ಯಕ್ಕೆ ಈ ಸಮುದಾಯ ತನಗೆ ಗೊತ್ತಿಲ್ಲದೆ ಮಿಡಿಯುತ್ತಿದೆ ಎಂಬುದು ಉತ್ತಮ ಬೆಳವಣಿಗೆ. ಬೇಡರಿಗೆ ವಿಶಿಷ್ಟ ಎನ್ನುವ ಆಚರಣೆ ಅನನ್ಯತೆ ಆಗುವಂತೆ ಜಾತೀಯತೆಯನ್ನು ಬೆಳೆಸುವ ಅಪಾಯವನ್ನು ಇಲ್ಲದಿಲ್ಲ. ಈ ದೃಷ್ಟಿಯಿಂದ ಬೇಡ ಸಮುದಾಯದ ಮೊಹರಂ ಆಚರಣೆಯ ಪಾಲ್ಗೊಳ್ಳುವಿಕೆಗೆ ಮಹತ್ವವಿದೆ.

## ಮತಾಂತರ

ಮತಾಂತರ ಇಂದು ಭಾರತದಲ್ಲಿ ಭುಗಿಲೆದ್ದಿರುವ ವಿಚಾರ ಒಂದು ಬಗೆಯಲ್ಲಿ ಸಾಮಾಜಿಕ ಪಿಡುಗು ಎನ್ನುವ ಮಟ್ಟಿಗೆ ತನ್ನ ಕರಾಳ ಹಸ್ತವನ್ನು ಚಾಚಿ ಎಲ್ಲೆ ಮೀರಿ ಮುಂದುವರಿಯುತ್ತದೆ. ಸಂವಿಧಾನಾತ್ಮಕ ಭಾರತದಲ್ಲಿ ಇಚ್ಛಾಪೂರ್ವಕ ಮತಾಂತರವಿದ್ದರೂ, ಇಂದು ಎಷ್ಟೋ ಬಗೆಯ ಮತಾಂತರಗಳು ಇಚ್ಛೆಯಿಂದ ನಡೆದರೂ, ಒಂದು ಮತಕ್ಕೂ ಇನ್ನೊಂದು ಮತಕ್ಕೆ ದಿನೇ ದಿನೇ ದ್ವೇಷದ ಕಿಚ್ಚನ್ನು ಹಬ್ಬಿಸುತ್ತಿವೆ. ಒಂದು ದೃಷ್ಟಿಯಲ್ಲಿ ಜೀವ ಜೀವದ, ಮತ ಮತದ ನಡುವೆಯೂ ಭಾವನಾತ್ಮಕ ಸಂಬಂಧ ಬೆಸುಗೆಗೆ ಸಹಕಾರಿಯಾಗುತ್ತಿದ್ದರೂ ಅದು ಇಂದಿನ ಕಾಲದಲ್ಲಿ ಸದುಪಯೋಗಗೊಳ್ಳುತ್ತಿರುವುದೇ ವಿರಳವೆನ್ನಬಹುದು.

ಏಕೆಂದರೆ ಸ್ವಾರ್ಥ ಹಿತಾಸಕ್ತಿಗಳಿಗನುಗುಣವಾಗಿ ಜನರು ಇಂದು ಮತಾಂತರವನ್ನು ತಮ್ಮ ಸ್ವಾರ್ಥದ ಬಾಹುಗಳಿಂದ ಸೆಳೆದುಕೊಳ್ಳುತ್ತಿದ್ದಾರೆಯೇ ಹೊರತು ಅದರ ಒಳ್ಳೆಯ ಅಂಶಗಳತ್ತ ದೃಷ್ಟಿಹರಿಸುವ ಮನಸ್ಸು ಮಾಡುತ್ತಿಲ್ಲ ಆದ್ದರಿಂದ ಮತಾಂತರಗಳು ಇಂದಿನ ಭಾರತಕ್ಕೆ ಒಂದು ರೀತಿಯಲ್ಲಿ ನುಂಗಲಾರದ ತುತ್ತಾಗಿ ಪರಿಣಮಿಸಿದ್ದು ಉಪಯೋಗಕ್ಕಿಂತ ದುರುಪಯೋಗಕ್ಕೆ ಒಳಪಟ್ಟು ಜೀವನದ ಹತಾಶೆಗೆ, ನೋವಿಗೆ ಕಾರಣವಾಗುತ್ತಿರುವುದನ್ನು ಕಂಡಾಗ ಇದು ಎಷ್ಟರಮಟ್ಟಿಗೆ ಸಮಂಜಸ ಎಂಬ ಪ್ರಶ್ನೆ ಮೂಡುತ್ತದೆ.

ಇಂದು ಮತಾಂತರವನ್ನು ಒಂದು ಪಿಡುಗು ಎಂದು ಯೋಚನೆ ಮಾಡಿದರೆ ಅದು ಮಾನವನ ಒಂದು ಕೊರತೆಯಾಗಿ ಕಾಣುತ್ತದೆ. ಅದನ್ನೇ ಸಮಾಜಕ್ಕೆ ಹಿತಕಾರಿ ಎಂದು ಗುರುತಿಸಿದರೆ ಮನುಷ್ಯನ ಹೆಚ್ಚುತ್ತಿರುವ ಅರಿವು ಹಾಗು ಭಾವನಾತ್ಮಕ ಬೆಸುಗೆಗೆ ಸಾಕ್ಷಿಯಾಗಿ ಕಾಣುತ್ತದೆ. ಹೀಗಿರಬೇಕಾದಲ್ಲಿ ಮತಾಂತರವೆಂಬುದು ಒಂದು ಪಿಡುಗು ಎಂದೇ ತೆಗೆದುಕೊಂಡು ಅದರ ಬಗ್ಗೆ ವಸ್ತುನಿಷ್ಠವಾಗಿ ಚಿಂತಿಸುವುದಾದರೆ ಧರ್ಮಗಳ ಮೇಲಾಗುವ ಹಾಗೂ ಆಗುತ್ತಿರುವ ದುಷ್ಪರಿಣಾಮದ ಅಂಶಗಳನ್ನು ಕಂಡುಕೊಳ್ಳಬಹುದು.

ಮತಾಂತರ ಹಾವಳಿಯು ನಿನ್ನೆ ಅಥವಾ ಇಂದಿನದಲ್ಲ. ಕರ್ನಾಟಕದಲ್ಲಿ ಇದು ಏಳನೇ ಶತಮಾನಕ್ಕಿಂತಲೂ ಮುಂಚೆ ಬೇರೂರಿತ್ತು ಎಂಬುದಾಗಿ ಕೆಲವು ದಾಖಲೆಗಳಿಂದ ತಿಳಿದುಬರುತ್ತದೆ. ಹಾಗೆ ಸ್ವತಂತ್ರ ಪೂರ್ವದಲ್ಲಿಯೇ ಇದರ ಪ್ರಭಾವ ಹೆಚ್ಚಾಗಿತ್ತು. ಹಿಂದೆ ಪರದೇಶದ ಆಕ್ರಮಣ ಕಾರರು ದೇಶದ ಮೇಲೆ ದಂಡೆತ್ತಿ ಬಂದು ವಶಪಡಿಸಿಕೊಂಡಾಗ ಬಲತ್ಕಾರವಾಗಿ ಮತಾಂತರ ಮಾಡುತ್ತಿದ್ದರು ಎಂಬುದಕ್ಕೆ ದಾಖಲೆಗಳಿವೆ. ಈ ಪರಂಪರೆಯು ಇತ್ತೀಚೆಗೆ ಕೋಮುಸಾಮರಸ್ಯಕ್ಕಿಂತ ಕೋಮುಗಲಭೆಗೆ ಹೆಚ್ಚು ಒಲವು ತೋರುತ್ತಿದೆ. ಈಚೆಗೆ ಕರ್ನಾಟಕದಲ್ಲಾದ ಚರ್ಚಿನ ಮೇಲಿನ ದಾಳಿ ಇದಕ್ಕೆ ಉದಾಹರಣೆ.

ಪ್ರಸ್ತುತ ಸಂದರ್ಭದಲ್ಲಿ ಎಲ್ಲಾ ಕೆಳ ಸಮುದಾಯಗಳು ಹೆಚ್ಚು ಏಸು ಕ್ರಿಸ್ತನನ್ನು ಆರಾಧ್ಯ ದೈವವನ್ನಾಗಿ ಆಚರಿಸುತ್ತಿದ್ದಾರೆ. ಹಿಂದೂ ದೈವಗಳೆಲ್ಲವನ್ನು ಸಂಪೂರ್ಣವಾಗಿ ನಿರಾಕರಿಸಿದ ಕೆಲವು ಜನರು ಹೊರ ಧರ್ಮದ ಆರಾಧನೆಯಲ್ಲಿ ನಿರತರಾಗಿದ್ದಾರೆ. ಅಂಥವರಲ್ಲಿ ಮ್ಯಾಸನಾಯಕ ಸಮುದಾಯವೂ ಸಹ ಪ್ರಮುಖವಾಗಿದೆ. ಕರ್ನಾಟಕದಲ್ಲಿ ಸುಮಾರು ಜಿಲ್ಲೆಯಲ್ಲಿ ವಾಸಿಸುತ್ತಿರುವ ಈ ಸಮುದಾಯ ಜನಸಂಖ್ಯೆಯಲ್ಲಿ ಮೂರನೇ ಸ್ಥಾನದಲ್ಲಿದೆ ಎಂಬುದು ಅಂಕಿ–ಅಂಶಗಳಿಂದ ತಿಳಿದುಬರುತ್ತದೆ. ಅದರಲ್ಲಿ ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಇವರ ಕೆಲವು ಕುಟುಂಬಗಳು ಸಂಪೂರ್ಣವಾಗಿ ತಮ್ಮ ಮೂಲ ಸಾಂಸ್ಕೃತಿಕ ದೈವಗಳನ್ನು ತೊರೆದು ಏಸುಕ್ರಿಸ್ತನ ಆರಾಧಕರಾಗಿದ್ದಾರೆ. ಬಳ್ಳಾರಿ ಜಿಲ್ಲೆಯ ಚಿಕ್ಕಜೋಗಿಹಳ್ಳಿಯಲ್ಲಿ ಆರೇಳು ವರ್ಷಗಳಿಂದ ಏಸುಕ್ರಿಸ್ತನ ಚರ್ಚ್ ಇದೆ. ಈ ಚರ್ಚ್‌ನಲ್ಲಿ ಆ ಭಾಗದ ಸುತ್ತಮುತ್ತಲಿನ ಹಟ್ಟಿಗಳಲ್ಲಿ ವಾಸಿಸುತ್ತಿರುವ ಆರಾಧಕರಿದ್ದಾರೆ. ಸಮುದಾಯದ ಜನರನ್ನು ಸಂದರ್ಶನ ಮಾಡಿ

ವಿಚಾರಿಸಿದಾಗ 'ನಾವು ಬಹಳ ತೊಂದರೆಯಲ್ಲಿದ್ವಿ, ನಮಗೆ ಶಾಂತಿಯೇ ಇರಲಿಲ್ಲ. ಹಲವಾರು ರೋಗರುಜಿನಗಳಿಂದ ಬಳಲಿ ಎಲ್ಲಾ ಆಸ್ಪತ್ರೆಗಳು ತಿರುಗಿ ಸಾವಿರಾರು ಗಟ್ಟಲೇ ಹಣ ಖರ್ಚು ಮಾಡಿ ಇಲ್ಲಿಗೆ ಬಂದ್ವಿ, ಇಲ್ಲಿಗೆ ಬಂದಾಗ ನಮಗೆ ಮನಸ್ಸಿಗೆ ನೆಮ್ಮದಿಯಾಗಿದೆ. ಎಲ್ಲಾ ರೋಗಗಳಿಂದ ಮುಕ್ತಿ ಹೊಂದಿದ್ದೇವೆ. ದೆವ್ವಭೂತಗಳಂತೂ ನಮ್ಮಿಂದ ಸಂಪೂರ್ಣವಾಗಿ ದೂರವಾಗಿ ಮಾಟಮಂತ್ರಗಳಿಂದ ಮುಕ್ತಿ ಹೊಂದಿದ್ದೇವೆ. ಅವುಗಳ ಕಾಟವೇ ನಮಗೆ ಜಾಸ್ತಿಯಾಗಿತ್ತು. ಅದಕ್ಕಾಗಿ ಇಲ್ಲಿಗೆ ಬಂದಿದ್ದೇವೆ"[೪] ಎಂದು ಹೇಳುತ್ತಾರೆ. ಇಲ್ಲಿನ ಸ್ಥಳೀಯ ಜನರೇ ಇಲ್ಲಿಗೆ ಬರುವ ಏಸುವಿನ ಭಕ್ತಾದಿಗಳು ಕೊಟ್ಟ ಕಾಣಿಕೆಯಿಂದ ಈ ಚರ್ಚನ್ನು ಕಟ್ಟಿದ್ದಾರೆ ಎಂದು ಹೇಳುತ್ತಿದ್ದಾರೆ. ಸ್ವತಃ ಸಮುದಾಯದ ಏಸುವಿನ ಭಕ್ತಳಾದ ಕಂಪಳದೇವರಹಟ್ಟಿ ಸೂರಮ್ಮಳು ಯಾಕೆ ಹೊರಧರ್ಮಗಳ ದೇವರ ಆರಾಧನೆ ಮಾಡುವುದಕ್ಕೆ ಕಾರಣವೇನು ಎಂಬುದಕ್ಕೆ ವಿವರ ಈ ಕೆಳಗಿನಂತಿದೆ.

"ನಾವು ಈ ಏಸುಸ್ವಾಮಿಗೆ ಬಂದು ಈ ಕ್ರಿಸ್‌ಮಸ್ ಹಬ್ಬ ಬಂದ್ರೆ ನಾಲ್ಕು ವರ್ಷಗಳಾಗಿವೆ. ಅದಕ್ಕಿಂತ ಮೊದಲು ಸಾಯೋ ಸ್ಥಿತಿಯಲ್ಲಿದ್ದೆ. ಕರ್ನಾಟಕದಲ್ಲಿ ಎಲ್ಲಾ ಆಸ್ಪತ್ರೆಗಳು ತಿರುಗಿ ದಣಿದಿದ್ವಿ, ೮೦ ರಿಂದ ೯೦ ಸಾವಿರಗಟ್ಲೆ ಬರೇ ಆಸ್ಪತ್ರೆಗೆ ಖರ್ಚು ಮಾಡಿ ದೇವರು, ದಿಂಡ್ರು, ಮಾಟ ಮಂತ್ರ, ತಂತ್ರ ಏನೆಲ್ಲ ಮಾಡಿದ್ರೂ ಸಹ ಮೇಲಾಗ್ಲಿಲ್ಲ, ಮನೆಯಲ್ಲಿ ಯಾವಾಗ್ಲೂ ಬರೇ ಜಗಳ, ಸಮಾಧಾನ ಇರುತ್ತಿರಲಿಲ್ಲ. ನನ್ನ ಗಂಡ ಕೂಡ ಸರಿಯಾಗಿ ಮಾತಾಡಿಸ್ತಿರಲಿಲ್ಲ. ಅವರಿಗೆ ಕೂಡ ನನ್ನ ಬಗ್ಗೆ ಬೇಸರವೆನಿಸಿತ್ತು. ಇಷ್ಟು ದುಡ್ಡು ಇಟ್ರು ಕೂಡ ಮೇಲಾಗ್ಲಿಲ್ಲಂತ ವಟವಟ ಅಂತಿದ್ದ. ಏನ್ ಬ್ಯಾನೆ ಬಂದೈತೆ ಏನೋ ಆ ದೇವರಿಗೆ ಗೊತ್ತು ಅಂತ ತಿರುಗ್‌ತಿದ್ದ. ಹಿಂಗೆ ಒಂದು ದಿನ ಶರಣಮ್ಮ ಅಂತ ನಮ್ ಸಂಬಂಧಿಕರು ಅವರು ಈಗ ಬಳ್ಳಾರಿಯಲ್ಲೇ ಸೆಟ್ಲಾಗಿದ್ದಾರೆ. ಆಯಮ್ಮ ನನಗೆ ಹೇಳಿದ್ಲು 'ನೋಡಮ್ಮ ನಿನಗೆ ಯಾವ ಕಾಯಿಲೆ ಕಸ್ಯಾಲೆ ಇರ್ಲಿ. ನಾನು ಬಳ್ಳಾರಿಗೆ ಚರ್ಚ್‌ಗೆ ಕರ್ಕೊಂಡು ಹೋಗ್ತೀನಿ ಬಾ ಭಾನುವಾರ, ಅಲ್ಲಿ ಎಂತೆಂಥ ಕಾಯಿಲೆ ಬಂದವರಿಗೆಲ್ಲ ಮೇಲಾಗಿದೆ. ಕ್ಯಾನ್ಸರ್, ಏಡ್ಸ್ ಅಂತ ಕಾಯಿಲೆ ಕೂಡ ವಾಸಿಯಾಗಿದೆ. ನಮ್ ಪಾಡೇನು, ಚರ್ಚ್‌ಗೆ ಬಾ ಎರಡು ಮೂರು ವಾರ ಬಂದ್‌ಬಿಡು. ಆ ಮೇಲೆ ನಿನಗೆ ಗೊತ್ತಾಗ್ತದೆ ಅಂದ್ಲು. ಅದಕ್ಕೆ ನಾನು ಏಸುಸ್ವಾಮಿಗೆ ಮೊದ್ಲು ಬಳ್ಳಾರಿಗೆ ಹೋದೆ, ಅಲ್ಲಿ ನನ್ನಂತ ಕಾಯಿಲೆ ಬಂದಂತವರೇ ಬಂದು ವಾಸಿಯಾಗಿದೆ ಅಂತ ಬಂದವ್ರೆ ಹೇಳಿದ್ರು. ಒಂದು ವಾರ ಪಾದ್ರಿಗೆ ಪರಿಚಯ ಮಾಡ್ಸಿದ್ರು. ನಾನು ಹೇಳ್ದೆ, ಸ್ವಾಮಿ ನನಗೆ ಹಿಂಗೈತೆ, ಎಲ್ಲ ಮೇಲಾಗಿಲ್ಲ ಅಂತ ಹೇಳಿದೆ. ಆವಾಗ ಭಾನುವಾರ ಪ್ರೇಯರ್ ಮುಗಿದ ಮೇಲೆ ನನಗೆ ಬೇರೆ ಕುಂದ್ರಿಸಿ ಪ್ರೇಯರ್ ಮಾಡಿದ. ಪ್ರೇಯರ್ ಮಾಡಿಕೊಟ್ಟು ನಿನಗೇನಾದ್ರು ತೊಂದರೆಯಾದ್ರೆ ಈ ಎಣ್ಣೆ ಹಚ್ಚಿಕೋ ಎಂದು ಹೇಳಿದ. ಇನ್ನೊಂದು ವಾರ ಹೋದೆ, ಸ್ವಲ್ಪ ಮೇಲಾಗಿತ್ತು. ಆವಾಗ ಪಾದ್ರಿ ಹೇಳಿದ್ರು ನಿನಗೆ ಬಳ್ಳಾರಿ ದೂರ ಆಗ್ತೈತೆ ಅಲ್ಲೇ ಚಿಕ್ಕಜೋಗಿಹಳ್ಳಿ ಇದೆಯಲ್ಲ ಅಲ್ಲಿಯೇ ಚರ್ಚ್

ಇದೆ. ಅಲ್ಲಿಗೆ ಹೋಗಿ ಪ್ರೇಯರ್ ಮಾಡು ಎಂದು ತಿಳಿಸಿದರು. ಅಲ್ಲಿಗೆ ಹೋದಾಗಿನಿಂದ ಎಲ್ಲ ಕಾಯಿಲೆ ವಾಸಿಯಾಗಿದೆ. ನಮ್ ಕುರಿಗಳು, ಎತ್ತುಗಳು ಕೂಡ ಇವೆ. ಅವುಗಳಿಗೇನಾದರೂ ತೊಂದರೆಯಾದ್ರೆ ಏಸುಸ್ವಾಮಿನ ನೆನಪಿಸಿಕೊಂಡು ಪ್ರೇಯರ್ ಮಾಡ್ತೀನಿ ಮೇಲಾಗಿ ಬಿಡ್ತವೆ. ನಾವು ಪ್ರತಿ ಭಾನುವಾರ ಬೆಳಿಗ್ಗೆ ನಮ್ಮ ಊರಿನಿಂದ ಎಂಟು ಗಂಟೆಗೆ ಬಿಟ್ಟು ಚಿಕ್ಕಜೋಗಿಹಳ್ಳಿಗೆ ಹತ್ತು ಗಂಟೆಗೆ ಹೋಗಿ ೧೦.೩೦ಕ್ಕೆ ಪ್ರೇಯರ್ ಶುರುವು ಮಾಡ್ತೀವಿ. ಅಷ್ಟೊತ್ತಿಗೆ ಎಲ್ಲಾರೂ ಬಂದಿರುತ್ತಾರೆ. ೬ ಗಂಟೆಗೆ ಪ್ರೇಯರ್ ಮುಗಿಸುತ್ತಾರೆ. ೧೦.೩೦ರಿಂದ ಒಂದೂವರೆ ತನಕ ಪ್ರೇಯರ್ ಮುಗಿಸಿ ಅರ್ಧಗಂಟೆಯಲ್ಲಿ ಸಾಕ್ಷಿಗಳು ಹೇಳುವವರು ಹೇಳ್ತಾರೆ.[೫]

ನನಗೆ ಹೊಟ್ಟೆಯಲ್ಲಿ ಗಡ್ಡೆ ಇತ್ತು. ನಾನು ಎಲ್ಲಾ ಆಸ್ಪತ್ರೆಗೆ ತೋರ್‍ಸಿ ವಾಸಿಯಾಗಿ, ಮಾಟ, ಮಂತ್ರಗಳನ್ನು ಮಾಡ್ಸಿದ್ದೆ. ನನಗೆ ಹುಷಾರಾಗಿದ್ದಿಲ್ಲ. ಏಸುಸ್ವಾಮಿಗೆ ಬಂದು ನಾಲ್ಕೈದು ವಾರಗಳಾಯಿತು ನನಗೆ ಹುಷಾರಾಗಿದೆ ಎಂದು ಹೇಳುತ್ತಾರೆ. ಹಾಗೆ ನನಗೆ ದೆವ್ವಗಳ ಕಾಟ ಜಾಸ್ತಿ ಇತ್ತು. ಎಲ್ಲಾ ದೇವರ ಹತ್ತಿರ ಹೋಗಿ ಬಂದೆ ನನಗೆ ಆರಾಮಾಗಿದ್ದಿಲ್ಲ. ಈಗ ಆರಾಮಾಗಿದೆ. ನನಗೆ ಕಣ್ಣೇ ಕಾಣ್ತಿದ್ದಿಲ್ಲ, ಏಸುಸ್ವಾಮಿಗೆ ನಾಲ್ಕು ವಾರದಿಂದ ಬಂದು ಪ್ರೇಯರ್ ಮಾಡಿದೆ, ನನಗೆ ಈಗ ಕಣ್ಣು ಕಾಣ್ತವೆ. ನನಗೆ ಎಂಟತ್ತು ವರ್ಷಗಳಿಂದ ಮಕ್ಳಾಗಿದ್ದಿಲ್ಲ, ಎರಡು ವರ್ಷದಿಂದ ಏಸು ಸ್ವಾಮಿಗೆ ಬರ್ತಾ ಇದ್ದೀನಿ, ಈಗ ಒಂದು ಗಂಡು ಮಗು ಆಗಿದೆ."[೬] ಈ ರೀತಿ ಪ್ರತಿಯೊಬ್ಬರೂ ಸಹ ತಮ್ಮ ಸಾಕ್ಷಿಗಳನ್ನು ಬಹಿರಂಗವಾಗಿ ಚರ್ಚ್‌ನಲ್ಲಿ ಹೇಳುತ್ತಾರೆ. ಸುಮಾರು ಮುನ್ನೂರೈವತ್ತರಿಂದ ನಾಲ್ಕುನೂರು ಜನ ಈ ಚರ್ಚ್‌ಗೆ ಬರುತ್ತಾರೆ. ಅದರಲ್ಲಿ ಬರೀ ತಳಸಮುದಾಯದ ಜನರು. ಅದರಲ್ಲಿ ಹೆಚ್ಚಿನ ಜನ ಮಹಿಳೆಯರಿ ದ್ದಾರೆ. ಮತ್ತು ಪ್ರತಿದಿನ ಬೆಳಗ್ಗೆ ಸಂಜೆ ಪ್ರೇಯರ್ ಮಾಡುವುದು ಕಡ್ಡಾಯವಾಗಿದೆ. ಮೊಳಕಾಲ್ಮೂರು ತಾಲ್ಲೂಕಿನ ಸೂಲೇನಹಳ್ಳಿ, ನಾಯಕನಹಟ್ಟಿ, ಚಳ್ಳಕೆರೆ, ಚಿತ್ರದುರ್ಗ ಮುಂತಾದ ಭಾಗಗಳಲ್ಲಿ ಚರ್ಚ್‌ಗಳಿವೆ. ಈ ರೀತಿಯಾಗಿ ಮ್ಯಾಸನಾಯಕರು ತಮ್ಮ ಸಂಸ್ಕೃತಿಯ ದೈವಗಳನ್ನು ತೊರೆದು ಹೊಸ ದೈವಗಳ ಮೊರೆ ಹೋಗುತ್ತಿದ್ದಾರೆ.

ಬದಲಾದ ಸನ್ನಿವೇಶದಲ್ಲಿ ಮ್ಯಾಸನಾಯಕರ ಹಟ್ಟಿಗಳು ಮಾರುನಾಮ ಪಡೆಯುತ್ತಿವೆ. ಚಿತ್ರದುರ್ಗ ಕೆಳಗೋಟೆ ಪ್ರದೇಶವನ್ನು ಇಂದು ಹಟ್ಟಿ ಎಂದು ಕರೆಯುತ್ತಾರೆ. ನಗರೀಕರಣ ವಾಗಿದ್ದರೂ ಇಲ್ಲಿನ ಜನ ಮ್ಯಾಸ ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಹಿಂದೆ ಹಟ್ಟಿಗಳಲ್ಲಿ ಬಿಸುವಕಲ್ಲು ಪ್ರಸ್ತುತ ದಿನಮಾನಗಳಲ್ಲಿ ಪ್ಲೋರ್‌ಮಿಲ್, ರೈಸ್‌ಮಿಲ್ ಆಗಿ ಪರಿವರ್ತನೆಯಾಗಿದೆ. ಹಾಗೆಯೇ ಒನಕೆ, ಒಳ್ಳು, ರುಬ್ಬುವ ಗುಂಡು ಇವುಗಳ ಸ್ಥಾನದಲ್ಲಿ ಮಿಕ್ಸಿ, ಗ್ರೈಂಡರ್, ಫ್ರಿಜ್ ಇಂತಹ ಆಧುನಿಕ ಪರಿಕರಗಳು ಬಳಕೆಯಾಗುತ್ತಿವೆ. ಪೂರ್ವದಲ್ಲಿ ಅಡಿಗೆ ಮಾಡಲು ನಿಸರ್ಗದತ್ತವಾಗಿ ಸಿಗುವ ಕೆಂಪು ಮಣ್ಣಿನಿಂದ ಮೂರು ಒಲೆಗುಂಡುಗಳನ್ನು ಮಾಡಿ ಮಣ್ಣಿನ ಮಡಿಕೆಗಳಿಂದ ಆಹಾರವನ್ನು ಕಟ್ಟಿಗೆ ಉರವಲುಗಳಿಂದ ತಯಾರಿಸುತ್ತಿದ್ದರು. ಈ ವಿಧಾನದಿಂದ

ಮಾನವನ ಆರೋಗ್ಯ ಉತ್ತಮವಾಗಿರುವುದಲ್ಲದೆ ಸುತ್ತಮುತ್ತಲಿನ ಪರಿಸರವು ಶುಚಿಯಾಗಿರುತ್ತಿತ್ತು. ಆದರೆ ಪ್ರಸ್ತುತ ಸಂದರ್ಭದಲ್ಲಿ ಮಣ್ಣಿನ ಓಲೆಗೂಡು, ಮಣ್ಣಿನ ಮಡಿಕೆ, ಕಟ್ಟಿಗೆ ಉರವಲು ಇವುಗಳ ಸ್ಥಾನವನ್ನು ಸ್ಟೌವ್, ಗ್ಯಾಸ್, ಹವಾನಿಯಂತ್ರಕ ಯಂತ್ರಗಳು, ಹಾಟ್‌ಬಾಕ್ಸ್‌ಗಳು ಆಕ್ರಮಿಸಿಕೊಂಡಿದ್ದು, ಇವು ಆರೋಗ್ಯಕ್ಕೆ ಹಿತಕರವೇ ಹೊರತು ಆರೋಗ್ಯಕರವಲ್ಲ. ಇಂದು ಸರ್ಕಾರ ಪರಿಶಿಷ್ಟವರ್ಗಗಳು ಸಾಮಾಜಿಕವಾಗಿ ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಹಿಂದುಳಿದ ಕಾರಣದಿಂದ ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ಇವರಿಗೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಿದೆ. ವೃತ್ತಿ ಉಪವೃತ್ತಿಗಳಿಗೆ ಧನಸಹಾಯ ನೀಡುತ್ತಿದೆ. ಉದಾಹರಣೆಗೆ ಇಟ್ಟಿಗೆ, ಊದುಬತ್ತಿ, ಕೃಷಿ, ಪಶುಪಾಲನೆ, ಗಂಗಾಕಲ್ಯಾಣ, ಸಂಧ್ಯಾಸುರಕ್ಷಾ ಯೋಜನೆ, ಹೆರಿಗೆ ಭತ್ಯೆ, ವಿಧವಾ ವೇತನ, ಆಶ್ರಯ ಮನೆ ಮುಂತಾದ ಕಾರ್ಯಕ್ರಮಗಳನ್ನು ರೂಪಿಸಿದೆ. ಆದರೆ ಈ ಯೋಜನೆಗಳು ಜಾರಿಗೆ ತರುವಾಗ ಎಷ್ಟರಮಟ್ಟಿಗೆ ಬಳಕೆಯಾಗುತ್ತಿದೆ ಎನ್ನುವುದು ನಮ್ಮೆಲ್ಲರ ಪ್ರಶ್ನೆಯಾಗಿಯೇ ಉಳಿದುಕೊಂಡಿದೆ.

ಪ್ರಾಚೀನ ಕಾಲದಲ್ಲಿ ಮ್ಯಾಸರ ಪ್ರಧಾನ ವೃತ್ತಿ ಪಶುಪಾಲನೆ. ಇದರಿಂದ ಸಾಕಷ್ಟು ಹಾಲು, ಬೆಣ್ಣೆ, ತುಪ್ಪ ಸಿಗುತ್ತಿತ್ತು. ಇದು ಆರೋಗ್ಯಕ್ಕೂ ಉತ್ತಮವಾಗಿತ್ತು. ಅಂದು ಹಾಲನ್ನು ಮಾರುತ್ತಿರಲಿಲ್ಲ. ಈಗಲೂ ಇವರ ಹಟ್ಟಿಗಳಲ್ಲಿ ಶನಿವಾರದಂದು ಹಾಲು ಕುಡಿಯುವುದಿಲ್ಲ. ಅಂದು ಹೆಪ್ಪು ಹಾಕಿ ಭಾನುವಾರದ ದಿನ ಅದನ್ನು ಬಳಸುತ್ತಾರೆ. ಬದಲಾದ ಸಮಯದಲ್ಲಿ ಈಗ ಹಾಲು ಮಾರುವುದರಿಂದ ಅದು ಶುದ್ಧೀಕರಣಗೊಂಡು ರೋಗರುಜಿನಗಳಿಗೆ ಆಸ್ಪದ ಮಾಡಿಕೊಡುತ್ತದೆ.

**ಟಿಪ್ಪಣಿಗಳು**

೧. ವಿರೂಪಾಕ್ಷಿ ಪೂಜಾರಹಳ್ಳಿ, **ಬೇಟೆ ಮತ್ತು ಬೇಡರು,** ಪು. ೨೬೧

೨. ಪಾಲಯ್ಯ, ೫೫, ಮೇಗಳಹಟ್ಟಿ, ಮಾಹಿತಿದಾರ

೩. ಬೋರಯ್ಯ, ೬೦, ಕಾಟಪ್ಪನಹಟ್ಟಿ, ಮಾಹಿತಿದಾರ

೪. ಸೂರಮ್ಮ, ೮೦, ಕಂಪಳದೇವರಹಟ್ಟಿ, ಮಾಹಿತಿದಾರಳು

೫. ಪಾರ್ವತಮ್ಮ, ೪೫, ಗೌಡರಹಟ್ಟಿ, ಮಾಹಿತಿದಾರಳು

೬. ಮಂಜಮ್ಮ, ೩೫, ಯರ್ರೋಬಯ್ಯನಹಟ್ಟಿ, ಮಾಹಿತಿದಾರಳು

ಅಧ್ಯಾಯ ಒಂಬತ್ತು

# ಸಮಾರೋಪ

ಅತ್ಯಂತ ಪ್ರಾಚೀನ ಬುಡಕಟ್ಟು ಸಮುದಾಯಗಳಲ್ಲಿ ಬೇಡ ಸಮುದಾಯವು ಒಂದಾಗಿದೆ. ಆಧುನೀಕರಣ ಮತ್ತು ಸಂಸ್ಕೃತಿಕರಣ ಪ್ರಭಾವದಿಂದ ಬದಲಾವಣೆಗೊಳ್ಳುತ್ತಿರುವ ಪ್ರಮುಖ ಪಂಗಡವಾದ ಮ್ಯಾಸ ಸಮುದಾಯವನ್ನು ಆಯ್ಕೆ ಮಾಡಿಕೊಂಡು ಅದರ ವಸತಿ ನಿವೇಶನಗಳ ಮೂಲಕ ಹಟ್ಟಿಗಳನ್ನು ಚಾರಿತ್ರಿಕವಾಗಿ ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಲಾಯಿತು. ಬೇಡರ ನೆಲೆಗಳು ಪ್ರಮುಖವಾಗಿ ಕಂಡುಬರುವುದು ಅರಣ್ಯ, ಅರಣ್ಯದ ಅಂಚು ಇಲ್ಲವೆ ಗುಡ್ಡಗಾಡು ಪ್ರದೇಶ ಅಥವಾ ಕುರುಚಲು ಗುಡ್ಡಗಾಡು ಪ್ರದೇಶದಲ್ಲಿ. ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಯ ಭೌಗೋಳಿಕ ಚಹರೆಯನ್ನು ಮತ್ತು ಅಲ್ಲಿನ ಭಾಷಿಕ ಸ್ವರೂಪ, ಸಾಂಸ್ಕೃತಿಕ ಸ್ವರೂಪ ಮತ್ತು ಹಟ್ಟಿಗಳ ವಾಸ್ತುಸ್ವರೂಪವನ್ನು ಗುರುತಿಸಲಾಗಿದೆ. ಈ ಭಾಗದಲ್ಲಿ ಜಲವಾಚಿ, ಶಿಲಾವಾಚಿ, ಕ್ಷೇತ್ರವಾಚಿ, ಸಸ್ಯವಾಚಿ, ಲೋಹವಾಚಿ ಮುಂತಾದ ಪ್ರಾಕೃತಿಕ ಮೂಲ ಸ್ಥಳನಾಮಗಳೊಂದಿಗೆ, ಜಾತಿ, ವರ್ಗ, ವೃತ್ತಿ, ದೈವ, ವ್ಯಕ್ತಿ, ಪ್ರಾಣಿ, ಪಕ್ಷಿ ಮುಂತಾದ ಸಾಂಸ್ಕೃತಿಕ ಅಂಶಗಳನ್ನು ಪ್ರತಿನಿಧಿಸುವ ಸ್ಥಳನಾಮಗಳಿರುವುದನ್ನು ಗುರುತಿಸಲಾಗಿದೆ. ಕ್ಷೇತ್ರ ವ್ಯಾಪ್ತಿಯ ಬುಡಕಟ್ಟು ಜನರು ಇನ್ನೂ ಗ್ರಾಮಗಳಿಗೆ ಬಾರದೆ ಹಟ್ಟಿ, ಕಪಿಲೆ, ತೋಟ, ಅಡವಿಯ ಅಂಚಿನಲ್ಲಿ ಜೀವಿಸುತ್ತಿರುವುದನ್ನು ಕಾಣಬಹುದು. ಪ್ರತಿಯೊಂದು ಹಟ್ಟಿಯಲ್ಲಿಯೇ ಚರಿತ್ರೆ ಮತ್ತು ಸಂಸ್ಕೃತಿ ನಿರ್ಮಾಣಗೊಂಡಿರುತ್ತದೆ. ಬಹುತೇಕ ಬುಡಕಟ್ಟು ಜನರು ಕೆರೆ, ಬಾವಿ ನೀರನ್ನು, ಅಡವಿಯ ಸೌದೆಯನ್ನು ಅವಲಂಬಿಸಿರುವರು. ಹೆಚ್ಚಾಗಿ ಒಣಬೇಸಾಯ ಮಾಡುವ ಇವರು ನೀರಾವರಿ ಕೃಷಿಯಲ್ಲಿಯೂ ಹೆಚ್ಚಿನ ಉತ್ಪಾದನೆಯನ್ನು ಇತ್ತೀಚೆಗೆ ಕಂಡಿದ್ದಾರೆ. ಜನಸಾಮಾನ್ಯರ ಚರಿತ್ರೆಯೇ ಇಲ್ಲಿ ಪ್ರಧಾನವಾಗಿದ್ದು, ಹಿಂದೆ ಆಳಿದ ಪಾಳೆಯಗಾರರನ್ನು ಸ್ಮರಿಸುತ್ತಾ ಅವರ ಧೈರ್ಯ, ಪರಾಕ್ರಮಗಳನ್ನು ಕೊಂಡಾಡುವುದು ತಮ್ಮ ವಂಶಜರಿಗೆ ಈ ಹೆಸರುಗಳನ್ನು ಇಡುವುದು ರೂಢಿಯಲ್ಲಿದೆ.

ಈ ಪರಿಸರದಲ್ಲಿ ದೇವಾಲಯಗಳನ್ನು ಗಮನಿಸುವುದರ ಜೊತೆಗೆ ಇಲ್ಲಿರುವ ಶಿಲ್ಪಕಲೆಯನ್ನು ಗಮನಿಸಲಾಗಿದೆ. ಈ ದೇವಾಲಯಗಳು ಆಗಿನ ಕಾಲದಲ್ಲಿ ಧಾರ್ಮಿಕ ಕೇಂದ್ರಗಳಾಗಿ ಅಲ್ಲದೆ ಇತರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಂಗೀತ, ನೃತ್ಯಕಲಾ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ವೀರಗಲ್ಲುಗಳು ಹಾಗೂ ಮಾಸ್ತಿಕಲ್ಲುಗಳು ದೊರೆತಿದ್ದು, ಅವು ಪ್ರಾದೇಶಿಕ ಸ್ಥಳೀಯ ಚರಿತ್ರೆಗೆ ಆಕರಗಳಾಗಿವೆ. ಈ ಎರಡು ಕುರುಹುಗಳು ಅಂದಿನ ಕಾಲದ ಜನಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ವೀರಗಲ್ಲುಗಳು ಅಂದಿನ ರಾಜ್ಯವ್ಯವಸ್ಥೆಯಲ್ಲಿ ಯುವಕರು ಮಾಡಬೇಕಾದ ಮೂಲಭೂತ ಕರ್ತವ್ಯಗಳನ್ನು ಪ್ರತಿಪಾದಿಸುತ್ತವೆ. ಅಲ್ಲದೆ ಮುಂದಿನ ಪೀಳಿಗೆಯ ಯುವಕರ ಪಾತ್ರವೇನು ಎಂಬುದನ್ನು ಬೋಧಿಸುತ್ತವೆ. ಮಾಸ್ತಿಕಲ್ಲುಗಳು ಅಂದಿನ ಸಮಾಜದಲ್ಲಿದ್ದ ಸಾಮಾಜಿಕ ಪದ್ಧತಿ, ಸ್ತ್ರೀಯರ ಸ್ಥಾನಮಾನ ಮುಂತಾದ ಮೌಲ್ಯಗಳನ್ನು ತಿಳಿಯಪಡಿಸುತ್ತವೆ. ಒಂದು ರಾಜ್ಯದ ಸಪ್ತಾಂಗಗಳಲ್ಲಿ ಕೋಟೆಯು ಒಂದಾಗಿದೆ. ಈ ಪರಿಸರದಲ್ಲಿ ಅನೇಕ ಕೋಟೆಗಳನ್ನು ಗಮನಿಸಲಾಗಿದೆ. ಈ ಪ್ರದೇಶದಲ್ಲಿ ಗಿರಿದುರ್ಗಗಳು ಅಧಿಕ ಸಂಖ್ಯೆಯಲ್ಲಿವೆ. ಅತಿ ಹೆಚ್ಚಾಗಿ ಕಾಯ್ದಿಟ್ಟ ಕಾವಲ್‌ಗಳಿವೆ. ಇದಕ್ಕೆ ಅಲ್ಲಿನ ಬೆಟ್ಟಗುಡ್ಡಗಳಿಂದ ಆವೃತ್ತವಾದ ಭೌಗೋಳಿಕ ಸನ್ನಿವೇಶವೂ ಪ್ರಮುಖ ಕಾರಣವಾಗಿದೆ. ಇಲ್ಲಿರುವ ಪ್ರತಿಯೊಂದು ಹಟ್ಟಿಯಲ್ಲಿಯೂ ಮನೆಯ ಸುತ್ತಲೂ ಹಾಗೂ ಊರಿನ ಸುತ್ತಲೂ ಬೇಲಿ ನಿರ್ಮಿಸಿಕೊಂಡಿರುತ್ತಾರೆ. ಆಧುನಿಕತೆಯಿಂದ ಬೇಲಿಯನ್ನು ನಿರ್ಮಿಸಿಕೊಂಡಿರುವುದನ್ನು ಕೈ ಬಿಟ್ಟರೂ ಊರಿನ ಮಾರಿ ಜಾತ್ರೆಯ ಸಮಯದಲ್ಲಿ ಕಡ್ಡಾಯವಾಗಿ ಹಟ್ಟಿಯ ಸುತ್ತಲೂ ಮುಳ್ಳಿನ ಬೇಲಿ ನಿರ್ಮಿಸುತ್ತಾರೆ. ಈ ಹಟ್ಟಿಗೆ ಬೇರೆಯವರು ಒಳಗೆ ಬರುವುದನ್ನು ನಿಷೇಧಿಸುತ್ತಾರೆ. ಆ ಸಮಯದಲ್ಲಿ ಕಾಲಿಗೆ ಮೆಟ್ಟನ್ನು ಸಹ ಹಾಕುವಂತಿಲ್ಲ. ಪ್ರತಿಯೊಂದು ಹಟ್ಟಿಯಲ್ಲಿಯೂ ಸಹ ರಕ್ಷಣೆಗಾಗಿ ಕೋಟೆ ನಿರ್ಮಿಸಿರುವುದು ಕಂಡುಬಂದರೂ ಬಹುತೇಕ ಅದರ ಕುರುಹುಗಳು ಕಾಣಸಿಗುತ್ತವೆ. ಹಟ್ಟಿಯ ದೈವಗಳಿಗೆ ಪೌಳಿ ಕಟ್ಟಿ ಮಧ್ಯೆದಲ್ಲಿ ದೇವರ ಚಿಕ್ಕ ಗುಡಿಸಲನ್ನು ಕಟ್ಟಿರುತ್ತಾರೆ. ಹೊಸದೇವರಗುಡ್ಡದಲ್ಲಿ ಎರಡು ಪ್ರಕಾರದ ಕೋಟೆಯಿದೆ. ಅಲ್ಲದೆ ಬಹುತೇಕ ಕೋಟೆಗಳಿಗೆ ಯಾವುದೇ ಐತಿಹಾಸಿಕ ಆಧಾರಗಳಿಲ್ಲ. ಅಲ್ಲದೆ ಈ ಪ್ರದೇಶದಲ್ಲಿ ಕೊತ್ತಲ ಕಾವಲುಗಾರರ ಮನೆಗಳು ಕಾಡಿನಂಚಿನಲ್ಲಿ ಕಂಡುಬರುತ್ತಿವೆ. ಅಂದು ರಾಜ್ಯದ ಕೊನೆಯ ಘಟಕ ಗ್ರಾಮವಾಗಿದ್ದು, ರಕ್ಷಣೆಗೆ ಕೊತ್ತಲುಗಳನ್ನು ಕಟ್ಟಿ ಅದರಿಂದ ವಿರೋಧಿಗಳ ಚಲನವಲನಗಳನ್ನು ಗಮನಿಸುತ್ತಿದ್ದರು. ಶಾಸನಗಳಿಂದ ಅಂದಿನ ರಾಜಕೀಯ ಇತಿಹಾಸವಲ್ಲದೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಅಂದಿನ ಜನಸಾಮಾನ್ಯರ ಬದುಕನ್ನು ತಿಳಿಯಲು ಸಾಧ್ಯವಾಗುತ್ತವೆ.

ಪ್ರಸ್ತುತ ಸಂದರ್ಭದಲ್ಲಿ ಈ ಪರಿಸರದಲ್ಲಿ ವಾಸಿಸುತ್ತಿರುವ ಮ್ಯಾಸನಾಯಕರ ಬುಡಕಟ್ಟನ್ನು ಕುರಿತು ಅವರ ಜೀವನಕ್ರಮ, ಸಂಪ್ರದಾಯ, ನಂಬಿಕೆ, ನಡವಳಿಕೆ, ಕುಲಪದ್ಧತಿ, ಆಧುನಿಕ ಜೀವನದ ಸ್ಥಿತಿಗತಿಗಳನ್ನು ಕುರಿತು ವಿವರವಾಗಿ ಇಲ್ಲಿ ಪ್ರಸ್ತಾಪಿಸಲಾಗಿದೆ.

ಇವರು ಹಬ್ಬ ಹರಿದಿನ, ಜಾತ್ರೆ, ಉತ್ಸವ, ಆಚರಣೆಯನ್ನು ಬಿಡದೆ ಪೂರ್ವಿಕರಿಂದ ರೂಢಿಗತವಾಗಿ ಭಯ, ಭಕ್ತಿ, ನಿಷ್ಠೆ, ನಂಬಿಕೆಯಿಂದ ಆಚರಣೆಗಳನ್ನು ಮಾಡುತ್ತಾರೆ. ಒಂದು ವೇಳೆ ಆಚರಣೆ ಮಾಡದಿದ್ದರೆ ನಮಗೆ ನಮ್ಮ ಸಮುದಾಯಕ್ಕೆ ಕೇಡು ಸಂಭವಿಸುವ ಸಂದರ್ಭ ಬರಬಹುದೆಂಬ ಭಯ ಸಹ ಇವರಲ್ಲಿದೆ. ಇವರು ಪ್ರಸ್ತುತ ರೂಢಿ ಸಂಪ್ರದಾಯಗಳಿಗೆ ಜೋತುಬಿದ್ದು ಜೀವಿಸುತ್ತಿರುವುದು ಕಂಡುಬರುತ್ತದೆ. ಬೇಟೆಯ ಆಚರಣೆ ಇಂದು ಸ್ಥಿತ್ಯಂತರ ಪಡೆದಿದೆ. ವಾರ್ಷಿಕಾಚರಣೆ ರೂಪದಲ್ಲಿ ಯುಗಾದಿಯಂದು ಮಾತ್ರ ನಡೆಯುತ್ತಿದೆ. ಇಂದು ಕುರಿ, ಮೇಕೆ, ಕೋಳಿ, ಮೀನು ಮಾರುಕಟ್ಟೆಗಳಲ್ಲಿ ಸಿಗುವುದರಿಂದ ಬೇಟೆಯಂಥ ಕಠಿಣ ಪರಿಶ್ರಮಕ್ಕೆ ಹೆದರುವವರೇ ಹೆಚ್ಚು. ಹೀಗಿದ್ದರೂ ಕೆಲವು ಭಾಗದ ಬೇಡರು ಮಾಂಸಾಹಾರವನ್ನು ತ್ಯಜಿಸುತ್ತಾ ಬಂದಿರುವ ಉಲ್ಲೇಖಗಳಿವೆ.

ಹನ್ನೆರಡನೇ ಶತಮಾನದ ವಚನ ಕ್ರಾಂತಿಯ ನಂತರ ಬಂದ ತಿಪ್ಪೇಸ್ವಾಮಿ ಎಂಬ ಸಂತನ ಹೆಸರನ್ನು ಚಿತ್ರದುರ್ಗದಾದ್ಯಂತ ಎಲ್ಲ ವರ್ಗದ ಸಮೂಹ ಒಂದು ಸಾಂಸ್ಕೃತಿಕ ನೆನಪಾಗಿ ಉಳಿಸಿಕೊಂಡು ಬಂದಿದೆ. ಮತೀಯ ಐಕಮತ್ಯದ ಹಿನ್ನೆಲೆಯೂ ಇದಕ್ಕಿದೆ. ಲಕ್ಷಾಂತರ ಜನಸಮೂಹ ತಿಪ್ಪೇಸ್ವಾಮಿಯ ನೆನಪನ್ನು, ಜಾತ್ರೆ ಮತ್ತು ಇನ್ನಿತರ ಆಚರಣೆಗಳ ಮೂಲಕ ಅಲ್ಲದೆ ತಂತಮ್ಮ ಸಂತಾನಕ್ಕೆ ಆತನ ಹೆಸರಿಟ್ಟುಕೊಳ್ಳುವುದರ ಮೂಲಕ ಉಳಿಸಿಕೊಂಡು ಬರುತ್ತದೆ. ಈ ಪರಿಸರದಲ್ಲಿ ಗಾದರಿಪಾಲನಾಯಕ, ಜಗಳೂರಜ್ಜ, ಕಂಪಳರಂಗ, ಬೋಸೆರಂಗ, ಚನ್ನಕ್ಯಾಸಯ್ಯ ಮುಂತಾದ ಶರಣರನ್ನು ಗುರುತಿಸಲಾಗಿದೆ. ಬೋಸೆದೇವರಹಟ್ಟಿ ಹಾಗೂ ಕಡಬನಕಟ್ಟೆಮ್ಯಾಸರಹಟ್ಟಿಯಲ್ಲಿ ಅವಧೂತರುಗಳಾದ ಬೊಮ್ಮಯ್ಯ ಎಂಬ ಹೆಸರಿನ ಇಬ್ಬರು ಅನೇಕ ಪವಾಡಗಳನ್ನು ಮಾಡಿರುವುದು ತಿಳಿದುಬರುತ್ತದೆ.

ಕರ್ನಾಟಕದಲ್ಲಿ ಬೇಡರ ಸಂಖ್ಯೆ ೬೫ ಲಕ್ಷ ಇದೆ ಎಂದು ಜನಗಣತಿಯಿಂದ ತಿಳಿದುಬರುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಬೇಡ ಸಮುದಾಯದ ಪರಿಸ್ಥಿತಿ ಸ್ಥಾನಮಾನ ಬದುಕಿನ ನಿರ್ವಹಣೆಯ ಮಾನದಂಡಗಳ ಮೂಲಕ ಹೇಳುವುದಾದರೆ ಈ ಜನಾಂಗದ ಜೀವನ ನಿರ್ವಹಣೆ ದುಸ್ಥಿತಿಯಲ್ಲಿ ಸಾವಿರಾರು ವರ್ಷಗಳ ಜನಾಂಗದ ಪರಂಪರೆಯು ಈ ಜನಾಂಗಕ್ಕಿದೆ. ಮೂಲಭೂತ ಸೌಲಭ್ಯಗಳಿಂದ ವಂಚಿತವಾದ ಸಮುದಾಯವಾಗಿದೆ. ಆರ್ಥಿಕ ಹಾಗೂ ಶೈಕ್ಷಣಿಕವಾಗಿ ತೀರಾ ಹಿಂದುಳಿದ ಗ್ರಾಮೀಣ ಬದುಕಿನ ಈ ಸಮುದಾಯದ ಬಗೆಗಿರುವ ವಾಸ್ತವಿಕ ಸಮಸ್ಯೆಗಳು. ಈ ದಿನಗಳಲ್ಲಿ ಚರ್ಚೆಗೊಳಪಡಿಸಿ ಪರಿಹಾರಗಳನ್ನು ಕೈಗೊಳ್ಳದೆ ಬಹುತೇಕ ಈ ಸಮುದಾಯದ ಬಗೆಗಿರುವ ಶೌರ್ಯ ಸಾಹಸ ಪರಂಪರೆಗಳನ್ನು ಹೊಗಳುವುದರಲ್ಲಿಯೇ ಕಾಲಹರಣ ಮಾಡುತ್ತಿದ್ದಾರೆ. ಕಳೆದ ೬೦ ವರ್ಷಗಳಲ್ಲಿ ಮೀಸಲಾತಿ ಸೌಲಭ್ಯ ಪಡೆದದ್ದನ್ನು ಬಿಟ್ಟರೆ ಯಾವುದೇ ಪರಿಣಾಮಕಾರಿ ಬದಲಾವಣೆಗಳು ಈ ಸಮುದಾಯದ ಅಭಿವೃದ್ಧಿಯ ಹಿನ್ನೆಲೆಯಲ್ಲಿ ನಡೆದಿಲ್ಲ. ಕೆಲವು ಜನ ಬೇಡರಷ್ಟೇ ಎಲ್ಲಾ ರೀತಿಯ ಮೀಸಲಾತಿಯ ಸದುಪಯೋಗವನ್ನು ಪಡೆದು ಗಣ್ಯವ್ಯಕ್ತಿಗಳಾಗಿ

ಮರೆಯುತ್ತಿದ್ದಾರೆ ವಿನಾ ಬಹುತೇಕ ಬೇಡ ಸಮುದಾಯದವರು ವಂಚಿತರಾಗಿದ್ದಾರೆ. ಇತ್ತೀಚೆಗೆ ಪರಿಸ್ಥಿತಿ ಅಲ್ಪಸ್ವಲ್ಪ ಬದಲಾವಣೆಯಾಗಿದೆ. ಬೇಡ ಸಮುದಾಯ ದವರು ವಾಸಿಸುವ ಕೊಳಕು ಗುಡಿಸಲು ನಿಲ್ಲಲು ಜಾಗವಿಲ್ಲದೆ ಹಲವಾರು ರೋಗಗಳಿಗೆ ಬಲಿಯಾಗಿದ್ದಾರೆ. ಬಡತನದಲ್ಲಿರುವ ಬೇಡ ಮಹಿಳೆಯರು ಪುರುಷರು ದಿನವಿಡಿ ಕೂಲಿ ಕೆಲಸದಿಂದ ಬಂದ ಹಣದಲ್ಲಿಯೇ ಸಂಸಾರ ನಡೆಸುತ್ತಿದ್ದಾರೆ. ಆ ಗುಡಿಸಲು ವಾಸಿಗಳಿಗೆ ಕೇಳಿದರೆ ರಾಜಕೀಯ ನಾಯಕರಿಗೆ ಮತ್ತು ಸರಕಾರಿ ಅಧಿಕಾರಿಗಳಿಗೆ ಬಾಯಿಗೆ ಬಂದಂತೆ ಬೈಯುತ್ತಾರೆ. ೬೦ ವರ್ಷಗಳಿಂದ ಬೇಡ ಸಮುದಾಯದ ವ್ಯಕ್ತಿಗಳೇ ಶಾಸಕರಾಗಿ ಲೋಕಸಭಾ ಸದಸ್ಯರಾಗಿ ರಾಜ್ಯ ಮಂತ್ರಿಗಳಾಗಿ, ಜಿಲ್ಲಾಪಂಚಾಯಿತಿ ಅಧ್ಯಕ್ಷ, ಉಪಾಧ್ಯಕ್ಷ, ಗ್ರಾಮಪಂಚಾಯತಿ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಆದರೆ ಜನರ ಅಭಿವೃದ್ಧಿ ಕಡೆಗೆ ಗಮನಹರಿಸಿಲ್ಲ. ತಾವು ಮಾತ್ರ ಅಭಿವೃದ್ಧಿಯಾಗಿದ್ದಾರೆ ವಿನಾ ಸಮುದಾಯದ ಅಭಿವೃದ್ಧಿಗೆ ಗಮನ ಕೊಟ್ಟಿಲ್ಲ. ನಮಗೆ ಈ ಗುಡಿಸಲೇ ಗತಿ ಎಂದು ತಮ್ಮ ಅಳಲು ತೊಡಿಕೊಳ್ಳುತ್ತಿರುವುದು ಕಂಡುಬರುತ್ತದೆ. ಚುನಾವಣೆ ಸಮಯದಲ್ಲಿ ಮತ್ತು ಹೊಡೆದಾಟಕ್ಕೆ ಮಾತ್ರ ಸಮುದಾಯದ ಜನತೆ ನೆನಪಾಗುತ್ತದೆ. ಆರಿಸಿ ಬಂದ ಮೇಲೆ ನಮಗೆ ನೀವು ಓಟು ಹಾಕಲು, ದುಡ್ಡು ಕೊಟ್ಟಿದ್ದೇವೆ. ಅದಕ್ಕೆ ನೀವು ಓಟು ಹಾಕಿದ್ದೀರಿ ಎಂಬ ಬೇಜವಾಬ್ದಾರಿ ಮಾತುಗಳನ್ನು ಹೇಳುತ್ತಾರೆ. ಚಿಕ್ಕ ಪುಟ್ಟ ರಾಜಕೀಯ ವ್ಯಕ್ತಿಗಳು, ಗುತ್ತಿಗೆದಾರರನ್ನು, ಪುಡಿ ರೌಡಿಗಳನ್ನು ಶಾಸಕರು ನಂಬುತ್ತಾರೆ. ಸಾಮಾನ್ಯ ಮತದಾರರು ಹೋದರೆ ಅಲಕ್ಷ್ಯ ಮಾಡುತ್ತಾರೆ. ಬೇಡ ಸಮುದಾಯದ ಜನರನ್ನು ಕುಡಿಸಿ, ತಿನ್ನಿಸಿ ಕೇವಲ ಜಗಳ ತೆಗೆದು ಹೊಡೆದಾಡುವುದಕ್ಕೆ ಮಾತ್ರ ಸೀಮಿತಗೊಳಿಸಿದ್ದಾರೆ. ನಾಯಕ ಜನಾಂಗದವರಿಗೆ ಹಲವಾರು ಅನ್ಯಾಯಗಳಾದಾಗ ತಮ್ಮ ಸಮುದಾಯದ ಕಟ್ಟೆಮನೆಗಳ ಮೂಲಕ ನ್ಯಾಯ ದಕ್ಕಿಸಿಕೊಂಡಿದ್ದಾರೆ ವಿನಾ ಸರ್ಕಾರಿ ಅಧಿಕಾರಿಗಳಿಂದ, ರಾಜಕೀಯ ನಾಯಕರಿಂದ ನ್ಯಾಯ ಸಿಕ್ಕಿಲ್ಲ ಎಂದು ತಮ್ಮ ನೋವಿನ ಸಂಗತಿಯನ್ನು ಹೇಳಿಕೊಳ್ಳುತ್ತಾರೆ.

ಜಾಗತೀಕರಣಗೊಳ್ಳುತ್ತಿರುವ ಬುಡಕಟ್ಟುಗಳು ಸಂದಿಗ್ಧ ಪರಿಸ್ಥಿತಿಯಲ್ಲಿದ್ದು ಮೂಲ ಸಂಸ್ಕೃತಿಗಳು ಮರೆಯಾಗುತ್ತಿವೆ. ಬೇಡರು ಇಂದು ನಾಗರಿಕತೆಯ ಪ್ರಭಾವದಿಂದ ವಲಸೆ ಆರಂಭಿಸಿ, ಸಾಂಸ್ಕೃತಿಕ ಹೆಗ್ಗುರುತುಗಳನ್ನು ಉಳಿಸಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಇದರಲ್ಲಿ ಬಹಳಷ್ಟು ಮಂದಿಗೆ ಆಧುನಿಕ ಶಿಕ್ಷಣ ಪರಿಣಾಮ ಬೀರಿಲ್ಲದಿರುವುದು ಖೇದಕರ ಸಂಗತಿ. ಬೇಡರಲ್ಲಿ ಊರುನಾಯಕರು ಅತೀ ಮುಂದುವರೆದಿದ್ದು, ಉದ್ಯೋಗ ವ್ಯಾಪಾರದಲ್ಲಿದ್ದು, ನಗರಗಳಲ್ಲಿ ವಾಸಿಸುತ್ತಾರೆ. ಇವರು ಗರಿಷ್ಠ ಪ್ರಮಾಣದಲ್ಲಿ ಸರ್ಕಾರದ ಸೌಲಭ್ಯ ಪಡೆಯುತ್ತಿದ್ದಾರೆ. ಮ್ಯಾಸಬೇಡರು ಇನ್ನೂ ಹಟ್ಟಿಗಳಲ್ಲಿ ವಾಸಿಸುತ್ತಿದ್ದು, ಶಿಕ್ಷಣ, ಉದ್ಯೋಗ ಮತ್ತು ಸಾಮಾಜಿಕ ವಿಧಾನಗಳಲ್ಲಿ ಹಿಂದುಳಿದಿದ್ದು, ಇವರು ಬದಲಾಗಬೇಕಾಗಿದೆ.

ರಾಜಕೀಯ ಕ್ಷೇತ್ರದಲ್ಲೂ ಇವರು ಪ್ರತಿನಿಧಿಗಳಾಗಿದ್ದಾರೆ. ಹೀಗೆ ಸಾಮಾಜಿಕ, ಆರ್ಥಿಕ,

ಶೈಕ್ಷಣಿಕ ವಿವಿಧ ರಂಗಗಳಲ್ಲಿ ಬೇಡರು ಮುಂದುವರೆಯುತ್ತಿದ್ದಾರೆ. ಸುರಪುರ, ಕನಕಗಿರಿ, ಗುಡೇಕೋಟೆ, ಜರಿಮಲೆ, ಚಿತ್ರದುರ್ಗ, ನಾಯಕನಹಟ್ಟಿ, ದೊರೆಗಳಹಟ್ಟಿ ಮೊದಲಾದ ಬೇಡರ ಪಾಳೆಯಪಟ್ಟಿನ ಪಾಳೆಯಗಾರರಿಗೆ ಮನೆಗಳಿಲ್ಲದಿರುವುದನ್ನು ಗಮನಿಸಿದರೆ ಇಂದಿನ ಬೇಡರ ಪರಿಸ್ಥಿತಿ ಅರ್ಥವಾಗುತ್ತದೆ. ಆದರೂ ಅಂದಿನ ದರ್ಪ, ದಬ್ಬಾಳಿಕೆ ಅವರಿಂದ ದೂರ ಉಳಿದಿಲ್ಲ. ಧಾರ್ಮಿಕ ಕ್ಷೇತ್ರದಲ್ಲಿ ರಾಜನಹಳ್ಳಿ(ಹರಿಹರ) ಸ್ವಾಮಿಗಳು ಸಮುದಾಯಕ್ಕೆ ಮಾರ್ಗದರ್ಶನ ಮಾಡುತ್ತಿರುವುದು ಶ್ಲಾಘನೀಯ. ವಾಲ್ಮೀಕಿ ಜಯಂತಿ, ಇತರ ಕಾರ್ಯಕ್ರಮಗಳ ಮೂಲಕ ಬೇಡರನ್ನು ಅಧುನಿಕ ಮುಖ್ಯವಾಹಿನಿಗೆ ತರುವ ಪ್ರಯತ್ನವಾಗಿದೆ. ಇದು ಕೇವಲ ವಿದ್ಯಾವಂತ ಉದ್ಯೋಗಿಗಳ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ.

ಮ್ಯಾಸನಾಯಕ ಬುಡಕಟ್ಟು ಪರಿವರ್ತನೆಯ ಹಾದಿಯಲ್ಲಿದೆ ಎನಿಸಿದರೂ ಗ್ರಾಮೀಣ ಪ್ರದೇಶದ ಮ್ಯಾಸರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಉನ್ನತ ಶಿಕ್ಷಣವನ್ನು ಬೆರಳೆಣಿಕೆಯಷ್ಟು ಮ್ಯಾಸಬೇಡರು ಪಡೆಯುತ್ತಿದ್ದಾರೆ. ಉನ್ನತ ಪದವಿ ಪಡೆದ ಇವರು ನಿರುದ್ಯೋಗ ಹಾಗೂ ಬಡತನದ ಸಮಸ್ಯೆ ಇದೆ. 'ಮೀಸಲಾತಿ ಇದೆ. ನಿಮಗೆ ಸರ್ಕಾರಿ ಉದ್ಯೋಗ ಸಿಗುತ್ತದೆ' ಎಂದು ಇತರೆ ಸಮುದಾಯದವರು ಹೆಜ್ಜೆ ಹೆಜ್ಜೆಗೂ ಹೇಳುತ್ತಾರೆ. ಆದರೆ ಶೇ.೩ರಷ್ಟು ಮೀಸಲಾತಿಯಿಂದ ಇಂದು ಮ್ಯಾಸಬೇಡರಿಗೆ ಯಾವ ಸಹಾಯವೂ ಆಗುತ್ತಿಲ್ಲ ಎಂಬುದು ಕಟು ಸತ್ಯ. ಕೂಲಿಕಾರರು ಸಣ್ಣ ಗಾತ್ರದ ಮತ್ತು ಮಧ್ಯಮವರ್ಗದ ಕೃಷಿಕರಾಗಿರುವ ಇವರಿಗೆ ವೃತ್ತಿ ಶಿಕ್ಷಣವಂತೂ ಗಗನ ಕುಸುಮವಾಗಿದೆ. ಲಕ್ಷಾಂತರ ರೂಪಾಯಿಗಳನ್ನು ಸುರಿದು ಮಕ್ಕಳನ್ನು ಓದಿಸಲು ಅಸಹಾಯಕರಾಗಿದ್ದಾರೆ. ಸರ್ಕಾರ ಮೀಸಲಾತಿ ಶೇಕಡವನ್ನು ಏರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದರೆ ಜಿಲ್ಲೆಯ ಬುಡಕಟ್ಟುಗಳ ಜೀವನ ಸ್ವಲ್ಪಮಟ್ಟಿಗೆ ಸುಧಾರಣೆಯಾಗುವುದು ಮ್ಯಾಸನಾಯಕರ ಪಾಲಿಗೆ ದೊಡ್ಡ ಸವಾಲಾಗಿದೆ.

ಮೊದಲಿಗೆ ಬಹುತೇಕ ಕೃಷಿಕರು ಸಾಲಗಾರರ ಪ್ರತಿವರ್ಷದ ಹಳೆ ಸಾಲವನ್ನು ಹೊಸತು ಸಾಲವನ್ನಾಗಿ ಮಾಡುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುವ ಕುಟುಂಬಗಳು ಸಾಕಷ್ಟಿವೆ. ಕಷ್ಟಪಟ್ಟು ದುಡಿದು ಸಾಹಸದ ಜೀವನ ಮಾಡುವ ಇವರಿಗೆ ಸರಕಾರದ ಯೋಜನೆಗಳು, ಸವಲತ್ತುಗಳು ಸಮರ್ಪಕವಾಗಿ ಇನ್ನೂ ತಲುಪಿಲ್ಲ. ಅನಾರೋಗ್ಯದ ಸಮಸ್ಯೆ ತಾಂಡವಾಡುತ್ತಿದೆ.

ಸರಕಾರ ಬೇಡ ಬುಡಕಟ್ಟಿನವರು ಹಟ್ಟಿಗಳಲ್ಲಿರುವುದರಿಂದ ಸಮಸ್ಯೆಗಳನ್ನು ಅರಿತು ವಸತಿ, ನೀರಿನ ಯೋಜನೆ, ಶಾಲೆ, ಆಸ್ಪತ್ರೆಗಳನ್ನು ಸ್ಥಾಪಿಸಬೇಕಾಗಿದೆ. ಕಾಡಿನಲ್ಲಿನ ಬೇಡರಿಗೆ ಬೇಟೆರಹಿತ ಜೀವನ ಕಷ್ಟವಾದ್ದರಿಂದ ಅಂಥವರಿಗೆ ಅರಣ್ಯದಲ್ಲಿ ಕೃಷಿ ಯೋಗ್ಯಭೂಮಿ ನೀಡಿದರೆ ಅನುಕೂಲವಾಗುತ್ತದೆನ್ನಬಹುದು. ಮಹಿಳೆಯರು ಸ್ವರ್ಣ ಜಯಂತಿ ಶಹರಿ ರೋಜ್‌ಗಾರ್ ಯೋಜನೆಗಳಿಂದ ಮತ್ತು ಸ್ವಸಹಾಯ ಗುಂಪುಗಳಿಂದ ಪರಿವರ್ತಿತ ಜೀವನ ಕಂಡುಕೊಳ್ಳುತ್ತಿದ್ದಾರೆ. ಹೀಗೆ ನಾನಾ ಬದಲಾವಣೆಗಳು ಬೇಡರಲ್ಲಾಗುವುದು ಸಮಯೋಚಿತವಾಗಿದೆ.

ಬದಲಾವಣೆಯ ಬಿರುಗಾಳಿ ಬೀಸುತ್ತಿದ್ದರೂ ಇನ್ನೂ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವ ಮ್ಯಾಸನಾಯಕರ ಸರ್ವತೋಮುಖ ಅಧ್ಯಯನ ಆಗಬೇಕಾಗಿದೆ. ಮ್ಯಾಸ ಸಮುದಾಯದಲ್ಲಿ ಜನಪದ ಮಹಾಕಾವ್ಯಗಳಿದ್ದು, ಮೌಖಿಕ ಪರಂಪರೆ ಕುರಿತು ಅಧ್ಯಯನ ಮಾಡುವ ಸಾಧ್ಯತೆಯಿದೆ. ಇಲ್ಲಿರುವ ಹನ್ನೆರಡು ಪೆಟ್ಟಿಗೆ ದೇವರುಗಳ ಬಗ್ಗೆ ಚರ್ಚಿಸುವ ಅಗತ್ಯವಿದೆ. ಆಂಧ್ರ ಕನ್ನಡ ಗಡಿಭಾಗದ ಮ್ಯಾಸರ ಬಗ್ಗೆ ಅಧ್ಯಯನ ಮಾಡಬೇಕಾಗಿದೆ. ಹಟ್ಟಿಯೊಂದನ್ನು ಕೇಂದ್ರವಾಗಿಟ್ಟು ಅಧ್ಯಯನ ನಡೆಸಿರುವುದರಿಂದ ಅಖಂಡವಾಗಿ ಇಡಿಯಾಗಿ ಅಧ್ಯಯನ ಮಾಡುವ ಜರೂರು ಇದೆ. ನಮ್ಮ ಮಧ್ಯೆ ಇರುವ ಮ್ಯಾಸಬೇಡ ಬುಡಕಟ್ಟಿನ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಸಾಹಿತ್ಯಕ ಅಧ್ಯಯನಗಳು ಅದರ ಎಲ್ಲಾ ಸೂಕ್ಷ್ಮತೆಗಳೊಡನೆ ಆಗಬೇಕಾದ ಜರೂರು ಇದೆ. ಹೀಗಾಗಿ ಸರ್ಕಾರ ಇಂಥ ಅಧ್ಯಯನಕ್ಕೆ ಸೂಕ್ತ ಆರ್ಥಿಕ ನೆರವನ್ನು ಒದಗಿಸಬೇಕಾಗಿದೆ. ಮ್ಯಾಸನಾಯಕರು ಅವರ ಮೂಢನಂಬಿಕೆರಹಿತ, ಅರ್ಥಹೀನ, ಸಾಂಸ್ಕೃತಿಕ ವೈಲಕ್ಷಣಗಳನ್ನು ಉಳಿಸಿಕೊಳ್ಳಲು ಸರ್ಕಾರವೂ ಬೆಂಬಲಿಸಬೇಕಾಗಿರುವುದು ಇಂದಿನ ಅಗತ್ಯವಾಗಿದೆ. ಮ್ಯಾಸನಾಯಕರ ಹಟ್ಟಿಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸುವುದರ ಮೂಲಕ ದ್ವೀಪದಂತೆ ಬದುಕುತ್ತಿರುವ ಜನರನ್ನು ಮುಖ್ಯವಾಹಿನಿಗೆ ತರುವ ಬಗ್ಗೆ ಸರ್ಕಾರ ಗಂಭೀರ ಚಿಂತನೆ ನಡೆಸಿ ಕಾರ್ಯಪ್ರವೃತ್ತವಾಗಬೇಕಿದೆ. ಇದೀಗ ನಾಗರೀಕ ಸಂಪರ್ಕಕ್ಕೆ ಬರುತ್ತಿರುವ ಈ ಜನ ಬಹಳ ಹಿಂದುಳಿದಿದ್ದು, ಅವರನ್ನು ಈಗಿರುವ ಮೀಸಲಾತಿ ಶೇಕಡಾ ಮೂರರಿಂದ ಕೇಂದ್ರದಲ್ಲಿರುವಂತೆ ರಾಜ್ಯದಲ್ಲಿಯೂ ಶೇಕಡಾ ಏಳಕ್ಕೆ ಹೆಚ್ಚಿಸುವುದರೊಂದಿಗೆ ಸಾಮಾಜಿಕ ನ್ಯಾಯದ ಲಾಭಗಳೂ ದೊರೆಯುವಂತೆ ನೋಡಿಕೊಳ್ಳಬೇಕಾದುದು ಸರ್ಕಾರದ ಜವಾಬ್ದಾರಿಯೇ ಆಗಿದೆ.

# ಅನುಬಂಧಗಳು

೧. ಗ್ರಂಥಋಣ

೨. ಮಾಹಿತಿದಾರರ ವಿವರ

೩. ನಕ್ಷೆಗಳು

೪. ಛಾಯಾಚಿತ್ರಗಳು

# ಗ್ರಂಥಋಣ

೧. ಅಂಬಳಿಕೆ ಹಿರಿಯಣ್ಣ, ೧೯೯೪, **ಜಾನಪದ: ಕೆಲವು ಅಧ್ಯಯನಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨. ಅನ್ನಪೂರ್ಣಮ್ಮ ಸಿ.ಬಿ., ೨೦೦೭, **ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು: ಒಂದು ಅಧ್ಯಯನ,** ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಇಂದಿರಾ ಆರ್.(ಸಂ), **ಸಮಾಜಶಾಸ್ತ್ರ,** ಸುಭಾಷ್ ಪಬ್ಲಿಕೇಶನ್ಸ್, ಬೆಂಗಳೂರು.

೪. ಈಶ್ವರಪ್ಪ ಎಂ.ಜಿ, **೧೯೮೨, ಮ್ಯಾಸಬೇಡರು,** ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೫. ಕರಿಶೆಟ್ಟಿರುದ್ರಪ್ಪ, ೧೯೯೫, **ಮ್ಯಾಸನಾಯಕರು: ಒಂದು ಜನಾಂಗಿಕ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬. ಕರಿಬಸಪ್ಪ ಎ., ೨೦೦೯, **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಸಾಯಿಮಣಿ ಪ್ರಕಾಶನ, ಹೊಸಪೇಟೆ.

೭. ಕಲಬುರ್ಗಿ ಎಂ.ಎಂ., **೧೯೯೪, ಕರ್ನಾಟಕದ ಕೈಪಿಯತ್ತುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಕಾಳೇಗೌಡ ನಾಗವಾರ, **೧೯೮೬, ಜನಪದದ ಒಂದು ಹಟ್ಟಿ ಅಧ್ಯಯನ,** ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೯. ಕೃಷ್ಣಮೂರ್ತಿ ಎನ್., ೨೦೦೯, **ಒಡಿಗ ಬುಡಕಟ್ಟು ಸಮುದಾಯ,** ಪ್ರಿಯದರ್ಶಿನಿ ಪ್ರಕಾಶನ, ಹಂಪಿನಗರ, ವಿಜಯನಗರ, ಬೆಂಗಳೂರು.

೧೦. ಕೃಷ್ಣಮೂರ್ತಿ ಹನೂರು, ೧೯೯೩, **ಮ್ಯಾಸಬೇಡರ ಸಂಸ್ಕೃತಿ** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೧. ಕೃಷ್ಣಮೂರ್ತಿ ಹನೂರು, ೧೯೯೮, **ಜನಪದ ಮತ್ತು ಬುಡಕಟ್ಟು ಗೀತೆಗಳು,** ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೨. ಕೃಷ್ಣಮೂರ್ತಿ ಹನೂರು, ೨೦೦೫, **ಸಾವಿರದ ಸಿರಿ ಬೆಳಗು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ಕೇಶವನ್ ಪ್ರಸಾದ್ ಕೆ.ಮರಟ್ಟಿ, ೧೯೯೩, **ಕೊಳ್ಳೇಗಾಲ ಸುತ್ತಿನ ಕಪ್ಪೆ ಹೊಲೆಯರ ಊಟೋಪಚಾರಗಳು,** ಪಿಎಚ್.ಡಿ.ಮಹಾಪ್ರಬಂಧ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

೧೪. ಕೋಟಗನಾಹಳ್ಳಿ ರಾಮಯ್ಯ, ೧೯೯೩, **ಸಿಂದ್ ಮಾದಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ಖಂಡೋಬ ಪಿ.ಕೆ., ೧೯೯೧, **ಕರ್ನಾಟಕ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ,** ದಿ.ತೇಜಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ.

೧೬. ಗಿರಿಜ ಟಿ., ೧೯೯೧, **ಚಿತ್ರದುರ್ಗ ಜಿಲ್ಲಾ ದರ್ಶಿನಿ,** ರೇಖಾ ಪ್ರಕಾಶನ, ದಾವಣಗೆರೆ.

೧೭. ಗುರುರಾಜ್ ಬಾಪಟ್, ೨೦೦೬, **ಜನಸಂಸ್ಕೃತಿ ಶೋಧ,** ರವೀಂದ್ರ ಪುಸ್ತಕಾಲಯ, ಶಿವಮೊಗ್ಗ.

೧೮. ಗುರುಲಿಂಗಯ್ಯ ಎಂ., ನಾಗಪ್ಪ ವಿ., ೨೦೦೮, **ಕಾಡುಗೊಲ್ಲ, ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೯. ಗೋವಿಂದರಾಜು ಟಿ., **ಹಳ್ಳಿಮನೆ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೦. ಚಂದ್ರಪ್ಪ ಎನ್. ೧೯೯೩, **ಮೊಂಡರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೧. ಚಂದ್ರಶೇಖರ ಕಂಬಾರ, ೧೯೮೫, **ಕನ್ನಡ ಜನಪದ ವಿಶ್ವಕೋಶ,** ಸಂ.೧-೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೨. ಚಂದ್ರಶೇಖರಯ್ಯ ಬಿ.ಎಂ., **ಕೂಡ್ಲಿಗಿ ತಾಲ್ಲೂಕು ದರ್ಶನ,** ಐ.ಬಿ.ಎಚ್.ಪ್ರಕಾಶನ, ಬೆಂಗಳೂರು, ೧೯೮೭.

೨೩. ಚಂದ್ರಶೇಖರ್ ವಿ.ದಾವಣಗೆರೆ, ೨೦೦೧, **ಕಾಯಕಯೋಗಿ ಶ್ರೀ ಗುರು ತಿಪ್ಪೇರುದ್ರಸ್ವಾಮಿ,** ಶ್ರೀಗುರು ತಿಪ್ಪೇರುದ್ರ ದೇವಸ್ಥಾನ ಸಮಿತಿ, ನಾಯಕನಹಟ್ಟಿ.

೨೪. ಚಂದ್ರು ಕಾಳೇನಹಳ್ಳಿ, ೧೯೯೩, **ಸೋಲಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೫. ಚನ್ನಬಸಪ್ಪ ಗೊ.ರು., ೧೯೭೯, **ಗ್ರಾಮಜ್ಯೋತಿ, ಕೆ.ಆರ್.ಲಿಂಗಪ್ಪ ಅವರ ಅಭಿನಂದನ ಗ್ರಂಥ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೬. ಚಲುವರಾಜು, ೧೯೯೩, **ದಕ್ಕಲರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨೭. ಚನ್ನಣ್ಣ ವಾಲೀಕಾರ, ೧೯೯೮, **ಹೈದರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ,** ವಾಲೀಕಾರ ವಿರಸಂ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ.

೨೮. ಚಿದಾನಂದಮೂರ್ತಿ ಎಂ., ೧೯೮೪, **ವೀರಗಲ್ಲು ಮತ್ತು ಮಾಸ್ತಿಕಲ್ಲುಗಳು,** ಬೆಂಗಳೂರು.

೨೯. ಚಿದಾನಂದಮೂರ್ತಿ ಎಂ., ೧೯೯೧, **ಕರ್ನಾಟಕ ಸಂಸ್ಕೃತಿ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩೦. ಚೆನ್ನಸ್ವಾಮಿ ಸೋಸಲೆ ಎನ್., ೨೦೦೦, **ನಮ್ಮ ಗ್ರಾಮಗಳು: ಅಂದು–ಇಂದು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಚೆನ್ನಸ್ವಾಮಿ ಸೋಸಲೆ ಎನ್., ೨೦೦೦, **ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ,** ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು.

೩೨. ಜವರೇಗೌಡ ದೇ., ೧೯೯೦, **ಸ್ಥಳನಾಮ ವ್ಯಾಸಂಗ,** ಸಹ್ಯಾದ್ರಿ ಪ್ರಕಾಶನ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಕವಿಶೈಲ, ಜಯಲಕ್ಷ್ಮೀಪುರಂ, ಮೈಸೂರು.

೩೩. ಜಾಜಿ ದೇವೇಂದ್ರಪ್ಪ, ೨೦೦೪, **ಆಂಧ್ರ–ಕರ್ನಾಟಕ ಗಡಿಪ್ರದೇಶದ ಸ್ಥಳನಾಮಗಳು,** ವಿಕಾಸ ಪ್ರಕಾಶನ, ಹೊಸಪೇಟೆ.

೩೪. ಜೋಗನ್ ಶಂಕರ್, ೧೯೯೫, **ಗ್ರಾಮ ಸಮಾಜ,** ಜೀವ ಪ್ರಕಾಶನ, ಮೈಸೂರು.

೩೫. ಢಂಗ ಡಿ.ಬಿ., ೧೯೮೮, **ಜನಾಂಗ ಪರಿಚಯ,** ಸಪ್ತಾಪುರ, ಪೆರಿಯಾರ್ ಪ್ರಕಾಶನ, ಧಾರವಾಡ.

೩೬. ತಿಪ್ಪೇಸ್ವಾಮಿ ಮರಿಕುಂಟೆ, ೨೦೧೨, **ಮೊಳಕಾಲ್ಮೂರು ದರ್ಶನ,** ಪ್ರಣತಿ ಪ್ರಕಾಶನ, ಮೊಳಕಾಲ್ಮೂರು, ಚಿತ್ರದುರ್ಗ ಜಿಲ್ಲೆ.

೩೭. ದಾದಾಪೀರ್ ಬಿ.ಸಿ., ೧೯೯೩, **ಪಿಂಜಾರರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೮. ದಾಸೇಗೌಡ ಜಿ.ವಿ., ೧೯೬೩, **ನಮ್ಮ ಜನಪದ ನಂಬಿಕೆಗಳು,** ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು.

೩೯. ದುರುಗಪ್ಪ ಎಂ.ಕೆ., ೨೦೧೦, **ವಿಜಯನಗರೋತ್ತರಕಾಲೀನ ಬೇಡ ಜನಾಂಗ: ಚಾರಿತ್ರಿಕ ಅಧ್ಯಯನ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೪೦. ದೇವೇಂದ್ರಕುಮಾರ ಸಿ.ಹಕಾರಿ, ೧೯೯೩, **ದೊಂಬರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೧. ದೇವರಕೊಂಡಾರೆಡ್ಡಿ(ಸಂ), **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮.

೪೨. ದೇವೇಂದ್ರ ಮಾಧವನವರ, ೧೯೯೨, **ಕನಕದಾಸರು ಬೇಡ ಜನಾಂಗದವರು,** ಚಾಲುಕ್ಯ ಪ್ರಕಾಶನ, ಜಾರಿಹಾಳ, ಬಾದಾಮಿ.

೪೩. ನಂಜಮ್ಮಣ್ಣಿ ಎಂ., **ಸಾಮಾಜಿಕ ಮಾನವಶಾಸ್ತ್ರ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೪. ನಾಗರಾಜು ಎಂ.ಎಚ್., ೨೦೦೩, **ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ,** ಅನಿಕೇತನ ಪ್ರಕಾಶನ, ತುಮಕೂರು.

೪೫. ನಾಗಯ್ಯ ಜಿ.ಎಂ., ೨೦೦೨, **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,** ಲೋಹಿಯಾ ಪ್ರಕಾಶನ, ಬಳ್ಳಾರಿ.

೪೬. ನಾಯಕ್ ಡಿ.ಬಿ., ೧೯೯೩, **ಲಂಬಾಣಿ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,

೪೭. ನಾಯಕ ಎನ್.ಆರ್., ೧೯೮೯, **ಉತ್ತರ ಕನ್ನಡ ಜಿಲ್ಲೆಯ ಬುಡಕಟ್ಟು ಜನಾಂಗಗಳ ಜಾನಪದ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪೮. ನಾಯಕ ಎನ್.ಆರ್., ೧೯೯೩, **ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೯. ನಾಯಕ ಹಾ.ಮಾ., ೧೯೩೮, **ಜಾನಪದ ಸ್ವರೂಪ,** ತ.ವೆಂ.ಸ್ಮಾರಕ ಗ್ರಂಥಮಾಲೆ, ಮೈಸೂರು.

೫೦. ನಾಯಕ ಹಾ.ಮಾ., ೧೯೭೭, **ಕನ್ನಡ ರತ್ನಕೋಶ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫೧. ನಿಂಗಣ್ಣ ಸಣ್ಣಕ್ಕಿ, ೧೯೯೩, **ಗೊಂದಲಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೨. ನಿಂಗಪ್ಪ ಮುದೇನೂರು, ೨೦೦೪, **ಕನ್ನಡ ಜನಪದ ಮಹಾಕಾವ್ಯಗಳ ಸಾಂಸ್ಕೃತಿಕ ವೀರರು,** ಸಿ.ವಿ.ಜಿ.ಪಬ್ಲಿಕೇಶನ್, ಬೆಂಗಳೂರು.

೫೩. ನೇಗಿನಹಾಳ ಎಂ.ಬಿ., ೧೯೯೯, **ನೇಗಿನಹಾಳ ಪ್ರಬಂಧಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,

೫೪. ಪಂಡಿತ ಟಿ.ಎಂ., ೧೯೯೪, **ನಮ್ಮ ಅರಣ್ಯಗಳು,** ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೫೫. ಪರಮಶಿವಯ್ಯ ಜೀ.ಶಂ., ೧೯೮೮, **ದೊಂಬಿದಾಸರು,** ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೫೬. ಪ್ರಭಾಕರ್ ಎ.ಎಸ್., ೧೯೯೯, **ಮ್ಯಾಸಬೇಡರ ಕಥನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೭. ಪುರುಷೋತ್ತಮ ಬಿಳಿಮಲೆ, **ಸುಳ್ಯ ಪರಿಸರದ ಗೌಡ ಜನಾಂಗ: ಒಂದು ಸಾಂಸ್ಕೃತಿಕ ಅಧ್ಯಯನ,** ಪಿಎಚ್.ಡಿ. ಮಹಾಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೫೮. ಪ್ರಹ್ಲಾದ ಬೆಟಗೇರಿ, ೧೯೯೩, **ಅಡವಿ ಚಂಚರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೫೯. ಬಾಲಗೋಪಾಲ್ ಕೆ.(ಅನು), ಎಚ್.ಎಸ್.ಶ್ರೀಮತಿ, **ಪ್ರಾಚೀನ ಭಾರತ ಚರಿತ್ರೆ,** ಡಿ.ಡಿ.ಕೊಸಾಂಬಿ ಚಿಂತನೆಗಳು, ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಬೆಂಗಳೂರು.

೬೦. ಭಟ್ ಜಿ.ಎಸ್., ೧೯೯೩, **ಹಸಲರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೧. ಭಟ್ ಎಲ್.ಜಿ., ೧೯೮೦, **ಹಾಲಕ್ಕಿ ಒಕ್ಕಲಿಗರು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೬೨. ಬೆನಕನಹಳ್ಳಿ ಜಿ.ನಾಯಕ, ೧೯೮೯, **ಕರ್ನಾಟಕದ ಕಲೆಗಳು(ಸಂ.೨)** ಎಸ್.ಕೆ.ರಾಮಚಂದ್ರರಾವ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೬೩. ಬೋರಲಿಂಗಯ್ಯ ಹಿ.ಚಿ., ೧೯೯೩, ಸಿದ್ದಿಯರ **ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೪. ಬೋರಲಿಂಗಯ್ಯ ಹಿ.ಚಿ., **ಕರ್ನಾಟಕದ ಜನಪದ ಕಲೆಗಳ ಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೫. ಬೋರಲಿಂಗಯ್ಯ ಹಿ.ಚಿ., ೧೯೯೯, **ಗೊಂಡರ ರಾಮಾಯಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೬. ಬೋರಲಿಂಗಯ್ಯ ಹಿ.ಚಿ., ೧೯೯೫, **ಕಾಡು ಕಾಂಕ್ರೀಟ್ ಮತ್ತು ಜಾನಪದ,** ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ.

೬೭. ಬೋರಲಿಂಗಯ್ಯ ಹಿ.ಚಿ., ೧೯೯೧, **ಗಿರಿಜನ ನಾಡಿಗೆ ಪಯಣ,** ರಾಗಿರೊಟ್ಟಿ ಪ್ರಕಾಶನ, ಬೆಂಗಳೂರು.

೬೮. ಬೋರಲಿಂಗಯ್ಯ ಹಿ.ಚಿ., ೧೯೮೯, **ಕರ್ನಾಟಕ ಗ್ರಾಮದೇವತೆಗಳು,** ಕರ್ನಾಟಕದ ಜಾನಪದ ಎಸ್.ಕೆ.ಕರೀಂಖಾನ್(ಸಂ), ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೯. ಮಂಗಳ ಚಿ.ನಾ., ೧೯೯೪, **ಮಾತೃಪೂಜೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೦. ಮರುಳಸಿದ್ಧಯ್ಯ ಹೆಚ್.ಎಂ., ೧೯೭೦, **ಮಾನವ ಸಮಾಜ ಮತ್ತು ಸಮಾಜಶಾಸ್ತ್ರ,** ಭಾರತ ಬುಕ್ ಡಿಪೋ ಮತ್ತು ಪ್ರಕಾಶನ, ಧಾರವಾಡ.

೭೧. ಮುತ್ತಯ್ಯ ಎಸ್.ಎಂ., ೨೦೦೮, **ಕಿಲಾರಿ**(ಮ್ಯಾಸಬೇಡರ ಎತ್ತಿನ ಕಿಲಾರಿ ಬೋರಯ್ಯನ ಆತ್ಮಕಥೆ), ಸೃಷ್ಟಿ ಪಬ್ಲಿಕೇಶನ್ಸ್, ಬೆಂಗಳೂರು.

೭೨. ಮುದ್ದೇಬಿಹಾಳ ಆರ್.ಸಿ., ೧೯೯೪, **ಬೇಡನಾಯಕರ ಪಾಡು,** ರಂಗನಗೌಡ, ಅಂಜಳ.

೭೩. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೫, **ಕಾಡುಗೊಲ್ಲ ಬುಡಕಟ್ಟು ವೀರರು,** ಸಿ.ವಿ.ಜಿ.ಪಬ್ಲಿಕೇಶನ್ಸ್, ಬೆಂಗಳೂರು.

೭೪. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೩, **ಮ್ಯಾಸಮಂಡಲ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭೫. ಮೀರಾಸಾಬಿಹಳ್ಳಿ ಶಿವಣ್ಣ, ೨೦೦೪, **ಕಾಡುಗೊಲ್ಲರ ಸಂಸ್ಕೃತಿ,** ಸಿ.ವಿ.ಜಿ.ಪಬ್ಲಿಕೇಶನ್ಸ್, ಬೆಂಗಳೂರು.

೭೬. ಮೊಗಳ್ಳಿ ಗಣೇಶ್, ೨೦೦೬, **ಮೌಖಿಕ ಕಥನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭೭. ಮೊಗಳ್ಳಿ ಗಣೇಶ್, ೨೦೦೫, **ಆದಿಮ,** ಸಾರಾಂಗ ಪ್ರಕಾಶನ, ತಿಪಟೂರು.

೭೮. ಮೈತ್ರಿ ಕೆ.ಎಂ.(ಸಂ), ೧೯೯೭, **ಕುಮಾರರಾಮ ಮತ್ತು ಕೃಷ್ಣಗೊಲ್ಲರ ಮಹಾಕಾವ್ಯ(ಬುಡಕಟ್ಟು ಮಹಾಕಾವ್ಯಮಾಲೆ)** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೯. ಮೈತ್ರಿ ಕೆ.ಎಂ., **ಬುಡಕಟ್ಟಿನ ಕುಲಕಸುಬುಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೦. ಮೈಲಹಳ್ಳಿ ರೇವಣ್ಣ, ೧೯೮೪, **ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು,** ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೮೧. ಮಂಜುನಾಥ ಬೇವಿನಕಟ್ಟಿ, **ಆದಿವಾಸಿ,** ಸಾಹಿತ್ಯನಂದನ, ನಂ.೯, ೪ನೇ ಬ್ಲಾಕ್, ಬೆಂಗಳೂರು.

೮೨. ಮಂಜುನಾಥ ಬೇವಿನಕಟ್ಟಿ, ೨೦೦೪, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೩. ಮಂಜುನಾಥ ಬೇವಿನಕಟ್ಟಿ(ಸಂ), ೨೦೦೭, **ವ್ಯಾಧ ಚರಿತೆ: ಬೇಡ ಕುಲಮೂಲದ ಕಥನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೪. ರಂಗಪ್ಪ ಎಂ. ೧೯೭೧, **ನುಂಕೆಮಲೆ ಪರಮಾರ್ಥ,** ಮೊಳಕಾಲ್ಮೂರು.

೮೫. ರಮೇಶ್ ಸ.ಚಿ., ೧೯೯೪, **ಹೊಸಪೇಟೆ ತಾಲ್ಲೂಕು ಉಪ್ಪಾರರ ಮದುವೆ ಸಂಪ್ರದಾಯಗಳು,** ಅಪ್ರಕಟಿತ ಎಂ.ಫಿಲ್. ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮೬. ರವೀಂದ್ರ ಕೊಪ್ಪದ್, ೧೯೮೬, **ಭಾರತೀಯ ಸಮಾಜದ ಅಧ್ಯಯನ,** ಸುರೇಶ ಪಬ್ಲಿಕೇಶನ್ಸ್, ಗದಗ.

೮೭. ರಾಜರಾಮ ಹೆಗಡೆ(ಸಂ), ೨೦೦೪, **ಭಾರತೀಯ ಇತಿಹಾಸ: ಸಮಾಜ ಮತ್ತು ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು,

೮೮. ರಾಜಣ್ಣ ಆರ್., ೧೯೮೨, **ನಾಯಕ ಜನಾಂಗದ ಇತಿಹಾಸ,** ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ.

೮೯. ರಾಜಪ್ಪ ದಳವಾಯಿ, ೧೯೯೩, **ಹಕ್ಕಿಪಿಕ್ಕಿಯರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯೦. ರಾಮಚಂದ್ರೇಗೌಡ ಹಿ.ಶಿ.(ಸಂ), ೨೦೦೪, **ಜಾನಪದ ಗ್ರಹಿಕೆ ಮತ್ತು ಪರಿಕಲ್ಪನೆ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೯೧. ರೋಮಿಲ ಥಾಪರ್(ಸಂ), ೧೯೮೫, **ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ,** ನವಕರ್ನಾಟಕ ಪ್ರಕಾಶನ, ಬೆಂಗಳೂರು.

೯೨. ಲಕ್ಕಪ್ಪಗೌಡ ಎಚ್.ಜೆ.(ಪ್ರ.ಸಂ), ೧೯೯೮, **ಕರ್ನಾಟಕ ಬುಡಕಟ್ಟುಗಳು,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೯೩. ಲಕ್ಕಪ್ಪಗೌಡ ಎಚ್.ಜೆ.(ಪ್ರ.ಸಂ.), ೧೯೯೭, **ಜಾನಪದ ಕೈಪಿಡಿ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯೪. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ(ಸಂ), ೧೯೭೬, **ಶ್ರೀನಿವಾಸ ಜೋಯಿಸರ ಲೇಖನಗಳು,** ಹುಲ್ಲೂರು ಶ್ರೀನಿವಾಸ ಜೋಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

೯೫. ಲಕ್ಷ್ಮಣ್ ತೆಲಗಾವಿ(ಸಂ), ೧೯೮೭, **ಹರತಿಸಿರಿ: ಹೆಚ್.ವಿ.ವೀರನಾಯಕರ ನೆನಪಿನ ಸಂಪುಟ,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೯೬. ಲಕ್ಷ್ಮಣ್ ತೆಲಗಾವಿ, ೨೦೧೦, **ಎಪ್ಪತ್ತೇಳು ಪಾಳೆಯಗಾರರು,** ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೯೭. ಲಲಿತ ಎ.ಸಿ., ೧೯೯೩, **ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೯೮. ವಿವೇಕ ರೈ ಬಿ.ಎ., ೧೯೮೧, **ಕರ್ನಾಟಕದ ಜಾನಪದ ನಂಬಿಕೆಗಳು,** ಕರ್ನಾಟಕ ಜನಪದ, ಪ್ರಸಾರಾಂಗ, ವಿಶ್ವವಿದ್ಯಾಲಯ, ಬೆಂಗಳೂರು.

೯೯. ಆಲೂರು ವೆಂಕಟರಾಯ, ೧೯೫೬, **ಕರ್ನಾಟಕದ ಗತವೈಭವ,** ಸಮಾಜ ಪುಸ್ತಕಾಲಯ, ಧಾರವಾಡ.

೧೦೦. ವೆಂಕಟಸುಬ್ಬಯ್ಯ ಜಿ.,(ಸಂ), ೧೯೮೫, **ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು,** ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೦೧. ಲಕ್ಷ್ಮೀಪತಿ ಕೋಲಾರ, ೧೯೯೩, **ಮಾಸ್ತಿಕರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೦೨. ವಿರೂಪಾಕ್ಷಿ ಪೂಜಾರಹಳ್ಳಿ, ೧೯೯೭, **ಗಾದರಿಪಾಲನಾಯಕ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೩. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೨, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೪. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಬೇಟೆ ಮತ್ತು ಬೇಡರು,** ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಳ್ಳಿ, ಪೂಜಾರಹಳ್ಳಿ.

೧೦೫. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಚಿನ್ನಹಗರಿ ಸಿರಿ,** ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ.

೧೦೬. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಕಾಮಗೇತಿ ವಂಶಜರ ಚರಿತ್ರೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೭. ವಿರೂಪಾಕ್ಷಿ ಪೂಜಾರಹಳ್ಳಿ, ೨೦೦೬, **ಕರ್ನಾಟಕದಲ್ಲಿ ತಳವಾರಿಕೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦೮. ವಿರೂಪಾಕ್ಷಿ ಪೂಜಾರಹಳ್ಳಿ(ಸಂ), ೨೦೦೬, **ವಾಲ್ಮೀಕಿ ಸಿರಿ,** ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ.

೧೦೯. ವಿರೂಪಾಕ್ಷಿ ಪೂಜಾರಹಳ್ಳಿ,(ಸಂ) ೨೦೦೮, **ಬೇಡ ಬುಡಕಟ್ಟಿನ ಚರಿತ್ರೆ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೦. ವೀಣಾ ಎಂ.ಪಿ., ೨೦೦೦, **ಮನೆ, ಸಮಾಜ ಮತ್ತು ಸಂಸ್ಕೃತಿ,** ನೆಲಮನೆ ಪ್ರಕಾಶನ, ಶ್ರೀರಂಗಪಟ್ಟಣ, ಮಂಡ್ಯ ಜಿಲ್ಲೆ.

೧೧೧. ಶರ್ಮ ಆರ್.ಎಸ್., ೧೯೯೭, **ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ,** ಬೆಂಗಳೂರು.

೧೧೨. ಶಂಕರನಾರಾಯಣ ತೀ.ನಂ., ೧೯೭೮, **ಜಾನಪದ ವಿಚಾರ,** ಹಂಸಧ್ವನಿ ಪ್ರಕಾಶನ, ಬೆಂಗಳೂರು.

೧೧೩. ಶಂಕರನಾರಾಯಣ ತೀ.ನಂ., ೧೯೮೨, **ಕಾಡುಗೊಲ್ಲರ ನಂಬಿಕೆ ಮತ್ತು ಸಂಪ್ರದಾಯಗಳು,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧೪. ಶಂಬಾ ಜೋಶಿ, ೧೯೪೭, **ಎಡೆಗಳು ಹೇಳುವ ಕಂನಾಡ ಕತೆ,** ಮಾಧವ ಬಲ್ಲಾಳ ಬಂಧುಗಳು, ಧಾರವಾಡ.

೧೧೫. ಶೀಗೆಹಳ್ಳಿ, ೧೯೯೨, **ಬೇಡರವೇಷ,** ನವಚೇತನ ಪ್ರಕಾಶನ, ಶಿರಸಿ, ಉತ್ತರ ಕನ್ನಡ.

೧೧೬. ಶ್ರೀನಿವಾಸ ಎಂ.ವಿ. ಮತ್ತು ಲಕ್ಷ್ಮಣ್ ತೆಲಗಾವಿ(ಸಂ), ೧೯೭೬, **ಚಂದ್ರವಳ್ಳಿ,** ಜಿ.ಇ.ಸಂ. ಮಂಡಳಿ, ಚಿತ್ರದುರ್ಗ.

೧೧೭. ಶ್ರೀನಿವಾಸ ಪಾಡಿಗಾರ, ೧೯೮೭, **ಪುರಾತತ್ವ ಪರಿಚಯ,** ಗಾಯಿತ್ರಿ ಪ್ರಕಾಶನ, ಧಾರವಾಡ.

೧೧೮. ಶ್ರೀನಿವಾಸ ರಿತ್ತಿ(ಸಂ), ೧೯೮೫, **ಕರ್ನಾಟಕ ಗ್ರಾಮಸೂಚಿ,** ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೧೯. ಶೇಷಶಾಸ್ತ್ರಿ ಆರ್., **ಕರ್ನಾಟಕ ವೀರಗಲ್ಲುಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨೦. ಸದಾಶಿವಪ್ಪ ಕುಂಬಾರ, ೧೯೯೬, **ಹರಪನಹಳ್ಳಿ ಪಾಳೆಯಗಾರರು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨೧. ಸಂಧ್ಯಾರೆಡ್ಡಿ ಕೆ.ಆರ್., ೧೯೮೨, **ಕನ್ನಡ ಜನಪದ ಕತೆಗಳು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨೨. ಸಿದ್ದಲಿಂಗಯ್ಯ ಕಂಬಾರ ಬಿ., ೧೯೯೩, **ಇಲ್ಲಿಗರ ಸಂಸ್ಕೃತಿ,** ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೨೩. ಸಿದ್ಧಲಿಂಗಯ್ಯ, **ಗ್ರಾಮದೇವತೆಗಳು,** ಮೂಲಭಾರತಿ ಪ್ರಕಾಶನ, ಬೆಂಗಳೂರು, ೧೯೯೭.

೧೨೪. ಹರಿಲಾಲ್ ಕೆ.ಪವಾರ್, ೧೯೯೩, **ಕರ್ನಾಟಕದ ಹೆಳವರು: ಒಂದು ಜಾನಪದೀಯ ಅಧ್ಯಯನ,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೨೫. ಹರ್ತಿಕೋಟೆ ವೀರೇಂದ್ರಸಿಂಹ, ಡಾ.ಅಮರೇಶ ಯತಗಲ್(ಸಂ), ೨೦೦೮, ವಾಲ್ಮೀಕಿ ಮಂದಾರ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೧೨೬. ಹುಲ್ಲೂರು ಶ್ರೀನಿವಾಸ ಜೋಯಿಸರು(ಸಂ), ೧೯೯೮, **ಚಿತ್ರದುರ್ಗದ ಬಖೈರು,** ತಳುಕಿನ ವೆಂಕಣಯ್ಯ ಸ್ಮಾರಕ ಗ್ರಂಥಮಾಲೆ, ಚಿತ್ರದುರ್ಗ.

೧೨೭. ಸಣ್ಣೋಬಯ್ಯ ಎಸ್.ಕೆ., ೨೦೦೨, **ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು: ಒಂದು ಸಮಾಜಶಾಸ್ತ್ರೀಯ ಅಧ್ಯಯನ,** ಅಪ್ರಕಟಿತ ಸಂಶೋಧನಾ ಮಹಾಪ್ರಬಂಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಇಂಗ್ಲಿಶ್ ಗ್ರಂಥಗಳು**

1. Ananthkrishna Iyer L.K., Nanjundappa, H.V., 1926, **The Mysore Tribes and Castes,** Vol-1 to IV, Mysore Govt Press, Bangalore
2. Bandana Bhuyan, 1999, **Child Development in Tribal Areas,** Anmol publications, Pvt. Ltd, New Delhi
3. Bhat S.C., 1947, **The Encyclopadic District Gazetteers of India Southern Zone**(Vol.2), Gyan Publishing House, New Delhi
4. Bose, Nirmal Kumar, 1971, **Tribal life in India,** National Book Trust, New Delhi
5. Chakroborth M.Mulkerji D., 1971 **Indian Tribes,** Saraswat Library, Calcutta
6. Desai P.B., 1970, **History of Karnataka from Pre History to unification,** Dharwad
7. Desai A.R., 1961, **Rural Sociology in India, The Indian Soceity of Argricultural Economics,** Bombay
8. Dumont Lovies, 1986, **A South Indian Sub-castes,** Oxford University Press
9. Ghurye G.S., 1990, **Caste and Race in India,** Popular Prakashana, Bombay
10. Ghurye, 1959, **The Scheduled Tribes,** Popular Prakashan, Bombay

11. Havanur L.G., 1975, **Karnataka Backward Class Commission Report,** Government Press

12. Hayavadana Rao, 1988, **Indian Castes System,** A Study Asian Educational Services, New Delhi

13. Russell R.V., 1961, **The Tribes and Cates of the Central Provinces of India**(Vol-11) Rai Bahadur, Heralol

14. Singh K.S., 1994, **The Scheduled Tribes(Vol-III and XXVI) Anthropological Survey of India,** Oxford university Press, Delhi

15. Srinivas M.N., 1976, **The Rememberd Village, Berkeley,** The University of California Press

16. Syed Sirajul Hassan, 1989, **The Castes and Tribes of H.E.H.The Nizams Dominials**(Vol.I) Asian Educational Services, New Delhi

17. Edegar Thurston, 1909, **Castes and Tribes of Southern India**(Vol-I to VII), Government Press, Madras

18. Edegar Thurston, 1906, **Enthrographic Notes in Southern India,** Govt. Press, Madras

19. Varrior, 1955, **The Religion of an Indian Tribe**, Oxford University Press, Bombay

20. Gunthur Sonthemier, 1993, **Western Dities in Postral India,** Oxford University, New Delhi

21. Shettar S.S.(Ed), 1982, **Memorial Stones, Institute of Indian History,** Karnataka University, Dharwad

22. Srinivas M.N., 1906, **India's villages,** popular Prakashana, Bombay

23. Satyan B.N.(Ed), 1967, **Chitradurga District Gazetteer,** Mysore State Gazetteer, Government Press, Bangalore

24. Tim Ingold, Hunters, 1988, **Postoralists and ranchers,** Cambridge University Press, Cambridge

**ನಿಘಂಟುಗಳು**

ಕನ್ನಡ-ಕನ್ನಡ-ಇಂಗ್ಲಿಶ್ ನಿಘಂಟು

ಕನ್ನಡ ರತ್ನಕೋಶ, ೧೯೭೭, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು

ಜ್ಞಾನಗಂಗೋತ್ರಿ, ಕನ್ನಡ ವಿಶ್ವಕೋಶ(ಸಂ. ೧ ಮತ್ತು ೨) ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

ಸಂಕ್ಷಿಪ್ತ ಕನ್ನಡ ನಿಘಂಟು

ತೆಲುಗು ಪದಕೋಶ

**ದಿನ ಪತ್ರಿಕೆಗಳು**

ಕನ್ನಡಪ್ರಭ

ಸಂಯುಕ್ತ ಕರ್ನಾಟಕ

ಪ್ರಜಾವಾಣಿ

**ಮಾಸ ಪತ್ರಿಕೆ/ನಿಯತಕಾಲಿಕೆಗಳು**

ಜನಪದ

ಜಾನಪದ ಜಗತ್ತು

ಪ್ರಬುದ್ಧ ಕರ್ನಾಟಕ

ವಾಲ್ಮೀಕಿ ಬಂಧು

ವಾಲ್ಮೀಕಿ ವಾಣಿ

ವಾಲ್ಮೀಕಿ ಕರ್ನಾಟಕ

ಸಂಶೋಧನ ತರಂಗ

ಚರಿತ್ರೆ ಅಧ್ಯಯನ

## ೨. ಮಾಹಿತಿದಾರರ ವಿವರ

| ಕ್ರ.ಸಂ. | ಹೆಸರು | ಲಿಂಗ | ಜಾತಿ | ವಯಸ್ಸು | ಉದ್ಯೋಗ | ಊರು | ಶಿಕ್ಷಣ | ಭೂಮಿ | ಮನೆ | ಜಿಲ್ಲೆ |
|---|---|---|---|---|---|---|---|---|---|---|
| ೧ | ಪಾಪಣ್ಣ | ಗಂಡು | ನಾಯಕ | ೨೪ | ಕೂಲಿ | ಬೆಳವಿನಮರದಹಟ್ಟಿ | ಇಲ್ಲ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೨ | ಕರಿಬಸಪ್ಪ | ಗ | ನಾಯಕ | ೨೪ | ಕೂಲಿ | ಕರ್ನಾರಹಟ್ಟಿ | ಇಲ್ಲ | ಇಲ್ಲ | ಗುಡಿಸಲು | ಬಳ್ಳಾರಿ |
| ೩ | ಪಾಲಮ್ಮ | ಹೆಣ್ಣು | ನಾಯಕ | ೬೨ | ಮನೆಗೆಲಸ | ದೇವರಹಟ್ಟಿ | ಇಲ್ಲ | ೧ ಎಕರೆ | ಸೀಟು | ಚಿತ್ರದುರ್ಗ |
| ೪ | ಸಣ್ಣೋಬಮ್ಮ | ಹೆ | ನಾಯಕ | ೬೭ | ಮನೆಗೆಲಸ | ಬೊಚ್ಚುಬೋಯ್ಯನಹಟ್ಟಿ | ಇಲ್ಲ | ೩ ಎಕರೆ | ಮಾಳಿಗೆ | ಚಿತ್ರದುರ್ಗ |
| ೫ | ಗಾದ್ರಿರಯ್ಯ | ಗ | ನಾಯಕ | ೩೪ | ಕೃಷಿ | ಯರ್ರೋಬಯ್ಯನಹಟ್ಟಿ | ೧೦ನೇ ತರಗತಿ | ೨ ಎಕರೆ | ಮಾಳಿಗೆ | ಬಳ್ಳಾರಿ |
| ೬ | ದೇವರಕುರಿಓಬಯ್ಯ | ಗ | ನಾಯಕ | ೩೪ | ಸಂಶೋಧಕ | ದೇವರಹಟ್ಟಿ | ಪಿಎಚ್.ಡಿ | – | ಮಾಳಿಗೆ | ಬಳ್ಳಾರಿ |
| ೭ | ಗೊಡ್ಲು ಕಿಲಾರಿ | ಗ | ನಾಯಕ | ೬೬ | ಕೃಷಿ/ಕೀಲಾರಿತನ | ಕಂಪಳದೇವರಹಟ್ಟಿ | ಇಲ್ಲ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೮ | ಶಾಂತಮ್ಮ | ಹೆ | ನಾಯಕ | ೨೪ | ಮನೆಗೆಲಸ | ಕೆ.ಬಿ.ಹಟ್ಟಿ | ಇಲ್ಲ | ೪ ಎಕರೆ | ಮಾಳಿಗೆ | ಬಳ್ಳಾರಿ |
| ೯ | ರೇವಣ್ಣ | ಗ | ನಾಯಕ | ೨೬ | ಪೂಜಾರಿ | ಕಂಪಳದೇವರಹಟ್ಟಿ | ಬಿ.ಎ. | ೪ ಎಕರೆ | ಮಾಳಿಗೆ | ಚಿತ್ರದುರ್ಗ |

| ಕ್ರ.ಸಂ. | ಹೆಸರು | ಲಿಂಗ | ಜಾತಿ | ವಯಸ್ಸು | ಉದ್ಯೋಗ | ಊರು | ಶಿಕ್ಷಣ | ಭೂಮಿ | ಮನೆ | ಜಿಲ್ಲೆ |
|---|---|---|---|---|---|---|---|---|---|---|
| ೧೦ | ನಾಗರಾಜ | ಗ | ನಾಯಕ | ೩೦ | ಕೃಷಿ | ಗಡ್ಡದವರಹಟ್ಟಿ | ಎಂ.ಎ. | ಇಲ್ಲ | ಗುಡಿಸಲು | ಚಿತ್ರದುರ್ಗ |
| ೧೧ | ಪಾಪಣ್ಣ ಎಸ್. | ಗ | ನಾಯಕ | ೩೧ | ಗ್ರಂಥಪಾಲಕರು | ಕೂರವೋರುಹಟ್ಟಿ | ಎಂ.ಎಸ್ಸಿ, ಎಂ.ಫಿಲ್. | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೧೨ | ಓಬಣ್ಣ | ಗ | ನಾಯಕ | ೩೧ | ದ್ವಿತೀಯದರ್ಜೆ ಸಹಾಯಕ | ಚಿತ್ರಯ್ಯನಹಟ್ಟಿ | ಪಿ.ಯು.ಸಿ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೧೩. | ತಿಪ್ಪೇಸ್ವಾಮಿ | ಗ | ನಾಯಕ | ೮೧ | ನಿವೃತ್ತ ಶಿಕ್ಷಕರು | ಕಾಟಪ್ಪನಹಟ್ಟಿ | ಐ.ಟಿ.ಸಿ. | ೪ ಎಕರೆ | ಮಾಳಿಗೆ | ಚಿತ್ರದುರ್ಗ |
| ೧೩ | ಬೋರೇಶ ಈ. | ಗ | ಆದಿಕರ್ನಾಟಕ | ೨೯ | ವಿದ್ಯಾರ್ಥಿ | ನಲಗೇತನಹಟ್ಟಿ | ಎಂ.ಎ. | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೧೪. | ಓದೇಕಾರ ಪಾಪಣ್ಣ | ಗ | ನಾಯಕ | ೫೬ | ವ್ಯವಸಾಯ | ಎತ್ತಿನಗೌಡರಹಟ್ಟಿ | ಪಿಯುಸಿ | ೫ ಎಕರೆ | ಮಾಳಿಗೆ | ಚಿತ್ರದುರ್ಗ |
| ೧೫ | ಎನ್.ಜಿ.ವಿರೂಪಾಕ್ಷಿ | ಗ | ನಾಯಕ | ೨೮ | ವಿದ್ಯಾಭ್ಯಾಸ | ಬೋಸದೇವರಹಟ್ಟಿ | (ಪಿಎಚ್.ಡಿ.) | ಇಲ್ಲ | ಗುಡಿಸಲು | ಚಿತ್ರದುರ್ಗ |
| ೧೫ | ಸಣ್ಣಪಾಲಯ್ಯ | ಗ | ನಾಯಕ | ೨೮ | ವಿದ್ಯಾಭ್ಯಾಸ | ನಲಗೇತನಹಟ್ಟಿ | ಎಂ.ಎ. | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೧೬ | ಗೊಡ್ಲಯ್ಯ | ಗ | ನಾಯಕ | ೭೫ | ಕೃಷಿ | ದೊಣಮಂಡ್ಲರಹಟ್ಟಿ | ೬ನೇ ತರಗತಿ | ೧೫ ಎಕರೆ | ಮಾಳಿಗೆ | ಚಿತ್ರದುರ್ಗ |
| ೧೭ | ಸಿದ್ದೇಶಪ್ಪ ಬಿ. | ಗ | ನಾಯಕ | ೨೮ | ವಿದ್ಯಾಭ್ಯಾಸ | ಕಾತ್ರಿಕೇನಹಟ್ಟಿ | ಎಂ.ಎ. | ಇಲ್ಲ | ಗುಡಿಸಲು | ಚಿತ್ರದುರ್ಗ |
| ೧೮ | ಸತೀಶ | ಗ | ನಾಯಕ | ೫೫ | ವಕೀಲರು | ಬೋರೆದೇವರಹಟ್ಟಿ | ಎಲ್.ಎಲ್.ಬಿ. | ೧೦ ಎಕರೆ | ಮಾಳಿಗೆ | ಚಿತ್ರದುರ್ಗ |
| ೧೯. | ಸಣ್ಣಪಾಪಯ್ಯ | ಗ | ನಾಯಕ | ೪೦ | ವ್ಯವಸಾಯ | ಕುಂಟೋಬಯ್ಯನಹಟ್ಟಿ | ಪಿಯುಸಿ | ೮ ಎಕರೆ | ಮಾಳಿಗೆ | ಚಿತ್ರದುರ್ಗ |

| ಕ್ರ.ಸಂ. | ಹೆಸರು | ಲಿಂಗ | ಜಾತಿ | ವಯಸ್ಸು | ಉದ್ಯೋಗ | ಊರು | ಶಿಕ್ಷಣ | ಭೂಮಿ | ಮನೆ | ಜಿಲ್ಲೆ |
|---|---|---|---|---|---|---|---|---|---|---|
| ೨೦. | ರಾಮಯ್ಯ | ಗ | ನಾಯಕ | ೪೨ | ಮನೆಕಟ್ಟುವ | ಜಂಗಳಿಸೂರಯ್ಯನಹಟ್ಟಿ | ಇಲ್ಲ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೨೧ | ಬೋರಯ್ಯ ಕೆ. | ಗ | ನಾಯಕ | ೪೫ | ಉಪನ್ಯಾಸಕರು | ಕಪ್ಪಡಬಂಡಹಟ್ಟಿ | ಎಂ.ಎ ಎಂ.ಫಿಲ್ | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೨೨ | ಚಂದ್ರಣ್ಣ | ಗ | ನಾಯಕ | ೩೮ | ವ್ಯವಸಾಯ | ಓದ್ನೋಬಯ್ಯನಹಟ್ಟಿ | ಬಿ.ಎ. | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೨೩ | ಅಜ್ಜಯ್ಯ ಜಿ.ಎಂ. | ಗ | ನಾಯಕ | ೪೮ | ಸಮಾಜಸೇವೆ | ಗೌಡರಹಟ್ಟಿ | ಬಿ.ಎ. | ೨ ಎಕರೆ | ಮಾಳಿಗೆ | ಚಿತ್ರದುರ್ಗ |
| ೨೪ | ನಾಗೇಂದ್ರ ಎಸ್.ಬಿ. | ಗ | ನಾಯಕ | ೨೮ | ವ್ಯವಸಾಯ | ಉಗ್ಗಿನಿಂಗಯ್ಯನಹಟ್ಟಿ | ಎಸ್.ಎಸ್.ಎಲ್.ಸಿ | ಇಲ್ಲ | ಮಾಳಿಗೆ | ಚಿತ್ರದುರ್ಗ |
| ೨೫ | ಪೂಜಾರಿಓಬಯ್ಯ | ಗ | ನಾಯಕ | ೮೫ | ಪೂಜಾರಿ | ರಾಯಾಪುರಮ್ಯಾಸರಹಟ್ಟಿ | ಇಲ್ಲ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೨೬ | ಈರಣ್ಣ | ಗ | ನಾಯಕ | ೫೦ | ವ್ಯವಸಾಯ | ಮಲಿಯಮ್ಮನಹಟ್ಟಿ | ಇಲ್ಲ | ೨ ಎಕರೆ | ಗುಡಿಸಲು | ಚಿತ್ರದುರ್ಗ |
| ೨೭ | ಜಿ.ಪಿ.ಪಾಲಯ್ಯ | ಗ | ನಾಯಕ | ೨೬ | ವಿದ್ಯಾಭ್ಯಾಸ | ಕಾಕಿಪಾಲಯ್ಯನಹಟ್ಟಿ | ಡಿ.ಇಡಿ | ೨ ಎಕರೆ | ಮಾಳಿಗೆ | ಚಿತ್ರದುರ್ಗ |
| ೨೮ | ಪೂಜಾರಿಕೃಷ್ಣಪ್ಪ | ಗ | ನಾಯಕ | ೪೫ | ವ್ಯವಸಾಯ | ಕುರಿಹಟ್ಟಿ | ಪಿಯುಸಿ | ೨ ಎಕರೆ | ಮಾಳಿಗೆ | ಚಿತ್ರದುರ್ಗ |
| ೨೯ | ಸಣ್ಣಪಾಲಯ್ಯ | ಗ | ನಾಯಕ | ೭೫ | ವ್ಯವಸಾಯ | ಗೌಡರಹಟ್ಟಿ | ೭ನೇ ತರಗತಿ | ೧೦ ಎಕರೆ | ಮಾಳಿಗೆ | ಚಿತ್ರದುರ್ಗ |
| ೩೦ | ಸುರೇಶ | ಗ | ನಾಯಕ | ೩೦ | ವಿದ್ಯಾಭ್ಯಾಸ | ನಡವಲಕರ್ನಾರಹಟ್ಟಿ | ಎಂ.ಎ.ಬಿಇಡಿ | ೧೦ ಎಕರೆ | ಮಾಳಿಗೆ | ಚಿತ್ರದುರ್ಗ |
| ೩೦ | ಕಾಮಾಕ್ಷಿ | ಹೆ | ನಾಯಕ | ೨೫ | ವ್ಯವಸಾಯ | ಮುದಯ್ಯನಹಟ್ಟಿ | ಇಲ್ಲ | ೩ ಎಕರೆ | ಗುಡಿಸಲು | ಚಿತ್ರದುರ್ಗ |
| ೩೧ | ಕೂರ್ಲಯ್ಯ | ಗ | ನಾಯಕ | ೨೯ | ವಿದ್ಯಾಭ್ಯಾಸ | ಕೆಳಗಿನಹಟ್ಟಿ | ಬಿ.ಇಡಿ. | ೩ ಎಕರೆ | ಮಾಳಿಗೆ | ಚಿತ್ರದುರ್ಗ |

| ಕ್ರ.ಸಂ. | ಹೆಸರು | ಲಿಂಗ | ಜಾತಿ | ವಯಸ್ಸು | ಉದ್ಯೋಗ | ಊರು | ಶಿಕ್ಷಣ | ಭೂಮಿ | ಮನೆ | ಜಿಲ್ಲೆ |
|---|---|---|---|---|---|---|---|---|---|---|
| ೩೨ | ಶಿವಕುಮಾರ | ಗ | ನಾಯಕ | ೩೦ | ಸಮಾಜಕಾರ್ಯ | ಬಸಪ್ಪನಹಟ್ಟಿ | ಎಂ.ಎಸ್.ಡಬ್ಲ್ಯು | – | ಗುಡಿಸಲು | ದಾವಣಗೆರೆ |
| ೩೩ | ರಂಗಪ್ಪ | ಗ | ನಾಯಕ | ೩೪ | ನಿರುದ್ಯೋಗಿ | ಬಸಪ್ಪನಹಟ್ಟಿ | ಬಿ.ಇಡಿ. | – | ಗುಡಿಸಲು | ದಾವಣಗೆರೆ |
| ೩೪ | ಓಬಯ್ಯ | ಗ | ನಾಯಕ | ೩೦ | ಕೂಲಿ | ಬಸಪ್ಪನಹಟ್ಟಿ | ಎಂ.ಎಸ್.ಡಬ್ಲ್ಯು | ೨ ಎಕರೆ | ಗುಡಿಸಲು | ದಾವಣಗೆರೆ |
| ೩೫ | ಗಾಯತ್ರಮ್ಮ | ಹೆ | ಗೊಲ್ಲ | ೨೮ | ವಿದ್ಯಾಭ್ಯಾಸ | ಗೊಲ್ಲರಹಟ್ಟಿ | ಎಂ.ಎ. | – | ಗುಡಿಸಲು | ಚಿತ್ರದುರ್ಗ |
| ೩೬ | ಮಂಜಮ್ಮ ಕೆ.ಬಿ. | ಹೆ | ಆದಿಕರ್ನಾಟಕ | ೨೯ | ಅ.ಕಾರ್ಯಕರ್ತೆ | ನಲಗೇತನಹಟ್ಟಿ | ಪಿಯುಸಿ | – | ಗುಡಿಸಲು | ಚಿತ್ರದುರ್ಗ |
| ೩೭ | ನಾಗೇಶ | ಗ | ನಾಯಕ | ೨೮ | ಮನೆಕೆಲಸ | ಲೋಕಿಕೆರೆ | ಪಿಯುಸಿ | ೨ ಎಕರೆ | ಗುಡಿಸಲು | ಬಳ್ಳಾರಿ |
| ೩೮ | ಸೂರಮ್ಮ | ಹೆ | ನಾಯಕ | ೩೭ | ಕೂಲಿ | ಬೋಸೆದೇವರಹಟ್ಟಿ | ೭ನೇ ತರಗತಿ | – | ಗುಡಿಸಲು | ಚಿತ್ರದುರ್ಗ |

# ೩.ನಕ್ಷೆಗಳು



೩.೧.ಚಿತ್ರದುರ್ಗ ಜಿಲ್ಲೆ ನಕ್ಷೆ

## ೩.೨ ಚಿತ್ರದುರ್ಗ ತಾಲ್ಲೂಕು ನಕ್ಷೆ



## ೩.೩.ಚಳ್ಳಕೆರೆ ತಾಲ್ಲೂಕು ನಕ್ಷೆ



## ೩.೪ ಮೊಳಕಾಲ್ಮೂರು ತಾಲ್ಲೂಕು ನಕ್ಷೆ

ಸಂಡೂರು

ಕೂಡ್ಲಿಗಿ

ಹೊಸಹಟ್ಟಿ

ಮಹಿಮಾನಹಟ್ಟಿ

ರೊಪ್ಪ

ಎದ್ದಲಬೊಮ್ಮಯ್ಯನಹಟ್ಟಿ

ಕುಂಟೋಬಯ್ಯನಹಟ್ಟಿ

ಬೆಳವಿನಮರದಹಟ್ಟಿ

ಆಂಧ್ರ ಪ್ರದೇಶ




ಚಳ್ಳಕೆರೆ ತಾಲ್ಲೂಕು

## ೩.೫.ಬಳ್ಳಾರಿ ಜಿಲ್ಲೆ ನಕ್ಷೆ




೧. ದೇವರಹಟ್ಟಿ
೨. ಯರ್ರೋಯ್ಯನಹಟ್ಟಿ
೩. ಕುರಿಹಟ್ಟಿ
೪. ಹುರುಳಿಯಾಳ್ ಮ್ಯಾಸರಹಟ್ಟಿ
೫. ಮೇಗಳ ಕರ್ನಾರಹಟ್ಟಿ
೬. ನಡುವಲ ಕರ್ನಾರಹಟ್ಟಿ
೭. ಹೊಸಕೆರೆ ಪಾಪಯ್ಯನಹಟ್ಟಿ
೮. ಬೋಡೆಬಂಡೆ
೯. ಕನ್ನಿಬೋರಯ್ಯನಹಟ್ಟಿ
೧೦. ಜುಟ್ಟುಲಿಂಗಯ್ಯನಹಟ್ಟಿ

೨೦೧೩ರ ಪ್ರಸ್ತುತ ಬಳ್ಳಾರಿ ಜಿಲ್ಲೆ

# ೩.೬.ದಾವಣಗೆರೆ ಜಿಲ್ಲೆ


ಬಳ್ಳಾರಿ ಜಿಲ್ಲೆ
ಹರಪನಹಳ್ಳಿ
ಹಾವೇರಿ ಜಿಲ್ಲೆ
ಜಗಳೂರು
ಹರಿಹರ
ದಾವಣಗೆರೆ
ಚಿತ್ರದುರ್ಗ ಜಿಲ್ಲೆ
ಹೊನ್ನಾಳಿ
ಚನ್ನಗಿರಿ
ಶಿವಮೊಗ್ಗ ಜಿಲ್ಲೆ
ಚಿಕ್ಕಮಗಳೂರು ಜಿಲ್ಲೆ

# ೩.೭

# ಜಗಳೂರು ತಾಲೂಕು

ಹರಪನಹಳ್ಳಿ ತಾಲೂಕು

ಸೊಕ್ಕೆ

ಕಾನನಕಟ್ಟೆ

ಕೂಡ್ಲಿಗಿ ತಾಲೂಕು

ಜಗಳೂರು

ಗುತ್ತಿದುರ್ಗ

ಕಲೇದೇವಾಪುರ

ಬಸಪ್ಪನಹಟ್ಟಿ

ಚಿತ್ರದುರ್ಗ ಜಿಲ್ಲೆ

# ೪. ಛಾಯಾಚಿತ್ರಗಳು



ಕಾಂಶಿ ಹುಲ್ಲಿನಿಂದ ನಿರ್ಮಾಣಗೊಂಡ ಹೊಸಹಟ್ಟಿ



ಸ್ವಚ್ಚಂದ ಪರಿಸರದಲ್ಲಿರುವ ಹಟ್ಟಿ



ಗುಡಿಸಲಿನಲ್ಲಿ ವಾಸಿಸುವ ಮ್ಯಾಸನಾಯಕರು, ಕರ್ನಾರಹಟ್ಟಿ, ಕೂಡ್ಲಿಗಿ ತಾಲೂಕು



ಮ್ಯಾಸನಾಯಕರು ವಾಸಿಸುವ ಗುಡಿಸಲು-ಪೆತ್ತಮಾರಹಟ್ಟಿ (ನನ್ನಿವಾಳ)



ಮ್ಯಾಸನಾಯಕರ ಹಟ್ಟಿ, ಮುತ್ತಿಗಾರಹಳ್ಳಿಮ್ಯಾಸರಹಟ್ಟಿ



ದೊಡ್ಡಕೆರೆ ವಿಹಂಗಮ ನೋಟ, ನಾಯಕನಹಟ್ಟಿ




ಮ್ಯಾಸನಾಯಕರೇ ವಾಸಿಸುವ ಗ್ರಾಮ, ಮೇಗಳಹಟ್ಟಿ, ಮೊಳಕಾಲ್ಮೂರು ತಾಲೂಕು



ಊರ ದ್ವಾರ ಬಾಗಿಲು ಮತ್ತು ಬುಡ್ಡೇಕಲ್ಲು, ರಾಯಾಪುರ, ಮೊಳಕಾಲ್ಮೂರು ತಾಲೂಕು



ಮ್ಯಾಸನಾಯಕರ ಹಟ್ಟಿ ಪ್ರವೇಶ



ಗಾದರಿಪಾಲನಾಯಕನ ಧಾರ್ಮಿಕ ನೆಲೆ, ಗಂಜಿಗಟ್ಟೆ, ಹೊಳಲ್ಕೆರೆ ತಾಲೂಕು



ಪೌಳಿಯಲ್ಲಿರುವ ಹಟ್ಟಿಯ ದೇವರು



ಪಾಮುಡ್ಲು ಗುರುನಾಥ ದೇವರು, ಕಮಲಾಪುರ, ಹೊಸಪೇಟೆ ತಾಲೂಕು



ನನ್ನಿವಾಳ ದೊರೆಗಳ ಸಮಾಧಿ ಮೇಲಿರುವ ವೀರಗಲ್ಲು



ಗುಗ್ಗರಿ ಹಬ್ಬದಲ್ಲಿ ಭಾಗವಹಿಸಿರುವ ಹಿರಿಯರು



ಸೂರ್ಯನ ಮೊಕ್ಕು (ನಮಸ್ಕಾರ)



ಸೋಬಾನೆ ಹಾಡುತ್ತಿರುವ ಮ್ಯಾಸನಾಯಕ ಮಹಿಳೆಯರು



ದೇವರ ಮನೆಮುಂದೆ ಮದುಮಗನಿಗೆ ಸ್ನಾನ ಮಾಡಿಸುತ್ತಿರುವುದು



ಮೆರವಣಿಗೆ ಹೊರಟಿರುವ ನವದಂಪತಿಗಳು



ಬೇಟಿ ಕೊಯ್ಯುತ್ತಿರುವ ದೃಶ್ಯ



ಸೋಬಾನೆ ಹಾಡುವ ಮತ್ತು ಜನಪದ ಕಥೆ ಹೇಳುವ
ಮ್ಯಾಸನಾಯಕರ ಮಹಿಳೆಯರು



ದೇವರ ಸಮ್ಮುಖದಲ್ಲಿ ಜವಳ ತೆಗೆಸುತ್ತಿರುವುದು



ಮ್ಯಾಸರಹಟ್ಟಿಯಲ್ಲಿ ಸಿಡಿ ಆಡುವ ದೃಶ್ಯ



ಮ್ಯಾಸನಾಯಕರ ಹಬ್ಬಗಳಲ್ಲಿ ಬಾರಿಸುವ ನಗಾರಿ ಅಥವಾ ದಗಮು



ಕೋಟೆಗುಡ್ಡದ ಮಾರಮ್ಮ, ಮ್ಯಾಸರಹಟ್ಟಿ, ಮೊಳಕಾಲ್ಮೂರು ತಾಲೂಕು



ಗುಗ್ಗರಿ ಬೇಯಿಸುತ್ತಿರುವುದು



ದೇವರ ಎತ್ತುಗಳು



ಗಾವು ಸಿಗಿಯಲು ಬರುತ್ತಿರುವ ಪೋತರಾಜರು



ಹಟ್ಟಿ ನಾಯಕರು ಕುರಿ ಮೇಯಿಸಲು ನದಿ ಬಯಲಿಗೆ ಬಂದಿರುವುದು



ಬಂಡೆ ಹೊಡೆಯುವ ಕಾರ್ಯದಲ್ಲಿ ನಿರತರಾಗಿರುವ ಕಾರ್ಮಿಕರು (ಮ್ಯಾಸನಾಯಕರು)



ಉದ್ಯೋಗ ಖಾತ್ರಿ ಕಾರ್ಯದಲ್ಲಿ ತೊಡಗಿರುವ ಕಾರ್ಮಿಕರು (ಮ್ಯಾಸನಾಯಕರು)



ಮ್ಯಾಸನಾಯಕರು ವಾಸಿಸುವ ಆಧುನಿಕ ಪಟ್ಟಣ, ಗುಡೇಕೋಟೆ



ನವೀಕರಣಗೊಂಡ ಸಂತ ತಿಪ್ಪೇರುದ್ರಸ್ವಾಮಿ ದೇವಸ್ಥಾನ, ನಾಯಕನಹಟ್ಟಿ



ಆಧುನೀಕರಣಗೊಂಡ ದಡ್ಲು ಮಾರಮ್ಮನ ದೇವಾಲಯ, ನೆಲಗೇತಲಹಟ್ಟಿ



ಕೊಲ್ಲಾರಮ್ಮನ ಮೂರ್ತಿ, ಕೆಳಗಳಹಟ್ಟಿ



ಕೋಟೆಗುಡ್ಡ ಮಾರಮ್ಮನಿಗೆ
ಅರ್ಪಿಸಿದ ಬಳೆಗಳ ರಾಶಿ



ಮಾಸ್ತಮ್ಮನ ಮಾಸ್ತಿಕಲ್ಲು, ಕಾನಾಮಡಗು



ಗಾದರಿಪಾಲನಾಯಕನ ಮೂರ್ತಿ



ಹಂಪಿ ಆನೆಗೊಂದಿ ಸಂಸ್ಥಾನದ ನಾಯಕರ
ಬೋಸೆದೇವರು, ಬೋಸೆದೇವರಹಟ್ಟಿ



ಮರಿಕುಂಟ್ಲು ದೇವರು, ಹಿರೇಕೆರೆಹಳ್ಳಿಮ್ಯಾಸರಹಟ್ಟಿ



ಪಶುಪಾಲಕರ ಆರಾಧ್ಯ ದೈವ ಋಗಲೂರಜ್ಜ, ಚಳ್ಳಕೆರೆ



ಗಾದರಿಪಾಲನಾಯಕನ ದೇವಾಲಯ, ಮೇಗಳಹಟ್ಟಿ, ಮೊಳಕಾಲ್ಮೂರು ತಾಲೂಕು



ಮ್ಯಾಸನಾಯಕರು ಆರಾಧಿಸುವ ಶಿವ ದೇವಾಲಯ, ಮೂಡಾರಹಟ್ಟಿ



ಅಲಂಕಾರಗೊಂಡ ಜಗಳೂರಜ್ಜ ದೇವಾಲಯ, ಚಳ್ಳಕೆರೆ



ಗಾದರಿಪಾಲನಾಯಕ ದೇವಾಲಯ, ಚನ್ನಬಸವಯ್ಯನಹಟ್ಟಿ



ಬೋಸೆದೇವರ ದೇವಾಲಯ, ಬೋಸೆದೇವರಹಟ್ಟಿ



ಬೋರೆದೇವರ ಗುಡಿ, ಬೋರೆದೇವರಹಟ್ಟಿ



ಪಾದುಕೆಗಳು, ಮ್ಯಾಸರಹಟ್ಟಿ



ಹಟ್ಟಿ ಮಲ್ಲಪ್ಪನಾಯಕನ ಸಮಾಧಿ, ನಾಯಕನಹಟ್ಟಿ




ಆಧುನಿಕ ಪ್ರಭಾವಕ್ಕೊಳಗಾದ ಮ್ಯಾಸನಾಯಕರು
ಬ್ರಹ್ಮಾನಂದಾವಧೂತರ ಮಠಕ್ಕೆ ನಡೆದುಕೊಳ್ಳುವುದು



ಮ್ಯಾಸನಾಯಕರ ಹಟ್ಟಿಯಲ್ಲಿರುವ ನಿಷಧಿಕಲ್ಲು (ಲಿಂಗ ಮುದ್ರಿತ), ರಾಯಾಪುರ

